## ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೧೭

# ಬ್ರಹ್ಮಾಂಡಪುರಾಣಂ

(ಕನ್ನಡ ಅನುವಾದಸಹಿತ)

ಸಂಚಿಕೆ ೧

---

ಅನುವಾದಕ:

ಆಸ್ಥಾನವಿದ್ವಾನ್ ಪಾಟೀಣಕರ ಚಂದ್ರಶೇಖರಭಟ್ಟ

ಮೈಸೂರು

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್

೧೯೪೫

# ವಿಷಯಾನುಕ್ರಮಣಿಕೆ

# ಉ ಪೋ ೞ ದ್ಘಾ ತ

" ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ "

ವೇದಾರ್ಥವನ್ನು ಅರಿಯಬೇಕೆಂದಿರುವ ಮಾನವನು ಇತಿಹಾಸ--ಪುರಾಣಾರ್ಥ ಗಳಲ್ಲಿ ಅನುಭವ ಹೊಂದಿರುವುದು ಆವಶ್ಯಕವು, ಈ ಅನುಭವದಿಂದ ವೇದಗಳಲ್ಲಿ ಹೇಳಿರುವ ಪಾರಮಾರ್ಥಿಕತತ್ತ್ವವು ಸ್ಫುಟವಾಗುವುದು. ಇತಿಹಾಸ ಗ್ರಂಥಗಳು ಚರಿತ್ರಾತ್ಮಕವಾಗಿರುವುದರಿಂದ ನಮ್ಮ ಸಂಪ್ರದಾಯದಲ್ಲಿ ಚರಿತ್ರಗ್ರಂಥಗಳ ಪ್ರಚಾರವು ನ್ಯೂನವಾಗಿರುವುದೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಆದರೆ ನಮ್ಮ ವಿಶಿಷ್ಟ ಚರಿತ್ರ ಗ್ರಂಥಗಳು ಶಮಾದಿಗಳನ್ನು ವೃದ್ಧಿಪಡಿಸಿ ಮಾನವನು ಅಂತರ್ಮುಖನಾಗಲು ಸಹಾಯಕವಾಗುವುವು. ಜಿಗೀಷು ಅಥವಾ ಪ್ರತಿಷ್ಠಾಕಾಮಿಗಳಿಗೆ ತನ್ನ ಧ್ಯೇಯ ಸಾಧನೆಯ ಉಪಾಯಗಳಾದ ನಯ-ಅನಯಗಳಿಂದ ಬೆರೆತಿರುವ ವ್ಯವಹಾರಗಳನ್ನು ಬೋಧಿಸಿದ್ದರೂ ಕೂಡ ಆ ಪಥಗಳಲ್ಲಿ ಮಾನವನಿಗೆ ಪ್ರವೃತ್ತಿಯನ್ನು ಹುಟ್ಟಿಸುವ ಪರಮ ತಾತ್ಪರ್ಯವಿಲ್ಲ. ಇದು ಸಕಲ ವೇದ-ವೇದಾಂತಗಳ ಸಾಮರಸ್ಯ ಸಮನ್ವಯ ಸಿದ್ಧವಾದ ಅರ್ಥವು.

ಮುಖ್ಯವಾಗಿ ನಮ್ಮ ಸನಾತನ ಸಂಪ್ರದಾಯಕ್ಕೆ ಅವಿಚ್ಛಿನ್ನವಾಗಿ ಬಂದಿರುವ ವೇದ ಮತ್ತು ತನ್ಮೂಲವಾದ ಗ್ರಂಥಜಾಲಗಳಲ್ಲಿ ಪ್ರತಿಪಾದಿಸುವ ವಿಷಯಗಳ ಸಾರಾಂಶವೆಂದರೆ :—ಜ್ಞಾನವೇ ದೇವರು. ದ್ವೈತ-ಅದ್ವೈತ ಮೊದಲಾದ ಸಕಲ ಆಸ್ತಿಕ ದಾರ್ಶನಿಕರಿಗೂ ಈ ಅಂಶವು ವಿರುದ್ಧವಲ್ಲ. ನಾವು ಹೊತ್ತಿರುವ ಈ ಶರೀ ರೇಂದ್ರಿಯಗಳ ವ್ಯಾಪಾರವೆಲ್ಲವೂ ಜ್ಞಾನಕ್ಕೆ ಅಧೀನವಾಗಿ ನಡೆಯುವುದು. ಜ್ಞಾನವು ಹೇಗೆ ಪ್ರೇರೇಪಿಸುವುದೂ ನಾವದನ್ನು ಆಚರಿಸುವೆವು. ಜ್ಞಾನವು ಸನ್ಮಾರ್ಗದಲ್ಲಿಡು ವುದಾದರೆ ಸನ್ಮಾರ್ಗದಲ್ಲಿ ಅಥವಾ ಅಸನ್ಮಾರ್ಗಕ್ಕೆ ಎಳೆಯುವುದಾದರೆ ಅಸನ್ಮಾರ್ಗದಲ್ಲಿ ಕಾಲಿಡುವೆವು. ಆದರೆ ತಾತ್ಕಾಲಿಕವಾಗಿ ಹುಟ್ಟಿ ಹೋಗುವ ವೃತ್ತಿಯೆಂಬ ಜ್ಞಾನವು ಶಬ್ದ ಮುಂತಾದ ವಿಷಯ ಗುಣಗಳಂತೆ ಉತ್ಪತ್ತಿ ನಾಶಗಳೆಂಬ ದೋಷಕ್ಕೆ ಭಾಗಿ ಯಾಗುವುದರಿಂದ ನಿಯಾಮಕತ್ವಾದಿ ಗುಣಗರ್ಭಿತವಾದ ದೇವತಾತ್ಮಕವಾಗಲಾರದು. ಆದುದರಿಂದ ಶಾಂತವಾದ ವಿಶೇಷ ವೃತ್ತಿಗಳಿಂದ ಕೂಡಿದ ಚಿನ್ಮಾತ್ರವೇ ದೇವರೆಂದು ಭಾವಿಸಬೇಕು. ಈ ದೇವತೆಯು ಪುರುಷಾರ್ಥಗಳ ಎಲ್ಲೆಯಲ್ಲಿರುವ ಮುಕ್ತಿಯೆಂಬ ಪರಮ ಫಲವನ್ನು ಕೊಡುವುದು. ಇದನ್ನು ನಾವು ಐಹಿಕಾಮುಷ್ಮಿಕ ಫಲಕಾಮನೆ ಯಿಂದ ಭಜಿಸುವುದಾದರೆ ನಾವು ಉಪಾಸನಾ ಪ್ರಮಾಣಾನುಸಾರವಾಗಿ ಕಲ್ಪಿಸಿದ ಶಕ್ತಿ, ಉಪಕರಣಗಳಿಂದ ಕೂಡಿ ಆ ದೇವತೆಯು ಇಷ್ಟಾರ್ಥವನ್ನು ಅನುಗ್ರಹಿಸು

ವುದು. “ ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು ಮಿಚ್ಛತಿ ” ಎಂಬ ಗೀತಾವಚನವು ಇದನ್ನು ಬೋಧಿಸುವುದು. ಅಂತಹ ದೇವತೆಯ ವಿಭೂತಿಯ ರೂಪವಿಶೇಷವನ್ನು ಪುರಾಣಗಳಲ್ಲಿ ಕಾಣಬಹುದು.

ಈ ಪ್ರಪಂಚದ ಪಾರಮಾರ್ಥಿಕತೆಯಲ್ಲಿ ನಿಂತು ನಾವು ವಿಚಾರಿಸೋಣ. ಒಬ್ಬ ರಾಜನು ಇಷ್ಟಬಂದರೆ ಶೂನ್ಯ ಮೈದಾನದಲ್ಲಿ ಒಂದು ನಗರವನ್ನು ಕಲ್ಪಿಸಿ ತನ್ನ ಇಷ್ಟಾನುಸಾರವಾಗಿ ಆಳಿ ತನಗೆ ಬೇಡವೆಂದು ತೋರಿದರೆ ಅದನ್ನು ಉಪಸಂಹಾರ ಮಾಡುವಂತೆ ಈ ಜಗತ್ತಿನ ಸೃಷ್ಟಿ-ಸ್ಥಿತಿ ಲಯಗಳು ದೈವಲೀಲೆಯು. ಆದರೆ ಸ್ವತಂತ್ರನಾದ ರಾಜನಲ್ಲಿ ವಿವೇಕ-ಅವಿವೇಕಗಳ ಧೋರಣೆಯು ಕದಾಚಿತ್ ಬರಬಹುದಾದರೂ ದೈವವು ಅನಾದಿಯಾಗಿ ಪ್ರವಾಹವಾಗಿ ಬಂದಿರುವ ಕರ್ಮಸಂತಾನವನ್ನು ಅನುಸರಿಸಿ ಸೃಷ್ಟಿ-ಸ್ಥಿತಿ-ಲಯಗಳನ್ನು ನಿರ್ವಹಿಸುವುದೆಂಬುದು ವಿಶೇಷವು.

ಒಂದು ರಾಜ್ಯವು ರಾಜ-ಪ್ರಜಾ ಮತ್ತು ಆಯಾಯ ಭೋಗೋಪಕರಣಗಳಿಂದ ಸೇರಿಕೊಂಡಿರುವಂತೆ ಭೋಗಾಸಕ್ತರಿಗೆ ದೇವತಾ ನಿರ್ಮಿತವಾದ ರಾಜ್ಯವು ಬ್ರಹ್ಮಾಂಡವು. ಇವರಲ್ಲಿ ಒಂದೊಂದು ತತ್ತ್ವಕ್ಕೆ ಅಭಿಮಾನಿ ದೇವತೆಗಳೆಂಬ ವಿವಿಧಾಕಾರ ಹೊಂದಿದ ಮೂಲ ದೇವತೆಯ ವಿಭೂತಿ, ಆ ದೇವತೆಯ ಪ್ರಸಾದದಿಂದ ಭೋಗ ಪ್ರಾಪ್ತಿ, ಆ ದೇವತೆಯನ್ನು ಒಲಿಸಿಕೊಳ್ಳುವ ಸಾಧನಮಾರ್ಗ—ಮುಂತಾದುವೆಲ್ಲವೂ ಬ್ರಹ್ಮಾಂಡ ರಾಜ್ಯದಲ್ಲಿ ಅಂತರ್ಗತವಾಗಿದೆ. ಇದನ್ನು ಒಂದೊಂದು ಪುರಾಣದಿಂದಲೂ ತಿಳಿಯಬಹುದಾಗಿದೆ.

ಆದರೆ ಈ ಪುರಾಣಗಳ ಪ್ರಾಮಾಣ್ಯ ವಿಷಯದಲ್ಲಿ ಅನೇಕ ವಿಧದ ಆಕ್ಷೇಪಗಳು ಕಂಡುಬರುತ್ತವೆ. ಅಲ್ಲಿರುವ ಕಥಾದೃಷ್ಟಿಯಲ್ಲಿ ನಿಜವಾಗಿಯೂ ಆಕ್ಷೇಪಗಳಿಗೆ ಪ್ರಾಮಾಣ್ಯವು ಬಂದು ಪುರಾಣಗಳನ್ನು ನಂಬಲು ಅರ್ಹವೆ? ಎಂಬ ಸಂಶಯವು ತಲೆದೋರುವುದು. ಆದರೆ ವೇದ ಮೂಲಕವಾಗಿ ಬಂದಿರುವ ಸಮಗ್ರ ಪುರಾಣ ಗ್ರಂಥಜಾಲವು ಅಪ್ರಾಮಾಣಿಕವಲ್ಲ. ಅಲ್ಲಿ ಬರುವ ಆಕ್ಷೇಪಗಳನ್ನು ತಕ್ಕಮಟ್ಟಿಗೆ ಮುಂದಿನ ಸಂಚಿಕೆಗಳಲ್ಲಿ ಭೂಮಿಕಾರೂಪವಾಗಿ ಸಮಾಧಾನಗಳೊಡನೆ ಬರೆಯಲು ಯೋಚಿಸಿರುತ್ತೆ.

ಪ್ರಕೃತ ಬ್ರಹ್ಮಾಂಡಪುರಾಣದಲ್ಲಿ ನಾಲ್ಕು ಪಾದಗಳಿವೆ. ಅವುಗಳಿಗೆ ಪ್ರಕ್ರಿಯಾಪಾದ, ಅನುಷಂಗಪಾದ, ಉಪೋದ್ಘಾತಪಾದ ಮತ್ತು ಉಪಸಂಹಾರಪಾದವೆಂದು ಹೆಸರು. ಇದು ಶಬ್ದವಿಸ್ತಾರವಿರುವಷ್ಟೂ ಮಹತ್ತ್ವವುಳ್ಳ ಅತಿ ಗಂಭೀರ ವಿಷಯಗಳಿಂದ ಕೂಡಿರುತ್ತದೆ. ಲೋಕದಲ್ಲಿ ಪರಿಮಿತಿಯಿಲ್ಲದ ವಸ್ತುಮಹತ್ತ್ವವನ್ನು ನಿರ್ದೇಶಿಸುವಾಗ “ ಇದೊಂದು ಬ್ರಹ್ಮಾಂಡ ” ವೆಂದು ಬ್ರಹ್ಮಾಂಡ ಸಂಕೇತವನ್ನು ಉಪಯೋಗಿಸುತ್ತಾರೆ. ಆ ಸಂಕೇತವುಳ್ಳ ಈ ಪುರಾಣವು ಶಬ್ದ-ಅರ್ಥಗಳ ವಿಸ್ತಾರದಿಂದ ಕೂಡಿದೆ.

ಇದೀಗ ಕನ್ನಡ ಅನುವಾದದೊಡನೆ ನಾಲ್ಕು, ಐದು ಸಂಚಿಕೆಗಳ ರೂಪದಿಂದ ಪ್ರಕಾಶವಾಗಲಾರಂಭಾಗಿದೆ. ಮೊದಲನೆಯ ಈ ಸಂಚಿಕೆಯಲ್ಲಿ ಇಪ್ಪತ್ತೆರಡು ಅಧ್ಯಾಯ ಗಳು ಸೇರಿವೆ. ಅಧ್ಯಾಯಗಳ ವಿಷಯಾನುಕ್ರಮಣಿಯಿಂದ ಬ್ರಹ್ಮಾಂಡದ ಈ ಕಲ್ಪ-ಗತಕಲ್ಪಗಳು, ಸಪ್ತದ್ವೀಪ, ಸಪ್ತಸಮುದ್ರಗಳು ಮುಂತಾದ ವಿಷಯಗಳ ಸಾಮಾನ್ಯ ಪರಿಚಯವು ಆಗುವುದರಿಂದ ಅಧ್ಯಾಯಗಳ ಸಾರಾಂಶವು ಬೇರೆಯಾಗಿ ಸಂಗ್ರಹಿಸಲ್ಪ ಡುವ ಅವಶ್ಯವಿಲ್ಲ.

ಆಳುವ ಮಹಾಸ್ವಾಮಿಯವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನಮಾಡಿರುತ್ತೇನೆ. ಇದು ಉತ್ತಮ ರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿರುತ್ತದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ಅವಕಾಶಮಾಡಿಕೊಟ್ಟ ಮಹನೀಯ ರಿಗೆ ತುಂಬ ಕೃತಜ್ಞನಾಗಿದ್ದೇನೆ.

ಅನುವಾದಕ.

ಶ್ರೀಃ

# ಬ್ರಹ್ಮಾಂಡಪುರಾಣಂ

## ಪ್ರಥಮೋऽಧ್ಯಾಯಃ

---

**ನಮೋ ನಮಃ ಕ್ಷಯೇ ಸೃಷ್ಟೌ ಸ್ಥಿತೌ ಸತ್ತ್ವಮಯಾಯ ಚ ।**
**ನಮೋ ರಜಸ್ತಮಃಸತ್ತ್ವತ್ರಿರೂಪಾಯ ಸ್ವಯಂಭುವೇ ॥೧॥**

**ಜಿತಂ ಭಗವತಾನೇನ ಹರಿಣಾಲೋಕಧಾರಿಣಾ ।**
**ಅಜೇನ ವಿಶ್ವರೂಪೇಣ ನಿರ್ಗುಣೇನ ಗುಣಾತ್ಮನಾ ॥೨॥**

---

೧. ಪುರಾಣವನ್ನು ಪ್ರಾರಂಭಮಾಡಲು ಆದಿಯಲ್ಲಿ ಸಕಲ ವಿಘ್ನಗಳೂ ಲಯವಾಗಿ ಪುರಾಣವು ಸಮಾಪ್ತಿಯಾಗಬೇಕೆಂದೂ ಪುರಾಣವನ್ನು ಪಠಿಸುವವರಿಗೆ ನಿರ್ವಿಘ್ನವಾಗಿ ಪಾಠವು ಸಮಾಪ್ತಿಗೊಳ್ಳಬೇಕೆಂದೂ ಪರಮಾತ್ಮ ನಮಸ್ಕಾರರೂಪವಾದ ಮಂಗಲ ಪದ್ಯಗಳು ಪಠಿಸಲ್ಪಟ್ಟಿವೆ. ಸದಾನಂದ ಪ್ರಕಾಶರೂಪನಾದ ಪರಮಾತ್ಮನು ತಮೋ ಗುಣವೆಂಬ ಉಪಾಧಿಸಂಪರ್ಕದಿಂದ ಪ್ರಪಂಚದ ಪ್ರಲಯವನ್ನೂ ಸತ್ತ್ವಗುಣ ಸಂಪರ್ಕದಿಂದ ಪ್ರಪಂಚ ಪರಿಪಾಲನವನ್ನೂ ರಜೋಗುಣದ ಸಂಬಂಧದಿಂದ ಪ್ರಪಂಚ ಸೃಷ್ಟಿಯನ್ನೂ ನಿರ್ವಹಿಸುವನಾದ್ದರಿಂದ ಆಯಾಯ ಅವಸ್ಥೆಗಳಲ್ಲಿ ಆಯಾಯ ಗುಣ ಸಂಪರ್ಕದಿಂದ ಗುಣಮಯ ಬ್ರಹ್ಮಾದಿ ತ್ರಿಮೂರ್ತಿರೂಪಗಳನ್ನು ಪರಿಗ್ರಹಿಸುವನು. ಅಂತಹ ಪರಮಾತ್ಮನಿಗೆ ನಮಸ್ಕಾರವು.

೨. ಸಕಲ ಲೋಕಗಳನ್ನು ಉದರದಲ್ಲಿ ಧರಿಸಿ ವಿಶ್ವರೂಪ ಸ್ವರೂಪವನ್ನು ತಾಳಿದವನೂ ಜನ್ಮರಹಿತನೂ ನಿರ್ಗುಣಸ್ವರೂಪನಾಗಿದ್ದರೂ ಮಾಯಾತ್ಮಕವಾದ ಗುಣತ್ರಯ ಸಂಬಂಧವುಳ್ಳವನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಪರಮಾತ್ಮನು ಲೋಕವನ್ನು ಗೆದ್ದು ಪ್ರಶಂಸನೀಯನಾಗಿರುವನು.

ಬ್ರಹ್ಮಾಣಂ ಲೋಕಕರ್ತಾರಂ ಸರ್ವಜ್ಞಮಪರಾಜಿತಮ್ ।
ಪ್ರಭುಂ ಭೂತಭವಿಷ್ಯಸ್ಯ ಸಾಂಪ್ರತಸ್ಯ ಚ ಸತ್ಪತಿಮ್ ॥ ೩ ॥

ಜ್ಞಾನಮಪ್ರತಿಮಂ ತಸ್ಯ ವೈರಾಗ್ಯಂ ಚ ಜಗತ್ಪತೇಃ ।
ಐಶ್ವರ್ಯಂ ಚೈವ ಧರ್ಮಶ್ಚ ಸದ್ಭಿಃ ಸೇವ್ಯಂ ಚತುಷ್ಟಯಮ್ ॥ ೪ ॥

ಇಮಾನ್ನರಸ್ಯ ವೈ ಭಾವಾನ್ ನಿತ್ಯಂ ಸದಸದಾತ್ಮಕಾನ್ ।
ಅವಿಂಶಕಃ ಪುನಸ್ತಾನ್ ವೈ ಕ್ರಿಯಾಭಾವಾರ್ಥಮೀಶ್ವರಃ ॥ ೫ ॥

ಲೋಕಕೃಲ್ಲೋಕತತ್ತ್ವಜ್ಞೋ ಯೋಗಮಾಸ್ಥಾಯ ಯೋಗವಿತ್ ।
ಅಸೃಜತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೬ ॥

---

೩. ಲೋಕಗಳನ್ನು ಸೃಷ್ಟಿಸಿದವನೂ ಸರ್ವಜ್ಞನೂ ಎಲ್ಲೆಲ್ಲಿಯೂ ಪರಾಜಯ ಹೊಂದದೆ ಸಕಲ ಕಾರ್ಯನಿರ್ವಹಣದಲ್ಲಿ ಜಯಶೀಲನೂ ಭೂತ ಭವಿಷ್ಯ ವರ್ತಮಾನ ವೆಂಬ ಕಾಲತ್ರಯದ ವಸ್ತುಗಳಿಗೆಲ್ಲ ಪ್ರಭುವೂ ಸಾಧುಜನರ ಪರಿಪಾಲಕನೂ ಆದ ಬ್ರಹ್ಮದೇವನನ್ನು ಸ್ಮರಿಸುವೆನು.

೪. ಜಗತ್ತಿಗೆ ಪತಿಯಾದ ಬ್ರಹ್ಮದೇವನಿಗೆ ನಿರಾತಂಕವಾಗಿ ಎಲ್ಲೆಡೆಗಳಲ್ಲಿಯೂ ಪ್ರಸಾರವುಳ್ಳ ನಿರುಪಮವಾದ ಜ್ಞಾನ, ವೈರಾಗ್ಯ, ನಿಯಾಮಕತ್ವ ಮತ್ತು ಧರ್ಮವೆಂಬ ನಾಲ್ಕು ಸ್ವಭಾವಸಿದ್ಧವಾದ ಗುಣಗಳು. ಇವುಗಳನ್ನು ಸತ್ಪುರುಷರು ಸಾಧನಾನುಷ್ಠಾನ ದಿಂದ ಹೊಂದುವ ಧ್ಯೇಯವುಳ್ಳವರಾಗಿರುವರು.

೫ ಭೂತ-ಇಂದ್ರಿಯ ಶೂನ್ಯನಾದ ಬ್ರಹ್ಮನು ವ್ಯಕ್ತಾವ್ಯಕ್ತರೂಪಗಳಿಂದ ಕೂಡಿದ ನರನ ನಾಮರೂಪಗಳನ್ನು ಅವ್ಯಕ್ತಪ್ರಪಂಚವನ್ನು ಸೃಷ್ಟಿಮಾಡಲೋಸ್ಕರ ಪ್ರವೇಶ ಮಾಡಿದನು.

೬. ಪ್ರಪಂಚ ನಿರ್ಮಾಣಶಕ್ತಿಯನ್ನೂ ಪ್ರಾಪಂಚಿಕ ತತ್ತ್ವಗಳ ಪಾರಮಾರ್ಥಿಕ ಜ್ಞಾನವನ್ನೂ ಹೊಂದಿರುವ ಬ್ರಹ್ಮದೇವನು ಯೋಗಜ್ಞಾನವುಳ್ಳವನಾಗಿ ಯೋಗ ದೃಷ್ಟಿಯನ್ನು ಅವಲಂಬಿಸಿ ಚರ-ಅಚರ ಪ್ರಾಣಿಗಳನ್ನು ಸೃಷ್ಟಿಮಾಡಿದನು.

**ತಮಹಂ ವಿಶ್ವಕರ್ಮಾಣಂ ಸತ್ಪತಿಂ ಲೋಕಸಾಕ್ಷಿಣಮ್ ।**
**ಪುರಾಣಾಖ್ಯಾನ ಜಿಜ್ಞಾಸುರ್ಗಚ್ಛಾಮಿ ಶರಣಂ ವಿಭುಮ್ ॥ ೭ ॥**

**ಪುರಾಣಂ ಲೋಕ ತತ್ತ್ವಾರ್ಥಮಖಿಲಂ ವೇದಸಮ್ಮಿತಮ್ ।**
**ಪ್ರಶಶಂಸ ಸ ಭಗವಾನ್ ವಸಿಷ್ಠಾಯ ಪ್ರಜಾಪತಿಃ ॥ ೮ ॥**

**ತತ್ತ್ವಜ್ಞಾನಾಮೃತಂ ಪುಣ್ಯಂ ವಸಿಷ್ಠೋ ಭಗವಾನೃಷಿಃ ।**
**ಪೌತ್ರಮಧ್ಯಾಪಯಾಮಾಸ ಶಕ್ತೇಃ ಪುತ್ರಂ ಪರಾಶರಮ್ ॥ ೯ ॥**

**ಪರಾಶರಶ್ಚ ಭಗವಾನ್ ಜಾತೂಕರ್ಣ್ಯಮೃಷಿಂ ಪುರಾ ।**
**ತಮಧ್ಯಾಪಿತವಾನ್ ದಿವ್ಯಂ ಪುರಾಣಂ ವೇದಸಮ್ಮಿತಮ್ ॥ ೧೦ ॥**

**ಅಧಿಗಮ್ಯ ಪುರಾಣಂ ತು ಜಾತೂಕರ್ಣ್ಯೋ ವಿಶೇಷವಿತ್ ।**
**ದ್ವೈಪಾಯನಾಯಪ್ರದದೌ ಪರಬ್ರಹ್ಮ ಸನಾತನಮ್ ॥ ೧೧ ॥**

---

೭. ನಾನು ಪುರಾಣ ಪ್ರತಿಪಾದ್ಯ ಕಥಾನಕಗಳ ಸ್ಫೂರ್ತಿಯನ್ನು ಅನುಗ್ರಹಿಸ ಲೋಸ್ಕರ ಪ್ರಪಂಚವೇ ಸೃಜ್ಯವಸ್ತುಗಳಾಗಿ ಉಳ್ಳವನೂ ಶಿಷ್ಟಪರಿಪಾಲಕನೂ ಸೃಷ್ಟಿಸಿದ ಲೋಕದಲ್ಲಿ ಸಾಕ್ಷಿರೂಪದಿಂದ ಇರುವವನೂ ಆದ ಪರಮಾತ್ಮನನ್ನು ಶರಣ ಹೊಂದಿರುವೆನು.

೮. ಆ ಷಡ್ಗುಣೈಶ್ವರ್ಯ ಸಂಪನ್ನನಾದ ಬ್ರಹ್ಮದೇವನು ಲೋಕದ ತತ್ತ್ವಾಂಶ ಗಳನ್ನು ಪ್ರತಿಪಾದಿಸುವುದಾಗಿಯೂ ವೇದಗಳಿಗೆ ಸಮಾನವೂ ಆದ ಈ ಪುರಾಣವನ್ನು ಆದಿಯಲ್ಲಿ ಮಾನಸಪುತ್ರನಾದ ವಸಿಷ್ಠ ಮುನಿಗೆ ಉಪದೇಶಿಸಿದನು.

೯. ಪೂಜ್ಯನಾದ ವಸಿಷ್ಠ ಮುನಿಯು ತತ್ತ್ವಜ್ಞಾನವೆಂಬ ಅಮೃತ ಗರ್ಭಿತವಾದ ಈ ಪವಿತ್ರ ಪುರಾಣವನ್ನು ಶಕ್ತಿಮುನಿಯ ಪುತ್ರನೂ ತಮ್ಮ ಪೌತ್ರನೂ ಆದ ಪರಾಶರ ಮುನಿಗೆ ಉಪದೇಶಮಾಡಿದನು.

೧೦. ಪೂಜ್ಯನಾದ ಪರಾಶರ ಮುನಿಯು ಪೂರ್ವಕಾಲದಲ್ಲಿ ವೇದಗಳಿಗೆ ಸಮಾನ ವಾದ ಈ ದಿವ್ಯವಾದ ಪುರಾಣವನ್ನು ಜಾತೂಕರ್ಣ್ಯನೆಂಬ ಋಷಿಗೆ ಅಧ್ಯಯನ ಮಾಡಿಸಿದನು.

೧೧. ಜಾತೂಕರ್ಣ್ಯ ಋಷಿಯು ಈ ಪುರಾಣವನ್ನು ಅಧ್ಯಯನಮಾಡಿ ಈ ಪುರಾಣದಲ್ಲಿ ವಿಶೇಷವಾದ ಜ್ಞಾನವುಳ್ಳವನಾಗಿ ಅನಾದಿಯಾದ್ದರಿಂದ ಪವಿತ್ರವಾದ ವೇದ ತುಲ್ಯವಾದ ಪುರಾಣವನ್ನು ದ್ವೈಪಾಯನ ಮಹರ್ಷಿಗೆ ಉಪದೇಶಿಸಿದನು.

**ದ್ವೈಪಾಯನಸ್ತತಃ ಪ್ರೀತಃ ಶಿಷ್ಯೇಭ್ಯಃ ಪ್ರದದೌ ವಶೀ ।**
**ಲೋಕತತ್ತ್ವ ವಿಧಾನಾರ್ಥಂ ಪಂಚಭ್ಯಃ ಪರಮಾದ್ಭುತಮ್ ॥ ೧೨ ॥**

**ವಿಖ್ಯಾಪನಾರ್ಥಂ ಲೋಕೇಷು ಬಹ್ವರ್ಥಂ ಶ್ರುತಿಸಮ್ಮತಮ್ ।**
**ಜೈಮಿನಿಂ ಚ ಸುಮಂತುಂ ಚ ವೈಶಂಪಾಯನಮೇವ ಚ ॥ ೧೩ ॥**

**ಚತುರ್ಥಂ ಪೈಲವಂ ತೇಷಾಂ ಪಂಚಮಂ ಲೋಮಹರ್ಷಣಮ್ ।**
**ಸೂತಮದ್ಭುತವೃತ್ತಾಂತಂ ವಿನೀತಂ ಧಾರ್ಮಿಕಂ ಶುಚಿಮ್ ॥ ೧೪ ॥**

**ಅಧೀತ್ಯ ಚ ಪುರಾಣಂ ಚ ವಿನೀತೋ ಲೋಮಹರ್ಷಣಃ ।**
**ಋಷಿಣಾ ಚ ತ್ವಯಾ ಪೃಷ್ಟಃ ಕೃತ ಪ್ರಜ್ಞಃ ಸುಧಾರ್ಮಿಕಃ ॥ ೧೫ ॥**

**ವಸಿಷ್ಠಶ್ಚಾಪಿ ಮುನಿಭಿಃ ಪ್ರಣಮ್ಯ ಶಿರಸಾ ಮುನೀನ್ ।**
**ಭಕ್ತ್ಯಾ ಪರಮಯಾ ಯುಕ್ತಃ ಕೃತ್ವಾ ಚಾಪಿ ಪ್ರದಕ್ಷಿಣಮ್ ॥ ೧೬ ॥**

---

೧೨. ಉಪದೇಶಗ್ರಹಣದಿಂದ ಸಂತುಷ್ಟನೂ ಜಿತೇಂದ್ರಿಯನೂ ಆದ ದ್ವೈಪಾಯನಮುನಿಯು ಲೋಕದ ತತ್ತ್ವಗಳನ್ನು ವಿಧಿಸಲೋಸ್ಕರ ಅತ್ಯಾಶ್ಚರ್ಯಭರಿತವಾದ ಪುರಾಣವನ್ನು ಐದು ಜನ ಶಿಷ್ಯರಿಗೆ ದಾನಮಾಡಿದನು.

೧೩-೧೪. ವೇದ ತುಲ್ಯವೂ ಬಹು ಅರ್ಥಗರ್ಭಿತವೂ ಆದ ಈ ಪುರಾಣದ ಉಪದೇಶ ಪರಂಪರೆಯು ಈ ಪುರಾಣದಲ್ಲಿರುವ ಪವಿತ್ರಾಖ್ಯಾನಗಳ ಜ್ಞಾನಪ್ರಸಾರಕ್ಕೋಸ್ಕರ ಹೊರಟಿದೆ. ಜೈಮಿನಿ, ಸುಮಂತು, ವೈಶಂಪಾಯನ, ಪೈಲವ, ಮತ್ತು ಅದ್ಭುತ ವೃತ್ತಾಂತಗಳಿಂದ ಕೂಡಿದವನೂ, ವಿನಯವುಳ್ಳವನೂ, ಧರ್ಮಪರಾಯಣನೂ, ಪವಿತ್ರನೂ, ಆದ ಲೋಹರ್ಷಣ ಅಥವಾ ಸೂತ ಎಂಬ ಐದು ಜನ ಶಿಷ್ಯರು ದ್ವೈಪಾಯನರಿಂದ ಈ ಪುರಾಣದ ಉಪದೇಶವನ್ನು ಪಡೆದರು.

೧೫-೧೬. ವಿನಯಸಂಪನ್ನನೂ ಪ್ರಜ್ಞಾಶಾಲಿಗಳೂ ಧಾರ್ಮಿಕನೂ ಜಿತೇಂದ್ರಿಯನೂ ಆದ ರೋಮಹರ್ಷಣ ಮಹರ್ಷಿಯು ಪುರಾಣವನ್ನು ಅಧ್ಯಯನ ಮಾಡಿದ ತರುವಾಯ ವ್ಯಾಸರಿಂದ ಸಮ್ಮತಿಸಲ್ಪಟ್ಟವನಾಗಿ ಮಹರ್ಷಿಗಳಿಗೆ ಪೂರ್ಣ ಭಕ್ತಿಯಿಂದ ಪ್ರದಕ್ಷಿಣನಮಸ್ಕಾರಗಳನ್ನು ಅರ್ಪಿಸಿ ಪರಿಪೂರ್ಣವಾದ ವಿದ್ಯಾಲಾಭದಿಂದ ತೃಪ್ತನಾಗಿ ಕುರುಕ್ಷೇತ್ರದಲ್ಲಿ ಅನೇಕ ಪಾವನರಾದ ಋಷಿಗಳು ಯಜಮಾನರಾಗಿ

ಅನಾಪ್ತವಿದ್ಯಃ ಸಂತುಷ್ಟಃ ಕುರುಕ್ಷೇತ್ರಮುಪಾಗಮತ್ ।
ಸತ್ರೇ ಸವಿತತೇ ತತ್ರ ಯಜಮಾನಾನೃಷೀನ್ ಶುಚೀನ್ ॥ ೧೭ ॥

ವಿನಯೇನೋಪಸಂಗಮ್ಯ ಸತ್ರಿಣೋ ರೋಮಹರ್ಷಣಮ್ ।
ವಿಧಾನತೋ ಯಥಾಶಾಸ್ತ್ರಂ ಪ್ರಜ್ಞಯಾತಿಜಗಾಮ ಹ ॥ ೧೮ ॥

ಋಷಯಶ್ಚಾಪಿ ತೇ ಸರ್ವೇ ತದಾನೀಂರೋಮಹರ್ಷಣಮ್ ।
ದೃಷ್ಟ್ವಾಪರಮಸಂಹೃಷ್ಟಾಃ ಪ್ರೀತಾಃ ಸುಮನಸಸ್ತಥಾ ॥ ೧೯ ॥

ಸತ್ಕಾರೈರರ್ಚಯಾಮಾಸುರರ್ಘ್ಯಪಾದ್ಯಾದಿಭಿಸ್ತತಃ ।
ಅಭಿವಾದ್ಯ ಮುನೀನ್ ಸರ್ವಾನ್ ರಾಜಾಜ್ಞಾಮಧಿಗಮ್ಯ ಚ ॥ ೨೦ ॥

ಋಷಿಭಿಸ್ತೈರನುಜ್ಞಾತಃ ಪೃಷ್ಟಃ ಸರ್ವಮನಾಮಯಮ್ ।
ಅಭಿಗಮ್ಯ ಮುನೀನ್ ಸರ್ವಾನ್ ತೇಜೋ ಬ್ರಹ್ಮ ಸನಾತನಮ್
ಸದಸ್ಯಾನುಮತೇ ರಮ್ಯೇಸ್ವಾಸ್ತೀರ್ಣೇ ಸಮುಪಾವಿಶತ್ ॥ ೨೧ ॥

---

ಕೈಕೊಂಡಿರುವ ಮಹಾ ಸತ್ರಯಾಗವು ನಡೆಯುವ ಯಾಗ ಶಾಲೆಗೆ ಅನೇಕ ಮುನಿ ವೃಂದದೊಂದಿಗೆ ಬಂದು ಸೇರಿದರು.

೧೮. ಅಲ್ಲಿ ನೆರೆದಿದ್ದ ಯಜಮಾನರನ್ನು ರೋಮಹರ್ಷಣ ಮುನಿಯು ಶಾಸ್ತ್ರವಿಧಿಯನ್ನು ಅನುಸರಿಸಿ ವಿನಯದಿಂದ ಸತ್ಕಾರಪೂರ್ವಕವಾಗಿ ಬಂದು ಸೇರಿ ವಿವೇಕ ಬುದ್ಧಿಯಿಂದ ಎಲ್ಲರನ್ನೂ ಮೀರಿದವನಾದನು.

೧೯. ಆಗ ಅಲ್ಲಿದ್ದ ಸಮಸ್ತ ಋಷಿಗಳೂ ಆ ರೋಮಹರ್ಷಣ ಮುನಿಯನ್ನು ಕಂಡು ಅತ್ಯಂತ ಸಂತೋಷ-ಪ್ರೀತಿ-ಸೌಮನಸ್ಯಗಳಿಂದ ಕೂಡಿದವರಾಗಿ ಅರ್ಘ್ಯಪಾದ್ಯ ಮುಂತಾದ ಸಕಲ ಉಪಕರಣಗಳಿಂದ ಪೂಜೆಯನ್ನು ಮಾಡಿದರು.

೨೦-೨೧. ರೋಮಹರ್ಷಣ ಮುನಿಯು ಅಲ್ಲಿ ನೆರೆದಿದ್ದ ಸಮಸ್ತ ಋಷಿಗಳಿಗೂ ವಂದನ ಮಾಡಿ ರಾಜಾಜ್ಞೆಯನ್ನು ಪಡೆದು ಸಮಸ್ತ ಋಷಿಗಳ ಸಂಮತಿಯನ್ನೂ ಹೊಂದಿ ಸರ್ವವಿಧದಲ್ಲಿಯೂ ಎಲ್ಲರೊಡನೆ ಕುಶಲ ಪ್ರಶ್ನೆಗಳಾದ ತರುವಾಯ ಸಕಲ ಮುನಿವೃಂದವನ್ನೂ ಅನಾದಿ ಬ್ರಹ್ಮತೇಜಃ ಪುಂಜರೂಪವೆಂದು ಭಾವಿಸಿ ಸದಸ್ಯರಿಗಾಗಿ ಸಿದ್ಧಪಡಿಸಿದ ರಮ್ಯವಾದ ಆಸನದಲ್ಲಿ ಕುಳಿತುಕೊಂಡನು.

**ಉಪವಿಷ್ಟೇ ತದಾ ತಸ್ಮಿನ್ಮುನಯಃ ಶಂಸಿತವ್ರತಾಃ**
**ಮುದಾನ್ವಿತಾ ಯಥಾನ್ಯಾಯಂ ವಿನಯಸ್ಥಾಃ ಸಮಾಹಿತಾಃ ॥ ೨೨ ॥**

**ಸರ್ವೇ ತೇ ಋಷಯಶ್ಚೈನಂ ಪರಿವಾರ್ಯ ಮಹಾವ್ರತಮ್ ।**
**ಪರಮಪ್ರೀತಿಸಂಯುಕ್ತಾ ಇತ್ಯೂಚುಃ ಸೂತನಂದನಮ್ ॥ ೨೩ ॥**

**ಸ್ವಾಗತಂ ತೇ ಮಹಾಭಾಗ ದಿಷ್ಟ್ಯಾ ಚ ತ್ವಾಂ ನಿರಾಮಯಮ್ ।**
**ಪಶ್ಯಾಮ ಧೀಮನ್ನತ್ರಸ್ಥಾಃ ಸುವ್ರತಂ ಮುನಿಸತ್ತಮಮ್ ॥ ೨೪ ॥**

**ಅಶೂನ್ಯಾ ನೋ ರಸಾದ್ಯೈವ ಭವತಃ ಪುಣ್ಯಕರ್ಮಣಃ ।**
**ಭವಾಂಸ್ತಸ್ಯ ಮುನೇಃ ಸೂತ ವ್ಯಾಸಸ್ಯಾಪಿ ಮಹಾತ್ಮನಃ ॥ ೨೫ ॥**

**ಅನುಗ್ರಾಹ್ಯಃ ಸದಾ ಧೀಮಾನ್ ಶಿಷ್ಯಃ ಶಿಷ್ಯಗುಣಾನ್ವಿತಃ ।**
**ಕೃತಬುದ್ಧಿಶ್ಚ ತೇ ತತ್ತ್ವಮನುಗ್ರಾಹ್ಯಂ ತ್ವಯಾ ಪ್ರಭೋ ॥ ೨೬ ॥**

---

೨೨. ಈ ರೀತಿಯಾಗಿ ಸೂತ ಮುನಿಯು ಕುಳಿತುಕೊಳ್ಳಲಾಗಿ ಶ್ಲಾಘ್ಯವಾದ ವ್ರತನಿಯಮಗಳಿಂದ ಕೂಡಿದ ಮುನಿಗಳು ವಿನಯ-ಸಮಾಧಾನಗಳಿಂದ ಕೂಡಿದವರೂ ನ್ಯಾಯಾನುಸಾರ ಸಂತೋಷಪಟ್ಟವರೂ ಆದರು.

೨೩. ಮಹಾತಪಸ್ವಿಯಾದ ಸೂತ ಪುತ್ರ ರೋಮಹರ್ಷಣಮುನಿಯ ಬಳಿಗೆ ಸಮಸ್ತ ಋಷಿಗಳೂ ಪರಮಾನಂದದಿಂದ ಸುತ್ತುವರಿದು ಬಂದುನಿಂತು ಈ ರೀತಿಯಿಂದ ಭಾಷಣ ಮಾಡತೊಡಗಿದರು.

೨೪. ಮಹಾಮಹಿಮನಾದ ಮುನಿವರ್ಯನೆ! ನಿನಗೆ ಸ್ವಾಗತವನ್ನು ಬಯಸುವೆವು. ಈ ಸ್ಥಳದಲ್ಲಿದ್ದ ನಾವು ತಪಸ್ವಿಯೂ ಮುನಿಶ್ರೇಷ್ಠನೂ ಆದ ನೀನು ಕುಶಲಿಯಾಗಿ ಇಲ್ಲಿಗೆ ಬಂದಿರುವುದನ್ನು ಕಂಡಿರುವುದು ನಮ್ಮೆಲ್ಲರಿಗೂ ಬಹುಹರ್ಷದಾಯಕವಾದ ಸಂಗತಿಯು.

೨೫-೨೬. ಪೂಜ್ಯನಾದ ಸೂತಮುನಿಯೆ! ಪವಿತ್ರ ಚರಿತನಾದ ನಿನ್ನ ಸಮಾಗಮದಿಂದ ಈ ನನ್ನ ಸಕಲ ಭೂಮಿಯೂ ಸರ್ವ ವಿಧದಲ್ಲಿಯೂ ಪರಿಪೂರ್ಣತೆಯನ್ನು ಹೊಂದಿರುವುದು. ನೀನು ಮಹಾತ್ಮನಾದ ಆ ಪ್ರಸಿದ್ಧ ವ್ಯಾಸಮುನಿಯ ಶಿಷ್ಯನೂ ತತ್ತ್ವವನ್ನು ಉಪದೇಶಿಸುವುದರ ಮೂಲಕ ಅವರ ಅನುಗ್ರಹ ಪಾತ್ರನೂ

**ಅವಾಪ್ಯ ವಿಪುಲಂ ಜ್ಞಾನಂ ಸರ್ವತಶ್ಛಿನ್ನ ಸಂಶಯಃ ।**
**ಪೃಚ್ಛತಾಂ ನಃ ಸದಾ ಪ್ರಾಜ್ಞ ಸರ್ವಮಾಖ್ಯಾತುಮರ್ಹಸಿ ॥ ೨೭ ॥**

**ತದಿಚ್ಛಾಮಃ ಕಥಾಂ ದಿವ್ಯಾಂ ಪೌರಾಣೀಂ ಶ್ರುತಿಸಮ್ಮಿತಾಮ್ ।**
**ಶ್ರೋತುಂ ಧರ್ಮಾರ್ಥಯುಕ್ತಾಂ ತು ಏತದ್ವ್ಯಾಸಾಚ್ಛ್ರುತಂ ತ್ವಯಾ ॥ ೨೮ ॥**

**ಏವಮುಕ್ತಸ್ತದಾ ಸೂತಸ್ತ್ವೃಷಿಭಿರ್ವಿನಯಾನ್ವಿತಃ ।**
**ಉವಾಚ ಪರಮಪ್ರಾಜ್ಞೋ ವಿನೀತೋತ್ತರಮುತ್ತರಮ್ ॥ ೨೯ ॥**

**ಋಷೇಃ ಶುಶ್ರೂಷಣಂ ಯಚ್ಚ ತಸ್ಮಾತ್ಪ್ರಜ್ಞಾ ಚ ಯಾ ಮಮ ।**
**ಯಸ್ಮಾಚ್ಛುಶ್ರೂಷಣಾರ್ಥಂ ಚ ತತ್ಸತ್ಯಮಿತಿ ನಿಶ್ಚಯಃ ॥ ೩೦ ॥**

**ಏವಂಗತೇರ್ಥೇ ಯಚ್ಛಕ್ಯಂ ಮಯಾ ವಕ್ತುಂ ದ್ವಿಜೋತ್ತಮಾಃ ।**
**ಜಿಜ್ಞಾಸಾ ಯತ್ರ ಯುಷ್ಮಾಕಂ ತದಾಜ್ಞಾತುಮಿಹಾರ್ಹಥ ॥ ೩೧ ॥**

---

ಶಿಷ್ಯನಲ್ಲಿರಬೇಕಾದ ಸದ್ಗುಣಗಳಿಂದ ಕೂಡಿದವನೂ ಬುದ್ಧಿಶಾಲಿಯೂ ಆಗಿ ಅವರಿಂದ ಸಮಸ್ತ ವಿದ್ಯೆಗಳನ್ನೂ ಅರಿತವನಾಗಿದ್ದೀಯೆ, ಪ್ರಭುವೆ! ಈ ರೀತಿಯಾಗಿ ಜ್ಞಾನಾರ್ಜನೆಯಿಂದ ಸಮಸ್ತಾಂಶಗಳಲ್ಲಿಯೂ ಸಂಶಯಗಳನ್ನು ತೊಲಗಿಸಿಕೊಂಡು ಪರಮಾರ್ಥ ಜ್ಞಾನದಿಂದ ಕೂಡಿರುವ ನೀನು ನಾವೆಲ್ಲರೂ ಪ್ರಶ್ನಮಾಡಿದ ವಿಷಯಗಳನ್ನು ಹೇಳುವವನಾಗು.

೨೮. ಆದುದರಿಂದ ವ್ಯಾಸಮುನಿಯಿಂದ ಉಪದೇಶಹೊಂದಿರುವ ದಿವ್ಯವಾಗಿಯೂ ವೇದಗಳಿಗೆ ಸಮಾನವಾಗಿಯೂ ಧರ್ಮ, ಅರ್ಥಗಳಿಂದ ಕೂಡಿದುದಾಗಿಯೂ ಇರುವ ಪುರಾಣ ಸಂಹಿತೆಯನ್ನು ನಾವೆಲ್ಲರೂ ಕೇಳಬೇಕೆಂಬ ಕುತೂಹಲವುಳ್ಳವರಾಗಿದ್ದೇವೆ.

೨೯. ಸಮಸ್ತ ಋಷಿಗಳಿಂದ ಈ ರೀತಿಯಾಗಿ ಕೇಳಲ್ಪಟ್ಟಿರುವ ಪ್ರಾಜ್ಞರಲ್ಲಿ ಉತ್ತಮನಾದ ಸೂತಮುನಿಯು ವಿನಯದಿಂದ ಕೂಡಿ ಬಹು ವಿನಯಗರ್ಭಿತವಾದ ಉತ್ತರವನ್ನು ನುಡಿದನು.

೩೦. ನಾನು ಪೂಜ್ಯವ್ಯಾಸಮಹರ್ಷಿಯನ್ನು ಯಾವ ತತ್ತ್ವಗಳನ್ನು ತಿಳಿಯಲು ಶುಶ್ರೂಷೆಮಾಡಿ ಅದರ ಬಲದಿಂದ ಪ್ರಜ್ಞೆಯನ್ನು ಸಂಪಾದಿಸಿರುವೆನೋ ಆ ಶುಶ್ರೂಷಾಲಬ್ಧನಾದ ನನ್ನ ಜ್ಞಾನವು ಪರಮಾರ್ಥವಾದುದೆಂಬುದು ನಿಸ್ಸಂದೇಹವಾದ ವಿಷಯವು.

೩೧. ದ್ವಿಜಶ್ರೇಷ್ಠರೇ! ಹೀಗಿರಲು ನನ್ನಿಂದ ಹೇಳಲು ಸಾಧ್ಯವಿರುವ ಅಂಶ

ಏತಚ್ಛ್ರುತ್ವಾ ತು ಮುನಯೋ ಮಧುರಂ ತಸ್ಯ ಭಾಷಿತಮ್ ।
ಪ್ರತ್ಯೂಚುಸ್ತೇ ಪುನಃ ಸೂತಂ ಬಾಷ್ಪಪರ್ಯಾಕುಲೇಕ್ಷಣಮ್ ॥ ೩೨ ॥

ಭವಾನ್ ವಿಶೇಷಕುಶಲೋ ವ್ಯಾಸಂ ಸಾಕ್ಷಾತ್ತು ದರ್ಶಿವಾನ್ ।
ತಸ್ಮಾತ್ತ್ವಂ ಸಂಭವಂ ಕೃತ್ಸ್ನಂ ಲೋಕಸ್ಯೇಮಂ ವಿದರ್ಶಯ ॥ ೩೩ ॥

ಯಸ್ಯ ಯಸ್ಯಾನ್ವಯೇ ಯೇ ಯೇ ತಾಂಸ್ತಾನಿಚ್ಛಾಮ ವೇದಿತುಮ್ ।
ತೇಷಾಂ ಪೂರ್ವವಿಸೃಷ್ಟಿಂ ಚ ವಿಚಿತ್ರಾಂ ತ್ವಂ ಪ್ರಜಾಪತೇಃ ॥ ೩೪ ॥

ಸತ್ಕೃತ್ಯ ಪರಿಪೃಷ್ಟಃ ಸ ಮಹಾತ್ಮಾ ರೋಮಹರ್ಷಣಃ ।
ವಿಸ್ತರೇಣಾನುಪೂರ್ವ್ಯಾ ಚ ಕಥಯಾಮಾಸ ಸತ್ತಮಃ ॥ ೩೫ ॥

---

ಗಳಲ್ಲಿ ನೀವು ಯಾವುದನ್ನು ಕೇಳಲು ಕುತೂಹಲವುಳ್ಳವರಾಗಿರುವಿರೊ, ಅದನ್ನು ಅಪ್ಪಣೆ ಕೊಡಿಸಬೇಕು.

೩೨. ಸೂತಮುನಿಯು ಹೇಳಿದ ಮಧುರವಾದ ಈ ಮಾತನ್ನು ಕೇಳಿ ಮುನೀಶ್ವರರು ಆನಂದ ಬಾಷ್ಪದಿಂದ ಪೂರ್ಣವಾದ ದೃಷ್ಟಿಯುಳ್ಳ ಸೂತಮುನಿಯನ್ನು ಕುರಿತು ಮತ್ತೆ ಈ ರೀತಿಯಾಗಿ ಹೇಳಿದರು.

೩೩. ವ್ಯಾಸಮುನಿಯನ್ನು ಸಾಕ್ಷಾತ್ಕರಿಸಿದ ನೀನು ವಿಶೇಷವಾಗಿ ಕುಶಲನಾಗಿರುವೆ. ಆದಕಾರಣ ಈ ಲೋಕದ ಉತ್ಪತ್ತಿಪ್ರಕಾರವನ್ನು ಸಂಪೂರ್ಣವಾಗಿ ನಮ್ಮೆಲ್ಲರಿಗೂ ಬೋಧಿಸು.

೩೪. ಸೃಷ್ಟಿಕರ್ತನಾದ ಬ್ರಹ್ಮನಿಂದಾದ ಸೃಷ್ಟಿಪ್ರಕಾರದಲ್ಲಿ ಯಾರ ಯಾರ ವಂಶದಲ್ಲಿ ಯಾರು ಯಾರು ಹುಟ್ಟಿದರು? ಅವರವರ ಪೂರ್ವಸೃಷ್ಟಿ ಕ್ರಮವೇನು? ಮುಂತಾದ ವಿಷಯಗಳನ್ನು ಕೇಳಲು ಇಚ್ಛೆಯುಳ್ಳವರಾಗಿರುವೆವು.

೩೫. ಮುನಿಗಳಿಂದ ಸತ್ಕಾರಪೂರ್ವಕವಾಗಿ ಪ್ರಶ್ನಿಸಲ್ಪಟ್ಟ ಮಹಾತ್ಮನೂ ಸಾಧುಶ್ರೇಷ್ಠನೂ ಆದ ಸೂತಮುನಿಯು ಕ್ರಮದಿಂದ ಎಲ್ಲಾ ಪುರಾಣ ಕಥೆಗಳನ್ನೂ ವಿಸ್ತಾರವಾಗಿ ಹೇಳಿದನು.

**ಸೂತ ಉವಾಚ :—**

**ಯೋ ಮೇ ದ್ವೈಪಾಯನಃ ಪ್ರೀತಃ ಕಥಾಂ ವೈ ದ್ವಿಜಸತ್ತಮಾಃ ।**
**ಪುಣ್ಯಾಮಾಖ್ಯಾತವಾನ್ ವಿಪ್ರಾಃ ತಾಂ ವೈ ವಕ್ಷ್ಯಾಮ್ಯನುಕ್ರಮಾತ್ ॥ ೩೬ ॥**

**ಪುರಾಣಂ ಸಂಪ್ರವಕ್ಷ್ಯಾಮಿ ಯದುಕ್ತಂ ಮಾತರಿಶ್ವನಾ ।**
**ಪೃಷ್ಟೇನ ಮುನಿಭಿಃ ಪೂರ್ವಂ ನೈಮಿಷೀಯೈರ್ಮಹಾತ್ಮಭಿಃ ॥ ೩೭ ॥**

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ವಂಶ್ಯಾನುಚರಿತಂ ಚೈವ ಪುರಾಣಂ ಪಂಚಲಕ್ಷಣಮ್ ॥ ೩೮ ॥**

**ಪ್ರಕ್ರಿಯಾ ಪ್ರಥಮಃ ಪಾದಃ ಕಥಾಯಾಂ ಸ್ಯಾತ್ಪರಿಗ್ರಹಃ ।**
**ಅನುಷಂಗ ಉಪೋದ್ಘಾತ ಉಪಸಂಹಾರ ಏವಚ ॥ ೩೯ ॥**

**ಏವಂ ಪಾದಾಸ್ತು ಚತ್ವಾರಃ ಸಮಾಸಾತ್ಕೀರ್ತಿತಾ ಮಯಾ ।**
**ವಕ್ಷ್ಯಾಮಿ ತಾನ್ ಪುರಸ್ತಾತ್ತು ವಿಸ್ತರೇಣ ಯಥಾಕ್ರಮಮ್ ॥ ೪೦ ॥**

---

೩೬. ಸೂತಮಹರ್ಷಿಯಿಂತೆಂದನು : ದ್ವಿಜಶ್ರೇಷ್ಠರೆ! ನನ್ನಲ್ಲಿ ಪ್ರೀತಿಯನ್ನಿಟ್ಟು ದ್ವೈಪಾಯನ ಮಹರ್ಷಿಯು ಪವಿತ್ರವಾದ ಯಾವ ಪುರಾಣ ಕಥೆಯನ್ನು ಉಪದೇಶಿಸಿರುವನೋ ಅದನ್ನು ಕ್ರಮವಾಗಿ ಹೇಳುವೆನು.

೩೭. ನೈಮಿಷಾರಣ್ಯದಲ್ಲಿ ವಾಸಮಾಡಿರುವ ಮಹಾತ್ಮರಾದ ಮಹರ್ಷಿಗಳು ಪ್ರಶ್ನೆಮಾಡಿರಲು ವಾಯುದೇವನು ಅವರಿಗೆ ಉಪದೇಶಮಾಡಿದ್ದ ಪುರಾಣವನ್ನು ಈಗ ಹೇಳುವೆನು.

೩೮. ಪ್ರಾಚೀನ ಕಥಾಪುರುಷರ ಸೃಷ್ಟಿ, ಲಯ, ಅವರ ವಂಶಾವಳಿ, ಮನ್ವಂತರಗಳು, ಆಯಾಯ ವಂಶದಲ್ಲಿ ಜನಿಸಿದವರ ದಿವ್ಯ ಚರಿತ್ರೆ ಈ ಐದು ವಿಷಯಗಳನ್ನು ಸಮಗ್ರವಾಗಿ ವರ್ಣಿಸಿರುವ ಗ್ರಂಥವು ಈ ಲಕ್ಷಣದಿಂದ ಪುರಾಣವೆನಿಸಲ್ಪಡುವುದು.

೩೯-೪೦. ಮುಂದೆ ಪ್ರತಿಪಾದಿಸಬೇಕೆಂದಿರುವ ಮಹಾಪುರಾಣದಲ್ಲಿ ಆದಿಯಲ್ಲಿ ಪರಿಗ್ರಹಿಸಲ್ಪಟ್ಟಿರುವ ಪ್ರಕ್ರಿಯಾಪಾದ, ಅನುಷಂಗಪಾದ, ಉಪೋದ್ಘಾತಪಾದ ಮತ್ತು ಉಪಸಂಹಾರಪಾದ ಎಂದು ನಾಲ್ಕು ಪಾದಗಳಿವೆ ಎಂಬುದು ಸಂಗ್ರಹವಾದ ಉಪದೇಶವು. ಇವುಗಳನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ಮುಂದೆ ಹೇಳುವೆನು.

**ಪ್ರಥಮಂ ಸರ್ವಶಾಸ್ತ್ರಾಣಾಂ ಪುರಾಣಂ ಬ್ರಹ್ಮಣಾ ಶ್ರುತಮ್ ।**
**ಅನಂತರಂ ಚ ವಕ್ತ್ರೇಭ್ಯೋ ವೇದಾಸ್ತಸ್ಯ ವಿನಿಸ್ಸೃತಾಃ ॥ ೪೧ ॥**

**ಅಂಗಾನಿ ಧರ್ಮಶಾಸ್ತ್ರಂ ಚ ವ್ರತಾನಿ ನಿಯಮಾಸ್ತಥಾ ।**
**ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಮ್ ।**
**ಮಹದಾದಿ ವಿಶೇಷಾಂತಂ ಸೃಜಾಮೀತಿ ವಿನಿಶ್ಚಯಃ ॥ ೪೨ ॥**

**ಅಂಡಂ ಹಿರಣ್ಮಯಂ ಚೈವ ಬ್ರಹ್ಮಣಃ ಸೂತಿರುತ್ತಮಾ ।**
**ಅಂಡಸ್ಯಾವರಣಂ ವಾರ್ಧಿರಪಾಮಪಿ ಚ ತೇಜಸಾ ॥ ೪೩ ॥**

**ವಾಯುನಾ ತಸ್ಯ ವಾಯೋಶ್ಚ ಖೇನ ಭೂತಾದಿನಾ ತತಃ ।**
**ಭೂತಾದಿರ್ಮಹತಾ ಚೈವ ಅವ್ಯಕ್ತೇನಾವೃತೋ ಮಹಾನ್ ॥ ೪೪ ॥**

---

೪೧. ಸೃಷ್ಟಿ ಅಧಿಕಾರದ ಆರಂಭದಲ್ಲಿ ಸರ್ವಶಾಸ್ತ್ರಗಳಿಗಿಂತಲೂ ಆದಿಯಲ್ಲಿ ಈ ಪುರಾಣವನ್ನು ಬ್ರಹ್ಮನು ಶ್ರವಣಮಾಡಿದನು. ಅದನ್ನು ಶ್ರವಣಮಾಡಿದನಂತರದಲ್ಲಿ ಆ ಬ್ರಹ್ಮದೇವನ ಮುಖಗಳಿಂದ ವೇದ, ವೇದಾಂಗ, ಧರ್ಮಶಾಸ್ತ್ರ, ವ್ರತನಿಯಮ ಬೋಧಕಗ್ರಂಥ ಇವುಗಳೆಲ್ಲವೂ ಹುಟ್ಟಿದವು.

೪೨. ವ್ಯಕ್ತ-ಅವ್ಯಕ್ತರೂಪಗಳನ್ನು ಪರಂಪರೆಯಿಂದ ಹೊಂದುತ್ತಲಿರುವ ಸ್ವತಃ ಅವ್ಯಕ್ತರೂಪವಾದ ಪ್ರಕೃತಿಯೆಂಬ ಮೂಲಕಾರಣದಿಂದ ಮಹತ್ತತ್ವ ಮುಂತಾದ ಸಮಸ್ತ ವಿಕೃತಿ ಸಹಿತವಾಗಿ ಜಗತ್ತನ್ನು ನಿರ್ಮಿಸುವೆನೆಂದು ನಿಶ್ಚಯವು ಬ್ರಹ್ಮದೇವನಿಗೆ ಉಂಟಾಯಿತು.

೪೩. ಬ್ರಹ್ಮನು ತನ್ನ ವೀರ್ಯದಿಂದ ಸೃಷ್ಟಿಸಿದ ಸುವರ್ಣದಂತೆ ಜ್ವಲಿಸುತ್ತಿದ್ದ ಒಂದು ಅಂಡವು ಉತ್ತಮವಾದ ಸೃಷ್ಟಿಯು. ಆ ಅಂಡಕ್ಕೆ ಸಮುದ್ರದಿಂದ ಆವರಣವಿರುವುದು. ಸಮುದ್ರವು ತೇಜಸ್ಸಿನಿಂದ ಆವೃತವಾಗಿದೆ.

೪೪. ತೇಜಸ್ಸಿಗೆ ವಾಯುವಿನಿಂದಲೂ ವಾಯುವಿಗೆ ಆಕಾಶದಿಂದಲೂ ಆಕಾಶಕ್ಕೆ ಅಹಂಕಾರ ತತ್ತ್ವದಿಂದಲೂ ಅಹಂಕಾರತತ್ತ್ವಕ್ಕೆ ಮಹತ್ತತ್ವದಿಂದಲೂ ಆವರಣವಿರುವುದಲ್ಲದೆ ಮಹತ್ತತ್ತ್ವವು ಅವ್ಯಕ್ತವೆಂಬ ಮೂಲತತ್ತ್ವದ ಆವರಣವನ್ನು ಹೊಂದಿದೆ.

**ಅಂತರ್ವರ್ತಿ ಚ ಭೂತಾನಾಮಂಡಮೇವೋಪವರ್ಣಿತಮ್ ।**
**ನದೀನಾಂ ಪರ್ವತಾನಾಂ ಚ ಪ್ರಾದುರ್ಭಾವೋತ್ರ ಪಠ್ಯತೇ ॥ ೪೫ ॥**

**ಮನ್ವಂತರಾಣಾಂ ಸರ್ವೇಷಾಂ ಕಲ್ಪಾನಾಂಚೈವ ವರ್ಣನಮ್**
**ಕೀರ್ತನಂ ಬ್ರಹ್ಮವೃಕ್ಷಸ್ಯ ಬ್ರಹ್ಮಜನ್ಮ ಪ್ರಕೀರ್ತ್ಯತೇ ॥ ೪೬ ॥**

**ಅತಃ ಪರಂ ಬ್ರಹ್ಮಣಶ್ಚ ಪ್ರಜಾಸರ್ಗೋಪವರ್ಣನಮ್ ।**
**ಅವಸ್ಥಾಶ್ಚಾತ್ರ ಕೀರ್ತ್ಯಂತೇ ಬ್ರಹ್ಮಣೋಽವ್ಯಕ್ತಜನ್ಮನಃ ॥ ೪೭ ॥**

**ಕಲ್ಪಾನಾಂ ಸಂಭವಶ್ಚೈವ ಜಗತಃ ಸ್ಥಾಪನಂ ತಥಾ ।**
**ಶಯನಂ ಚ ಹರೇರಪ್ಸು ಪೃಥಿವ್ಯುದ್ಧರಣಂ ತಥಾ ॥ ೪೮ ॥**

**ಸವಿಶೇಷಃ ಪುರಾದೀನಾಂ ವರ್ಣಾಶ್ರಮವಿಭಾಜನಮ್ ।**
**ಋಕ್ಷಾಣಾಂ ಗ್ರಹಸಂಸ್ಥಾನಾಂ ಸಿದ್ಧಾನಾಂ ಚ ನಿವೇಶನಮ್ ॥ ೪೯ ॥**

---

೪೫. ಈ ಎಲ್ಲ ತತ್ತ್ವಗಳ ಆವರಣಗಳಲ್ಲಿ ಮಧ್ಯದಲ್ಲಿ ಭೂತಮಯವಾದ ಅಂಡವೇ ಇರುವುದೆಂದು ವರ್ಣಿಸಲ್ಪಟ್ಟಿದೆ. ಆ ಅಂಡಕ್ಕೆ ಸಂಬಂಧಿಸಿದಂತೆ ನದೀ ಪರ್ವತಗಳ ಉತ್ಪತ್ತಿಯೂ ವರ್ಣಿಸಲ್ಪಟ್ಟಿದೆ.

೪೬. ಮತ್ತು ಈ ಬ್ರಹ್ಮಾಂಡವನ್ನು ವರ್ಣಿಸುವ ಪ್ರಸಂಗದಲ್ಲಿ ಎಲ್ಲ ಮನ್ವಂತರಗಳನ್ನೂ ಸಕಲ ಕಲ್ಪಗಳನ್ನೂ ಬ್ರಹ್ಮನಿಂದ ಆದಿಯಾಗಿ ಬೆಳೆದುಬಂದ ವಂಶವೃಕ್ಷದ ಉತ್ಪತ್ತಿಯನ್ನೂ ವರ್ಣಿಸಿ ಬ್ರಹ್ಮನ ಉತ್ಪತ್ತಿಯೂ ಸಹ ಪಠಿಸಲ್ಪಟ್ಟಿದೆ.

೪೭. ಹಾಗೆ ಮುಂದೆ ಬ್ರಹ್ಮನಿಂದ ಆಗಿರುವ ಪ್ರಜಾಸೃಷ್ಟಿ ಮತ್ತು ಅವ್ಯಕ್ತ ತತ್ತ್ವದಿಂದ ಹುಟ್ಟಿದ ಬ್ರಹ್ಮನ ನಾನಾವಿಧವಾದ ಅವಸ್ಥೆಗಳೂ ವರ್ಣಿಸಲ್ಪಟ್ಟಿವೆ.

೪೮. ಅನೇಕ ಕಲ್ಪಗಳ ಉತ್ಪತ್ತಿ, ಜಗತ್ತನ್ನು ಪ್ರತಿಷ್ಠೆಗೊಳಿಸಿದುದು ವಿಷ್ಣುವು ನೀರಿನಲ್ಲಿ ಶಯನಮಾಡಿದುದು, ಮತ್ತು ಭೂಮಿಯನ್ನು ಉದ್ಧಾರಮಾಡಿದುದು ಇವುಗಳನ್ನು ವರ್ಣಿಸಿದೆ.

೪೯. ಇಷ್ಟೇ ಅಲ್ಲದೆ ಇಲ್ಲಿ ವರ್ಣಿಸಿದ ಅನೇಕ ಅದ್ಭುತ ವಿಷಯಗಳು ಯಾವುವೆಂದರೆ—ಆಯಾಯ ನಗರಗಳ ವಿಶೇಷಗಳು ವರ್ಣ-ಆಶ್ರಮಗಳ ವಿಭಜನೆ, ಗ್ರಹ, ನಕ್ಷತ್ರ, ಮತ್ತು ಸಿದ್ಧರೆಂಬ ದೇವಯೋನಿ ವಿಶೇಷರ ವಾಸಸನ್ನಿವೇಶಗಳು.

**ಯೋಜನಾನಾಂ ಯಥಾಚೈವ ಸಂಚರೋ ಬಹುವಿಸ್ತರಃ ।**
**ಸ್ವರ್ಗಸ್ಥಾನವಿಭಾಗಶ್ಚ ಮರ್ತ್ಯಾನಾಂ ಶುಭಚಾರಿಣಾಮ್ ॥ ೫೦ ॥**

**ವೃಕ್ಷಾಣಾಮೌಷಧೀನಾಂ ಚ ವೀರುಧಾಂ ಚ ಪ್ರಕೀರ್ತನಮ್ ।**
**ದೇವತಾನಾಮೃಷೀಣಾಂ ಚ ದ್ವೇ ಸೃತೀ ಪರಿಕೀರ್ತಿತೇ ॥ ೫೧ ॥**

**ಆಮ್ರಾದೀನಾಂ ತರೂಣಾಂ ಚ ಸರ್ಜನಂ ವ್ಯಂಜನಂ ತಥಾ ।**
**ಪಶೂನಾಂ ಪುರುಷಾಣಾಂಚ ಸಂಭವಃ ಪರಿಕೀರ್ತಿತಃ ॥ ೫೨ ॥**

**ತಥಾ ನಿರ್ವಚನಂ ಪ್ರೋಕ್ತಂ ಕಲ್ಪಸ್ಯ ಚ ಪರಿಗ್ರಹಃ ।**
**ನವಸರ್ಗಾಃ ಪುನಃ ಪ್ರೋಕ್ತಾ ಬ್ರಹ್ಮಣೋ ಬುದ್ಧಿಪೂರ್ವಕಾಃ ॥ ೫೩ ॥**

**ತ್ರಯೋ ಯೇಽಬುದ್ಧಿಪೂರ್ವಾಸ್ತು ತಥಾ ಯಲ್ಲೋಕಕಲ್ಪನಮ್ ।**
**ಬ್ರಹ್ಮಣೋವಯವೇಭ್ಯಶ್ಚ ಧರ್ಮಾದೀನಾಂ ಸಮುದ್ಭವಃ ॥ ೫೪ ॥**

**ಯೇದ್ವಾದಶ ಪ್ರಸೂಯಂತೇ ಪ್ರಜಾಕಲ್ಪೇ ಪುನಃ ಪುನಃ ।**
**ಕಲ್ಪಯೋರಂತರೇ ಪ್ರೋಕ್ತಂ ಪ್ರತಿಸಂಧಿಶ್ಚಯಸ್ತಯೋಃ ॥ ೫೫ ॥**

---

೫೦. ಸುಕೃತವನ್ನು ಆಚರಿಸಿ ಮರಣಹೊಂದಿದ ಮಾನವರು ಹೋಗಬೇಕಾಗಿರುವ ಬಹು ವಿಸ್ತಾರವಾದ ಮಾರ್ಗದ ಯೋಜನ ಸಂಖ್ಯೆ ಮತ್ತು ಸ್ವರ್ಗಲೋಕದಲ್ಲಿರುವ ವಿವಿಧವಾದ ಸ್ಥಾನ ತಾರತಮ್ಯ.

೫೧. ಅನೇಕ ವೃಕ್ಷ-ಓಷಧಿ-ಲತಾ ಮುಂತಾದ ವಸ್ತುಗಳು-ದೇವಋಷಿಗಳ ಪ್ರಶಂಸೆ. ದೇವಯಾನ ಪಿತೃಯಾಣವೆಂಬ ಮಾರ್ಗದ್ವಯ.

೫೨. ಮಾವು ಮುಂತಾದ ವೃಕ್ಷಗಳ ಸೃಷ್ಟಿ ಮತ್ತು ಅವುಗಳ ಚಿಹ್ನಗಳು ಪಶುಗಳು, ಪುರುಷರು ಇವರೆಲ್ಲರ ಉತ್ಪತ್ತಿಯು.

೫೩. ಕಲ್ಪದ ಆರಂಭ ಅವಸ್ಥೆಯು ಮತ್ತು ಬ್ರಹ್ಮನ ಬುದ್ಧಿ ಪೂರ್ವಕವಾಗಿ ಬಂದ ಒಂಭತ್ತು ಸರ್ಗಗಳು.

೫೪. ಅಬುದ್ಧಿಪೂರ್ವಕವಾದ ಮೂರು ಸರ್ಗಗಳು, ಲೋಕಗಳ ನಿರ್ಮಾಣ, ಬ್ರಹ್ಮನ ಅವಯುವಗಳಿಂದ ಧರ್ಮಾದಿಗಳ ಉತ್ಪತ್ತಿ.

೫೫. ಪ್ರಜಾಸೃಷ್ಟಿಕ್ರಮದಲ್ಲಿ ಧರ್ಮ ಮುಂತಾದ ಹನ್ನೆರಡು ಜನರ ಪುನಃ ಪುನಃ ಉತ್ಪತ್ತಿ. ಕಲ್ಪಗಳು ಒಂದು ಮುಗಿದು ಮತ್ತೊಂದು ಆರಂಭವಾಗುವ ಎರಡು ಕಲ್ಪಗಳ ಪ್ರತಿಸಂಧಿ.

ತಮೋಮಾತ್ರಾವೃತತ್ವಾತ್ತು ಬ್ರಹ್ಮಣೋಽ ಧರ್ಮಸಂಭವಃ ।
ಸತ್ತ್ವೋದ್ರಿಕ್ತಾಚ್ಚ ದೇಹಾಚ್ಚ ಪುರುಷಸ್ಯಚ ಸಂಭವಃ ॥ ೫೬ ॥

ತಥೈವ ಶತರೂಪಾಯಾಂ ತಯೋಃ ಪುತ್ರಾಸ್ತತಃ ಪರಮ್ ।
ಪ್ರಿಯವ್ರತೋತ್ತಾನಪಾದೌ ಪ್ರಸೂತ್ಯಾಕೃತಯಃ ಶುಭಾಃ ॥ ೫೭ ॥

ಕೀರ್ತ್ಯಂತೇ ಧೂತಪಾಪ್ಮಾನಸ್ತ್ರೈಲೋಕ್ಯೇ ಯೇ ಪ್ರತಿಷ್ಠಿತಾಃ ।
ರುಚೇಃ ಪ್ರಜಾಪತೇಶ್ಚೋರ್ಧ್ವಮಾಕೂತ್ಯಾಂ ಮಿಥುನೋದ್ಭವಃ ॥ ೫೮ ॥

ಪ್ರಸೂತ್ಯಾಮಪಿದಕ್ಷಸ್ಯ ಕನ್ಯಾನಾಮುದ್ಭವಃ ಶುಭಃ ।
ದಾಕ್ಷಾಯಣೀಷು ಪಾಪ್ಯೂರ್ಧ್ವಂ ಶಬ್ದಾದ್ಯಾಸು ಮಹಾತ್ಮನಃ ॥ ೫೯ ॥

ಧರ್ಮಸ್ಯ ಕೀರ್ತ್ಯತೇ ಸರ್ಗಃ ಸಾತ್ತ್ವಿಕಸ್ತು ಸುಖೋದಯಃ ।
ತಥಾಽಧರ್ಮಸ್ಯ ಹಿಂಸಾಯಾಂ ತಾಮಸೋಽಶುಭಲಕ್ಷಣಃ ॥ ೬೦ ॥

---

೫೬. ಬ್ರಹ್ಮನು ತಮೋಗುಣಾಂಶದಿಂದ ಕೂಡಿರುವಾಗ ಆಗಿರುವ ಅಧರ್ಮದ ಉತ್ಪತ್ತಿಯು, ಸತ್ತ್ವಗುಣದ ಉದ್ರೇಕವಿರುವ ದೇಹದಿಂದ ಪುರುಷನ ಉತ್ಪತ್ತಿ.

೫೭. ಉತ್ಪನ್ನನಾದ ಪುರುಷನಿಗೆ ಶತರೂಪೆಯಲ್ಲಿ ಅನೇಕ ಪುತ್ರರ ಜನ್ಮವು. ಪ್ರಿಯವ್ರತ ಉತ್ತಾನಪಾದರ ಚರಿತ್ರೆ, ಅವರ ಸಂತತಿಯ ಮಂಗಳಕರವಾದ ಆಕಾರಗಳು.

೫೮. ತ್ರಿಲೋಕಗಳಲ್ಲಿ ಪ್ರತಿಷ್ಠೆಯನ್ನು ಹೊಂದಿದ ಪಾಪಸಂಪರ್ಕವಿಲ್ಲದ ಪುಣ್ಯಾತ್ಮರು. ರುಚಿಪ್ರಜಾಪತಿಯಿಂದ ಆಕೂತಿಯಲ್ಲಿ ಗ್ರಾಮ್ಯಧರ್ಮದಿಂದ ಸಂತತಿ ಲಾಭವು.

೫೯. ದಕ್ಷಬ್ರಹ್ಮನಿಂದ ಪ್ರಸೂತಿಯಲ್ಲಿ ಅನೇಕ ಕನ್ಯೆಯರ ಪವಿತ್ರವಾದ ಜನ್ಮವು. ಶಬ್ದ ಮುಂತಾದ ದಕ್ಷಕನ್ಯೆಯರಲ್ಲಿ ಸತ್ತ್ವಗುಣದ ಪರಿಣಾಮವಾದ ಮತ್ತು ಸುಖಸಂಪನ್ನವಾದ ಧರ್ಮದ ಉತ್ಪತ್ತಿಯು.

೬೦. ಹಿಂಸೆಯಲ್ಲಿ ತಮೋಗುಣದ ಪರಿಣಾಮವೂ ಅಶುಭಸ್ವರೂಪವೂ ಆದ ಅಧರ್ಮದ ಸೃಷ್ಟಿ.

ಭೃಗ್ವಾದೀನಾಮೃಷೀಣಾಂ ಚ ಪ್ರಜಾಸರ್ಗೋಪವರ್ಣನಮ್ ।
ಬ್ರಹ್ಮರ್ಷೇಶ್ಚ ವಸಿಷ್ಠಸ್ಯ ಯತ್ರ ಗೋತ್ರಾನುಕೀರ್ತನಮ್ ॥ ೬೧ ॥

ಅಗ್ನೇಃ ಪ್ರಜಾಯಾಃ ಸಂಭೂತಿಃ ಸ್ವಾಹಾಯಾಂ ಯತ್ರ ಕೀರ್ತ್ಯತೇ ।
ಪಿತೄಣಾಂ ದ್ವಿಪ್ರಕಾರಾಣಾಂ ಸ್ವಧಾಯಾಂ ತದನಂತರಮ್ ॥ ೬೨ ॥

ಪಿತೃವಂಶಪ್ರಸಂಗೇನ ಕೀರ್ತ್ಯತೇ ಚ ಮಹೇಶ್ವರಾತ್ ।
ದಕ್ಷಸ್ಯ ಶಾಪಃ ಸತ್ಯಾಶ್ಚ ಭೃಗ್ವಾದೀನಾಂ ಚ ಧೀಮತಾಮ್ ॥ ೬೩ ॥

ಪ್ರತಿಶಾಪಶ್ಚ ದಕ್ಷಸ್ಯ ರುದ್ರಾದದ್ಭುತಕರ್ಮಣಃ ।
ಪ್ರತಿಷೇಧಶ್ಚ ವೈರಸ್ಯ ಕೀರ್ತ್ಯತೇ ದೋಷದರ್ಶನಾತ್ ॥ ೬೪ ॥

ಮನ್ವಂತರಪ್ರಸಂಗೇನ ಕಾಲಾಖ್ಯಾನಂ ಚ ಕೀರ್ತ್ಯತೇ ।
ಪ್ರಜಾಪತೇಃ ಕರ್ದಮಸ್ಯ ಕನ್ಯಾಯಾಃ ಶುಭಲಕ್ಷಣಮ್ ॥ ೬೫ ॥

ಪ್ರಿಯವ್ರತಸ್ಯ ಪುತ್ರಾಣಾಂ ಕೀರ್ತ್ಯತೇ ಯತ್ರ ವಿಸ್ತರಃ ।
ತೇಷಾಂ ನಿಯೋಗೋ ದೇಶೇಷು ದ್ವೀಪೇಷು ಚ ಪೃಥಕ್ ಪೃಥಕ್ ॥ ೬೬ ॥

---

೬೧. ಭೃಗು ಮುಂತಾದ ಮಹರ್ಷಿಗಳ ಪ್ರಜಾಸೃಷ್ಟಿ, ಬ್ರಹ್ಮರ್ಷಿಯಾದ ವಸಿಷ್ಠ ಮುನಿಯ ವಂಶದ ವರ್ಣನೆಯು.

೬೨. ಸ್ವಾಹಾದೇವಿಯಲ್ಲಿ ಅಗ್ನಿಗೆ ಜನಿಸಿದ ಪ್ರಜಾಸರ್ಗ, ಮತ್ತು ಎರಡು ಬಗೆಯ ಪಿತೃದೇವತೆಗಳಿಗೆ ಸ್ವಧಾದೇವಿಯಲ್ಲಿ ಹುಟ್ಟಿದ ಪ್ರಜಾಸರ್ಗ.

೬೩. ಪಿತೃವಂಶವನ್ನು ವರ್ಣನಮಾಡುವ ಪ್ರಸಂಗದಿಂದ ಈಶ್ವರನಿಂದ ದಕ್ಷಬ್ರಹ್ಮ, ಸತೀದೇವಿ, ಭೃಗ್ವಾದಿ ಮಹರ್ಷಿಗಳು ಇವರಿಗೆ ಶಾಪಪ್ರಾಪ್ತಿ.

೬೪. ರುದ್ರನಿಗೆ ಆಶ್ಚರ್ಯ ಚರಿತ್ರೆಗಳಿಂದ ಕೂಡಿದ ದಕ್ಷನ ಪ್ರತಿಶಾಪವು. ವೈರವು ಹಾನಿಕರವೆಂದು ಅವರವರ ವೈರಪರಿತ್ಯಾಗವು.

೬೫. ಮನ್ವಂತರಗಳನ್ನು ಹೇಳುತ್ತಾ ಆ ಸಂದರ್ಭದಲ್ಲಿ ಕಾಲಪರಿಮಾಣವು. ಕರ್ದಮ ಪ್ರಜಾಪತಿಯ ಕನ್ಯೆಯ ಶುಭಲಕ್ಷಣವು.

೬೬. ಪ್ರಿಯವ್ರತನ ಪುತ್ರರ ಚರಿತ್ರೆಯ ವಿಸ್ತಾರವು. ಅವರನ್ನು ಅನೇಕ ದ್ವೀಪ ಮಧ್ಯದ ದೇಶಗಳಲ್ಲಿ ಇರುವಂತೆ ನಿಯೋಗವು.

ಸ್ವಾಯಂಭುವಸ್ಯ ಸರ್ಗಸ್ಯ ತತಶ್ಚಾಪ್ಯನುಕೀರ್ತನಮ್ ।
ವರ್ಷಾಣಾಂ ಚ ನದೀನಾಂ ಚ ತದ್ಭೇದಾನಾಂ ಚ ಸರ್ವಶಃ ॥ ೬೭ ॥

ದ್ವೀಪಭೇದ ಸಹಸ್ರಾಣಾಂ ಅಂತರ್ಭಾವಶ್ಚ ಸಪ್ತಸು ।
ವಿಸ್ತರಾನ್ಮಂಡಲಂ ಚೈವ ಜಂಬೂದ್ವೀಪಸಮುದ್ರಯೋಃ ॥ ೬೮ ॥

ಪ್ರಮಾಣಂ ಯೋಜನಾಗ್ರೇಣ ಕೀರ್ತ್ಯತೇ ಪರ್ವತೈಃ ಸಹ ।
ಹಿಮವಾನ್ ಹೇಮಕೂಟಶ್ಚ ನಿಷಧೋ ಮೇರುರೇವ ಚ ॥ ೬೯ ॥

ನೀಲಃ ಶ್ವೇತಶ್ಚ ಶೃಂಗೀ ಚ ಕೀರ್ತ್ಯಂತೇ ಸಪ್ತಪರ್ವತಾಃ ।
ತೇಷಾಮಂತರವಿಷ್ಕಂಭಾ ಉಚ್ಛ್ರಾಯಾಯಾಮವಿಸ್ತರಾಃ ।
ಕೀರ್ತ್ಯಂತೇ ಯೋಜನಾಗ್ರೇಣ ಯೇ ಚ ತತ್ರ ನಿವಾಸಿನಃ ॥ ೭೦ ॥

ಭಾರತಾದೀನಿ ವರ್ಷಾಣಿ ನದೀಭಿಃ ಪರ್ವತೈಸ್ತಥಾ ।
ಭೂತೈಶ್ಚೋಪನಿವಿಷ್ಟಾನಿ ಗತಿಮದ್ಭಿರ್ಧ್ರುವೈಸ್ತಥಾ ॥ ೭೧ ॥

---

೬೭. ಸ್ವಯಂಭು ಸರ್ಗದ ಕಥನ ಮತ್ತು ಅನೇಕ ಖಂಡಗಳು ನದಿಗಳು ಅವುಗಳ ಪ್ರಭೇದಗಳು ಇವೆಲ್ಲವುಗಳ ವರ್ಣನ.

೬೮. ದ್ವೀಪಗಳಂತೆ ತೋರುವ ಅನೇಕ ಅವಾಂತರ ಭೇದಗಳಿಂದಕೂಡಿದ ಪ್ರದೇಶಗಳಿಗೆ ಏಳು ದ್ವೀಪಗಳಲ್ಲಿ ಅಂತರ್ಭಾವವು ಮತ್ತು ಜಂಬೂದ್ವೀಪ, ಅದರ ಸುತ್ತಲೂ ಇದ್ದ ಸಮುದ್ರ ಇವುಗಳ ಮಂಡಲಗಳ ವಿಸ್ತಾರವಾದ ವರ್ಣನೆ.

೬೯. ಜಂಬೂದ್ವೀಪ ಸಮುದ್ರಗಳ ಯೋಜನ ಪರಿಮಾಣ, ಮತ್ತು ಹಿಮವಾನ್, ಹೇಮಕೂಟ, ನಿಷಧ, ಮೇರು, ನೀಲ, ಶ್ವೇತ, ಶೃಂಗಿ ಎಂಬ ಏಳು ಪರ್ವತಗಳು.

೭೦. ಆ ಪರ್ವತಗಳ ಒಂದು ಕೋಣದಿಂದ ಮತ್ತೊಂದು ಕೋಣಕ್ಕೆ ಇರುವ ಅಂತರಭಾಗದ ವಿಷ್ಕಂಭಪರಿಮಾಣ, ಎತ್ತರ, ಭೂಮಿಯ ಮಟ್ಟದಿಂದ ಔನ್ನತ್ಯ, ಮತ್ತು ವಿಸ್ತಾರ ಇವುಗಳ ಯೋಜನ ಪರಿಮಾಣಸಂಖ್ಯೆಯು, ಆಯಾಯ ಬೆಟ್ಟದಲ್ಲಿ ವಾಸಮಾಡುವ ಗಣ್ಯವ್ಯಕ್ತಿಗಳ ಚರಿತ್ರೆಯು,

೭೧. ನಾನಾವಿಧವಾದ ನದಿಗಳಿಂದಲೂ ಪರ್ವತಗಳಿಂದಲೂ ನಿತ್ಯ ಅನಿತ್ಯಗಳಾದ ವಿವಿಧ ಪ್ರಾಣಿಗಳಿಂದಲೂ ವ್ಯಾಪ್ತಗಳಾದ ಭಾರತವೇ ಮುಂತಾದ ಖಂಡಗಳು.

**ಜಂಬೂದ್ವೀಪಾದಯೋ ದ್ವೀಪಾಃ ಸಮುದ್ರೈಃ ಸಪ್ತಭಿರ್ವೃತಾಃ ।**
**ತತಃ ಸ್ವರ್ಣಮಯೀ ಭೂಮಿರ್ಲೋಕಾಲೋಕಾಶ್ಚ ಕೀರ್ತ್ಯತೇ ॥ ೭೨ ॥**

**ಸಪ್ರಮಾಣಾ ಇಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ ।**
**ರೂಪಾದಯಃ ಪ್ರಕೀರ್ತ್ಯಂತೇ ಕರಣಾತ್ಪ್ರಾಕೃತೈಃ ಸಹ ।**
**ಸರ್ವಂ ಚೈತತ್ಪ್ರಧಾನಸ್ಯ ಪರಿಣಾಮೈಕದೇಶಿಕಮ್ ॥ ೭೩ ॥**

**ಪರ್ಯಾಯಪರಿಮಾಣಂ ಚ ಸಂಕ್ಷೇಪೇಣಾತ್ರ ವರ್ಣ್ಯತೇ ।**
**ಸೂರ್ಯಾಚಂದ್ರಮಸೋಶ್ಚೈವ ಪೃಥಿವ್ಯಾಶ್ಚಾಪ್ಯಶೇಷತಃ ॥ ೭೪ ॥**

**ಪ್ರಮಾಣಂ ಯೋಜನಾಗ್ರೇಣ ಸಾಂಪ್ರತೈರಭಿಮಾನಿಭಿಃ ।**
**ಮಹೇಂದ್ರಾದ್ಯಾಃ ಶುಭಾಃ ಪುಣ್ಯಾಮಾನಸೋತ್ತರ ಮೂರ್ಧನಿ ॥ ೭೫ ॥**

**ಅತ ಊರ್ಧ್ವಗತಿರ್ಶ್ಚೋಕ್ತಾ ಸೂರ್ಯಸ್ಯಾಲಾತಚಕ್ರವತ್ ।**
**ನಾಗವೀಥ್ಯಕ್ಷವೀಥ್ಯೋಶ್ಚ ಲಕ್ಷಣಂ ಚ ಪ್ರಕೀರ್ತ್ಯತೇ ॥ ೭೬ ॥**

---

೭೨. ಸಪ್ತ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಜಂಬೂದ್ವೀಪ ಮುಂತಾದ ನಿಖಿಲ ದ್ವೀಪಗಳು, ಮೇರುಪರ್ವತ ಪ್ರಾಂತದ ಸುವರ್ಣ ಭೂಮಿಯು ಲೋಕಾಲೋಕವೆಂಬ ಪರ್ವತ ಮತ್ತು ಸಪ್ತದ್ವೀಪಗಳಿಂದಲೂ ಅನೇಕ ಲೋಕಗಳಿಂದ ಕೂಡಿದ ಭೂಮಿಯ ಪರಿಮಾಣ.

೭೩. ಪ್ರಕೃತಿಯ ಸತ್ತ್ವಾದಿಗುಣಸ್ವರೂಪದಿಂದ ಹುಟ್ಟಿದ ರೂಪಾದಿವಿಷಯಗಳಿಂದ ಕೂಡಿದ ನಾನಾವಿಧ ಇಂದ್ರಿಯಗಳು ಮತ್ತು ಪ್ರಧಾನ ಅಥವಾ ಪ್ರಕೃತಿಯ ಏಕದೇಶ ಪರಿಣಾಮದಿಂದ ಹುಟ್ಟಿದ ವಿಕಾರರೂಪವಾದ ಸರ್ವಕಾರ್ಯಗಳು.

೭೪. ಸ್ಥಿತಿ ಪ್ರಲಯ ಪರ್ಯಾಯದ ಪರಿಮಾಣ ವಿಷಯದಲ್ಲಿ ಸಂಕ್ಷೇಪವಾದ ವರ್ಣನೆಯು, ಸೂರ್ಯ-ಚಂದ್ರ-ಪೃಥಿವಿಗಳ ಸಂಪೂರ್ಣ ಪರಿಮಾಣವು.

೭೫. ಪೃಥಿವಿಯ ಅಭಿಮಾನಿಗಳಾಗಿರುವ ವರ್ತಮಾನಕಾಲದ ಮಹಾತ್ಮರ ಚರಿತ್ರೆ. ಮಾನಸ ಸರಸ್ಸಿನ ಉತ್ತರ ದಿಕ್ಕಿನ ಮೇಲ್ಭಾಗದಲ್ಲಿ ಪವಿತ್ರ ಮತ್ತು ಮಂಗಳಕರ ಮಹೇಂದ್ರಾದಿ ಶ್ರೇಷ್ಠ ಪರ್ವತಗಳ ಪ್ರಮಾಣ ಸನ್ನಿವೇಶ ಮುಂತಾದುವು.

೭೬. ಅಲಾತಚಕ್ರ(ಬೆಂಕಿಯಕೊಳ್ಳಿ) ದಂತೆ ಭ್ರಮಿಸುತ್ತ ಸೂರ್ಯಮಂಡಲದ ಊರ್ಧ್ವಗತಿ, ನಾಗವೀಥೀ ಅಕ್ಷವೀಥಿಗಳ ಲಕ್ಷಣಗಳು.

ಕೋಷ್ಠಯೋರ್ಲೇಖಯೋಶ್ಚೈವ ಮಂಡಲಾನಾಂ ಚ ಯೋಜನೈಃ ।
ಲೋಕಾಲೋಕಸ್ಯ ಸಂಧ್ಯಾಯಾ ಅಹ್ನೋ ವಿಷುವತಸ್ತಥಾ ॥ ೭೭ ॥

ಲೋಕಪಾಲಾಃ ಸ್ಥಿತಾಶ್ಚೋರ್ಧ್ವಂ ಕೀರ್ತ್ಯಂತೇ ತೇ ಚತುರ್ದಿಶಮ್ ।
ಪಿತ್ರ್ಯಾಣಾಂ ದೇವತಾನಾಂ ಚ ಪಂಥಾನೌ ದಕ್ಷಿಣೋತ್ತರೌ ॥ ೭೮ ॥

ಗೃಹಿಣಾಂ ನ್ಯಾಸಿನಾಂ ಚೋಕ್ತೋ ರಜಸ್ಸತ್ತ್ವಸಮಾಶ್ರಯಃ ।
ಕೀರ್ತ್ಯತೇ ಚ ಪದಂ ವಿಷ್ಣೋರ್ಧರ್ಮಾದ್ಯಾ ಯತ್ರ ಚ ಸ್ಥಿತಾಃ ॥ ೭೯ ॥

ಸೂರ್ಯಾಚಂದ್ರಮಸೋಶ್ಚಾರೋ ಗ್ರಹಾಣಾಂ ಜ್ಯೋತಿಷಾಂ ತಥಾ ।
ಕೀರ್ತ್ಯತೇ ಧೃತಸಾಮರ್ಥ್ಯಾತ್ ಪ್ರಜಾನಾಂ ಚ ಶುಭಾಶುಭಮ್ ॥ ೮೦ ॥

ಬ್ರಹ್ಮಣಾ ನಿರ್ಮಿತಃ ಸೌರಃ ಸಾದನಾರ್ಥಂ ಚ ಸ ಸ್ವಯಮ್ ।
ಕೀರ್ತ್ಯತೇ ಭಗವಾನ್ಯೇನ ಪ್ರಸರ್ಪತಿ ದಿವಃಕ್ಷಯಮ್ ॥ ೮೧ ॥

ಸ ರಥೋಧಿಷ್ಠಿತೋ ದೇವೈರಾದಿತ್ಯೈರ್ಋಷಿಭಿಸ್ತಥಾ ।
ಗಂಧರ್ವೈರಪ್ಸರೋಭಿಶ್ಚ ಗ್ರಾಮಣೀಸರ್ಪರಾಕ್ಷಸೈಃ ॥ ೮೨ ॥

---

೭೭. ಲೋಕಾಲೋಕ ಪರ್ವತದ ಪಾರ್ಶ್ವಮಧ್ಯಗಳ ಲೇಖೆಗಳ ಮತ್ತು ಇತರ ಪ್ರದೇಶಗಳ ಯೋಜನ ಪರಿಮಾಣ, ಸಂಧ್ಯಾ-ಅಹಸ್ಸು-ವಿಷುವ ಇವುಗಳ ಪ್ರಮಾಣವು.

೭೮. ಮತ್ತು ಊರ್ಧ್ವಭಾಗದಲ್ಲಿ ನಾಲ್ಕು ದಿಕ್ಕುಗಳಲ್ಲಿರುವ ಲೋಕಪಾಲಕರು, ಪಿತೃಗಳಿಗೂ ದೇವತೆಗಳಿಗೂ ಸಂಬಂಧಿಸಿದ ಪ್ರತ್ಯೇಕವಾದ ದಕ್ಷಿಣ ಉತ್ತರ ಮಾರ್ಗಗಳು.

೭೯. ಗೃಹಸ್ಥಾಶ್ರಮಿ-ಸನ್ಯಾಸಾಶ್ರಮಿಗಳ ರಜೋಗುಣ ಸತ್ತ್ವಗುಣಾವಲಂಬಿಯಾದ ಆಚಾರ ವಿಶೇಷವು. ಧರ್ಮಾದಿಗಳು ವಾಸಮಾಡುವ ವಿಷ್ಣುಪದವು.

೮೦. ಸೂರ್ಯ-ಚಂದ್ರ-ಗ್ರಹಗಣ-ತೇಜೋಮಂಡಲಗಳ ಚಾರವು. ಅದರ ಸಾಮರ್ಥ್ಯದಿಂದ ಪ್ರಜೆಗಳಿಗಾಗುವ ಶುಭ ಅಶುಭ ಫಲಗಳು.

೮೧-೮೨. ಸೂರ್ಯ ಪರಮಾತ್ಮನು ಕುಳಿತುಕೊಳ್ಳುವುದಕ್ಕಾಗಿ ಬ್ರಹ್ಮನಿಂದ ನಿರ್ಮಿಸಲ್ಪಟ್ಟದ್ದೂ ಸೂರ್ಯನು ಪ್ರತಿ ದಿನ ಆಕಾಶದ ಅಂತವನ್ನು ಮುಟ್ಟಲು ಸಾಧ

**ಅಪಾಂ ಸಾರಮಯಾತ್ ಸ್ಯಂದಾತ್ಕಥ್ಯತೇ ಚ ರಸಸ್ತಥಾ ।**
**ವೃದ್ಧಿಕ್ಷಯೌ ಚ ಸೋಮಸ್ಯ ಕೀರ್ತ್ಯೇತೇ ಸೋಮಕಾರಿತೇ ॥ ೭೩ ॥**

**ಸೂರ್ಯಾದೀನಾಂ ಸ್ಯಂದನಾನಾಂ ಧ್ರುವಾದೇವ ಪ್ರವರ್ತನಮ್ ।**
**ಕೀರ್ತ್ಯತೇ ಶಿಶುಮಾರಸ್ಯ ಯಸ್ಯ ಪುಚ್ಛೇ ಧ್ರುವಃ ಸ್ಥಿತಃ ॥ ೭೪ ॥**

**ತಾರಾರೂಪಾಣಿ ಸರ್ವಾಣಿ ನಕ್ಷತ್ರಾಣಿ ಗ್ರಹೈಃ ಸಹ ।**
**ನಿವಾಸಾ ಯತ್ರ ಕೀರ್ತ್ಯಂತೇ ದೇವಾನಾಂ ಪುಣ್ಯಕರ್ಮಣಾಮ್ ॥ ೭೫ ॥**

**ಸೂರ್ಯರಶ್ಮಿಸಹಸ್ರಂ ಚ ವರ್ಷಶೀತೋಷ್ಣವಿಶ್ರವಃ ।**
**ಪ್ರವಿಭಾಗಶ್ಚ ರಶ್ಮೀನಾಂ ನಾಮತಃ ಕರ್ಮತೋಽರ್ಥತಃ ॥ ೭೬ ॥**

**ಪರಿಮಾಣಂ ಗತಿಶ್ಚೋಕ್ತಾ ಗ್ರಹಾಣಾಂ ಸೂರ್ಯಸಂಶ್ರಯಾತ್ ।**
**ವೇಶ್ಯಾರೂಪಾತ್ಪ್ರಧಾನಸ್ಯ ಪರಿಮಾಣೋ ಮಹದ್ಭವಃ ॥ ೭೭ ॥**

---

ನವೂ ದೇವ, ಆದಿತ್ಯ, ಋಷಿ, ಗಂಧರ್ವ, ಅಪ್ಸರಸ್ಸು, ಸರ್ಪ, ರಾಕ್ಷಸ ಶ್ರೇಷ್ಠರಿಂದ ತುಂಬಿರುವುದೂ ಆದ ಸೂರ್ಯನ ರಥವು.

೭೩. ಆ ರಥವು ನೀರಿನ ಸಾರಾಂಶದ ಘನರೂಪವಾದ್ದರಿಂದ ರಸರೂಪವೆಂದು ಕರೆಯಲ್ಪಡುವದು. ಚಂದ್ರನಿಗೆ ಆಗುವ ವೃದ್ಧಿಕ್ಷಯಗಳು.

೭೪. ಸೂರ್ಯ ಮುಂತಾದವರ ರಥಗಳ ಧ್ರುವ ಮಂಡಲದ ಅಧೀನವಾದ ಪ್ರಚಾರವು. ಪುಚ್ಛ ಪ್ರದೇಶದಲ್ಲಿ ಧ್ರುವನನ್ನು ಧರಿಸಿದ ಶಿಶುಮಾರನು.

೭೫. ಪುಣ್ಯಕರ್ಮದಿಂದ ಸ್ವರ್ಗಲೋಕವನ್ನು ಹೊಂದಿದ ಕರ್ಮದೇವರು ವಾಸ ಮಾಡಿರುವ ತಾರಕಾರೂಪವಾದ, ಅನೇಕ ಗ್ರಹಗಣದಿಂದ ಪರಿವೃತವಾದ ನಕ್ಷತ್ರಗಳು.

೭೬. ಸೂರ್ಯನಿಗಿರುವ ಮಳೆ, ಶೀತ, ಉಷ್ಣ. ಸಮುತ್ಪ ಗುಣಗಳಿಂದ ಕೂಡಿದ ಸಾವಿರ ಕಿರಣಗಳು, ಆಯಾಯ ಕಿರಣಗಳ ಪ್ರತ್ಯೇಕ ನಾಮ, ಕರ್ಮ, ಪ್ರಯೋಜನಗಳ ಪ್ರವಿಭಾಗವು.

೭೭. ಸೂರ್ಯನ ಆಶ್ರಯ ಬಲದಿಂದ ಗ್ರಹಗಳ ಗತಿ ಪರಿಮಾಣಗಳು ಪ್ರಧಾನದಿಂದ ಪರಿಣಾಮ ರೂಪವಾದ ಮಹತ್ತತ್ತ್ವದ ಉತ್ಪತ್ತಿಯು.

ಪುರೂರವಸ ಐಲಸ್ಯಮಾಹಾತ್ಮ್ಯಸ್ಯಾನುಕೀರ್ತನಮ್ ।
ಪಿತೄಣಾಂ ದ್ವಿಪ್ರಕಾರಾಣಾಂ ಮಾಹಾತ್ಮ್ಯಂ ಹ್ಯಮೃತಸ್ಯ ಚ ॥ ೮೮ ॥

ತತಃ ಪರ್ವಾಣಿ ಕೀರ್ತ್ಯಂತೇ ಪರ್ವಣಾಂಚೈವ ಸಂಧಯಃ ।
ಸ್ವರ್ಗಲೋಕಗತಾನಾಂಚ ಪ್ರಾಪ್ತಾನಾಂ ಚಾಪ್ಯಧೋಗತಿಮ್ ॥ ೮೯ ॥

ಪಿತೄಣಾಂ ದ್ವಿಪ್ರಕಾರಾಣಾಂ ಶ್ರಾದ್ಧೇನಾನುಗ್ರಹೋ ಮಹಾನ್ ।
ಯುಗಸಂಖ್ಯಾಪ್ರಮಾಣಂಚ ಕೀರ್ತ್ಯತೇ ಚ ಕೃತಂ ಯುಗಮ್ ॥ ೯೦ ॥

ತ್ರೇತಾಯುಗೇಚಾಪಕರ್ಷಾದ್ವಾರ್ತಾಯಾಃ ಸಂಪ್ರವರ್ತನಮ್ ।
ವರ್ಣಾನಾಮಾಶ್ರಮಾಣಾಂ ಚ ಸಂಸ್ಥಿತಿ ರ್ಧರ್ಮತಸ್ತಥಾ ॥ ೯೧ ॥

ವಜ್ರ ಪ್ರವರ್ತನಂ ಚೈವ ಸಂವಾದೋಯತ್ರ ಕೀರ್ತ್ಯತೇ
ಋಷೀಣಾಂವಸುನಾ ಸಾರ್ಧಂ ವಸೋಶ್ಚಾಧಃ ಪುನರ್ಗತಿಃ ॥ ೯೨ ॥

---

೮೮. ಇಲಾ ಪುತ್ರನಾದ ಪುರೂರವಸ್ಸಿನ ಮಾಹಾತ್ಮ್ಯಕೀರ್ತನವು. ಮತ್ತು ದ್ವಿವಿಧರಾದ ಪಿತೃದೇವತೆಗಳ ಹಾಗು ಅಮೃತದ ಮಾಹಾತ್ಮ್ಯವು.

೮೯. ಅನಂತರದಲ್ಲಿ ಪರ್ವಗಳು-ಆ ಪರ್ವಗಳ ಸಂಧಿಗಳು. ಮತ್ತು ಊರ್ಧ್ವಲೋಕವಾದ ಸ್ವರ್ಗವನ್ನು ಹೊಂದಿದವರ ಅಲ್ಲಿಂದ ಅಧೋಗತಿಯನ್ನು ಹೊಂದಿದವರ ಚರಿತ್ರೆ.

೯೦. ಎರಡು ಬಗೆಯ ಪಿತೃದೇವರಿಗಾಗುವ ಶ್ರಾದ್ಧಾನ್ನದಾನದಿಂದ ತೃಪ್ತಿಯು. ಯುಗ ಸಂಖ್ಯೆ ಮತ್ತು ಅವುಗಳ ಪರಿಮಾಣ ಮತ್ತು ಕೃತಯುಗವು.

೯೧. ತ್ರೇತಾಯುಗದಲ್ಲಿ ಧರ್ಮವು ಕ್ಷೀಣತೆಗೆ ಇಳಿದಿರುವುದರಿಂದ ಕೃಷಿವಾಣಿಜ್ಯ ಮುಂತಾದ ವಾರ್ತಾವೃತ್ತಿಯ ಪ್ರಚಾರವು. ವರ್ಣಾಶ್ರಮಗಳ ಧಾರ್ಮಿಕ ಸ್ಥಿತಿಯು.

೯೨. ಋಷಿಗಳಿಗೂ ವಸುವಿಗೂ ಆಗಿರುವ ವಜ್ರಪ್ರವರ್ತನದಿಂದ ಗರ್ಭಿತವಾದ ಸಂವಾದವು. ವಸುವಿಗೆ ಪುನಃ ಪ್ರಾಪ್ತವಾದ ಅಧೋಗತಿಯು.

ಪ್ರಧಾನಾತ್ತು ಶಬ್ದತ್ವಂ ಚ ಸ್ವಾಯಂಭುವಮ್ಮತೇ ಮನುಮ್ ।
ಪ್ರಶಂಸಾ ತಪಸಶ್ಶ್ಲೋಕ್ತಾ ಯುಗಾವಸ್ಥಾಶ್ಚ ಕೃತ್ಸ್ನಶಃ ।
ದ್ವಾಪರಸ್ಯ ಕಲೇಶ್ಚಾಪಿ ಸಂಕ್ಷೇಪೇಣ ಪ್ರಕೀರ್ತನಮ್ ॥ ೯೩ ॥

ಮನ್ವಂತರಂ ಚ ಸಂಖ್ಯಾ ಚ ಮಾನುಷೇಣ ಪ್ರಕೀರ್ತಿತಾ
ಮನ್ವಂತರಾಣಾಂ ಸರ್ವೇಷಾಂ ಏತದೇವಚಲಕ್ಷಣಮ್ ॥ ೯೪ ॥

ಅತೀತಾನಾಗತಾನಾಂ ಚ ವರ್ತಮಾನಂ ಚ ಕೀರ್ತ್ಯತೇ ।
ತಥಾಮನ್ವಂತರಾಣಾಂ ಚ ಪ್ರತಿಸಂಧಾನ ಲಕ್ಷಣಮ್ ॥ ೯೫ ॥

ಅತೀತಾನಾಗತಾನಾಂ ಚ ಪ್ರೋಕ್ತಂ ಸ್ವಾಯಂಭುವೇ ತತಃ ।
ಋಷೀಣಾಂ ಚ ಗತಿಃ ಪ್ರೋಕ್ತಾ ಕಾಲಜ್ಞಾನಗತಿಸ್ತಥಾ ॥ ೯೬ ॥

ದುರ್ಗಸಂಖ್ಯಾಪ್ರಮಾಣಂ ಚ ಯುಗವಾರ್ತಾ ಪ್ರವರ್ತನಮ್ ।
ತ್ರೇತಾಯಾಂ ಚಕ್ರವರ್ತೀನಾಂ ಲಕ್ಷಣಂ ಜನ್ಮ ಚೈವ ಹಿ ॥ ೯೭ ॥

---

೯೩. ಪ್ರಧಾನ ಪರಿಣಾಮರೂಪವಾಗಿ ಸ್ವಾಯಂಭುವಮನುವಿನ ತಪೋಮಹಿಮೆಯ ಪ್ರಶಂಸೆ. ಯುಗಗಳಲ್ಲಾಗುವ ಸಂಪೂರ್ಣ ಅವಸ್ಥಾ ವಿಶೇಷಗಳು, ದ್ವಾಪರ-ಕಲಿಯುಗಗಳ ಸಂಕ್ಷೇಪವಾದ ವರ್ಣನೆ.

೯೪. ಮನ್ವಂತರಗಳು, ಅವುಗಳ ಸಂಖ್ಯೆ, ಮಾನುಷ ಪರಿಮಾಣಾನುಸಾರವಾಗಿ ಆ ಎಲ್ಲ ಮನ್ವಂತರಗಳ ಲಕ್ಷಣ.

೯೫. ಅತೀತ-ಅನಾಗತ ವರ್ತಮಾನ ಮನ್ವಂತರಗಳ ಲಕ್ಷಣವು. ಮನ್ವಂತರಗಳ ಪರಸ್ಪರ ಸಂಧಿಯ ಲಕ್ಷಣವು,

೯೬. ಸ್ವಾಯಂಭುವ ಮನ್ವಂತರಕ್ಕೆ ಅತೀತಾನಾಗತ ಮನ್ವಂತರ ಸಂಧಿಯು ಮತ್ತು ಋಷಿಗಳ ಗತಿ ವಿಶೇಷವು. ಕಾಲಜ್ಞಾನ, ಅದರ ಪ್ರಸಾರವು.

೯೭. ದುರ್ಗಗಳ ಸಂಖ್ಯೆ ಮತ್ತು ಅವುಗಳ ಪರಿಮಾಣ, ಯುಗಗಳಲ್ಲಿ ತಾರತಮ್ಯದಿಂದಿರುವ ವೃತ್ತಿಗಳ ಪ್ರಸರಣೆ, ತ್ರೇತಾಯುಗದ ಮುಖ್ಯ ಚಕ್ರವರ್ತಿಗಳ ಲಕ್ಷಣ ಮತ್ತು ಅವರ ಉತ್ಪತ್ತಿ ಮುಂತಾದುವು.

ಪ್ರಮತೇಶ್ಚ ತಥಾ ಜನ್ಮ ಅಥೋ ಕಲಿಯುಗಸ್ಯ ವೈ ।
ಅಂಗುಲ್ಯೈಹ್ರ್ರಾಸನಂ ಚೈವ ಭೂತಾನಾಂ ಯಚ್ಚ ಚೋಚ್ಯತೇ ॥ ೯೮ ॥

ಶಾಖಾನಾಂ ಪರಿಸಂಖ್ಯಾನಂ ಶಿಷ್ಯಪ್ರಾಧಾನ್ಯ ಮೇವಚ ।
ವಾಕ್ಯಂ ಸಪ್ತವಿಧಂ ಚೈವ ಋಷಿಗೋತ್ರಾನುಕೀರ್ತನಮ್ ॥ ೯೯ ॥

ಲಕ್ಷಣಂ ಸೂತಪುತ್ರಾಣಾಂ ಬ್ರಾಹ್ಮಣಸ್ಯ ಚ ಕೃತ್ಸ್ನಶಃ ।
ವೇದಾನಾಂ ವ್ಯಸನಂ ಚೈವ ವೇದವ್ಯಾಸೈರ್ಮಹಾತ್ಮಭಿಃ ॥ ೧೦೦ ॥

ಮನ್ವಂತರೇಷು ದೇವಾನಾಂ ಪ್ರಜೇಶಾನಾಂ ಚ ಕೀರ್ತನಮ್ ।
ಮನ್ವಂತರಕ್ರಮಶ್ಚೈವ ಕಾಲಜ್ಞಾನಂ ಚ-ಕೀರ್ತ್ಯತೇ ॥ ೧೦೧ ॥

ದಕ್ಷಸ್ಯ ಚಾಪಿ ದೌಹಿತ್ರಾಃ ಪ್ರಿಯಾಯಾ ದುಹಿತುಃ ಶುಭಾಃ ।
ಬ್ರಹ್ಮಾದಿಭಿಸ್ತೇ ಜನಿತಾ ದಕ್ಷೇಣೈವ ಚ ಧೀಮತಾ ॥ ೧೦೨ ॥

---

೯೮. ಪ್ರಮತಿಯ ಜನ್ಮವು, ಕಲಿಯುಗದ ಸಂಭವವು, ಆ ಕಲಿಯುಗದ ಪ್ರಾಣಿಗಳು ಅಂಗುಲ ಪರಿಮಾಣದಿಂದ ತುಂಬಾ ಹ್ರಸ್ವವಾಗಿರುವುದು.

೯೯. ಅನೇಕ ವೇದ ಶಾಖೆಗಳ ಗಣನೆ. ಆಯಾಯ ಶಾಖೆಯಲ್ಲಿ ಆಯಾಯ ಶಿಷ್ಯರ ಪ್ರಾಮುಖ್ಯವು. ಸಪ್ತವಿಧವಾದ ವಾಕ್ಯ, ಋಷಿಗಳ ಗೋತ್ರಕೀರ್ತನವು.

೧೦೦. ಸೂತಪುತ್ರರ ಲಕ್ಷಣವು. ಸಂಪೂರ್ಣವಾಗಿ ಅನ್ವಯಿಸುವ ಬ್ರಾಹ್ಮಣದ ಲಕ್ಷಣವು ಮತ್ತು ಮಹಾತ್ಮರಾದ ವೇದವ್ಯಾಸರಿಂದ ರಚಿತವಾದ ವೇದಗಳ ವಿಭಜನ ರೂಪವಾದ ವ್ಯಾಸವು.

೧೦೧. ಅನೇಕ ಮನ್ವಂತರಗಳಲ್ಲಿರುವ ದೇವತೆಗಳ ಮತ್ತು ಪ್ರಜಾಪತಿಗಳ ಪ್ರಶಂಸೆ, ಮನ್ವಂತರಗಳ ಕ್ರಮವು, ಕಾಲಜ್ಞಾನವು.

೧೦೨. ದಕ್ಷಬ್ರಹ್ಮನ ಪ್ರಿಯಪುತ್ರಿಯಲ್ಲಿ ಹುಟ್ಟಿದ ಶುಭಕರರು. ಧೀಮಂತನಾದ ದಕ್ಷನಿಂದಲೂ ಬ್ರಹ್ಮಾದಿಗಳಿಂದಲೂ ಸಂಭವಿಸಿ ಮೇರುಪರ್ವತವನ್ನಾಶ್ರಯಿಸಿದ ಸಾವರ್ಣರು.

ಸಾವರ್ಣಾಶ್ಚಾತ್ರ ಕೀರ್ತ್ಯಂತೇ ಮನವೋ ಮೇರುಮಾಶ್ರಿತಾಃ ।
ಧ್ರುವಸ್ಯೌತ್ತಾನಪಾದಸ್ಯ ಪ್ರಜಾಸರ್ಗೋಪವರ್ಣನಮ್ ॥ ೧೦೩ ॥

ಚಾಕ್ಷುಷಸ್ಯ ಮನೋಃ ಸರ್ಗಃ ಪ್ರಜಾನಾಂ ವೀರ್ಯವರ್ಣನಮ್ ।
ಪ್ರಭುಣಾ ಚಾಪಿ ವೈನ್ಯೇನ ಭೂಮಿದೋಹಪ್ರವರ್ತನಾ ॥ ೧೦೪ ॥

ಪಾತ್ರಾಣಾಂ ಪಯಸಾಂ ಚೈವ ವತ್ಸಾನಾಂ ಚ ವಿಶೇಷಣಮ್ ।
ಬ್ರಹ್ಮಾದಿಭಿಃ ಪೂರ್ವಮೇವ ದುಗ್ಧಾ ಚೇಯಂ ವಸುಂಧರಾ ॥ ೧೦೫ ॥

ದಶಭ್ಯಶ್ಚ ಪ್ರಚೇತೋಭ್ಯೋ ಮಾರಿಷಾಯಾಂ ಪ್ರಜಾಪತೇಃ ।
ದಕ್ಷಸ್ಯ ಕೀರ್ತ್ಯತೇ ಜನ್ಮ ಸೋಮಸ್ಯಾಂಶೇನ ಧೀಮತಃ ॥ ೧೦೬ ॥

ಭೂತಭವ್ಯಭವೇಶತ್ವಂ ಮಹೇಂದ್ರಾಣಾಂ ಚ ಕೀರ್ತ್ಯತೇ ।
ಮನ್ವಾದಿಕಾ ಭವಿಷ್ಯಂತಿ ಆಖ್ಯಾನೈರ್ಬಹುಭಿರ್ವೃತಾಃ ॥ ೧೦೭ ॥

---

೧೦೩. ಉತ್ತಾನಪಾದರಾಯನ ಪುತ್ರನಾದ ಧ್ರುವನ ಪ್ರಜಾಸೃಷ್ಟಿಯ ವರ್ಣನವು.

೧೦೪. ಚಾಕ್ಷುಷನೆಂಬ ಮನುವಿನ ವಂಶಸೃಷ್ಟಿಯು, ಪ್ರಜೆಗಳ ವೀರ್ಯದ ವರ್ಣನೆ. ವೈನ್ಯ ರಾಜನು ಭೂಮಿಯನ್ನು ಹಾಲುಕರೆಯಲು ಪ್ರವರ್ತಿಸಿದುದು.

೧೦೫. ಭೂಮಿಯನ್ನು ಕರೆಯಲು ಉಪಕರಣಗಳಾದ ಪಾತ್ರಗಳು, ಹಾಲು, ಕರುಗಳು ಇವುಗಳಲ್ಲಿದ್ದ ವಿಶೇಷವು. ಮತ್ತು ಈ ಭೂದೇವಿಯು ಬ್ರಹ್ಮಾದಿ ದೇವತೆಗಳಿಂದ ಹಿಂದೆಯೇ ಕರೆಯಲ್ಪಟ್ಟಿರುವುದು.

೧೦೬. ಪ್ರಜಾಪತಿಯಿಂದಲೂ ಹತ್ತುಮಂದಿ ಪ್ರಚೇತಸ್ಸುಗಳಿಂದಲೂ ಮಾರಿಷಾ ಎಂಬವಳಲ್ಲಿ ಸೋಮಾಂಶದಿಂದ ಕೂಡಿ ದಕ್ಷಬ್ರಹ್ಮನ ಉತ್ಪತ್ತಿಯು.

೧೦೭. ಆಯಾಯ ಮಹೇಂದ್ರರು ಭೂತ-ಭಾವಿ-ವರ್ತಮಾನ ವಸ್ತುಗಳ ಈಶ್ವರರಾಗಿ ಆಳುವಿಕೆ, ಬಹುವಾದ ಕಥಾಖ್ಯಾನಗಳಿಂದ ಕೂಡಿ ಕಥಾಪುರುಷರಾಗುವ ಮನ್ವಾದಿಗಳ .

ವೈವಸ್ವತಸ್ಯ ಚ ಮನೋಃ ಕೀರ್ತ್ಯತೇ ಸರ್ಗವಿಸ್ತರಃ।
ಬ್ರಹ್ಮಾದಿಕೋಶ ಉತ್ಪತ್ತಿ ರ್ಭೃಗ್ವಾದೀನಾಂ ಚ ಕೀರ್ತ್ಯತೇ ॥೧೦೮॥

ವಿನಿಷ್ಕೃಷ್ಯ ಪ್ರಜಾಸರ್ಗೇ ಚಾಕ್ಷುಷಸ್ಯ ಮನೋಃ ಶುಭೇ।
ದಕ್ಷಸ್ಯ ಕೀರ್ತ್ಯತೇ ಸರ್ಗೋ ಧ್ಯಾನಾದ್ವೈವಸ್ವತಾಂತರೇ ॥೧೦೯॥

ನಾರದಃ ಕೃತಸಂವಾದೋ ದಕ್ಷ ಪುತ್ರಾನ್ ಮಹಾಬಲಾನ್।
ನಾಶಯಾಮಾಸ ಶಾಪಾಯ ಮಾನಸೋ ಬ್ರಹ್ಮಣಃ ಸುತಃ ॥೧೧೦॥

ತತೋ ದಕ್ಷೋಽಸೃಜತ್ಕನ್ಯಾ ವೈರಿಣಾ ನಾಮ ವಿಶ್ರುತಾಃ।
ಮರುತ್ಪ್ರವಾಹೇ ಮರುತೋದಿತ್ಯಾಂ ದೇವ್ಯಾಂ ಚ ಸಂಭವಃ ॥೧೧೧॥

ಕೀರ್ತ್ಯಂತೇ ಮರುತಾಂ ಚಾತ್ರ ಗಣಾಸ್ತೇ ಸಪ್ತ ಸಪ್ತಕಾಃ।
ದೇವತ್ವಮಿಂದ್ರ ವಾಸೇನ ವಾಯುಸ್ಕಂಧೇಷು ಚಾಶ್ರಮಃ ॥೧೧೨॥

---

೧೦೮. ವೈವಸ್ವತಮನುವಿನ ಸೃಷ್ಟಿವಿಸ್ತಾರವು, ಬ್ರಹ್ಮಾಂಡದಲ್ಲಿ ಭೃಗು ಮುಂತಾದ ಮುನಿಗಳ ಉತ್ಪತ್ತಿಯು.

೧೦೯. ಚಾಕ್ಷುಷ ಮನುವಿನ ಶುಭಕರ ಪ್ರಜಾಸೃಷ್ಟಿಯಲ್ಲಿ ಒಂದಾನೊಂದು ವೈವಸ್ವತ ಮನ್ವಂತರ ಸಮಯದಲ್ಲಿ ಧ್ಯಾನಮಾತ್ರದಿಂದ ದಕ್ಷಪ್ರಜಾಪತಿಯ ಸೃಷ್ಟಿಯು.

೧೧೦. ದಕ್ಷಪುತ್ರರೊಡನೆ ಸಂವಾದ ನಡೆಸಿ ಬ್ರಹ್ಮಮಾನಸಪುತ್ರನಾದ ನಾರದ ಮುನಿಯು ಅವರನ್ನು ಶಾಪದಿಂದ ನಾಶಮಾಡಿದುದು.

೧೧೧. ಅನಂತರ ವೈರಿಣರೆಂದು ಪ್ರಸಿದ್ಧರಾದ ಕನ್ಯೆಯರನ್ನು ದಕ್ಷನು ಸೃಷ್ಟಿ ಮಾಡಿದುದು. ಮತ್ತು ದಿತಿದೇವಿಯಲ್ಲಿ ವಾಯುಗಳ ಸೃಷ್ಟಿಪ್ರವಾಹ ವೇಳೆಯಲ್ಲಿ ವಾಯುಗಳ ಉತ್ಪತ್ತಿಯು.

೧೧೨. ಏಳು ವಾಯುಗಳಿಂದ ಕೂಡಿದ ಸಪ್ತವಾಯುಗಣಗಳು. ಮತ್ತು ಇಂದ್ರನು ಅಲ್ಲಿಯೇ ಇದ್ದು ಅನುಗ್ರಹಿಸಿ ಅವರನ್ನು ವಾಯುಸ್ಕಂಧ ರೂಪದಿಂದ ಇರಿಸಿದುದು.

**ದೈತ್ಯಾನಾಂ ದಾನವಾನಾಂ ಚ ಯಕ್ಷಗಂಧರ್ವ ರಕ್ಷಸಾಮ್ ।**
**ಸರ್ವಭೂತಪಿಶಾಚಾನಾಂ ಯಕ್ಷಾಣಾಂ ಪಕ್ಷಿ ವೀರುಧಾಮ್ ॥ ೧೧೩ ॥**

**ಉತ್ಪತ್ತ್ಯಯಶ್ಚಾಪ್ಸರಸಾಂ ಕೀರ್ತ್ಯಂತೇ ಬಹುವಿಸ್ತರಾತ್ ।**
**ಮಾರ್ತಂಡಮಂಡಲಂ ಕೃತ್ಸ್ನಂ ಜನ್ಮೈರಾವತ ಹಸ್ತಿನಃ ॥ ೧೧೪ ॥**

**ವೈನತೇಯಸಮುತ್ಪತ್ತಿಸ್ತಥಾ ರಾಜ್ಯಾಭಿಷೇಚನಮ್ ।**
**ಭೃಗೂಣಾಂ ವಿಸ್ತರಶ್ಚೋಕ್ತಸ್ತಥಾ ಚಾಂಗಿರಸಾಮಪಿ ॥ ೧೧೫ ॥**

**ಕಶ್ಯಪಸ್ಯ ಪುಲಸ್ತ್ಯಸ್ಯ ತಥೈವಾತ್ರೇರ್ಮಹಾತ್ಮನಃ ।**
**ಪರಾಶರಸ್ಯ ಚ ಮುನೇಃ ಪ್ರಜಾನಾಂ ಯತ್ರ ವಿಸ್ತರಃ ॥ ೧೧೬ ॥**

**ತಿಸ್ರಃ ಕನ್ಯಾಃ ಸುಕೀರ್ತ್ಯಂತೇ ಯಾಸು ಲೋಕಾಃಪ್ರತಿಷ್ಠಿತಾಃ ।**
**ಇಳಾಯಾ ವಿಸ್ತರಶ್ಚೋಕ್ತ ಆದಿತ್ಯಸ್ಯ ತತಃ ಪರಮ್ ॥ ೧೧೭ ॥**

---

೧೧೩. ದೈತ್ಯರು, ದಾನವರು, ಯಕ್ಷರು, ಗಂಧರ್ವರು, ರಾಕ್ಷಸರು, ಸಮಸ್ತ ಭೂತಗಳು, ಪಿಶಾಚಗಳು, ಯಕ್ಷರು, ಪಕ್ಷಿಗಳು, ಮತ್ತು ಲತೆಗಳು ಇವೆಲ್ಲವುಗಳ ಉತ್ಪತ್ತಿಯು.

೧೧೪. ಅಪ್ಸರಃಸ್ತ್ರೀಯರ ಬಹುವಿಸ್ತಾರಗರ್ಭಿತವಾದ ಉತ್ಪತ್ತಿ ಪ್ರಕಾರಗಳು, ಸಂಪೂರ್ಣ ಸೂರ್ಯಮಂಡಲ, ಐರಾವತಗಜದ ಜನ್ಮವು.

೧೧೫. ಗರುಡನ ಉತ್ಪತ್ತಿಯು, ಹಾಗೆ ರಾಜ್ಯಾಭಿಷೇಕವು. ಭೃಗು ಮತ್ತು ಅಂಗಿರೋಮಹರ್ಷಿಗಳ ಸೃಷ್ಟಿ ವಿಸ್ತಾರವು.

೧೧೬. ಮಹಾತ್ಮರಾದ ಕಶ್ಯಪ, ಪುಲಸ್ತ್ಯ, ಅತ್ರಿ, ಪರಾಶರ ಮುನಿಗಳ ಪ್ರಜಾ ಸೃಷ್ಟಿಯ ವಿಸ್ತಾರವು.

೧೧೭. ಲೋಕಗಳನ್ನು ಪ್ರತಿಷ್ಠೆಗೊಳಿಸಿರುವ ಮೂರು ಜನ ಕನ್ಯಕೆಯರ ಕೀರ್ತನವು. ಭೂಮಿ ಮತ್ತು ಆದಿತ್ಯರ ವಿಸ್ತಾರ ಪರಿಮಾಣವು.

**ವಿಕುಕ್ಷಿಚರಿತಂ ಪ್ರೋಕ್ತಂ ಧ್ರುವಸ್ಯೈವ ನಿಬರ್ಹಣಮ್ ।**
**ಬೃಹದ್ಬಲಾನಾಂ ಸಂಕ್ಷೇಪಾ ದಿಕ್ಷ್ವಾಕ್ವಾದ್ಯಾಃ ಪ್ರಕೀರ್ತಿತಾಃ ॥ ೧೧೮ ॥**

**ನಿಮ್ಯಾದೀನಾಂ ಕ್ಷಿತೀಶಾನಾಂ ಪಲಾಂಡುಹರಣಾದಿಭಿಃ ।**
**ಕೀರ್ತ್ಯತೇ ವಿಸ್ತರಾತ್ಸರ್ಗೋ ಯಯಾತೇರಪಿ ಭೂಪತೇಃ ॥ ೧೧೯ ॥**

**ಯದುವಂಶ ಸಮುದ್ದೇಶೋ ಹೈಹಯಸ್ಯ ಚ ವಿಸ್ತರಃ ।**
**ಕ್ರೋಧಾದನಂತರಂ ಚೋಕ್ತಸ್ತಥಾವಂಶಸ್ಯ ವಿಸ್ತರಃ ॥ ೧೨೦ ॥**

**ಜ್ಯಾಮಘಸ್ಯ ಚ ಮಾಹಾತ್ಮ್ಯಂ ಪ್ರಜಾಸರ್ಗಶ್ಚ ಕೀರ್ತ್ಯತೇ ।**
**ದೇವಾವೃಧಸ್ಯಾಂಧಕಸ್ಯ ಧೃಷ್ಟೇಶ್ಚಾಪಿ ಮಹಾತ್ಮನಃ ॥ ೧೨೧ ॥**

**ಅನಿಮಿತ್ರಾನ್ವಯಶ್ಚೈವ ವಿಶೋರ್ಮಿಥ್ಯಾಭಿಶಂಸನಮ್ ।**
**ವಿಶೋಧನುನುಸಂಪ್ರಾಪ್ತಿರ್ಮಣಿರತ್ನಸ್ಯ ಧೀಮತಃ ॥ ೧೨೨ ॥**

**ಸತ್ರಾಜಿತಃ ಪ್ರಜಾಸರ್ಗೇ ರಾಜರ್ಷೇರ್ದೇವಮಿಾಢುಷಃ ।**
**ಶೂರಸ್ಯ ಜನ್ಮ ಚಾಪ್ಯುಕ್ತಂ ಚರಿತಂ ಚ ಮಹಾತ್ಮನಃ ॥ ೧೨೩ ॥**

---

೧೧೮. ವಿಕುಕ್ಷಿಯ ಚರಿತ್ರೆಯು, ಧ್ರುವರಾಜನ ದಿಗ್ವಿಜಯವು. ಬೃಹದ್ಬಲಾ ಎಂಬವಳಲ್ಲಿ ಇಕ್ಷ್ವಾಕು ಮುಂತಾದವರ ಉತ್ಪತ್ತಿಯ ಸಂಕ್ಷೇಪವರ್ಣನವು.

೧೧೯. ನಿಮಿ ಮುಂತಾದ ರಾಜರ ಪಲಾಂಡು ಅಪಹಾರಾದಿ ಕಥೆಗಳಿಂದ ಕೂಡಿದ ಸೃಷ್ಟಿ ವಿಸ್ತಾರವು ಮತ್ತು ಯಯಾತಿರಾಜನ ಉತ್ಪತ್ತಿಯು.

೧೨೦. ಯದುವಂಶದವರ ಆವಳಿಯ ಕಥನವು. ಹೈಹಯರಾಜನ ಪ್ರಜಾ ವಿಸ್ತಾರವು. ಅನಂತರದಲ್ಲಿ ಕ್ರೋಧದಿಂದ ಮತ್ತಷ್ಟು ವಂಶವ ವಿಸ್ತಾರವು.

೧೨೧. ಜ್ಯಾಮಘನೆಂಬವನ ಮಾಹಾತ್ಮ್ಯವು ಮತ್ತು ಪ್ರಜಾಸೃಷ್ಟಿಯು, ಮಹಾತ್ಮರಾದ ದೇವಾವೃಧ-ಅಂಧಕ-ಧೃಷ್ಟಿ ಇವರ ಪ್ರಜಾಸೃಷ್ಟಿಯು.

೧೨೨. ಅನಿಮಿತ್ರನ ವಂಶಾವಳಿಯು. ವಿರು ಎಂಬುವನಿಗೊದಗಿದ ಮಿಥ್ಯಾಪವಾದವು. ಬುದ್ಧಿಶಾಲಿಯಾದ ಮಣಿರತ್ನ ಮೂಲಕವಾಗಿ ಅದರ ಪರಿಹಾರವು.

೧೨೩. ದೇವಮಿಾಢನ ಪ್ರಜಾಸೃಷ್ಟಿಯಲ್ಲಿ ಸತ್ರಾಜಿತನಿಂದ ಮಹಾತ್ಮನಾದ ಶೂರನೆಂಬವನ ಜನ್ಮ ಮತ್ತು ಮಹಾತ್ಮ್ಯವು.

ಕಂಸಸ್ಯ ಚಾಪಿ ದೌರಾತ್ಮ್ಯ ಮೇಕೀವಂಶ್ಯಾತ್ಸಮುದ್ಭವಃ ।
ವಾಸುದೇವಸ್ಯ ದೇವಕ್ಯಾಂ ವಿಷ್ಣೋರಮಿತತೇಜಸಃ ॥ ೧೨೪ ॥

ಅನಂತರಂ ಋಷೇಃ ಸರ್ಗಃ ಪ್ರಜಾಸರ್ಗೋಪವರ್ಣನಮ್ ।
ದೇವಾಸುರೇ ಸಮುತ್ಪನ್ನೇ ವಿಷ್ಣುನಾಸ್ತ್ರೀವಧೇ ಕೃತೇ ॥ ೧೨೫ ॥

ಸಂರಕ್ಷತಾ ಶಕ್ರವಧಂ ಶಾಪಃ ಪ್ರಾಪ್ತಃ ಪುರಾ ಭೃಗೋಃ ।
ಭೃಗುಶ್ಚೋತ್ಥಾಪಯಾಮಾಸ ದಿವ್ಯಾಂ ಶುಕ್ರಸ್ಯ ಮಾತರಮ್ ॥ ೧೨೬ ॥

ದೇವಾನಾಂ ಚ ಋಷೀಣಾಂ ಚ ಸಂಕ್ರಮಾ ದ್ವಾದಶಾಹೃತಾಃ ।
ನಾರಸಿಂಹ ಪ್ರಭೃತಯಃ ಕೀರ್ತ್ಯಂತೇ ಪಾಪನಾಶನಾಃ ॥ ೧೨೭ ॥

ಶುಕ್ರೇಣಾರಾಧನಂ ಸ್ಥಾಣೋಃ ಘೋರೇಣ ತಪಸಾ ತಥಾ ।
ವರಪ್ರದಾನಕೃತ್ತೇನ ಯತ್ರ ಶರ್ವಸ್ತವಃ ಕೃತಃ ॥ ೧೨೮ ॥

ಅನಂತರಂ ಚ ನಿರ್ದಿಷ್ಟಂ ದೇವಾಸುರವಿಚೇಷ್ಟಿತಮ್ ।
ಜಯಂತ್ಯಾ ಸಹ ಶಕ್ರೇಣಯತ್ರ ಶುಕ್ರೋ ಮಹಾತ್ಮನಿ ॥ ೧೨೯ ॥

---

೧೨೪. ಕಂಸಾಸುರನ ದುರಾತ್ಮ ಸ್ವಭಾವವು, ಅವನು ರಾಕ್ಷಸ ವಂಶದಲ್ಲಿ ಹುಟ್ಟಿದುದು, ಅಪರಿಮಿತ ತೇಜಃಪುಂಜರೂಪನಾದ ವಿಷ್ಣುವು ದೇವಕಿಯಲ್ಲಿ ವಸುದೇವನಿಂದ ಹುಟ್ಟಿದುದು.

೧೨೫. ಅನಂತರದಲ್ಲಿ ಋಷಿಯ ಪ್ರಜಾಸೃಷ್ಟಿಯು, ದೇವಾಸುರ ಯುದ್ಧದಲ್ಲಿ ವಿಷ್ಣುವು ಸ್ತ್ರೀವಧದಿಂದ ಇಂದ್ರನನ್ನು ಬದುಕಿಸಲಾಗಿ ವಿಷ್ಣುವಿಗೆ ಭೃಗುಋಷಿಯಿಂದ ಶಾಪಪ್ರಾಪ್ತಿಯು.

೧೨೬. ಭೃಗುವು ಮೃತಳಾದ ಶುಕ್ರನ ಜನನಿಯನ್ನು ಮತ್ತೆ ಬದುಕಿಸಿದುದು.

೧೨೭. ದೇವತೆಗಳು ಮತ್ತು ಋಷಿಗಳ ಹನ್ನೆರಡು ಸಂಕ್ರಮ ಸ್ಥಾನಗಳು, ಪಾಪವನ್ನು ಭಂಜನಮಾಡುವ ನರಸಿಂಹ ಮುಂತಾದವರ ವರ್ಣನೆಯು.

೧೨೮. ಶುಕ್ರನು ಉಗ್ರವಾದ ತಪಸ್ಸಿನಿಂದ ಈಶ್ವರನನ್ನು ಆರಾಧಿಸಿದುದು, ಮತ್ತು ಈಶ್ವರ ಸ್ತೋತ್ರಮಾಡಿದುದು. ಅದರಿಂದ ಪ್ರೀತನಾದ ಶಿವನ ವರದಾನವು

೧೨೯. ಅನಂತರದಲ್ಲಿ ದೇವ-ದಾನವರ ಚೇಷ್ಟಾವಿಶೇಷವು.

ಅಸುರಾನ್ ಮೋಹಯಾಮಾಸ ಶಕ್ರರೂಪೇಣಬುದ್ಧಿಮಾನ್ ।
ಬೃಹಸ್ಪತಿಶ್ಚ ತಂ ಶುಕ್ರಂ ಶಶಾಪ ಸ ಮಹಾದ್ಯುತಿಃ ॥ ೧೩೦ ॥

ಉಕ್ತಂ ಚ ವಿಷ್ಣೋರ್ಮಾಹಾತ್ಮ್ಯಂ ವಿಷ್ಣೋರ್ಜನ್ಮನಿಶಬ್ದ್ಯತೇ ।
ತುರ್ವಸುಶ್ಚಾತ್ರದೌಹಿತ್ರೋ ಯವೀಯಾನ್‌ಯೋ ಯದೋರಭೂತ್ ॥ ೧೩೧ ॥

ಅನುದ್ರುಹ್ಯಾದಯಃ ಸರ್ವೇ ತಥಾತತ್ತ್ವಸಯಾಸ್ನಪಾಃ ।
ಅನುವಂಶ್ಯಾ ಮಹಾತ್ಮಾಸಸ್ತೇಷಾಂ ಪಾರ್ಥಿವಸತ್ತಮಾಃ ॥ ೧೩೨ ॥

ಕೀರ್ತ್ಯಂತೇ ಯತ್ರ ಕಾರ್ತ್ಸ್ನ್ಯೇನ ಭೂರಿದ್ರವಿಣತೇಜಸಃ ।
ಅತಿಥ್ಯಸ್ಯತು ವಿಪ್ರರ್ಷೇಃಸಪ್ತಧಾ ಧರ್ಮಸಂಶ್ರಯಾತ್ ॥ ೧೩೩ ॥

ಬಾರ್ಹಸ್ಪತ್ಯಂ ಸೂರಿಭಿಶ್ಚ ಯತ್ರ ಶಾಪಮುಪಾವೃತಮ್ ।
ಹರವಂಶಯಶಃ ಸ್ಪರ್ಶಃ ಶಂತನೋರ್ವೀರ್ಯಶಬ್ದನಮ್ ॥ ೧೩೪ ॥

ಭವಿಷ್ಯತಾಂ ತಥಾ ರಾಜ್ಞಾಂ ಉಪಸಂಹಾರಶಬ್ದನಮ್ ।
ಅನಾಗತಾನಾಂ ಸಂಘಾನಾಂ ಪ್ರಭೂಣಾಂ ಚೋಪವರ್ಣನಮ್॥೧೩೫॥

---

೧೩೦. ಬುದ್ಧಿಶಾಲಿಯೂ ಮಹಾಕಾಂತಿಯುಕ್ತನೂ ಆದ ಬೃಹಸ್ಪತಿಯು ಇಂದ್ರನ ರೂಪದಿಂದ ಅಸುರರಿಗೆ ಮೋಹವನ್ನುಂಟುಮಾಡಿ ಶುಕ್ರನಿಗೆ ಶಾಪವನ್ನಿತ್ತಿದ್ದು.

೧೩೧. ವಿಷ್ಣುವಿನ ಮಾಹಾತ್ಮ್ಯವು. ವಿಷ್ಣುವಿನ ನಾನಾವಿಧವಾದ ಜನ್ಮ ಮತ್ತು ಯದುವಿನ ಕಿರಿಯ ದೌಹಿತ್ರನಾದ ತುರ್ವಸು ಎಂಬುವನು.

೧೩೨. ಅವನ ಮಕ್ಕಳಾದ ಅನು, ದ್ರುಹ್ಯ ಮುಂತಾದ ಎಲ್ಲ ರಾಜರು, ಅವರ ವಂಶೀಕರಾದ ಮಹಾತ್ಮರೂ ಸಾಧುಗಳೂ ಆದ ಇತರ ರಾಜರು.

೧೩೩. ವಿಶೇಷವಾದ ಧನ ತೇಜಸ್ಸುಗಳಿಂದ ಕೂಡಿದ ಅಂತಹ ಇತರ ರಾಜರ ವಿಷಯದ ಸಂಪೂರ್ಣ ವಿವರಣೆಯು.

೧೩೪. ಅತಿಥ್ಯನೆಂಬ ಬ್ರಹ್ಮರ್ಷಿಗೆ ಸಪ್ತವಿಧರಾದ ಧರ್ಮಾದಿಗಳ ಆಶ್ರಯದಿಂದ ಇರುವ ಪ್ರಯುಕ್ತವಾಗಿ ಬೃಹಸ್ಪತಿಯಿಂದ ಒದಗಿದ ಶಾಪವು.

೧೩೫. ಹರನ ವಂಶದಲ್ಲಿಯು ಯಶಸ್ಸಿನ ಪ್ರಸಾರದ ವರ್ಣನೆ, ಶಂತನುವಿನ ವೀರ್ಯಸ್ತುತಿ, ಭವಿಷ್ಯತ್ ಕಾಲದ ರಾಜರ ಸಮಾಪ್ತಿ ಪರ್ಯಂತ ಸಮಗ್ರವರ್ಣನೆ, ಅನಾಗತ ಸಂಘಗಳು ಮತ್ತು ಅವುಗಳ ಪ್ರಭುಗಳ ವರ್ಣನವು.

ಭೌತ್ಯಸ್ಯಾಂತೇ ಕಲಿಯುಗೇ ಕ್ಷೀಣೇ ಸಂಹಾರವರ್ಣನಮ್ ।
ನೈಮಿತ್ತಿಕಾಃ ಪ್ರಾಕೃತಿಕಾಃ ಯಥೈವಾತ್ಯಂತಿಕಾಃ ಸ್ಮೃತಾಃ ॥ ೧೩೬ ॥

ವಿವಿಧಃ ಸರ್ವಭೂತಾನಾಂ ಕೀರ್ತ್ಯತೇ ಪ್ರತಿಸಂಚರಃ ।
ಅನಾದೃಷ್ಟಿರ್ಭಾಸ್ಕರಸ್ಯ ಘೋರಃ ಸಂವರ್ತಕಾನಲಃ ॥ ೧೩೭ ॥

ಸಾಂಖ್ಯೇ ಲಕ್ಷಣಮುದ್ದಿಷ್ಟಂ ತತೋ ಬ್ರಹ್ಮವಿಶೇಷತಃ ।
ಭುವಾದೀನಾಂ ಚ ಲೋಕಾನಾಂ ಸಪ್ತಾನಾಂ ಚೋಪವರ್ಣ
ನಮ್ ॥ ೧೩೮ ॥

ಅಪರಾರ್ಧಪರೈಶ್ಚೈವ ಲಕ್ಷಣಂ ಪರಿಕೀರ್ತ್ಯತೇ ।
ಬ್ರಹ್ಮಣೋ ಯೋಜನಾಗ್ರೇಣ ಪರಿಮಾಣವಿನಿರ್ಣಯಃ ॥ ೧೩೯ ॥

ಕೀರ್ತ್ಯಂತೇ ಚಾತ್ರ ನಿರಯಾಃ ಪಾಪಾನಾಂ ರೌರವಾದಯಃ ।
ಸರ್ವೇಷಾಂ ಚೈವ ಸತ್ತ್ವಾನಾಂ ಪರಿಣಾಮವಿನಿರ್ಣಯಃ ॥ ೧೪೦ ॥

ಬ್ರಹ್ಮಣಃ ಪ್ರತಿಸಂಸರ್ಗಾತ್ಸರ್ವಸಂಸಾರವರ್ಣನಮ್ ।
ಗತಿರೂರ್ಧ್ವಮಧಶ್ಚೋಕ್ತಾ ಧರ್ಮಾಧರ್ಮಸಮಾಶ್ರಯಾ ॥ ೧೪೧ ॥

---

೧೩೬. ಕಲಿಯುಗವು ಕ್ಷಯಿಸಿಹೋಗಲು ಭೂತವಸ್ತು ಸಂಘಗಳ ಸಂಹಾರವು. ಹಾಗೆ ಸಂಹಾರವಾಗುವ ವಿವಿಧವಾದ ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕವೆಂಬ ಪ್ರಲಯ ವಿಶೇಷಗಳು.

೧೩೭. ಸಮಸ್ತ ಭೂತಗಳಿಗೂ ಒದಗುವ ನಾನಾವಿಧದ ಪ್ರಲಯವು. ಆ ಸಮಯದಲ್ಲಿ ಸೂರ್ಯನ ದರ್ಶನವಿಲ್ಲದಿರುವುದು. ಉಗ್ರವಾದ ಪ್ರಲಯ ಕಾಲಾಗ್ನಿಯು.

೧೩೮. ಪರಮಾತ್ಮ ತತ್ತ್ವಜ್ಞಾಪಕವಾದ ಲಕ್ಷಣವು, ವಿಶೇಷವಾಗಿ ಬ್ರಹ್ಮ ಸ್ವರೂಪವು, ಭುವರಾದಿ ಸಪ್ತಲೋಕಗಳ ವರ್ಣನವು.

೧೩೯. ಉತ್ಪತ್ತಿ ಪ್ರತಿಪಾದಕ ವಚನಗಳ ಮೂಲಕವಾಗಿ ಬ್ರಹ್ಮನ ಲಕ್ಷಣ ವರ್ಣನವು, ಯೋಜನಗಳ ಸಂಖ್ಯಾನುಗುಣವಾಗಿ ಬ್ರಹ್ಮನ ಪರಿಮಾಣವು.

೧೪೦. ಪ್ರಾಣಿಗಳ ಪಾಪ ಫಲಾನುಭವಕ್ಕೆ ಕಲ್ಪಿತವಾದ ರೌರವ ಮುಂತಾದ ನರಕಗಳು, ಸಮಸ್ತ ಪ್ರಾಣಿಗಳ ಆಕೃತಿಗಳ ಪರಿಣಾಮಗಳು.

೧೪೧. ಬ್ರಹ್ಮನಿಗೆ ಉಪಾಧಿ ಸಂಪರ್ಕದಿಂದ ಸಕಲ ಸಂಸಾರ ಪ್ರಾಪ್ತಿಯು, ಧರ್ಮಾನುಷ್ಠಾನದಿಂದ ಲಭಿಸುವ ಊರ್ಧ್ವಗತಿ, ಅಧರ್ಮದಿಂದ ಅಧೋಗತಿಯು.

ಕಲ್ಪೇ ಕಲ್ಪೇ ಚ ಭೂತಾನಾಂ ಮಹತಾಮಪಿ ಸಂಕ್ಷಯಮ್ ।
ನ ಸಂಖ್ಯಯಾ ಚ ದುಃಖಾನಿ ಬ್ರಹ್ಮಣಶ್ಚಾಪ್ಯನಿತ್ಯತಾ ॥ ೧೪೨ ॥

ದೌರಾತ್ಮ್ಯಂ ಚೈವ ಭೋಗಾನಾಂ ಸಂಹಾರಸ್ಯ ಚ ಕಷ್ಟತಾ ।
ದುರ್ಲಭತ್ವಂ ಚ ಮೋಕ್ಷಸ್ಯ ವೈರಾಗ್ಯಾದ್ದೋಷದರ್ಶನಮ್ ॥ ೧೪೩ ॥

ವ್ಯಕ್ತಾವ್ಯಕ್ತಂ ಪರಿತ್ಯಜ್ಯಸತ್ತ್ವಂ ಬ್ರಹ್ಮಣಿ ಸಂಸ್ಥಿತಮ್ ।
ನಾನಾತ್ವದರ್ಶನಾಚ್ಛುದ್ಧಸ್ತವ ಸ್ತದಾನಿವರ್ತತೇ ॥ ೧೪೪ ॥

ತತಸ್ತಾಪತ್ರಯಾದ್ಭೀತೋರೂಪಾರ್ಥೋಹಿ ನಿರಂಜನಃ ।
ಆನಂದಂ ಬ್ರಹ್ಮಣಃ ಪ್ರಾಪ್ಯ ನಬಿಭೇತಿ ಕುತಶ್ಚನ ॥ ೧೪೫ ॥

ಕೀರ್ತ್ಯತೇ ಚ ಪುನಃ ಸರ್ಗೋ ಬ್ರಹ್ಮಣೋನ್ಯಸ್ಯ ಪೂರ್ವವತ್ ।
ಕೀರ್ತ್ಯಂತೇ ಜಗತಶ್ಚಾತ್ರ ಸರ್ಗಪ್ರಲಯವಿಕ್ರಿಯಾಃ ॥ ೧೪೬ ॥

---

೧೪೨. ಪ್ರತಿಯೊಂದು ಕಲ್ಪದಲ್ಲಿಯೂ ಮಹಾಭೂತಗಳಿಗೆ ಕೂಡ ಸಂಭವಿಸುವ ನಾಶವು, ಅಸಂಖ್ಯಾತವಾದ ದುಃಖವು, ಔಪಾಧಿಕವಾಗಿ ಬ್ರಹ್ಮನ ಅನಿತ್ಯತೆ.

೧೪೩. ಭೋಗಗಳಿಂದ ಆಗುವ ದುಷ್ಪರಿಣಾಮವು. ನಾಶಸಮಯದ ಅತಿಕಷ್ಟಗಳು. ಮೋಕ್ಷದ ದುರ್ಲಭತೆ ವೈರಾಗ್ಯದಿಂದ ಭೋಗ್ಯವಸ್ತುಗಳಲ್ಲಿ ದೋಷಾನುಭವವು.

೧೪೪. ಮುಮುಕ್ಷುವಿನ ಚಿತ್ತವು ವ್ಯಕ್ತ-ಅವ್ಯಕ್ತ ರೂಪಗಳನ್ನು ಪರಿತ್ಯಾಗ ಮಾಡಿ ಬ್ರಹ್ಮನಲ್ಲಿ ಲೀನವಾಗುವಿಕೆ, ಅದರಿಂದ ಚಿತ್ತವು ಶುದ್ಧವಾಗಿ ನಾನಾತ್ವ (ಭೇದ) ದರ್ಶನವನ್ನು ದೂರಮಾಡುವಿಕೆಯು.

೧೪೫. ಅನಂತರದಲ್ಲಿ ಆಧ್ಯಾತ್ಮಿಕ ಮುಂತಾದ ತಾಪತ್ರಯಗಳಿಂದ ಭೀತನಾಗಿ ನೀರೂಪವಾದ ಬ್ರಹ್ಮವಸ್ತು ಸಾಕ್ಷಾತ್ಕಾರಾರ್ಥಿಯಾಗಿ ಅವಿದ್ಯಾದಿ ದೋಷನಿರ್ಮುಕ್ತನಾಗಿ ಬ್ರಹ್ಮಾನಂದವನ್ನು ಅನುಭವಿಸಿ ನಿರ್ಭಯನಾಗಿರುವಿಕೆಯು.

೧೪೬. ಮತ್ತೆ ಹಿಂದಿನಂತೆ ಮತ್ತೊಬ್ಬ ಬ್ರಹ್ಮನ ಸೃಷ್ಟಿಯು, ಜಗತ್ತಿನ ಸೃಷ್ಟಿ ಪ್ರಲಯ ವಿಕಾರಗಳು.

**ಪ್ರವೃತ್ತಯಶ್ಚ ಭೂತಾನಾಂ ಪ್ರಸೂತಾನಾಂ ಫಲಾನಿ ಚ ।**
**ಕೀರ್ತ್ಯತೇ ಋಷಿವರ್ಗಸ್ಯ ಸರ್ಗಃ ಪಾಪಪ್ರಣಾಶನಃ ॥ ೧೪೭ ॥**

**ಪ್ರಾದುರ್ಭಾವೋ ವಸಿಷ್ಠಸ್ಯ ಶಕ್ತೇರ್ಜನ್ಮ ತಥೈವ ಚ ।**
**ಸೌದಾಸಾಸ್ಥಿಗ್ರಹಶ್ಚಾಸ್ಯ ವಿಶ್ವಾಮಿತ್ರಕೃತೇನ ತು ॥ ೧೪೮ ॥**

**ಪರಾಶರಸ್ಯಚೋತ್ಪತ್ತಿ ರದೃಶ್ಯಂತ್ಯಾಂತಥಾವಿಭೋಃ ।**
**ಸಂಜಜ್ಞೇ ಪಿತೃಕನ್ಯಾಯಾಂ ವ್ಯಾಸಶ್ಚಾಪಿ ಮಹಾಮುನಿಃ ॥ ೧೪೯ ॥**

**ಶುಕಸ್ಯ ಚ ತಥಾಜನ್ಮ ಸಹಪುತ್ರಸ್ಯಧೀಮತಃ ।**
**ಪರಾಶರಸ್ಯಪ್ರದ್ವೇಷೋ ವಿಶ್ವಾಮಿತ್ರ ಋಷಿಂಪ್ರತಿ ॥ ೧೫೦ ॥**

**ವಸಿಷ್ಠಸಂಭೃತಿಶ್ಚಾಗ್ನೇರ್ವಿಶ್ವಾಮಿತ್ರಜಿಘಾಂಸಯಾ ।**
**ದೈವೇನ ವಿಧಿನಾ ವಿಪ್ರ ವಿಶ್ವಾಮಿತ್ರಹಿತೈಷಿಣಾ ॥ ೧೫೧ ॥**

**ಸಂತಾನಹೇತೋರ್ವಿಭುನಾಗೀರ್ಣಸ್ಕಂಧೇನ ಧೀಮತಾ ।**
**ಏಕಂ ವೇದಂ ಚತುಷ್ಪಾದಂ ಚತುರ್ಧಾಪುನರೀಶ್ವರಃ ॥ ೧೫೨ ॥**

---

೧೪೭. ಹುಟ್ಟಿದ ಪ್ರಾಣಿಗಳ ವಿವಿಧವಾದ ಪ್ರವೃತ್ತಿಗಳು, ಅದರಿಂದ ಲಭಿಸುವ ಫಲಗಳು, ಶ್ರವಣದಿಂದ ಪಾಪಗಳನ್ನು ನಾಶಮಾಡುವ ಋಷಿವರ್ಗದ ಸೃಷ್ಟಿಯು.

೧೪೮. ವಸಿಷ್ಠಮುನಿಯ ಉತ್ಪತ್ತಿಯು, ಶಕ್ತಿಮುನಿಯ ಜನ್ಮ, ವಿಶ್ವಾಮಿತ್ರ ಮುನಿಯು ಮಾಡಿದ ಸೌದಾಸ ಋಷಿಯ ಅಸ್ಥಿಯ ಗ್ರಹಣವು.

೧೪೯. ಅದೃಶ್ಯಳಾದ ಸತಿಯಲ್ಲಿ ಸಮರ್ಥರಾದ ಪರಾಶರ ಮುನಿಯ ಉತ್ಪತ್ತಿ, ಪಿತೃದೇವತೆಗಳ ಕನ್ಯೆಯಲ್ಲಿ ಮಹಾಮುನಿಯಾದ ವ್ಯಾಸರ ಜನ್ಮವು.

೧೫೦. ಸಪುತ್ರನಾದ ಮತ್ತು ವಿದ್ವಾಂಸನಾದ ಶುಕಮುನಿಯ ಉತ್ಪತ್ತಿ, ವಿಶ್ವಾಮಿತ್ರ ಋಷಿಯ ಮೇಲೆ ಪರಾಶರಮುನಿಯ ದ್ವೇಷಭಾವ.

೧೫೧. ವಿಶ್ವಾಮಿತ್ರನನ್ನು ಸಂಹರಿಸಬೇಕೆಂಬ ಉದ್ದೇಶದಿಂದ ವಶಿಷ್ಠಮುನಿಯು ಮಾಡಿರುವ ಅಗ್ನಿ ಸಂಭಾರವು. ವಿಶ್ವಾಮಿತ್ರನ ಹಿತವನ್ನು ಕೋರುವ ದೈವಾನುಕೂಲತೆಯಿಂದ ಬುದ್ಧಿಶಾಲಿಯಾದ ಸ್ಕಂಧನು ಸಂತಾನವಾಗಬೇಕೆಂದು ಅದನ್ನು ನುಂಗಿದುದು.

೧೫೨. ಒಂದೇ ಆಗಿದ್ದ ವೇದವನ್ನು ಈಶ್ವರಾನುಗ್ರಹ ಬಲದಿಂದ ಸಮರ್ಥರಾದ ವೇದವ್ಯಾಸರು ನಾಲ್ಕು ಅಂಶಗಳು ಕಾಣುವಂತೆ ನಾಲ್ಕಾಗಿ ವಿಂಗಡಿಸಿದುದು.

**ತಥಾ ಬಿಭೇದಭಗವಾನ್ ವ್ಯಾಸಃ ಶಾರ್ವಾದನುಗ್ರಹಾತ್ ।**
**ತಸ್ಯ ಶಿಷ್ಯಪ್ರಶಿಷ್ಯೈಶ್ಚ ಶಾಖಾ ವೇದಾಯುತಾಃ ಕೃತಾಃ ॥ ೧೫೩ ॥**

**ಪ್ರಯೋಗೇ ಪ್ರಷ್ಟಲಾ ನ್ಯೈವ ಯಥಾ ದೃಷ್ಟಃ ಸ್ವಯಂಭುವಾ ।**
**ಪೃಷ್ಟವಂತೋ ವಿಶಿಷ್ಟಾಸ್ತೇ ಮುನಯೋ ಧರ್ಮಕಾಂಕ್ಷಿಣಃ ॥ ೧೫೪ ॥**

**ದೇಶಂ ಪುಣ್ಯಮಭೀಪ್ಸಂತೋ ವಿಭುನಾ ತದ್ಧಿತೈಷಿಣಾ ।**
**ಸುನಾಭಂ ದಿವ್ಯರೂಪಾಭಂ ಸಪ್ತಾಂಗಂ ಶುಭಶಂಸನಮ್ ॥ ೧೫೫ ॥**

**ಅನೌಪಮ್ಯಮಿದಂ ಚಕ್ರಂ ವರ್ತಮಾನ ಮತಂದ್ರಿತಾಃ ।**
**ಪೃಷ್ಠತೋ ಯಾತ ನಿಯತಾಃ ತತಃಪ್ರಾಪ್ಸ್ಯಥ ಪಾಟಿತಮ್ ॥ ೧೫೬ ॥**

**ಗಚ್ಛತಸ್ತಸ್ಯಚಕ್ರಸ್ಯ ಯತ್ರನೇಮಿರ್ವಿಶೀರ್ಯತೇ ।**
**ಪುಣ್ಯಃ ಸ ದೇಶೋ ಮಂತವ್ಯಃ ಪ್ರತ್ಯುವಾಚ ತದಾ ಪ್ರಭುಃ ॥ ೧೫೭ ॥**

**ಉಕ್ತ್ವಾಚೈವಮೃಷೀನ್ ಸರ್ವಾನ್ ಅದೃಶ್ಯತ್ವಮುಪಾಗಮತ್ ।**
**ಗಂಗಾಗರ್ಭಂಯವಾಹಾರಾ ನೈಮಿಷೀಯಾಸ್ತಥೈವ ಚ ॥ ೧೫೮ ॥**

---

೧೫೩. ಆ ವ್ಯಾಸರ ಶಿಷ್ಯ ಪ್ರಶಿಷ್ಯರಿಂದ ವೇದದ ನಾನಾಶಾಖೆಗಳ ವಿಭಜನೆಗಳು.

೧೫೪. ಧರ್ಮಪ್ರಯೋಗದಲ್ಲಿ ಆಸಕ್ತರಾದ ವಿಶಿಷ್ಟ ಶಿಷ್ಯರಾದ ಮುನಿಗಳು ಧರ್ಮಾಚರಣಾರ್ಥವಾಗಿ ಪವಿತ್ರ ಸ್ಥಳವನ್ನು ನಿರ್ದೇಶಮಾಡಬೇಕೆಂದು ಹಿತೈಷಿಯಾದ ಸ್ವಯಂಭುವನ್ನು ಪ್ರಶ್ನಮಾಡಿದುದು.

೧೫೫–೧೫೬. ಸುಂದರವಾದ ನಾಭಿಯೂ, ದಿವ್ಯವಾದ ಸ್ವರೂಪ ಕಾಂತಿಗಳೂ, ಏಳು ಅಂಗಗಳೂ ಉಳ್ಳ ಈ ಶುಭಸೂಚಕವಾದ ನಿರುಪಮ ಧರ್ಮಚಕ್ರವನ್ನು ಹಿಂಬಾಲಿಸಿ ಆಲಸ್ಯವಿಲ್ಲದೆ ಜಿತೇಂದ್ರಿಯರಾಗಿ ನಡೆಯಿರಿ. ಕೆಲವು ದೂರದ ಮೇಲೆ ಇದು ಸೀಳಿದುದಾಗಿ ನಿಮಗೆ ಗೋಚರವಾಗುವುದು.

೧೫೭. ನಡೆಯುತ್ತಿದ್ದ ಈ ಚಕ್ರದಪಟ್ಟಿಯು ಜಾರಿಬಿದ್ದಿರುವ ಸ್ಥಳವು ಪವಿತ್ರವೆಂದು ಅರಿಯಬೇಕೆಂದು ಹೇಳಿದ ಉತ್ತರವು. ಸ್ವಯಂಭುವು ಈ ರೀತಿಯಾಗಿ ಉತ್ತರವನ್ನು ಹೇಳಿ ಅಂತರ್ಧಾನ ಹೊಂದಿದುದು.

೧೫೮. ಯವಧಾನ್ಯವನ್ನು ಭುಂಜಿಸುತ್ತಾ ಇದ್ದ ನೈಮಿಷಾರಣ್ಯವಾಸಿಗಳಾದ

**ಈಶಿರೇ ಚೈವಸತ್ರೇಣ ಮುನಯೋ ನೈಮಿಷೇ ತದಾ ।**
**ಮೃತೇ ಶರದ್ವತಿ ತಥಾ ತಸ್ಯ ಚೋತ್ಥಾಪನಂಕೃತಮ್ ॥ ೧೫೯ ॥**

**ಋಷಯೋ ನೈಮಿಷೆಯಾಶ್ಚ ದಯಯಾ ಪರಯಾ ಯುತಾಃ ।**
**ನಿಸ್ಸೀಮಾಂಗಾಮಿಮಾಂ ಕೃತ್ವಾ ಕೃಷ್ಣಂರಾಜಾನಮಾಹರತ್ ॥ ೧೬೦ ॥**

**ಪ್ರೀತಿಂ ಚೈವ ಕೃತಾತಿಥ್ಯಂ ರಾಜಾನಂ ವಿಧಿವತ್ತದಾ ।**
**ಅಂತಃ ಸರ್ಗಗತಃ ಕ್ರೂರಃ ಸ್ವರ್ಭಾನುರಸುರೋಽಹರನ್ ॥ ೧೬೧ ॥**

**ದ್ರುತೇ ರಾಜನಿ ರಾಜಾನುಮದ್ರುತೇ ಮುನಯಸ್ತತಃ ।**
**ಗಂಧರ್ವರಕ್ಷಿತಂ ದೃಷ್ಟ್ವಾ ಕಲಾಪಗ್ರಾಮಕೇತನಮ್ ॥ ೧೬೨ ॥**

**ಸನ್ನಿಪಾತಃ ಪುನಸ್ತಸ್ಯ ತಥಾಯಜ್ಞೇ ಮಹರ್ಷಿಭಿಃ ।**
**ದೃಷ್ಟ್ವಾಹಿರಣ್ಮಯಂ ಸರ್ವಂ ವಿವಾದಸ್ತಸ್ಯ ತೈರಭೂತ್ ॥ ೧೬೩ ॥**

---

ಮುನಿಗಳು ನೈಮಿಷಾರಣ್ಯದಲ್ಲಿ ಗಂಗಾದೇವಿಯು ಬಿಟ್ಟ ಗರ್ಭದ ವೀರ್ಯಜ್ವಾಲೆಯನ್ನು ತಾವು ನಡೆಸುತ್ತಿದ್ದ ಸತ್ರಯಾಗದ ಮಹಿಮೆಯಿಂದ ಸಹಿಸಿದುದು.

೧೫೯. ಶರದ್ವಾರ್ ಎಂಬ ದೊರೆಯು ಮೃತನಾಗಲು ನೈಮಿಷಾರಣ್ಯದಮುನಿಗಳೆಲ್ಲರೂ ದಯಾಮಯರಾಗಿ ಪುನಃ ಅವನನ್ನು ಬದುಕಿಸಿದುದು.

೧೬೦. ಈ ಭೂಮಿಯನ್ನು ಎಲ್ಲೆಯಿಲ್ಲದಂತೆ ಮಾಡಿ ಕೃಷ್ಣನನ್ನು ರಾಜನನ್ನಾಗಿ ಯಜ್ಞಾಂಗಣದಲ್ಲಿ ಮಾಡಿದುದು.

೧೬೧. ವಿಧಿವತ್ತಾಗಿ ಆತಿಥ್ಯವಾದ ಮೇಲೆ ಪ್ರೀತನಾದ ರಾಜನನ್ನು ಅಲ್ಲೇ ಒಳಗೆ ಸೇರಿದ್ದ ಸ್ವರ್ಭಾನುವೆಂಬ ಅಸುರನು ಅಪಹರಿಸಿದುದು.

೧೬೨. ರಾಜನು ಅಪಹರಿಸಲ್ಪಟ್ಟಮೇಲೆ ಮುನಿಗಳೆಲ್ಲರೂ ಹುಡುಕಿದಾಗ ಗಂಧರ್ವ ರಕ್ಷಿತನಾಗಿರುವುದು.

೧೬೩. ಹನ್ನೆರಡು ವರ್ಷಗಳ ಕಾಲ ನೇಮಿಷೇಯ ಮುನಿಗಳಿಂದ ನಡೆದ ಆ ಯಜ್ಞದಲ್ಲಿ ಸಕಲ ವಸ್ತುಗಳೂ ಹಿರಣ್ಯಮಯವಾದುದನ್ನು ಕಂಡು ಯಾದುವು ಅದಕ್ಕಾಗಿ ವಿವಾದಮಾಡಿದುದು.

ತದಾ ವೈ ನೈಮಿಷೇಯಾಣಾಂ ಸತ್ರೇ ದ್ವಾದಶವಾರ್ಷಿಕೇ ।
ತಥಾ ವಿವದಮಾನೈಶ್ಚ ಯದುಃ ಸಂಸ್ಥಾಪಿತಶ್ಚ ತೈಃ || ೧೬೪ ||

ಜನಯಿತ್ವಾತ್ವರಣ್ಯಂ ವೈ ಯದುಪುತ್ರಮಥಾಯುತಮ್ ।
ಸಮಾಪಯಿತ್ವಾ ತತ್ಸತ್ರಂ ವಾಯುಂ ತೇ ಪರ್ಯುಪಾಸತ || ೧೬೫ ||

ಇತಿ ಕೃತ್ಯಸಮುದ್ದೇಶಃ ಪುರಾಣಾಂಶೋಽಪವರ್ಣಿತಃ ।
ಅನೇನಾನುಕ್ರಮೇಣೈವ ಪುರಾಣಂ ಸಂಪ್ರಕಾಶತೇ || ೧೬೬ ||

ಸುಖಮರ್ಥಃ ಸಮಾಸೇನ ಮಹಾನಪ್ಯುಪಲಕ್ಷ್ಯತೇ ।
ತಸ್ಮಾತ್ಸಮಾಸಮುದ್ದಿಶ್ಯ ವಕ್ಷ್ಯಾಮಿ ತವ ವಿಸ್ತರಮ್ || ೧೬೭ ||

ಪಾದಮಾದ್ಯಮಿದಂ ಸಮ್ಯಕ್ ಯೋಽಧೀತೇ ವಿಜಿತೇಂದ್ರಿಯಃ ।
ತೇನಾಧೀತಂ ಪುರಾಣಂ ಸ್ಯಾತ್ಸರ್ವಂ ನಾಸ್ತ್ಯತ್ರ ಸಂಶಯಃ || ೧೬೮ ||

---

೧೬೪. ಆ ವಿವಾದ ಮಾಡಿದುದರ ಪರಿಣಾಮವಾಗಿ ಋಷಿಗಳಿಂದ ಯದುರಾಜನ ಸಂಹಾರವು, ಮತ್ತೆ ಯದುಪುತ್ರನಾದ ಅರಣ್ಯನೆಂಬುವನ ರಾಜತ್ವದಲ್ಲಿ ಆ ಮುನಿಗಳು ಸತ್ರವನ್ನು ಕೊನೆಗಾಣಿಸಿ ವಾಯುದೇವನನ್ನು ಸುತ್ತುವರಿದು ನಿಂತು ಸೇವಿಸಿದುದು.

೧೬೫. ಈ ಪುರಾಣದಲ್ಲಿ ಪ್ರತಿಪಾದಿಸುವ ವಿಷಯಗಳ ಸಂಕ್ಷೇಪೋದ್ದೇಶವು ಈ ರೀತಿಯಾಗಿದೆ.

೧೬೬. ಹಿಂದೆ ಹೇಳಿರುವ ವಿಷಯ ಪ್ರತಿಪಾದನ ಕ್ರಮದಿಂದ ಈ ಪುರಾಣವು ಪ್ರಕಾಶಿಸುತ್ತಿದೆ. ಹೆಚ್ಚು ದೊಡ್ಡ ವಿಷಯವಾದರೂ ಸಂಗ್ರಹವಾಗಿ ಹೇಳಿದ್ದರಿಂದ ಸುಖವಾಗಿ ತಿಳಿಯಲು ಸಾಧ್ಯವು.

೧೬೭. ಆದುದರಿಂದ ಮೊದಲು ಸಂಗ್ರಹವಾಗಿ ಪ್ರತಿಯೊಂದು ವಿಷಯಗಳನ್ನು ಉದ್ದೇಶ ಮಾಡಿ ಕ್ರಮವಾಗಿ ಅವುಗಳನ್ನು ವಿಸ್ತರಿಸಿ ಹೇಳುತ್ತೇನೆ. ಈ ಮೊದಲನೆಯ ಪಾದವನ್ನು ಮಾತ್ರವಾದರೂ ಯಾರು ಜಿತೇಂದ್ರಿಯನಾಗಿ ಪಾರಾಯಣ ಮಾಡುವನೋ ಅವನು ಸಮಗ್ರ ಪುರಾಣವನ್ನು ಅಧ್ಯಯನ ಮಾಡಿದವನಂತಾಗುವನು. ಇದರಲ್ಲಿ ಸಂಶಯವಿಲ್ಲ.

೧೬೮. ವೇದಾಂಗ-ಉಪನಿಷತ್ತುಗಳಿಂದ ಸಹಿತವಾಗಿ ನಾಲ್ಕು ವೇದಗಳನ್ನು

**ಯೋವಿದ್ಯಾಚ್ಚತುರೋ ವೇದಾನ್ ಸಾಂಗೋಪನಿಷದಾನ್ ದ್ವಿಜಾಃ**
**ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ॥ ೧೬೯ ॥**

**ಬಿಭೇತ್ಯಲ್ಪಶ್ರುತಾದ್ವೇದಃ ಮಾಮಯಂ ಪ್ರಹರಿಷ್ಯತಿ ।**
**ಅಭ್ಯಸನ್ನಿಮಮಧ್ಯಾಯಂ ಸಾಕ್ಷಾತ್ಪ್ರೋಕ್ತಂ ಸ್ವಯಂಭುವಾ ॥ ೧೭೦ ॥**

**ನಾಪದಂ ಪ್ರಾಪ್ಯ ಮುಹ್ಯೇತ ಯಥೇಷ್ಟಾಂ ಪ್ರಾಪ್ನುಯಾದ್ಗತಿಮ್ ।**
**ಯಸ್ಮಾತ್ಪುರಾಹ್ಯಭೂಚ್ಚೈತತ್ಪುರಾಣಂ ತೇನ ತತ್ ಸ್ಮೃತಮ್ ॥ ೧೭೧ ॥**

**ನಿರುಕ್ತಮಸ್ಯಯೋ ವೇದ ಸರ್ವಪಾಪೈಃ ಪ್ರಮುಚ್ಯತೇ ।**
**ಅತಶ್ಚ ಸಂಕ್ಷೇಪಮಿಮಂ ಶೃಣುಧ್ವಂ ನಾರಾಯಣಃ ಸರ್ವಮಿದಂ ಪುರಾಣಮ್ ।**
**ಸ ಸರ್ಗಕಾಲೇ ಚ ಕರೋತಿ ಸರ್ಗಂ ಸಂಹಾರಕಾಲೇ ಚ ತದತ್ತಿ ಭೂಯಃ ॥ ೧೭೨ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಪ್ರಥಮೋಽಧ್ಯಾಯಃ ॥**

---

ಅಧ್ಯಯನ ಮಾಡಿದ ದ್ವಿಜನು ಇತಿಹಾಸ ಪುರಾಣಗಳಲ್ಲಿರುವ ವಿಷಯ ಯೋಜನ ಸಂಸ್ಕಾರದಿಂದ ವೇದಾರ್ಥವನ್ನು ಚೆನ್ನಾಗಿ ಅರಿಯಬೇಕು. ಅಲ್ಪ ಮಾತ್ರ ಶಾಸ್ತ್ರವ್ಯುತ್ಪತ್ತಿಯುಳ್ಳವನು ವೈದಿಕ ವಿಷಯ ವಿಮರ್ಶಕ್ಕೆ ಹೊರಟರೆ ತನ್ನನ್ನು ಪ್ರಹರಿಸಲು ಹೊರಟಂತೆ ಭಾವಿಸಿ ಅವನಿಗೆ ವೇದವು ಭಯಪಡುತ್ತದೆ.

೧೬೯. ಸ್ವಯಂಭುವಿನಿಂದ ಸಾಕ್ಷಾತ್ತಾಗಿ ಉಪದಿಷ್ಟವಾದ ಈ ಅಧ್ಯಾಯವನ್ನು ಅಭ್ಯಾಸಮಾಡಿದವನು ವ್ಯಸನಗಳಿಗೆ ಭಾಗಿಯಾಗಿ ಮೋಹವಶನಾಗುವುದಿಲ್ಲ. ಮತ್ತು ಇಷ್ಟಾನುಸಾರವಾದ ಸದ್ಗತಿಯನ್ನು ಹೊಂದುವನು.

೧೭೦. ಈ ಗ್ರಂಥವು ಅನಾದಿ ಪೂರ್ವಕಾಲದಿಂದಲೂ ಇರುವುದರಿಂದ ಅನ್ವರ್ಥವಾದ ಪುರಾಣವೆಂಬ ಸಂಜ್ಞೆಯಿಂದ ಕರೆಯಲ್ಪಟ್ಟಿರುವುದು. ಈ ಪುರಾಣ ಶಬ್ದದ ನಿರ್ವಚನವನ್ನು ತಿಳಿದವನು ಸಕಲ ಪಾಪಗಳಿಂದ ನಿರ್ಮುಕ್ತನಾಗುವನು.

೧೭೧-೧೭೨. ಆದ್ದರಿಂದ ಈ ಪುರಾಣದ ಸಾರಾಂಶವನ್ನು ಸಂಕ್ಷೇಪೋಕ್ತಿಯಿಂದ ಕೇಳಿರಿ. ಈ ಸಮಗ್ರಪುರಾಣ ಪ್ರತಿಪಾದ್ಯವಾದ ಮುಖ್ಯ ವಿಷಯವೆಲ್ಲ ನಾರಾಯಣನು. ಅವನು ಸೃಷ್ಟಿಕಾಲದಲ್ಲಿ ಸರ್ವವನ್ನೂ ಸೃಷ್ಟಿಸಿ ಪ್ರಲಯಕಾಲದಲ್ಲಿ ಅದನ್ನು ಗ್ರಾಸ ಮಾಡುತ್ತಾನೆ.

ಬ್ರಹ್ಮಾಂಡ ಪುರಾಣದಲ್ಲಿ ಪ್ರಥಮಾಧ್ಯಾಯವು ಸಮಾಪ್ತವು.

# ದ್ವಿತೀಯೋಽಧ್ಯಾಯಃ

ಪ್ರತ್ಯವೋಚನ್ ಪುನಃ ಸೂತ ಮೃಷಯಸ್ತೇ ತಪೋಧನಾಃ ।
ಕುತ್ರ ಸತ್ರಂ ಸಮಭವತ್ತೇಷಾಮದ್ಭುತಕರ್ಮಣಾಮ್ ॥ ೧ ॥

ಕಿಯಂತಂ ಚೈವ ತತ್ಕಾಲಂ ಕಥಂ ಚ ಸಮವರ್ತತ ।
ಆಚಚಕ್ಷೇ ಪುರಾಣಂ ಚ ಕಥಂ ತತ್ ಸಪ್ರಭಂಜನಃ ॥ ೨ ॥

ಆಚಕ್ಷ್ವ ವಿಸ್ತರೇಣೈವ ಪರಂ ಕೌತೂಹಲಂ ಹಿ ನಃ ।
ಇತಿ ಸಂಚೋದಿತಃ ಸೂತಃ ಪ್ರತ್ಯುವಾಚ ಶುಭಂ ವಚಃ ॥ ೩ ॥

ಶೃಣುಧ್ವಂ ಯತ್ರ ತೇ ಧೀರಾ ಮೇನಿರೇ ಸತ್ರಮುತ್ತಮಮ್ ।
ಯಾವಂತಂ ಚಾಭವತ್ಕಾಲಂ ಯಥಾ ಚ ಸಮವರ್ತತ ॥ ೪ ॥

ಸಿಸೃಕ್ಷಮಾಣೋ ವಿಶ್ವಂ ಹಿ ಯಜತೇ ವಿಶ್ವಸೃಟ್ ಪುರಾ ।
ಸತ್ರಂ ಹಿ ತೇಽತಿಪುಣ್ಯಂ ಚ ಸಹಸ್ರಪರಿವತ್ಸರಾನ್ ॥ ೫ ॥

---

೧. ಆ ತಪಸ್ವಿಗಳಾದ ಮಹರ್ಷಿಗಳು ಸೂತಮುನಿಯನ್ನು ಕುರಿತು "ಆಶ್ಚರ್ಯ ಕರವಾದ ಚರಿತವುಳ್ಳ ಆ ಮುನಿಗಳು ಮಾಡಿದ ಸತ್ರವು ಯಾವ ಸ್ಥಳದಲ್ಲಿ ನಡೆಯಿತು ?" ಎಂದು ಮತ್ತೆ ಪ್ರಶ್ನವಾಕ್ಯವನ್ನು ಆಡಿದರು.

೧-೨. ಮತ್ತು ಆ ಸತ್ರವು ಎಷ್ಟು ಕಾಲದವರೆಗೆ ನಡೆಯಿತು ? ವಾಯು ದೇವನು ಆ ಪುರಾಣವನ್ನು ಹೇಗೆ ಹೇಳಿದನು ?

೩. ಈ ಸಕಲ ವಿಷಯಗಳನ್ನೂ ವಿಸ್ತಾರವಾಗಿ ಹೇಳು. ನಮ್ಮೆಲ್ಲರಿಗೆ ಕೇಳಬೇಕೆಂಬ ಕುತೂಹಲವು ತುಂಬಿರುವುದು. ಎಂದು ಪ್ರಶ್ನಿಸಲ್ಪಟ್ಟ ಸೂತಮುನಿಯು ಮಂಗಲ ಕರವಾದ ಮಾತುಗಳನ್ನು ಪ್ರತ್ಯುತ್ತರವಿತ್ತನು.

೪. ವಿದ್ವಾಂಸರಾದ ಮುನಿಗಳೆ ! ಆ ಉತ್ತಮವಾದ ಸತ್ರವು ಯಾವ ಸ್ಥಳದಲ್ಲಿ ಎಷ್ಟು ಕಾಲದವರೆಗೆ ಯಾವ ವಿಜೃಂಭಣೆಯಿಂದ ನಡೆಯಿತೆಂಬುದನ್ನು ಕೇಳಿರಿ.

೫. ವಿಶ್ವವನ್ನು ಸೃಜಿಸುವ ಪ್ರಜಾಪತಿಯು ಪೂರ್ವದಲ್ಲಿ ಸೃಷ್ಟಿಮಾಡುವ ಇಚ್ಛೆ

**ತಪೋ ಗೃಹಪತಿರ್ಯತ್ರ ಬ್ರಹ್ಮಾ ಚೈವಾಭವತ್ ಸ್ವಯಮ್ ।**
**ಇಡಾಯಾ ಯತ್ರ ಪತ್ನೀತ್ವಂ ಶಾಮಿತ್ರಂ ಯತ್ರ ಬುದ್ಧಿಮಾನ್ ॥ ೬ ॥**

**ಮೃತ್ಯುಶ್ಚಕ್ರೇ ಮಹಾತೇಜಾಸ್ತಸ್ಮಿನ್ ಸತ್ರೇ ಮಹಾತ್ಮನಾಮ್ ।**
**ವಿಬುಧಾಶ್ಚೋಷಿರೇ ತತ್ರ ಸಹಸ್ರಪರಿವತ್ಸರಾನ್ ॥ ೭ ॥**

**ಭ್ರಮತೋ ಧರ್ಮಚಕ್ರಸ್ಯ ಯತ್ರ ನೇಮಿರಶೀರ್ಯತ ।**
**ಕರ್ಮಣಾ ತೇನ ವಿಖ್ಯಾತಂ ನೈಮಿಷಂ ಮುನಿಪೂಜಿತಮ್ ॥ ೮ ॥**

**ಯತ್ರ ಸಾ ಗೋಮತೀ ಪುಣ್ಯಾ ಸಿದ್ಧಚಾರಣಸೇವಿತಾ ।**
**ರೋಹಿಣೀ ಸಸುತಾ ತತ್ರ ಗೋಮತೀ ಸಾಭವತ್ ಕ್ಷಣಾತ್ ॥ ೯ ॥**

**ಶಕ್ತಿರ್ಜ್ಯೇಷ್ಠಾ ಸಮಭವದ್ವಸಿಷ್ಠಸ್ಯ ಮಹಾತ್ಮನಃ ।**
**ಅರುಂಧತ್ಯಾಃ ಸುತಾ ಯಾತ್ರಾದಾನ ಮುತ್ತಮತೇಜಸಃ ॥ ೧೦ ॥**

---

ಯುಳ್ಳವನಾದಾಗ ಸತ್ರವನ್ನಾಚರಿಸುತ್ತಾನೆ. ಆ ಮುನಿಗಳು ಅತಿ ಪವಿತ್ರವಾದ ಸತ್ರವನ್ನು ಒಂದು ಸಾವಿರ ಸಂವತ್ಸರ ಕಾಲದವರೆಗೆ ಆಚರಿಸಿದರು.

೬-೭. ಆ ಸತ್ರದಲ್ಲಿ ಬ್ರಹ್ಮನು ಸಾಕ್ಷಾತ್ತಾಗಿ ಯಜಮಾನನಾಗಿದ್ದನು. ಇಡಾದೇವಿಯು ಯಜಮಾನ ಪತ್ನಿಯು. ಮಹಾತೇಜಸ್ವಿಯೂ ಬುದ್ಧಿಶಾಲಿಯೂ ಆದ ಮೃತ್ಯುವು ಮಹಾತ್ಮರ ಆ ಸತ್ರದಲ್ಲಿ ಶಾಮಿತ್ರಕರ್ಮವನ್ನಾಚರಿಸಿದನು. ಸತ್ರ ನಡೆದ ಒಂದು ಸಾವಿರ ವರ್ಷಗಳ ಪರ್ಯಂತ ಅಲ್ಲಿ ದೇವತೆಗಳು ವಾಸಮಾಡಿದರು.

೮. ಭ್ರಮಿಸುತ್ತಿದ್ದ ಧರ್ಮಚಕ್ರದ ಪಟ್ಟಿಯು ಯಾವ ಸ್ಥಳದಲ್ಲಿ ಸಡಲಿ ಜಾರಿತೋ—ಹಾಗೆ ಶೀರ್ಣವಾದ ನಿಮಿತ್ತದಿಂದ ನೇಮಿಶಬ್ದದ ಸಂಬಂಧದಿಂದ ಆ ಸ್ಥಳವು ನೈಮಿಷಾರಣ್ಯವೆಂದು ಮುನಿಗಳಿಂದ ಪೂಜ್ಯಭಾವನೆಯಿಂದ ಸತ್ಕರಿಸಲ್ಪಟ್ಟಿತು.

೯. ಗೋಮತೀ ಎಂಬ ಸಿದ್ಧರಿಂದಲೂ ಚಾರಣರಿಂದಲೂ ಸೇವಿಸಲ್ಪಟ್ಟ ಪುಣ್ಯ ನದಿಯು ಆ ಪವಿತ್ರ ಸ್ಥಳದಲ್ಲಿ ನಿಮಿಷಮಾತ್ರದಲ್ಲಿ ರೋಹಿಣಿ ಎಂಬ ಪುತ್ರೀ ಸಹಿತಳಾದಳು.

೧೦. ಮತ್ತು ಆ ಪವಿತ್ರ ಸ್ಥಳದಲ್ಲಿ ಪರಮ ತೆಜಸ್ವಿಯೂ ಮಹಾತ್ಮನೂ ಆದ ವಸಿಷ್ಠಮುನಿಗೆ ಅರುಂಧತಿಯಲ್ಲಿ ಶಕ್ತಿಯೆಂಬ ಜ್ಯೇಷ್ಠ ಪುತ್ರಿಯು ಜನಿಸಿದಳು.

**ಕಲ್ಮಾಷಪಾದೋ ನೃಪತಿರ್ಯತ್ರ ಶಕ್ತ್ಯಾ ಶಕ್ತಿನಾ।**
**ಯತ್ರ ವೈರಂ ಸಮಭವದ್ವಿಶ್ವಾಮಿತ್ರವಸಿಷ್ಠಯೋಃ ॥ ೧೧ ॥**

**ಅದೃಶ್ಯಂತ್ಯಾಂ ಸಮಭವನ್ಮುನಿರ್ಯತ್ರ ಪರಾಶರಃ।**
**ಪರಾಭವೋ ವಸಿಷ್ಠಸ್ಯ ಯಸ್ಯ ಜ್ಞಾನೇ ಹ್ಯವರ್ತಯತ್ ॥ ೧೨ ॥**

**ತತ್ರ ತೇ ನೇನಿರೇ ಶೈಲಂ ನೈಮಿಷೇ ಬ್ರಹ್ಮವಾದಿನಃ।**
**ನೈಮಿಷಂ ಜಜ್ಞಿರೇ ಯಸ್ಮಾನ್ನೈಮಿಷೀಯಾಸ್ತತಃ ಸ್ಮೃತಾಃ ॥ ೧೩ ॥**

**ತತ್ಸತ್ರಮಭವತ್ತೇಷಾಂ ಸಮಾ ದ್ವಾದಶ ಧೀಮತಾಮ್।**
**ಪುರೂರವಸಿ ವಿಕ್ರಾಂತೇ ಪ್ರಶಾಸತಿ ವಸುಂಧರಾಮ್ ॥ ೧೪ ॥**

**ಅಷ್ಟಾದಶ ಸಮುದ್ರಸ್ಯ ದ್ವೀಪಾನಶ್ನನ್ ಪುರೂರವಾಃ।**
**ತುತೋಷ ನೈವ ರತ್ನಾನಾಂ ಲೋಭಾದಿತಿ ಹಿ ನಃ ಶ್ರುತಮ್ ॥ ೧೫ ॥**

---

೧೧. ಕಲ್ಮಾಷಪಾದನೆಂಬ ರಾಜನು ಆಶಕ್ತಿಯೆಂಬ ಕನ್ಯೆಯನ್ನು ಪರಿಗ್ರಹಿಸಿದನು. ಮತ್ತು ವಿಶ್ವಾಮಿತ್ರ ವಸಿಷ್ಠ ಮುನಿಗಳಿಗೆ ವೈರವುಂಟಾದದ್ದು ಆ ಸ್ಥಳದಲ್ಲಿ.

೧೨. ಅದೃಶ್ಯಂತೀ ಎಂಬುವಳಲ್ಲಿ ಪರಾಶರ ಮುನಿಯು ಯಾವ ಪುಣ್ಯಸ್ಥಳದಲ್ಲಿ ಜನಿಸಿದನೋ, ಮತ್ತು ಜ್ಞಾನ ಪರೀಕ್ಷೆಯಲ್ಲಿ ವಸಿಷ್ಠರಿಗೆ ಪರಾಜಯವು ಯಾವಸ್ಥಳದಲ್ಲಿ ಪ್ರಾಪ್ತವಾಯಿತೋ ಅದು ನೈಮಿಷಾರಣ್ಯವು.

೧೩. ಬ್ರಹ್ಮವಾದಿಗಳಾದ ಮಹರ್ಷಿಗಳು ಆ ಪವಿತ್ರಸ್ಥಳವಾದ ನೈಮಿಷವನದಲ್ಲಿ ಬೆಟ್ಟವನ್ನು ಕಂಡರು. ಅದು ನೈಮಿಷಾರಣ್ಯ ಸಂಬಂಧವಾದುದರಿಂದ ಆ ಮುನಿಗಳೆಲ್ಲರೂ ನೈಮಿಷೀಯರೆಂದು ಕರೆಯಲ್ಪಡುವವರಾದರು.

೧೪. ವಿಕ್ರಮಶಾಲಿಯಾದ ಪುರೂರವಸ್ಸೆಂಬ ರಾಜನು ಭೂಮಿಯನ್ನಾಳುತ್ತಿರಲು ಆ ವಿದ್ವಾಂಸರು ಆಚರಿಸಿದ ಸತ್ರವು ಹನ್ನೆರಡು ವರ್ಷಗಳ ಕಾಲ ನಡೆಯಿತು.

೧೫. ಸಮುದ್ರ ಮಧ್ಯದಲ್ಲಿದ್ದ ಹದಿನೆಂಟು ದ್ವೀಪಗಳನ್ನು ಅನುಭವಿಸುತ್ತಿದ್ದ ಪುರೂರವರಾಜನು ರತ್ನಗಳಲ್ಲಿ ಅತ್ಯಾಶೆಯುಳ್ಳವನಾದ್ದರಿಂದ ರತ್ನಗಳಲ್ಲಿ ತೃಪ್ತಿಯಿಲ್ಲದವನೆಂದು ನಾವು ಅನೇಕ ವೇಳೆ ಕೇಳಿರುವೆವು.

ಊರ್ವಶೀ ಕಾಮಯಾನೋ ತಂ ಸ ದೇವದೂತಪ್ರಚೋದಿತಾ।
ಆಜಹಾರ ಸ ತತ್ಸತ್ರ ಮೂರ್ವಶ್ಯಾ ಸಹ ಸಂಗತಃ ॥ ೧೬ ॥

ತಸ್ಮಿನ್ನರಪತೌ ಸತ್ರಂ ನೈಮಿಷೀಯಾಃ ಪ್ರಚಕ್ರಿರೇ।
ಯಂ ಗರ್ಭಂ ಸುಷುವೇ ಗಂಗಾ ಪಾವಕಾದ್ದೀಪ್ತತೇಜಸಮ್ ॥ ೧೭ ॥

ತತ್ತುಲ್ಯಂ ಪರ್ವತೇ ನ್ಯಸ್ತಂ ಹಿರಣ್ಯಂ ಸಮಪದ್ಯತ।
ಹಿರಣ್ಮಯಂ ತತಶ್ಚಕ್ರೇ ಯಜ್ಞವಾಟಂ ಮಹಾತ್ಮನಾಮ್ ॥ ೧೮ ॥

ವಿಶ್ವಕರ್ಮಾ ಸ್ವಯಂ ದೇವೋ ಭಾವನೋ ಲೋಕಭಾವನಃ।
ಸ ಪ್ರವಿಶ್ಯ ತತಃ ಸತ್ರೇ ತೇಷಾಮಮಿತತೇಜಸಾಮ್। ॥ ೧೯ ॥

ಐಡಃ ಪುರೂರವಾ ಭೇಜೇ ತಂ ದೇಶಂ ಮೃಗಯಾಂ ಚರನ್।
ತಂ ದೃಷ್ಟ್ವಾ ಮಹದಾಶ್ಚರ್ಯಂ ಯಜ್ಞವಾಟಂ ಹಿರಣ್ಮಯಮ್॥ ೨೦ ॥

---

೧೬. ದೇವತೆಗಳ ದೂತನಿಂದ ಪ್ರಲೋಭಿಸಲ್ಪಟ್ಟ ಊರ್ವಶಿಯು ಆ ಪುರೂರವ ರಾಜನನ್ನು ಕಾಮಿಸಿದಳು. ಅಂತಹ ಊರ್ವಶಿಯೊಡನೆ ಆ ಪುರೂರವರಾಜನು ಆ ಸತ್ರವನ್ನು ಸಾಕ್ಷಾತ್ಕರಿಸಿ ಅನುಭವಿಸಿದನು.

೧೭. ನೈಮಿಷೀಯರು ಆ ಪುರೂರವರಾಜನ ಆಜ್ಞೆಕೆಯಲ್ಲಿ ಸತ್ರವನ್ನು ಉಪ ಕ್ರಮಿಸಿದರು. ಆಗ ಪರ್ವತದಲ್ಲಿ ಹಾಕಿದ್ದ ಹಿರಣ್ಯವು ಗಂಗೆಯು ಅಗ್ನಿಯಿಂದ ಸ್ವೀಕರಿಸಿ ಪ್ರಸವಿಸಿದ ಗರ್ಭದಂತೆ ಜ್ವಲಿಸುವ ತೇಜಸ್ಸುಳ್ಳದ್ದಾಗಿ ರಾಶಿರೂಪವಾಗಿ ಪರಿಣಮಿಸಿತು.

೧೮. ಲೋಕಗಳನ್ನು ನಿರ್ಮಿಸುವವನೂ ಸದ್ಭಾವನೆಯುಳ್ಳವನೂ ಆದ ವಿಶ್ವ ಕರ್ಮದೇವನು ಮಹಾತ್ಮರ ಆ ಯಜ್ಞವಾಟವನ್ನು ಆ ಸುವರ್ಣದಿಂದ ಸುವರ್ಣ ಮಯವನ್ನಾಗಿ ನಿರ್ಮಿಸಿದನು.

೧೯. ಅಪರಿಮಿತ ತೇಜಸ್ವಿಗಳಾದ ಆ ಸತ್ರಾನುಷ್ಠಾನವಂತರ ಸತ್ರಸ್ಥಳಕ್ಕೆ ಇಳಾ ಪುತ್ರನಾದ ಪುರೂರವರಾಜನು ಮೃಗ ಬೇಟೆಯ ಪ್ರಸಂಗದಿಂದ ಪ್ರವೇಶಿಸಿದನು.

೨೦. ಸುವರ್ಣಮಯವಾಗಿ ಅತ್ಯಾಶ್ಚರ್ಯಕರವಾದ ಆ ಯಜ್ಞವಾಟವನ್ನು ನೋಡಿ ಲೋಭದಿಂದ ವಿವೇಕ ಭ್ರಷ್ಟನಾಗಿ ಆ ಯಜ್ಞವಾಟವನ್ನು ಸ್ವೀಕರಿಸಲು ಯತ್ನಿಸಿದನು.

ಲೋಭೇನ ಹತವಿಜ್ಞಾನಸ್ತದಾದಾತುಮುಪಾಕ್ರಮತ್ ।
ನೈಮಿಷೇಯಾಸ್ತತಸ್ತಸ್ಯ ಚುಕ್ರುಧುರ್ನೃಪತಿಂ ಭೃಶಮ್ ॥ ೨೦ ॥

ನಿಜಘ್ನುಶ್ಚಾಪಿ ತಂ ಕ್ರುದ್ಧಾಃ ಕುಶವಜ್ರೈರ್ಮನೀಷಿಣಃ ।
ತಪೋನಿಷ್ಠಾಶ್ಚ ರಾಜಾನಂ ಮುನಯೋ ದೇವಚೋದಿತಾಃ ॥ ೨೨ ॥

ಕುಶವಜ್ರೈರ್ವಿನಿಷ್ಪಿಷ್ಟಃ ಸ ರಾಜಾ ವ್ಯಜಹಾತ್ತನುಮ್ ।
ಔರ್ವಶೇಯಸ್ತತಸ್ತಸ್ಯ ಯುದ್ಧಂ ಚಕ್ರೇ ನೃಪೋ ಭುವಿ ॥ ೨೩ ॥

ನಹುಷಸ್ಯ ಮಹಾತ್ಮಾನಂ ಪಿತರಂ ಯಂ ಪ್ರಚಕ್ಷತೇ ।
ಸ ತೇಷ್ವವಭೃಥೇಷ್ವೇವ ಧರ್ಮಶೀಲೋ ಮಹೀಪತಿಃ । ॥ ೨೪ ॥

ಆಯುರಾಯುಭವಾಯಾಗ್ರ್ಯಮಸ್ಮಿನ್ ಸತ್ರೇ ನರೋತ್ತಮಃ
ಶಾಂತಯಿತ್ವಾ ತು ರಾಜಾನಂ ತದಾ ಬ್ರಹ್ಮವಿದಸ್ತಥಾ ॥ ೨೫ ॥

---

೨೧. ಅನಂತರದಲ್ಲಿ ಆ ರಾಜನ ಮೇಲೆ ಮಾನಿಗಳಾದ ನೈಮಿಷೇಯರೆಲ್ಲರೂ ಅತಿಯಾಗಿ ಕ್ರೋಧಮಾಡಿ ದರ್ಭರೂಪವಾದ ವಜ್ರಾಯುಧಗಳಿಂದ ಪ್ರಹರಿಸಿದರು.

೨೨. ತಪೋನಿಷ್ಠರೂ, ದೈವ ಪ್ರೇರಿತರೂ ಆದ ಮುನಿಗಳು ದರ್ಭ ವಜ್ರಾಯುಧಗಳಿಂದ ರಾಜನನ್ನು ಪ್ರಹರಿಸಲು ಆ ರಾಜನು ದೇಹವನ್ನು ತ್ಯಜಿಸಿದನು.

೨೩. ನಹುಷನ ತಂದೆಯೆಂದು ಪ್ರಸಿದ್ಧಿಹೊಂದಿರುವ ಮಹಾತ್ಮನಾದ ಔರ್ವಶೇಯ ರಾಜನು ಪಿತೃವೈರವನ್ನು ತೀರಿಸಲೋಸ್ಕರ ಆಗ ಅದೇ ಭೂಮಿಯಲ್ಲಿ ಯುದ್ಧ ಮಾಡಿದನು.

೨೪. ಆದರೆ ಆ ರಾಜನು ಅವಭೃಥ ಪರ್ಯಂತ ಕರ್ಮಾನುಷ್ಠಾನದಲ್ಲಿ ಧಾರ್ಮಿಕ ಬದ್ಧಿಯುಳ್ಳವನಾದನು. ಇದರಿಂದ ಆ ಸತ್ರದಲ್ಲಿ ಅವನು ರಾಜಸ್ಥಾನ ಮರ್ಯಾದೆಯನ್ನು ಹೊಂದಿ ತನ್ನ ಆಯುರೈಶ್ವರ್ಯಾದಿಗಳ ಅಭಿವೃದ್ಧಿಗೆ ಪಾತ್ರನಾದನು.

೨೫. ಆಗ ಬ್ರಹ್ಮಜ್ಞಾನಿಗಳು ಈ ರೀತಿಯಾಗಿ ರಾಜನನ್ನು ಸಮಾಧಾನಮಾಡಿ ಭೂಮಾತೆಗೆ ಎಲ್ಲರೂ ಪ್ರಜೆಗಳೆಂಬ ಉದಾರ ಭಾವನೆಯಿಂದ ಸಮತ್ವ ಬುದ್ಧಿ ಶಾಂತಿ ಗುಣಗಳಿಂದ ಕೂಡಿ ಸತ್ರಯಾಗವನ್ನು ಮಾಡಲಾರಂಭಿಸಿದರು.

**ಸತ್ರಮಾರೇಭಿರೇ ಕರ್ತುಂ ಪೃಥ್ವೀವತ್ಸಾತ್ಮಮೂರ್ತಯಃ ।**
**ಬಭೂವ ಸತ್ರೇ ತೇಷಾಂ ತು ಬ್ರಹ್ಮಚರ್ಯಂ ಮಹಾತ್ಮನಾಮ್ ॥ ೨೬ ॥**

**ವಿಶ್ವಂ ಸಿಸೃಕ್ಷಮಾಣಾನಾಂ ಪುರಾ ವಿಶ್ವಸೃಜಾಮಿವ ।**
**ವೈಖಾನಸೈಃ ಪ್ರಿಯಸಖ್ಯೈರ್ವಾಲಖಿಲ್ಯೈರ್ಮರೀಚಿಭಿಃ ॥ ೨೭ ॥**

**ಅಜೈಶ್ಚ ಮುನಿಭಿರ್ಜಾತಂ ಸೂರ್ಯವೈಶ್ವಾನರಪ್ರಭೈಃ ।**
**ಪಿತೃದೇವಾಪ್ಸರಃಸಿದ್ಧೈರ್ಗಂಧರ್ವೋರಗಚಾರಣೈಃ ॥ ೨೮ ॥**

**ಭಾರತ್ಯೈಃ ಶುಶುಭೇ ರಾಜಾ ದೇವೈರಿಂದ್ರಸಮೋ ಯಥಾ ।**
**ಸ್ತೋತ್ರಶಸ್ತ್ರೈರ್ಗ್ರಹೈರ್ದೇವಾನ್ ಪಿತ್ರ್ಯೈಃ ಪಿತ್ರ್ಯೈಶ್ಚ ಕರ್ಮಭಿಃ ॥ ೨೯ ॥**

**ಆನರ್ಚುಃ ಸ್ಮ ಯಥಾಜಾತಿ ಗಂಧರ್ವಾದೀನ್ ಯಥಾವಿಧಿ ।**
**ಆರಾಧನೇ ಸ ಸಸ್ಮಾರ ತತಃ ಕರ್ಮಾಂತರೇಷು ಚ ॥ ೩೦ ॥**

---

೨೬. ಪ್ರಪಂಚವನ್ನು ಸೃಜಿಸುವ ಅಧಿಕಾರವುಳ್ಳ ವಿಶ್ವಸೃಜರೆಂಬ ದೇವಗಣವು ಯಜ್ಞಮಾಡುವಾಗ ಆಚರಿಸಿದ ಮಹತ್ತರವಾದ ಬ್ರಹ್ಮಚರ್ಯವನ್ನು ಈ ಸತ್ರದಲ್ಲಿ ನೆರೆದ ಮಹಾತ್ಮರು ಕೂಡ ಪಾಲಿಸಿದರು.

೨೭-೨೮. ಆ ಸತ್ರಯಾಗಶಾಲೆಯಲ್ಲಿ ಸೂರ್ಯ ಅಗ್ನಿಗಳಂತೆ ಅತಿತೇಜಸ್ವಿಗಳಾದ ವಾಲಖಿಲ್ಯ, ಪ್ರಿಯಸಖ, ವೈಖಾನಸ, ಮರೀಚಿ. ಮತ್ತು ಅಜರೆಂಬ ವಿವಿಧ ಮುನಿವರ್ಯರಿಂದಲೂ, ಪಿತೃಗಳು, ದೇವತೆಗಳು, ಅಪ್ಸರ ಸ್ತ್ರೀಯರು, ಸಿದ್ಧರು, ಗಂಧರ್ವರು, ಸರ್ಪಗಳು,ಚಾರಣರು ಭಾರತೀಯ ಮಹಾತ್ಮರು, ಈ ಪರಿವಾರದಿಂದಲೂ ಕೂಡಿ ರಾಜನು ರಾಜಾಸನದಲ್ಲಿ ಕುಳಿತುಕೊಂಡಿರುವ ಸನ್ನಿವೇಶವು ಅನೇಕ ದೇವತೆಗಳಿಂದ ಪರಿವೃತನಾದ ದೇವರಾಜನಾದ ಇಂದ್ರನಂತೆ ಶೋಭಿಸುತ್ತಿತ್ತು.

೨೯-೩೦. ಯಜ್ಞದಲ್ಲಿ ದೇವತೆಗಳನ್ನು ಗಾನಮಾಡಿ ಪಠಿಸುವ ಸ್ತುತಿಮಂತ್ರಗಳು ದಂಡಾಕಾರವಾಗಿ ಹೇಳುವ ಮಂತ್ರಗಳು, ಸೋಮರಸವನ್ನು ಹಿಡಿದಿಟ್ಟಿರುವ ಪಾತ್ರಗಳು, ಇವುಗಳಿಂದ ದೇವತೆಗಳನ್ನೂ ಪಿತೃಪ್ರೀತಿಸಾಧನವಾದ ಕರ್ಮಗಳಿಂದ ಪಿತೃಗಳನ್ನೂ ಪೂಜಿಸಿದುದಲ್ಲದೆ ಕರ್ಮಾನುಷ್ಠಾನದ ವಿರಾಮಕಾಲದಲ್ಲಿ ಗಂಧರ್ವಾದಿಗಳ ಸೇವೆಯನ್ನು ಸ್ಮರಿಸಿದನು.

**ಜಗುಃ ಸಾಮಾನಿ ಗಂಧರ್ವಾ ನನೃತುಶ್ಚಾಪ್ಸರೋಗಣಾಃ ।**
**ವ್ಯಾಜಹ್ರುರ್ಮುನಯೋ ವಾಚಂ ಚಿತ್ರಾಕ್ಷರಪದಾಂ ಶುಭಾಮ್ ॥ ೩೧ ॥**

**ಮಂತ್ರಾದಿ ತತ್ರ ವಿದ್ವಾಂಸೋ ಜಜಪುಶ್ಚ ಪರಸ್ಪರಮ್ ।**
**ವಿತಂಡಾವಚನೈಶ್ಚೈವ ನಿಜಘ್ನುಃ ಪ್ರತಿವಾದಿನಃ ॥ ೩೨ ॥**

**ಋಷಯಶ್ಚೈವ ವಿದ್ವಾಂಸಃ ಶಬ್ದಾರ್ಥನ್ಯಾಯಕೋವಿದಾಃ ।**
**ನ ತತ್ರ ಹಾರಿತಂ ಕಿಂಚಿದ್ವಿವಿಶುರ್ಬ್ರಹ್ಮರಾಕ್ಷಸಾಃ ॥ ೩೩ ॥**

**ನೈವ ಯಜ್ಞಹರಾ ದೈತ್ಯಾ ನೈವ ದಾಜಮುಖಾಸ್ತ್ರಿಣಃ ।**
**ಪ್ರಾಯಶ್ಚಿತಂ ದರಿದ್ರಂ ಚ ನ ತತ್ರ ಸಮಜಾಯತ ॥ ೩೪ ॥**

**ಶಕ್ತಿ ಪ್ರಜ್ಞಾಕ್ರಿಯಾಯೋಗೈರ್ವಿಧಿರಾಶೀಃಷ್ವನುಷ್ಠಿತಃ ।**
**ಏವಂ ಚ ವವೃಧೇ ಸತ್ರಂ ದ್ವಾದಶಾಬ್ದಂ ಮನೀಷಿಣಾಮ್ ॥ ೩೫ ॥**

---

೩೧. ಗಂಧರ್ವರು ಸಾಮಗಾನವನ್ನು ಆಚರಿಸಿದರು, ಅಪ್ಸರಃ ಸ್ತ್ರೀಯರು ನರ್ತನವನ್ನು ತೋರಿಸಿದರು. ಮಹರ್ಷಿಗಳೆಲ್ಲರೂ ಮನೋರಂಜಕವಾದ ಅಕ್ಷರ-ಪದಗಳಿಂದ ಕೂಡಿದ ವಿಚಿತ್ರವಾದ ವಚನಗಳನ್ನು ಆಡಿದರು.

೩೨. ಮಂತ್ರಾದಿ ವಿಧಾನವನ್ನರಿತ ಋತ್ವಿಜರೆಲ್ಲರೂ ಸೇರಿ ಮಂತ್ರಜಪವನ್ನು ಮಾಡಿದರು ಮತ್ತು ಪ್ರಸಕ್ತವಾದ ಚರ್ಚಾವಾದಗಳಲ್ಲಿ ವಿತಂಡಾಕ್ಷೇಪಗಳಿಂದ ಒಬ್ಬರನ್ನೊಬ್ಬರು ಗೆದ್ದರು.

೩೩. ಅಲ್ಲಿ ನೆರೆದ ಋಷಿಗಳು ಶಬ್ದಾರ್ಥ ನ್ಯಾಯಗಳ ಜ್ಞಾನದಿಂದ ಪೂರ್ಣರಾದ ವಿದ್ವಾಂಸರಾಗಿದ್ದರು. ಅಲ್ಲಿ ಲೋಪವನ್ನು ಕಂಡು ಯಜ್ಞದ ಫಲವನ್ನು ಅಪಹರಿಸಲು ಬ್ರಹ್ಮರಾಕ್ಷಸರಿಗೆ ಅವಕಾಶವು ದೊರೆಯಲಿಲ್ಲ.

೩೪. ಸರ್ವಸಮೃದ್ಧಿಯಿಂದ ನಡೆದ ಆ ಯಜ್ಞದಲ್ಲಿ ಅಂಶವನ್ನಪಹರಿಸಲು ದೈತ್ಯರಿಗಾಗಲಿ ಆಗಲಿಲ್ಲ. ಕರ್ಮಕ್ಕೆ ಲೋಪಬಂದು ಅದಕ್ಕೆ ಪ್ರಾಯಶ್ಚಿತ್ತವಾಗಲಿ, ಯಾವದೊಂದು ನ್ಯೂನತೆಯಾಗಲಿ ಸಂಭವಿಸಲಿಲ್ಲ.

೩೫. ದೇಹೇಂದ್ರಿಯಗಳ ಶಕ್ತಿ, ಜ್ಞಾನ, ಅನುಷ್ಠಾನ, ಇವುಗಳ ಯೋಗಗಳಿಂದ ನಾನಾ ಕಾಮನೆಗಳಿಂದ ನೆರವೇರಿಸಿದ ಆ ವಿದ್ವಾಂಸರ ಸತ್ರಯಾಗವು ಹನ್ನೆರಡು ವರ್ಷಗಳ ಕಾಲ ಬೆಳೆಯಿತು.

**ಋಷೀಣಾಂ ನೈಮಿಷೀಯಾಣಾಂ ತದಭೂದಿವ ವಜ್ರಿಣಃ ।**
**ವೃದ್ಧಾದ್ಯಾ ಋತ್ವಿಜೋ ವೀರಾ ಜ್ಯೋತಿಷ್ಟೋಮಾನ್ ಪೃಥಕ್ಪೃಥಕ್ ॥ ೩೬ ॥**

**ಚಕ್ರಿರೇ ಪೃಷ್ಠಗಮನಾ ಸರ್ವಾನಯುತದಕ್ಷಿಣಾನ್ ।**
**ಸಮಾಪ್ತಯಜ್ಞೇ ಯತ್ರಾಸ್ತೇ ವಾಸುದೇವಂ ಮಹಾಧಿಪಮ್ ॥ ೩೭ ॥**

**ಪಪ್ರಚ್ಛುರಮಿತಾತ್ಮಾನಂ ಭವದ್ಭಿರ್ಯದಹಂ ದ್ವಿಜಃ ।**
**ಪ್ರಚೋದಿತಃ ಸ್ವವಂಶಾರ್ಥಂ ಸ ಚ ತಾನಬ್ರವೀತ್ಪ್ರಭುಃ ॥ ೩೮ ॥**

**ಶಿಷ್ಯಃ ಸ್ವಯಂಭುವೋ ದೇವಃ ಸರ್ವಂ ಪ್ರತ್ಯಕ್ಷದೃಗ್ವಶೀ ।**
**ಅಣಿಮಾದಿಭಿರಷ್ಟಾಭಿಃ ಸೂಕ್ಷ್ಮೈರಂಗೈಃ ಸಮನ್ವಿತಃ ॥ ೩೯ ॥**

**ತಿರ್ಯಗ್ವಾತಾದಿಭಿರ್ವರ್ಷೈಃ ಸರ್ವಾನ್ ಲೋಕಾನ್ ಬಿಭರ್ತಿ ಯಃ ।**
**ಸಪ್ತಸ್ಕಂಧಾ ಭೃತಾಃ ಶಾಖಾಃ ಸರ್ವತೋಯಾಜರಾಜರಾನ್ ॥ ೪೦ ॥**

---

೩೬. ನೈಮಿಷಾರಣ್ಯದಲ್ಲಿ ವಾಸಮಾಡುವ ಮುನೀಶ್ವರರು ಮಾಡಿದ ಆ ಯಜ್ಞವು ದೇವೇಂದ್ರನ ಯಜ್ಞದಂತೆ ಸಮೃದ್ಧಿಯಿಂದ ಕೂಡಿತ್ತು. ವೃದ್ಧರಾದಿಯಾಗಿ ಕರ್ಮ ದಕ್ಷರಾದ ಋತ್ವಿಜರು ತಮ್ಮ ತಮ್ಮ ಕರ್ತವ್ಯಾನುಷ್ಠಾನಗಳಿಂದ ಪೃಷ್ಠ ಮೊದಲಾದ ಸ್ತೋತ್ರಗಳಿಂದ ಸಮಾಪ್ತಿಯಾಗುವ ಮತ್ತು ಅಯುತ ಸಂಖ್ಯೆಯ ದಕ್ಷಿಣಾದಾನವುಳ್ಳ ಜ್ಯೋತಿಷ್ಟೋಮ ಯಾಗಗಳನ್ನು ಕೂಡ ಮಾಡಿದರು.

೩೭-೩೮. ಯಜ್ಞವು ಸಮಾಪ್ತಿಗೊಂಡಾಗ, ಸರ್ವಪ್ರಭುವಾದ ವಾಯುದೇವನನ್ನು ಕುರಿತು ಸದಸ್ಯರೆಲ್ಲರೂ ಪೌರಾಣಿಕ ವಿಷಯಗಳನ್ನು ನೀವೀಗ ನನ್ನಲ್ಲಿ ಕೇಳಿಕೊಂಡಂತೆ ಪ್ರಶ್ನಿಸಿದರು. ವಾಯು ದೇವನ ವಂಶಾವಳಿಯ ಉಪದೇಶಕ್ಕೆ ಪ್ರೇರಿತನಾದ ವಾಯು ದೇವನು ಅವರಿಗೆ ಉಪದೇಶಮಾಡಿದನು.

೩೯. ಬ್ರಹ್ಮನ ಆದಿ ಶಿಷ್ಯನಾದ ವಾಯುದೇವನು ಜಿತೇಂದ್ರಿಯನೂ ಸರ್ವವಸ್ತುಗಳನ್ನು ಸಾಕ್ಷಾತ್ಕರಿಸಿದವನೂ ಆಗಿರುವನಲ್ಲದೆ ಅಣಿಮಾ, ಮುಂದಾದ ಅಷ್ಟೈಶ್ವರ್ಯಗಳಿಂದಲೂ ಸೂಕ್ಷ್ಮಗಳಾದ ವಿಭೂತಿ ಅವಯವಗಳಿಂದಲೂ ಕೂಡಿರುವನು.

೪೦. ಅಡ್ಡಲಾಗಿ ಬೀಸುವ ಗಾಳಿ-ಮಳೆಗಳಿಂದ ಸರ್ವಲೋಕಗಳನ್ನೂ ರಕ್ಷಿಸುವನು. ವಿಕಾರ ರೂಪದಿಂದ ಮುಪ್ಪು ಮುಂತಾದ ಅವಸ್ಥೆಗಳಿದ್ದರೂ ಪ್ರಕೃತಿ ತತ್ತ್ವರೂಪದಿಂದ ಜರಾದ್ಯವಸ್ಥೆಗಳಿಲ್ಲದ ಏಳು ವಾತಸ್ಕಂಧಗಳೆಂಬ ಶಾಖೆಗಳನ್ನು ಧರಿಸಿರುವನು.

**ವಿಷಯೈರ್ಮರುತೋ ಯಸ್ಯ ಸಂಸ್ಥಿತಾಃ ಸಪ್ತಸಪ್ತಕಾಃ ।**
**ವ್ಯೂಹತ್ರಯಾಣಾಂ ಭೂತಾನಾಂ ಕುರ್ವನ್ ಸತ್ರಂ ಮಹಾಬಲಃ ॥ ೪೧ ॥**

**ತೇಜಸಶ್ಚಾಪ್ಯುಪಾಯಾನಾಂ ದಧಾತೀಹ ಶರೀರಿಣಃ ।**
**ಪ್ರಾಣಾದ್ಯಾ ವೃತ್ತಯಃ ಪಂಚ ಧಾರಣಾನಾಂ ಸ್ವವೃತ್ತಿಭಿಃ ॥ ೪೨ ॥**

**ಪೂರ್ಯಮಾಣಃ ಶರೀರಾಣಾಂ ಧಾರಣಂ ಯಸ್ಯ ಕುರ್ವತೇ ।**
**ಆಕಾಶಯೋನಿದ್ವಿಗುಣಶಬ್ದಸ್ಪರ್ಶಸಮನ್ವಿತಃ ॥ ೪೩ ॥**

**ವಾಚೋರಣಿಃ ಸಮಾಖ್ಯಾತಾ ಶಬ್ದಶಾಸ್ತ್ರವಿಚಕ್ಷಣೈಃ ।**
**ಭಾರತ್ಯಾ ಶ್ಲಕ್ಷ್ಣಯಾ ಸರ್ವಾನ್ ಮುನೀನ್ ಪ್ರಹ್ಲಾದಯನ್ನಿವ ॥ ೪೪ ॥**

**ಪುರಾಣಜ್ಞಾಃ ಸುಮನಸಃ ಪುರಾಣಾಶ್ರಯಯುಕ್ತಯಾ ।**
**ಪುರಾಣನಿಯತಾ ವಿಪ್ರಾಃ ಕಥಾಮಕಥಯದ್ವಿಭುಃ ॥ ೪೫ ॥**

---

೪೧. ವಾಯು ವಿಭೂತಿಗಳು ಏಳು ಭಾಗಗಳಿಂದ ಕೂಡಿದ ಏಳು ವೃಂದ ರೂಪಗಳಾಗಿ ಆಯಾಯ ವಿಷಯಗಳನ್ನು ವ್ಯಾಪಿಸಿವೆ. ಪೃಥಿವೀ, ಜಲ, ತೇಜ ಎಂಬ ಭೂತತ್ರಯಗಳ ವ್ಯೂಹಗಳನ್ನು ರಚಿಸಿದವನು ವಾಯುದೇವನು.

೪೨. ಪ್ರಾಣಿಗಳಲ್ಲಿ ಜಾಠರಾಗ್ನಿರೂಪವಾದ ತೇಜಸ್ಸನ್ನು ಪೋಷಿಸುವನು. ತಮ್ಮ ತಮ್ಮ ಅಸಾಧಾರಣ ಕೃತ್ಯಗಳಿಂದ ಶರೀರಗಳನ್ನು ವ್ಯಾಪಿಸಿ ಶರೀರಧಾರಣವನ್ನು ಮಾಡುವ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನವೆಂಬ ಕೃತ್ಯವಾಪಾರಗಳುಳ್ಳವನಾಗಿರುವನು.

೪೩-೪೫. ವಾಯುದೇವನು ಆಕಾಶವೆಂಬ ಕಾರಣದಿಂದ ಹುಟ್ಟಿ ಶಬ್ದ-ಸ್ಪರ್ಶಗಳೆಂಬ ಎರಡು ಗುಣಗಳಿಗೆ ಆಧಾರನಾಗಿರವನು. ಶಬ್ದಶಾಸ್ತ್ರ ನಿಷ್ಣಾತರು ವಾಕ್ಕಿನ ಉತ್ಪತ್ತಿಗೆ ವಾಯುವನ್ನು ಅರಣಿಯೆಂದು ಹೇಳುವರು. ಇಂತಹ ವಾಯುದೇವನು ಅನೇಕ ಪುರಾಣಜ್ಞಾನ-ಪ್ರಸನ್ನ ಚಿತ್ತದಿಂದ ಕೂಡಿದ ಸರ್ವಮುನಿಗಳನ್ನು ಸಂತೋಷಪಡಿಸುವಂತೆ ಪುರಾಣಶ್ರವಣ ವಿಧಿನಿಯಮವಂತರಾದ ಬ್ರಾಹ್ಮಣರಿಗೆ, ಪುರಾಣ ಕಥೆಗಳನ್ನು ಬೋಧಿಸುವ ಮೃದುವಾದ ಭಾಷೆಯಿಂದ ಉಪದೇಶಿಸಿದನು.

**ಏತತ್ಸರ್ವಂ ಯಥಾವೃತ್ತಮಾಖ್ಯಾನಂ ದ್ವಿಜಸತ್ತಮಾಃ ।**
**ಋಷೀಣಾಂ ಚ ಪರಂ ಚೈತಲ್ಲೋಕತತ್ತ್ವಮನುತ್ತಮಮ್ ॥ ೪೬ ॥**

**ಬ್ರಹ್ಮಣಾ ಯತ್ಪುರಾಪ್ರೋಕ್ತಂ ಪುರಾಣಂ ಜ್ಞಾನಮುತ್ತಮಮ್ ।**
**ದೇವತಾನಾಮೃಷೀಣಾಂ ಚ ಸರ್ವಪಾಪಪ್ರಮೋಚನಮ್ ॥ ೪೭ ॥**

**ವಿಸ್ತರೇಣಾನುಪೂರ್ವ್ಯಾಚ ತಸ್ಯವಕ್ಷ್ಯಾಮ್ಯನುಕ್ರಮಮ್**

**ಇತಿ ಶ್ರೀ ಬ್ರಂಹ್ಮಾಂಡಪುರಾಣೇ ದ್ವಿತೀಯೋಽಧ್ಯಾಯಃ ಸಮಾಪ್ತಃ.**

---

೪೬. ಬ್ರಾಹ್ಮಣಪುಂಗವರೆ, ಋಷಿಗಳೆಲ್ಲರೂ, ಉತ್ತಮೋತ್ತಮವಾದ ಲೋಕ ತತ್ತ್ವವನ್ನು ಪ್ರತಿಪಾದಿಸುವ ಹಿಂದೆ ನಡೆದ ಪುರಾಣ ಆಖ್ಯಾನವನ್ನು ಮುಖ್ಯವೆಂಬ ಭಾವನೆಯಿಂದ ಆರ್ಜಿಸಿದರು.

೪೭. ಆದಿಯಲ್ಲಿ ಬ್ರಹ್ಮದೇವನು ದೇವತೆ-ಋಷಿ ಇವರಿಗೆ ಸಕಲ ಪಾಪಗಳನ್ನು ಧ್ವಂಸಮಾಡುವ ಉತ್ತಮವಾದ ಜ್ಞಾನಲಾಭಕ್ಕಾಗಿ ಉಪದೇಶಿಸಿರುವ ಈ ಪುರಾಣ ವನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ಹೇಳುವೆನು.

ಬ್ರಂಹಾಂಡಪುರಾಣದಲ್ಲಿ ದ್ವಿತೀಯಾಧ್ಯಾಯವು ಮುಗಿದುದು.

---

## ತೃತೀಯೋಽಧ್ಯಾಯಃ

**ಸೂತ ಉವಾಚ**

**ಶೃಣು ತೇಷಾಂ ಕಥಾಂ ದಿವ್ಯಾಂ ಸರ್ವಪಾಪಪ್ರಮೋಚನೀಮ್ ।**
**ಕಥ್ಯಮಾನಾಂ ಮಯಾ ಚಿತ್ರಾಂ ಬಹ್ವರ್ಥಾಂ ಶ್ರುತಿಸಮ್ಮಿತಾಮ್ ॥೧॥**

**ಯ ಇಮಾಂ ಧಾರಯೇನ್ನಿತ್ಯಂ ಶೃಣುಯಾದ್ವಾಪ್ಯಭೀಕ್ಷ್ಣಶಃ ।**
**ಸ್ವವಂಶಂ ಧಾರಣಂ ಕೃತ್ವಾ ಸ್ವರ್ಗಲೋಕೇ ಮಹೀಯತೇ ॥ ೨ ॥**

**ವಿಶ್ವತಾರಾಯಾ ಚ ಪಂಚ ಯಥಾವೃತ್ತಂ ಯಥಾಶ್ರುತ್ರಮ್ ।**
**ಕೀರ್ತ್ಯಮಾನಂ ನಿಬೋಧಾರ್ಥಂ ಪೂರ್ವೇಷಾಂ ಕೀರ್ತಿವರ್ಧನಮ್॥ ೩ ॥**

**ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಶತ್ರುಘ್ನಮೇವ ಚ ।**
**ಕೀರ್ತನಂ ಸ್ಥಿರಕೀರ್ತೀನಾಂ ಸರ್ವೇಷಾಂ ಪುಣ್ಯಕರ್ಮಣಾಮ್ ॥ ೪ ॥**

---

ಸೂತಮುನಿಯು ಹೀಗೆಂದನು :—ಸಕಲ ಪಾಪಗಳನ್ನು ಕಳೆಯುವ, ದಿವ್ಯವೂ ವಿಚಿತ್ರವೂ, ಬಹ್ವರ್ಥಗರ್ಭಿತವೂ, ವೇದಗಳಿಗೆ ತುಲ್ಯವೂ ಆದ ನಾನು ಹೇಳುವ ಆ ಪುಣ್ಯಾತ್ಮರ ಕಥೆಯನ್ನು ಕೇಳು.

೨. ಯಾವ ಮನುಜನು ಈ ಕಥೆಯನ್ನು ಪ್ರತಿನಿತ್ಯವೂ ಮನಸ್ಸಿನಲ್ಲಿ ಧರಿಸುವನೋ ಅಥವಾ ಮತ್ತೆ ಮತ್ತೆ ಶ್ರವಣಮಾಡುವನೋ ಅವನು ತನ್ನ ವಂಶವನ್ನು ಶಾಶ್ವತಗೊಳಿಸಿ ಸ್ವರ್ಗದಲ್ಲಿ ಪೂಜ್ಯನಾಗುವನು.

೩. ಈ ಕಥೆಯು ಪ್ರಪಂಚವನ್ನು ಕಷ್ಟದಿಂದ ದಾಟಿಸುವ ಮಹಿಮೆಯುಳ್ಳದ್ದು. ಇಂತಹ ಪುಣ್ಯಶ್ಲೋಕರ ಕೀರ್ತಿದಾಯಕವಾದ ಚರಿತ್ರೆಯನ್ನು ಹಿಂದೆ ನಡೆದಂತೆಯೂ ನಾನು ಕೇಳಿರುವಂತೆಯೂ ವಿವರಿಸುವುದನ್ನು ಕೇಳು.

೪. ಶಾಶ್ವತ ಕೀರ್ತಿಯನ್ನು ಗಳಿಸಿದ ಪುಣ್ಯಾತ್ಮರೆಲ್ಲರ ಚರಿತ್ರ ಶ್ರವಣವು ಧನ, ಯಶಸ್ಸು, ಆಯುಷ್ಯ, ಸ್ವರ್ಗ ಮುಂತಾದ ಉತ್ತಮ ಫಲಗಳನ್ನು ಕೊಡುವುದಲ್ಲದೆ ಶತ್ರುಗಳನ್ನು ನಿಗ್ರಹಮಾಡುವುದು.

ಯಸ್ಮಾತ್ಕಲ್ಪಾಯತೇ ಕಲ್ಪಃ ಸಮಗ್ರಂ ಶುಚಯೇ ಶುಚಿಃ ।
ತಸ್ಮೈ ಹಿರಣ್ಯ ಗರ್ಭಾಯ ಪುರುಷಾಯೇಶ್ವರಾಯ ಚ ॥ ೫ ॥

ಅಜಾಯ ಪ್ರಥಮಾಯೈವ ವರಿಷ್ಠಾಯ ಪ್ರಜಾಸೃಜೇ ।
ಬ್ರಹ್ಮಣೇ ಲೋಕತಂತ್ರಾಯ ನಮಸ್ಕೃತ್ಯ ಸ್ವಯಂಭುವೇ ॥ ೬ ॥

ಮಹದಾದ್ಯಂ ವಿಶೇಷಾಂತಂ ಸವೈರೂಪ್ಯಂ ಸಲಕ್ಷಣಮ್ ।
ಪಂಚಪ್ರಮಾಣಂ ಷಟ್‌ಶ್ರಾಂತಃ ಪುರುಷಾಧಿಷ್ಠಿತಂ ಚ ಯತ್ ॥ ೭ ॥

ಆ ಸಂಯಮಾತ್ಪ್ರವಕ್ಷ್ಯಾಮಿ ಭೂತಸರ್ಗಮನುತ್ತಮಮ್ ।
ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಮ್ ॥ ೮ ॥

ಪ್ರಧಾನಂ ಪ್ರಕೃತಿಂ ಚೈವ ಯಮಾಹುಸ್ತತ್ತ್ವಚಿಂತಕಾಃ ।
ಗಂಧರೂಪರಸೈರ್ಹೀನಂ ಶಬ್ದಸ್ಪರ್ಶವಿವರ್ಜಿತಮ್ ॥ ೯ ॥

ಜಗದ್ಯೋನಿಂ ಮಹಾಭೂತಂ ಪರಂ ಬ್ರಹ್ಮ ಸನಾತನಮ್ ।
ವಿಗ್ರಹಂ ಸರ್ವಭೂತಾನಾಮವ್ಯಕ್ತಮಭವತ್ಕಿಲ ॥ ೧೦ ॥

---

೫-೮. ಲೋಕತತ್ತ್ವಗಳನ್ನು ವಿವರಿಸುವ ಮೊದಲು ಹಿರಣ್ಯಗರ್ಭನನ್ನು ನಮಸ್ಕರಿಸುವೆನು. ಹಿರಣ್ಯಗರ್ಭನಿಂದ ಕಲ್ಪಕಾಲವು ಕಲ್ಪವೆನಿಸಿರುವುದು. ಮತ್ತು ಪವಿತ್ರವಸ್ತುಗಳಿಗೆ ಪಾವಿತ್ರ್ಯವು ಬಂದಿರುವುದು. ಅಂತಹ ಹಿರಣ್ಯಗರ್ಭನು ಪುರುಷ ರೂಪಿಯೂ, ಸಕಲ ಪ್ರಪಂಚ ನಿಯಾಮಕನೂ, ಜನ್ಮರಹಿತನೂ, ಸೃಜ್ಯವಸ್ತು ಗಳೆಲ್ಲಕ್ಕೂ ಮೊದಲನೆಯವನೂ, ಶ್ರೇಷ್ಠನೂ, ಪ್ರಜೆಗಳನ್ನು ಸೃಷ್ಟಿಮಾಡುವವನೂ, ಸಾಕ್ಷಾತ್ತಾಗಿ ಬ್ರಹ್ಮದೇವನೂ ಲೋಕಗಳ ಸೃಷ್ಟಿಯೆಂಬ ತಂತ್ರದಲ್ಲಿ ಮುಳುಗಿದವನೂ ಆಗಿರುವನು. ಇವನನ್ನು ನಮಸ್ಕರಿಸಿ ಲೋಕತತ್ತ್ವಗಳಲ್ಲಿ ಮಹತ್ತತ್ತ್ವ ಮೊದಲಾಗಿ ವಿಕಾರ ಪರ್ಯಂತವಾದ, ಪರಸ್ಪರವಾಗಿ ಸಾಮ್ಯ, ವೈಷಮ್ಯಗಳಿಂದ ಕೂಡಿದ, ಪ್ರತ್ಯಕ್ಷ-ಅನುಮಾನ-ಉಪಮಾನ-ಶಬ್ದ-ಅರ್ಥಾಪತ್ತಿಗಳೆಂಬ ಪಂಚಪ್ರಮಾಣ, ಜನ್ಮಾದಿ ಆರು ವಿಕಾರಗಳ ಶ್ರಾಂತಿಗಳಿಂದ ಕೂಡಿದ ಪುರುಷರೂಪದಿಂದ ನಿಯಮಿಸಲ್ಪಟ್ಟ ಭೂತ ಸೃಷ್ಟಿಯನ್ನು ಪ್ರಲಯ ಪರ್ಯಂತವಾಗಿ ವಿವರಿಸುವೆನು.

೯-೧೧. ಈ ಪ್ರಪಂಚವು ಹುಟ್ಟುವ ಮೊದಲು ಸರ್ಗಾದಿಯಲ್ಲಿ ಅವ್ಯಕ್ತವೆಂಬ ಕಾರಣವು ಇದ್ದಿತೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ. ಆ ಅವ್ಯಕ್ತವು ನಿತ್ಯವಾದುದೂ,

ಅನಾದ್ಯಂತಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭವಾಪ್ಯಯಮ್ ।
ಅಸಾಂಪ್ರತಿಕಮಜ್ಞೇಯಂ ಬ್ರಹ್ಮ ಯತ್ಸದಸತ್ಪರಮ್ ॥ ೧೧ ॥

ತಸ್ಯಾತ್ಮನಾ ಸರ್ವಮಿದಂ ವ್ಯಾಪ್ತಮಾಸೀತ್ತಮೋಮಯಮ್ ।
ಗುಣಸಾಮ್ಯೇ ತದಾ ತಸ್ಮಿನ್ನವಿಭಾತಂ ತಮೋಮಯಮ್ ॥ ೧೨ ॥

ಸರ್ಗಕಾಲೇ ಪ್ರಧಾನಸ್ಯ ಕ್ಷೇತ್ರಜ್ಞಾಧಿಷ್ಠಿತಸ್ಯ ವೈ ।
ಗುಣಭಾವಾದ್ಭಾಸಮಾನೇ ಮಹಾತತ್ತ್ವಂ ಬಭೂವ ಹ ॥ ೧೩ ॥

ಸೂಕ್ಷ್ಮಃ ಸ ತು ಮಹಾನಗ್ರೇ ಅವ್ಯಕ್ತೇನ ಸಮಾವೃತಃ ।
ಸತ್ತ್ವೋದ್ರೇಕೋ ಮಹಾನಗ್ರೇ ಸತ್ತ್ವಮಾತ್ರಪ್ರಕಾಶಕಃ ॥ ೧೪ ॥

---

ವ್ಯಕ್ತ-ಅವ್ಯಕ್ತ-ದಶೆಗಳನ್ನು ಅನುಭವಿಸುವುದೂ ಪ್ರಧಾನ-ಪ್ರಕೃತಿ ಮುಂತಾದ ಶಬ್ದಗಳಿಂದ ಕರೆಯಲ್ಪಡುವುದೂ ಗಂಧ-ರೂಪ-ರಸ-ಶಬ್ದ-ಸ್ಪರ್ಶಗಳೆಂಬ ಭೌತಿಕಗುಣಗಳಿಲ್ಲದುದಾಗಿಯೂ, ಜಗತ್ತಿಗೆಲ್ಲ ಉಪಾದಾನ ಕಾರಣವೂ ಮಹಾಭೂತಗಳೆಲ್ಲಕ್ಕೂ ಆಧಾರಭೂತವಾದುದೂ ಆಗಿರುವುದು. ಮತ್ತು ಆದಿ—ಅಂತಗಳಿಲ್ಲದ್ದೂ, ಜನ್ಮಾದಿ ವಿಕಾರಗಳಿಲ್ಲದುದೂ, ಸೂಕ್ಷ್ಮವೂ, ಗುಣತ್ರಯ ಸಂಘಾತಸ್ವರೂಪವೂ ತನ್ನಿಂದ ಹುಟ್ಟಿದ ಕಾರ್ಯವಸ್ತುಗಳ ಉತ್ಪತ್ತಿ ಲಯಗಳ ಅಧಿಷ್ಠಾನವೂ, ಸನಾತನವೂ, ಗಹನವೂ, ಸತ್ ಅಸತ್ ಎಂಬ ವಿಭಾಗಾವಸ್ಥೆಯುಳ್ಳದ್ದೂ, ಬ್ರಹ್ಮ ವಸ್ತುವಿನಂತೆ ವ್ಯಾಪಕವೂಆಗಿದೆ.

೧೨. ಅಂತಹ ಪ್ರಧಾನವು ಕಾರಣವಾದ್ದರಿಂದ ಸೃಷ್ಟಿಯಲ್ಲಿ ಕಾಣುವ ಕಾರ್ಯವಸ್ತುಗಳೆಲ್ಲವೂ ಪ್ರಧಾನ ಸ್ವರೂಪದಿಂದ ವ್ಯಾಪಿಸಲ್ಪಟ್ಟು ಕತ್ತಲಿನಂತೆ ಗಹನವಾದ ಸ್ವರೂಪದಿಂದಿವೆ. ಸತ್ತ್ವ-ರಜಸ್ಸು-ತಮಸ್ಸು ಎಂಬ ಗುಣಗಳು ಸಮಪರಿಮಾಣವಾದಾಗ ಕಾರ್ಯಜಾಲವು ಲೀನವಾಗಿ ಅದೃಶ್ಯವಾಗುವುದು.

೧೩. ಸೃಷ್ಟಿಪ್ರಾರಂಭದಲ್ಲಿ ಕ್ಷೇತ್ರಜ್ಞನೆಂಬ ಚೇತನಾಂಶದಿಂದ ಪ್ರಧಾನವು ನಿಯಮಿತವಾಗಿ ಆ ಗುಣತ್ರಯಗಳಲ್ಲಿ ಕ್ಷೋಭದಿಂದ ಪರಿಮಾಣ ವೈಷಮ್ಯವು ಹುಟ್ಟಿ ಮೊದಲನೆಯ ಮಹತ್ತತ್ವವೆಂಬ ವಿಕಾರವು ಜನಿಸಿತು.

೧೪-೧೫. ಮಹತ್ತತ್ವವೆಂಬ ವಿಕಾರವು ಅತ್ಯಂತ ಸೂಕ್ಷ್ಮವಾಗಿಯೂ ಕಾರಣವಾದ ಅವ್ಯಕ್ತದಿಂದ ಆವೃತವಾಗಿಯೂ ಆದಿಯಲ್ಲಿ ಜನಿಸಿತು. ಅಲ್ಲಿ ಸಾತ್ತ್ವಿಕವಸ್ತು

**ಸತ್ತ್ವಾನ್ಮಹಾನ್ ಸ ವಿಜ್ಞೇಯ ಏಕಸ್ತತ್ಕಾರಣಃ ಸ್ಮೃತಃ ।**
**ಲಿಂಗಮಾತ್ರಂ ಸಮುತ್ಪನ್ನಂ ಕ್ಷೇತ್ರಜ್ಞಾಧಿಷ್ಠಿತಂ ಮಹತ್ ॥ ೧೫ ॥**

**ಸಂಕಲ್ಪೋಽಧ್ಯವಸಾಯಶ್ಚ ತಸ್ಯ ವೃತ್ತಿದ್ವಯಂ ಸ್ಮೃತಮ್ ।**
**ಮಹಾಸೃಷ್ಟಿಂ ಚ ಕುರುತೇ ವೀತಮಾನಃ ಸಿಸೃಕ್ಷಯಾ ॥ ೧೬ ॥**

**ಧರ್ಮಾದೀನಿ ಚ ಭೂತಾನಿ ಲೋಕತತ್ತ್ವಾರ್ಥಹೇತವಃ ।**
**ಮನೋ ಮಹಾನ್ಮತಿರ್ಬ್ರಹ್ಮಾ ದುರ್ಬುದ್ಧಿಖ್ಯಾತಿರೀಶ್ವರಾತ್ ॥ ೧೭ ॥**

**ಪ್ರಜ್ಞಾಸಂಧಿಶ್ಚ ಸರ್ವಸ್ವಂ ಸಂಖ್ಯಾಯುತನರಶ್ಮಿಭಿಃ ।**
**ಮನುತೇ ಸರ್ವಭೂತಾನಾಂ ತಸ್ಮಾಚ್ಚೇಷ್ಟಫಲೋ ವಿಭುಃ ॥ ೧೮ ॥**

---

ಗಳನ್ನು ಪ್ರಕಾಶಪಡಿಸುವ ಸತ್ತ್ವಗುಣದ ಉದ್ರೇಕವು ಇತ್ತು. ಸತ್ತ್ವಗುಣವು ಅತಿಯಾಗಿ ಸೇರಿದ ವಿಕಾರವಾದ್ದರಿಂದ ಸತ್ತ್ವವೊಂದೇ ಕಾರಣವೆಂದು ಹೇಳುವಂತೆ ಆ ಮಹತ್ತತ್ವವು ಪ್ರಕಾಶಿಸಿತು. ಅದು ಕ್ಷೇತ್ರಜ್ಞನಿಂದ ನಿಯಮಿತವಾಗಿ ಸಂಕಲ್ಪ ಅಧ್ಯವಸಾಯವೆಂಬ ಎರಡು ವೃತ್ತಿಗಳಿಂದ ಸಹಿತವಾದ ತತ್ತ್ವವು.

೧೬. ಅಪರಿಚ್ಛಿನ್ನನಾದ ಪರಮಾತ್ಮನು ಪ್ರಧಾನದಿಂದ ಸೃಷ್ಟಿಯನ್ನು ವಿಸ್ತರಿಸುವ ಇಷ್ಟದಿಂದ ಲೋಕದ ತತ್ತ್ವಕ್ಕೆ ಕಾರಣಗಳಾದ ಧರ್ಮ ಮುಂತಾದ ಸೂಕ್ಷ್ಮವಸ್ತುಗಳನ್ನು ಸೃಷ್ಟಿಸಿ ಮಹಾಸೃಷ್ಟಿಯನ್ನು ನಿರ್ವಹಿಸುವನು.

೧೭. ವಿಭುವಾದ ಪರಮಾತ್ಮನು ಸಮಷ್ಟಿರೂಪದಿಂದ ಮಹತ್ತತ್ತ್ವವನ್ನು ಜನಿಸಿ ಅದರ ವ್ಯಷ್ಟಿರೂಪಗಳಲ್ಲಿ ಮನಸ್ಸು, ಮಹತ್, ಮತಿ, ಅಧೋಗತಿಯನ್ನು ಹೊಂದಿಸುವ ಬುದ್ಧಿವೃತ್ತಿ ಭ್ರಾಂತಿ, ಸಂಧಿಸ್ವರೂಪವಾದ ಪ್ರಜ್ಞೆ, ಸರ್ವಸ್ವ-ಈ ರೂಪಗಳನ್ನು, ರಶ್ಮಿಗಳಿಂದ ಮಾಡುವನಾದ್ದರಿಂದ ಸರ್ವಪ್ರಾಣಿಗಳಲ್ಲಿಯೂ ಬೇರೆ ಬೇರೆಯಾದ ಚೇತನಾಂಶಗಳಿಂದ ಮನನವೃತ್ತಿಯನ್ನು ಸೃಜಿಸಿ ತಾನು ಕೃತಕೃತ್ಯನಾಗುವನು.

೧೮. ಆ ಮನಸ್ಸು ಫಲಾನುಭವದಿಂದ ಕೂಡಿದುದೂ ರಕ್ಷಕವೂ, ಪರಿಚ್ಛಿನ್ನವಾದ ಸ್ವರೂಪವುಳ್ಳದ್ದೂ ಆಗಿ ಮನಸ್ಸೆಂಬ ಹೆಸರನ್ನು ಹೊಂದಿದೆ. ಮುಂದಿನ ಸಕಲ ತತ್ತ್ವಗಳು ಸೂಕ್ಷ್ಮರೂಪದಿಂದ ತನ್ನಲ್ಲಿ ಅಡಗಿರುವುದರಿಂದ ತಾನು ಮಹಾಪರಿಮಾಣದಿಂದ ಕೂಡಿರುವುದರಿಂದ ಮಹತ್ತತ್ತ್ವವೆಂಬ ಸಂಜ್ಞೆಯನ್ನು ಹೊಂದಿದೆ.

ಭೋಕ್ತಾ ತ್ರಾತಾ ವಿಭಕ್ತಾತ್ಮಾ ವರ್ತನಂ ಮನ ಉಚ್ಯತೇ ।
ತತ್ತ್ವಾನಾಂ ಸಂಗ್ರಹೋ ಯಸ್ಮಾನ್ಮಹಾಂಶ್ಚ ಪರಿಮಾಣತಃ ॥ ೧೯ ॥

ಶೇಷೇಭ್ಯೋ ಗುಣತತ್ತ್ವೇಭ್ಯೋ ಮಹಾನಿವ ತನುಃ ಸ್ಮೃತಃ ।
ವಿಭಕ್ತಿಮಾನಂ ಮನುತೇ ವಿಭಾಗಂ ಮನ್ಯತೇಽಪಿ ವಾ ॥ ೨೦ ॥

ಪುರುಷೋ ಭೋಗಸಂಬಂಧಾತ್ತೇನ ಚಾಸೌ ಸತಿ ಸ್ಮೃತಃ ।
ಬೃಹತ್ತ್ವಾದ್ಬೃಂಹಣತ್ವಾಚ್ಚ ಭಾವಾನಾಮಖಿಲಾಶ್ರಯಾತ್ ॥ ೨೧ ॥

ಯಸ್ಮಾದ್ಬೃಂಹಯತೇ ಭಾವಾನ್ ಬ್ರಹ್ಮಾ ತೇನ ನಿರುಚ್ಯತೇ ।
ಆಪೂರಯತಿ ಯಸ್ಮಾಚ್ಚ ಸರ್ವಾನ್ ದೇವಾನನುಗ್ರಹೈಃ ॥ ೨೨ ॥

ಬುಧ್ಯತೇ ಪುರುಷಶ್ಚಾತ್ರ ಸರ್ವಾನ್ ಭಾವಾನ್ ಪೃಥಕ್ಪೃಥಕ್ ।
ತಸ್ಮಿಂಸ್ತು ಕಾರ್ಯಕರಣಂ ಸಂಸಿದ್ಧಂ ಬ್ರಹ್ಮಣಃ ಪುರಾ ॥ ೨೩ ॥

---

೧೯. ಸರ್ವಸಮಷ್ಟಿರೂಪವಾದ ಈ ತತ್ತ್ವವು ಔಪಾಧಿಕವಾದ ಭೋಕ್ತೃತ್ವಾದಿ ಧರ್ಮಗಳ ಸಂಪರ್ಕದಿಂದ "ಭೋಕ್ತಾ, ತ್ರಾತಾ" ಮುಂತಾದ ಅನೇಕ ಬಗೆಯ ವ್ಯವಹಾರಕ್ಕೆ ಭಾಗಿಯಾಗಿದೆ.

೨೦. ಮಿಕ್ಕಾದ ಎಲ್ಲ ಗುಣತತ್ತ್ವಗಳಿಗಿಂತ ಈ ತತ್ತ್ವದ ಆಕಾರವು ಬಲು ದೊಡ್ಡದು. ಇದು ತನ್ನ ಪರಿಮಾಣ ವಿಭಾಗ-ಅಥವಾ ತನ್ನ ಸ್ವರೂಪ ವಿಭಾಗವನ್ನು ಅರಿತಿದೆ, ಇದರ ಸತ್ತೆಯಿಂದ ಪುರುಷನು ಭೋಗಿಯಾಗುವನು.

೨೧. ಇದಕ್ಕೆ ಬ್ರಹ್ಮ ಎಂಬ ಹೆಸರು ಅನ್ವರ್ಥವಾದುದು. ಬೃಹ್ ಎಂಬ ಧಾತುವು ದೊಡ್ಡದು ಅಥವಾ ಪೋಷಣ ಎಂಬ ಅರ್ಥವನ್ನು ಬೋಧಿಸುವುದು. ನಿಖಿಲ ಭಾವ ವಸ್ತುಗಳಿಗೆ ಆಧಾರವಾಗಿ ಪರಿಪೋಷಿಸುವುದಾದ್ದರಿಂದ ಇದು ಬ್ರಹ್ಮ.

೨೨. ಯಾವ ಕಾರಣದಿಂದ ಸಕಲೇಂದ್ರಿಯಗಳನ್ನು ಅನುಗ್ರಹಿಸಿ ಅವುಗಳನ್ನು ತನ್ನ ಅಂಶದಿಂದ ತುಂಬಿಕೊಂಡು, ಸರ್ವಭಾವಗಳನ್ನೂ ಬೇರೆ ಬೇರೆ ರೂಪದಿಂದ ಅರಿತಿರುವುದೋ, ಅದರಿಂದ ಪುರುಷ ಶಬ್ದದಿಂದಲೂ ಕರೆಯಲರ್ಹವು.

೨೩. ಆ ತತ್ತ್ವದಲ್ಲಿ ಕಾರ್ಯಕರಣ ಸಂಘಾತವು ಸಮಷ್ಟಿ ರೂಪದಿಂದ ಮೊದಲು ಸೃಷ್ಟಿಯಾದುದರಿಂದ ಪ್ರಥಮ ಶರೀರಿಯಾದ, ಬ್ರಹ್ಮ ವಸ್ತು ತುಲ್ಯನಾದ ಕ್ಷೇತ್ರಜ್ಞನು ಪ್ರಕೃತಿಯ ಮೊದಲನೆಯ ಶ್ರೇಷ್ಠ ವಿಕಾರವು.

ಪ್ರಾಕೃತಂ ದೇವಿ ವರ್ತಂ ಮಾಂ ಕ್ಷೇತ್ರಜ್ಞೋ ಬ್ರಹ್ಮಸಂಮಿತಃ ।
ಸ ವೈ ಶರೀರೀ ಪ್ರಥಮಃ ಪುರಾ ಪುರುಷ ಉಚ್ಯತೇ ॥ ೨೪ ॥

ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತಿನಾಮ್ ।
ಹಿರಣ್ಯಗರ್ಭಃ ಸೋಂಡೇಸ್ಮಿನ್ ಪ್ರಾದುರ್ಭೂತಶ್ಚತುರ್ಮುಖಃ ॥ ೨೫ ॥

ಸರ್ಗೇ ಚ ಪ್ರತಿಸರ್ಗೇ ಚ ಕ್ಷೇತ್ರಜ್ಞೋ ಬ್ರಹ್ಮಸಮ್ಮಿತಃ ।
ಕರಣೈಃ ಸಹ ಪೃಚ್ಛಂತೇ ಪ್ರತ್ಯಾಹಾರೈಸ್ತ್ಯಜಂತಿ ಚ ॥ ೨೬ ॥

ಭಜಂತೇ ಚ ಪುನರ್ದೇಹಾಂಸ್ತೇ ಸಮಾಹಾರಸಂಧಿಷು ।
ಹಿರಣ್ಮಯಸ್ತು ಯೋ ಮೇರುಸ್ತಸ್ಯೋದ್ಧರ್ತುರ್ಮಹಾತ್ಮನಃ ॥ ೨೭ ॥

ಗರ್ತೋದಕಂ ಸಂಬುದಾಸ್ತು ಹರೇಯುಶ್ಚಾಪಿ ಪಂಚತಾಃ ।
ಯಸ್ಮಿನ್ನಂಡ ಇಮೇ ಲೋಕಾಸ್ಸಪ್ತ ವೈ ಸಂಪ್ರತಿಷ್ಠಿತಾಃ ॥ ೨೮ ॥

---

೨೪. ಈಗಿರುವ ಸಮಸ್ತ ಶರೀರಿ ಮತ್ತು ಅಧಿಕಾರಿಕರಾದ ಶ್ರೇಷ್ಠ ಚೇತನರಿಗೆ ಪ್ರಥಮನಾದ ಶರೀರಿಯಾಗಿಯೂ ಪೂರ್ಣರೂಪದಿಂದ ಪುರುಷಸ್ವರೂಪನಾಗಿಯೂ ಭೂತಗಳಿಗೆ ಆದಿಕರ್ತೃವಾಗಿಯೂ ಇರುವ ಬ್ರಹ್ಮನು ಈ ತತ್ತ್ವರೂಪದಿಂದ ಮೊದಲು ಜನಿಸಿದನು.

೨೫. ಮತ್ತು ಬ್ರಹ್ಮಾಂಡವೆಂಬ ಮೊಟ್ಟೆಯಲ್ಲಿ ನಾಲ್ಕು ಮುಖಗಳಿಂದ ಕೂಡಿದ ಹಿರಣ್ಯಗರ್ಭನು ಸೃಷ್ಟಿ-ಪ್ರಲಯಕಾಲಗಳಲ್ಲಿ ಪರಮಾತ್ಮ ಸಮಾನನಾದ ಕ್ಷೇತ್ರಜ್ಞನಾಗಿ ಜನಿಸಿದನು.

೨೬. ಹೀಗೆ ಅನೇಕ ಪುರುಷರು ಕರಣಗಳನ್ನು ಪರಿಗ್ರಹಿಸುವುದು, ಅವುಗಳನ್ನು ಉಪಸಂಹರಿಸಿ ತ್ಯಜಿಸುವುದು. ಮತ್ತು ಕಲ್ಪಗಳ ಸಂಧಿಗಳಲ್ಲಿ ಮತ್ತೆ ದೇಹಗಳನ್ನು ಧರಿಸುವುದು ಹೀಗೆ ಕ್ರಿಯಾ ವೃತ್ತಿಯನ್ನೇ ಮಾಡುವರು.

೨೭. ಈ ಬ್ರಹ್ಮಾಂಡದಲ್ಲಿ ಸುವರ್ಣಮಯವಾದ ಮೇರು ಪರ್ವತವು ಪ್ರಸಿದ್ಧವಾಗಿದೆ. ಅದು ಅಂಡದಿಂದ ಜನಿಸಿದ ವಸ್ತು. ಆ ಅಂಡರೂಪಿಯಾದ, ಮಹಾತ್ಮನಾದ ಬ್ರಹ್ಮನಿಗೆ ಆಧಾರವಾದ ಗಂಭೀರ ಜಲಾಶಯದ ನೀರು ಮತ್ತು ನೊರೆಗಳು ಮರಣವನ್ನು ಅಪಹರಿಸುವುವು.

೨೮. ಯಾವ ಈ ಬ್ರಹ್ಮಾಂಡದಲ್ಲಿ ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯವೆಂಬ ಸಪ್ತಲೋಕಗಳು ಪ್ರತಿಷ್ಠಿಸಿರುವುವೋ, ಅಂತಹ ಬ್ರಹ್ಮಾಂಡದಲ್ಲಿ

**ಪೃಥಿವೀ ಸಪ್ತಭಿರ್ದ್ವೀಪೈಃ ಸಮುದ್ರೈಸ್ಸಹ ಸಪ್ತಭಿಃ ।**
**ಪರ್ವತೈಃ ಸುಮಹದ್ಭಿಶ್ಚ ನದೀಭಿಶ್ಚ ಸಹಸ್ರಶಃ ॥ ೨೯ ॥**

**ಅಂತಃಸ್ಥಸ್ಯ ತ್ವಿಮೇ ಲೋಕಾ ಅಂತರ್ವಿಶ್ವಮಿದಂ ಜಗತ್ ।**
**ಚಂದ್ರಾದಿತ್ಯೌ ಸನಕ್ಷತ್ರೌ ಸಂಗ್ರಹಃ ಸಹ ವಾಯುನಾ ॥ ೩೦ ॥**

**ಲೋಕಾಲೋಕಂ ಚ ಯತ್ಕಿಂಚಿದಂಡೇ ತಸ್ಮಿನ್ ಪ್ರತಿಷ್ಠಿತಮ್ ।**
**ಆಪೋ ದಶಗುಣೇನೈವ ತೇಜಸಾ ಬಾಹ್ಯತೋ ವೃತಾಃ ॥ ೩೧ ॥**

**ತೇಜೋ ದಶಗುಣೇನೈವ ಬಾಹ್ಯತೋ ವಾಯುನಾ ವೃತಮ್ ।**
**ವಾಯುರ್ದಶಗುಣೇನೈವ ಬಾಹ್ಯತೋ ನಭಸಾ ವೃತಃ ॥ ೩೨ ॥**

**ಆಕಾಶಮಾವೃತಂ ಸರ್ವಂ ಬಹಿರ್ಭೂತಾದಿನಾ ತಥಾ ।**
**ಭೂತಾದಿರ್ಮಹತಾ ಚೈವ ಪ್ರಧಾನೇನಾವೃತೋ ಮಹಾನ್ ॥ ೩೩ ॥**

---

ಸಪ್ತದ್ವೀಪ-ಸಪ್ತಸಮುದ್ರ- ಮಹಾಪರ್ವತ-ಮತ್ತು ಸಾವಿರಾರು ಮಹಾನದೀ ಇವುಗಳಿಂದ ಕೂಡಿದ ಪೃಥಿವಿಯು ಅಡಗಿದೆ.

೨೯-೩೦. ಈ ಕಾಣಿಸುವ ಸಕಲ ಲೋಕಗಳೂ, ವಿಶ್ವವೂ, ಚಂದ್ರ-ಸೂರ್ಯ. ನಕ್ಷತ್ರಗಳೂ, ವಾಯುವೂ ಲೋಕಾಲೋಕ ಪರ್ವತವೂ ಸಕಲ ವಸ್ತುಗಳೂ ಕೂಡ ಆದಿಯಲ್ಲಿದ್ದ ಬ್ರಹ್ಮಾಂಡದಲ್ಲಿ ಪ್ರತಿಷ್ಠೆಯನ್ನು ಹೊಂದಿತ್ತು.

೩೧-೩೨. ಇಂತಹ ಪೃಥಿವೀಭೂತಕ್ಕೆ ದಶಗುಣ (ಹತ್ತರಷ್ಟು) ನೀರಿನ ಆವರಣ, ಜಲಕ್ಕೆ ದಶಗುಣ ತೇಜಸ್ಸು, ತೇಜಸ್ಸಿಗೆ ದಶಗುಣಿತ ವಾಯು, ವಾಯುವಿಗೆ ದಶಗುಣಿತವಾದ ನಭಸ್ಸು, ಆ ನಭಸ್ಸಿಗೆ ಅಹಂಕಾರ, ಅಹಂಕಾರಕ್ಕೆ ಮಹತ್ತತ್ತ್ವ, ಮಹತ್ತತ್ತ್ವಕ್ಕೆ ಪ್ರಧಾನ, ಈ ರೀತಿಯಾಗಿ ಒಂದಕ್ಕೆ ಮತ್ತೊಂದು ದಶಗುಣ ಪರಿಮಾಣದ ಹೊರಭಾಗದ ವಲಯದ ಆವರಣ ರೂಪವಾಗಿದ್ದವು.

೩೩. ಪ್ರಕೃತಿಯಿಂದ ಹುಟ್ಟಿದ ಏಳು ಆವರಣಗಳಿಂದ ಅಂಡವು ವ್ಯಾಪಿಸಲ್ಪಟ್ಟಿತ್ತು. ಪರಮಾತ್ಮನ ಸಂಕಲ್ಪಾನುಗುಣವಾಗಿ ಇವೆಲ್ಲವೂ ಪರಸ್ಪರಾವಲಂಬನೆಯಿಂದ ಇರುವುದಲ್ಲದೆ ಸೃಷ್ಟಿ ಕಾಲದಲ್ಲಿ ಸ್ಥಿತಿಯನ್ನೂ ಪ್ರಲಯದಲ್ಲಿ ಒಂದನ್ನೊಂದು ಗ್ರಾಸಮಾಡಿ ಲಯವನ್ನೂ ಮಾಡುತ್ತಲಿರುವುವು.

**ಏಭಿರಾವರಣೈರಂಡಂ ಸಪ್ತಭಿಃ ಪ್ರಾಕೃತೈರ್ವೃತಮ್ ।**
**ಇಚ್ಛಯಾ ವೃತ್ಯ ಚಾನ್ಯೋನ್ಯಮರಣೇ ಪ್ರಕೃತಯಃ ಸ್ಥಿತಾಃ ॥ ೩೪ ॥**

**ಪ್ರಸರ್ಗಕಾಲೇ ಸ್ಥಿತ್ವಾ ಚ ಗ್ರಸಂತಶ್ಚ ಪರಸ್ಪರಮ್ ।**
**ಏವಂ ಪರಸ್ಪರೈಶ್ಚೈವ ಧಾರಯಂತಿ ಪರಸ್ಪರಮ್ ॥ ೩೫ ॥**

**ಆಧಾರಾಧೇಯಭಾವೇನ ವಿಕಾರಾಸ್ತೇ ವಿಕಾರಿಷು ।**
**ಅವ್ಯಕ್ತಂ ಕ್ಷೇತ್ರಮಿತ್ಯುಕ್ತಂ ಬ್ರಹ್ಮ ಕ್ಷೇತ್ರಜ್ಞಮುಚ್ಯತೇ ॥ ೩೬ ॥**

**ಇತ್ಯೇವಂ ಪ್ರಾಕೃತಃ ಸರ್ಗಃ ಕ್ಷೇತ್ರಜ್ಞಾಧಿಷ್ಠಿತಸ್ತು ಸಃ ।**
**ಅಬುದ್ಧಿಪೂರ್ವಃ ಪ್ರಥಮಃ ಪ್ರಾದುರ್ಭೂತಸ್ತಡಿದ್ಯಥಾ ॥ ೩೭ ॥**

**ಏತದ್ಧಿರಣ್ಯಗರ್ಭಸ್ಯ ಜನ್ಮ ಯೋ ವೇತ್ತಿ ತತ್ತ್ವತಃ ।**
**ಆಯುಷ್ಮಾನ್ ಕೀರ್ತಿಮಾನ್ ಧನ್ಯಃ ಪ್ರಜ್ಞಾವಾಂಶ್ಚ ನ ಸಂಶಯಃ॥ ೩೮ ॥**

**ಇತಿ ತೃತೀಯೋಽಧ್ಯಾಯಃ ಸಮಾಪ್ತಃ.**

---

೩೪. ಹೀಗೆ ಹುಟ್ಟಿದ ಪ್ರತಿಯೊಂದು ವಿಕಾರವು ಅನ್ಯೋನ್ಯ ಅವಲಂಬನದಿಂದ ಒಂದನ್ನೊಂದು ಧರಿಸುವುವು. ಆದ್ದರಿಂದ ವಿಕಾರ ವಸ್ತುಗಳಿಗೆ ಕಾರಣವಾದ ವಿಕಾರಿ ತತ್ತ್ವಗಳಲ್ಲಿ ವಿಕಾರವಸ್ತುಗಳು ಆಧಾರ–ಆಧೇಯಭಾವದಿಂದ ಇವೆ.

೩೬. ಮೂಲ ಬೀಜ ರೂಪವಾದ ಅವ್ಯಕ್ತವನ್ನು ಕ್ಷೇತ್ರವೆಂದೂ ಬ್ರಹ್ಮವಸ್ತುವನ್ನು ಕ್ಷೇತ್ರಜ್ಞವೆಂದೂ ಹೇಳುವರು.

೩೫. ಕ್ಷೇತ್ರಜ್ಞನ ಅಧಿಷ್ಠಾನದಿಂದ ಪ್ರೇರಿತವಾದ ಪ್ರಕೃತಿಯಿಂದ ಅಬುದ್ಧಿಪೂರ್ವಕವಾದ ಮೊದಲನೆಯ ಈ ಸೃಷ್ಟಿಯು ಮೋಡದಲ್ಲಿ ಮಿಂಚು ಹುಟ್ಟುವಂತೆ ಪ್ರಾದುರ್ಭವಿಸಿತು.

೩೭. ಹಿರಣ್ಯಗರ್ಭನ ಈ ಜನ್ಮವನ್ನು ಇಲ್ಲಿ ವಿವರಿಸುವ ರೀತಿಯಲ್ಲಿ ತಾತ್ತ್ವಿಕವಾಗಿ ತಿಳಿಯುವ ಪುರುಷನು, ಆಯುಷ್ಯ-ಧನ-ಪ್ರಜ್ಞೆ ಮುಂತಾದ ಮಹಾ ಫಲಗಳಿಗೆ ಭಾಗಿಯಾಗುವನು.

ಬ್ರಹ್ಮಾಂಡ ಪುರಾಣದಲ್ಲಿ ತೃತೀಯಾಧ್ಯಾಯವು ಸಮಾಪ್ತವು.

# ಚತುರ್ಥೋಽಧ್ಯಾಯಃ

**ಸೂತ ಉವಾಚ—**

**ಆತ್ಮನ್ಯವಸ್ಥಿತೇಽವ್ಯಕ್ತೇ ವಿಕಾರೇ ಪ್ರತಿಸಂಹೃತೇ ।**
**ಸಾಧರ್ಮ್ಯೇಣಾವತಿಷ್ಠೇತೇ ಪ್ರಧಾನಪುರುಷೌ ತದಾ ॥ ೧ ॥**

**ತಮಃಸತ್ತ್ವಗುಣಾವೇತೌ ಸಮತ್ವೇನ ವ್ಯವಸ್ಥಿತೌ ।**
**ಅನುದ್ರಿಕ್ತಾವನುಚರೌ ತೇನ ಪ್ರೋಕ್ತೌ ಪರಸ್ಪರಮ್ ॥ ೨ ॥**

**ಗುಣಸಾಮ್ಯೇ ಲಯೋ ಜ್ಞೇಯ ಆಧಿಕ್ಯೇ ಸೃಷ್ಟಿರುಚ್ಯತೇ ।**
**ಸತ್ತ್ವವೃದ್ಧೌ ಸ್ಥಿತಿರಭೂದ್ ಧ್ರುವಂ ಪದ್ಮಶಿಖಾಸ್ಥಿತಮ್ ॥ ೩ ॥**

**ಯದಾ ತಮಸಿ ಸತ್ತ್ವೇ ಚ ರಜೋಽಪ್ಯನುಗತಂ ಸ್ಥಿತಮ್ ।**
**ರಜಃ ಪ್ರವರ್ತಕಂ ತಚ್ಚ ಬೀಜೇಷ್ವಿವ ಯಥಾಜಲಮ್ ॥ ೪ ॥**

---

೧. ಸೂತ ಮಹರ್ಷಿಯಿಂತೆಂದನು :—ಪ್ರಲಯಕಾಲದಲ್ಲಿ ವಿಕಾರಗಳೆಲ್ಲವೂ ಲಯಹೊಂದಿ ಆತ್ಮಾಧೀನವಾಗಿ ಅವ್ಯಕ್ತತತ್ತ್ವ ಮಾತ್ರ ಉಳಿದಿರುವುದರಿಂದ ಆ ಪ್ರಧಾನ, ಪುರುಷರು ಸಾಮ್ಯದಿಂದಿರುವರು.

೨. ಆಗ ಪ್ರಧಾನದ ಅವಯವಗಳಾದ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳು ಉದ್ರೇಕವಿಲ್ಲದೇ ಒಂದನ್ನೊಂದು ಹೊಂದಿಕೊಂಡು ಸಮಪರಿಮಾಣದಿಂದ ಇರುವುವು.

೩. ಈ ರೀತಿಯಾಗಿ ಗುಣಗಳು ಸಾಮ್ಯದಿಂದಿರುವಾಗ ಸಮಸ್ತ ಭೂತಲಯವೂ ಅದರಲ್ಲಿ ನ್ಯೂನಾಧಿಕ ಭಾವದಿಂದ ವೈಷಮ್ಯವು ಬಂದರೆ ಸೃಷ್ಟಿಯೂ ಆಗುವುವು. ಸತ್ತ್ವಗುಣದ ವೃದ್ಧಿಯು ಪದ್ಮಶಿಖಾಗ್ರದಂತೆ ಸೂಕ್ಷ್ಮವಾದ ಮತ್ತು ಚಂಚಲವಾದ ವಸ್ತುವನ್ನು ಕೂಡ ಶಾಶ್ವತವಾಗುವಂತೆ ಸ್ಥಿತಿಯನ್ನುಂಟುಮಾಡುವುದು.

೪. ಯಾವಾಗ ತಮಸ್ಸು, ಸತ್ತ್ವಗುಣಗಳ ಮುಂದೆ ರಜೋಗುಣವು ನಿಂತು ತನ್ನ ಪ್ರಭಾವವನ್ನು ಬೀರುವುದೋ ಆಗ ನೀರು ಬೀಜದಲ್ಲಿ ಸೇರಿ ಅಂಕುರವನ್ನು ಪ್ರೇರೇಪಿಸಿದಂತೆ ಪ್ರವೃತ್ತಿಯನ್ನುಂಟುಮಾಡುವುದು.

**ಗುಣಾನ್ವೈಷಮ್ಯಮಾಸಾದ್ಯ ಪ್ರಸಂಗೇನ ಪ್ರತಿಷ್ಠಿತಾಃ ।**
**ಗುಣೇಭ್ಯಃ ಕ್ಷೋಭ್ಯಮಾಣೇಭ್ಯಃ ತ್ರಯೋ ಜ್ಞೇಯಾಪಿ ಸಾದರೇ ॥ ೫ ॥**

**ಶಾಶ್ವತಾಃ ಪರಮಾ ಗುಹ್ಯಾಃ ಸರ್ವಾತ್ಮಾನಃ ಶರೀರಿಣಃ ।**
**ಸತ್ತ್ವಂ ವಿಷ್ಣೂ ರಜೋ ಬ್ರಹ್ಮಾ ತಮೋ ರುದ್ರಃ ಪ್ರಜಾಪತಿಃ ॥ ೬ ॥**

**ರಜಃಪ್ರಕಾಶಕೋ ವಿಷ್ಣುರ್ಬ್ರಹ್ಮಸ್ರಷ್ಟೃತ್ವಮಾಪ್ನುಯಾತ್ ।**
**ಜಾಯತೇ ಚ ಯತಶ್ಚಿತ್ರಾ ಲೋಕಸೃಷ್ಟಿರ್ಮಹೌಜಸಃ ॥ ೭ ॥**

**ತಮಃಪ್ರಕಾಶಕೋ ವಿಷ್ಣುಃ ಕಾಲತ್ವೇನ ವ್ಯವಸ್ಥಿತಃ ।**
**ಸತ್ತ್ವಪ್ರಕಾಶಕೋ ವಿಷ್ಣುಃ ಸ್ಥಿತಿತ್ವೇನ ವ್ಯವಸ್ಥಿತಃ ॥ ೮ ॥**

**ಏತ ಏವ ತ್ರಯೋ ಲೋಕಾ ಏತ ಏವ ತ್ರಯೋ ಗುಣಾಃ ।**
**ಏತ ಏವ ತ್ರಯೋ ವೇದಾ ಏತ ಏವ ತ್ರಯೋಽಗ್ನಯಃ ॥ ೯ ॥**

---

೫. ಸಮಭಾವದಿಂದಿದ್ದ ಗುಣಗಳು ಸೃಷ್ಟಿ ಪ್ರಸಂಗದಲ್ಲಿ ವೈಷಮ್ಯವನ್ನು ಹೊಂದಿ ಆ ಗುಣಕ್ಷೋಭದಿಂದ ಒಂದೊಂದುಗುಣದ ಆಧಿಕ್ಯನಿಮಿತ್ತದಿಂದ ತ್ರಿಮೂರ್ತಿಗಳು ಹುಟ್ಟುವರು.

೬. ಈ ತ್ರಿಮೂರ್ತಿಗಳು ಶಾಶ್ವತರೂ ಶ್ರೇಷ್ಠರೂ ಅರಿಯದ ಜನರಿಗೆ ಗೂಢ ರೂಪರೂ ಸರ್ವಾತ್ಮಕ ದೇಹಧಾರಿಗಳೂ ಆಗಿರುವರು. ವಿಷ್ಣುವಿಗೆ ಸತ್ತ್ವಗುಣ, ಬ್ರಹ್ಮನಿಗೆ ರಜೋಗುಣ, ರುದ್ರನಿಗೆ ತಮೋಗುಣ-ಈ ರೀತಿಯಲ್ಲಿ ಒಂದೊಂದು ಮೂರ್ತಿಯಲ್ಲಿ ಒಂದೊಂದು ಗುಣವು ಉಪಾಧಿಯು.

೭. ತ್ರಿಮೂರ್ತಿಗಳಲ್ಲಿ ಅಂತರ್ಯಾಮಿ ಪರಮಾತ್ಮನೊಬ್ಬನೇ ಇರುವನು. ರಜೋಗುಣವನ್ನು ಪ್ರಕಾಶಪಡಿಸಿದಾಗ ವಿಚಿತ್ರ ಲೋಕ ಸೃಷ್ಟಿಯನ್ನು ನಿರ್ವಹಿಸುವ ಮಹಾಬಲಶಾಲಿಯಾದ ಬ್ರಹ್ಮನಾಗಿ ಅಧಿಕಾರವನ್ನು ನಿರ್ವಹಿಸುವನು.

೮. ಅದೇ ರೀತಿಯಲ್ಲಿ ತಮೋಗುಣವನ್ನು ಪ್ರಕಾಶಪಡಿಸುವಾಗ ಸಂಹಾರ ನಿರ್ವಾಹಕನಾದ ರುದ್ರನೂ ಸತ್ತ್ವಗುಣ ಪ್ರಕಾಶದಿಂದ ಸ್ಥಿತಿ ವ್ಯವಸ್ಥಾಪಕನಾದ ವಿಷ್ಣುವೂ ಆಗುವನು.

೯. ಲೋಕದಲ್ಲಿ ವಸ್ತುತ್ರಯ ರೂಪದಿಂದಿರುವ ಸಂಘಾತಗಳಲ್ಲಿ ಲೋಕತ್ರಯ ಗುಣತ್ರಯ, ವೇದತ್ರಯ, ಅಗ್ನಿತ್ರಯ ಇವೆಲ್ಲವೂ ತ್ರಿಮೂರ್ತಿ ಸ್ವರೂಪವಾದುವು.

**ಪರಸ್ಪರಾನ್ವಯಾಹ್ಯೇತೇ ಪರಸ್ಪರಮನುವ್ರತಾಃ ।**
**ಪರಸ್ಪರೇಣ ವರ್ತಂತೇ ಪ್ರೇರಯಂತಿ ಪರಸ್ಪರಮ್ ॥ ೧೦ ॥**

**ಅನ್ಯೋನ್ಯಂ ಮಿಥುನಂ ಹ್ಯೇತೇ ಅನ್ಯೋನ್ಯಮುಪಜೀವಿನಃ ।**
**ಕ್ಷಣಂ ವಿಯೋಗೋ ನ ಹ್ಯೇಷಾಂ ನ ತ್ಯಜಂತಿ ಪರಸ್ಪರಮ್ ॥ ೧೧ ॥**

**ಪ್ರಧಾನಗುಣವೈಷಮ್ಯಾತ್ಸರ್ಗಕಾಲೇ ಪ್ರವರ್ತತೇ ।**
**ಅದೃಷ್ಟಾಧಿಷ್ಠಿತಾತ್ಪೂರ್ವೇ ತಸ್ಮಾತ್ಸದಸದಾತ್ಮಕಾತ್ ॥ ೧೨ ॥**

**ಬ್ರಹ್ಮಾಬುದ್ಧಿಸ್ತನ್ಮಿಥುನಂ ಯುಗಪತ್ಸಂಬಭೂವ ಹ ।**
**ತಸ್ಮಾತ್ತಮೋಽವ್ಯಕ್ತಮಯಂ ಕ್ಷೇತ್ರಜ್ಞೋ ಬ್ರಹ್ಮಸಂಜ್ಞಕಃ ॥ ೧೩ ॥**

**ಸಂಸಿದ್ಧಕಾರ್ಯಕರಣೋ ಬ್ರಹ್ಮಾಗ್ರೇ ಸಮವರ್ತತ ।**
**ತೇಜಸಾಽಪ್ರತಿಮೋ ಧೀಮಾನವ್ಯಕ್ತಃ ಸಂಪ್ರಕಾಶಕಃ ॥ ೧೪ ॥**

---

೧೦. ಈ ತ್ರಿಮೂರ್ತಿಗಳು ಒಬ್ಬರನ್ನೊಬ್ಬರು ಆಶ್ರಯಿಸಿದವರೂ ಪರಸ್ಪರಾನುಗ್ರಹವುಳ್ಳವರೂ ಆಗಿ ತಮ್ಮ ತಮ್ಮ ಕಾರ್ಯಗಳಲ್ಲಿ ಪರಸ್ಪರ ಪ್ರೇರೇಪಣೆ ಮಾಡುತ್ತ ಅನುಕೂಲಭಾವದಿಂದಿರುವರು.

೧೧. ಇವರೆಲ್ಲರೂ ಒಬ್ಬಬ್ಬರನ್ನೂ ಒಳಗೊಂಡಿರುವ, ಮತ್ತು ಅನ್ಯೋನ್ಯ ಆಲಂಬನವನ್ನು ಉಪಜೀವಿಸುವ ಒಂದು ಜೊತೆಯಾಗಿರುವರು. ಇವರಿಗೆ ಕ್ಷಣಕಾಲ ಮಾತ್ರವೂ ವಿಯೋಗವಿಲ್ಲ. ಒಬ್ಬರನ್ನೊಬ್ಬರು ಅಗಲುವ ಸ್ವಭಾವವುಳ್ಳವರಲ್ಲ.

೧೨. ಪ್ರಧಾನದ ಗುಣಗಳ ವೈಷಮ್ಯದಿಂದ ಸೃಜ್ಯವಸ್ತುಗಳ ಅದೃಷ್ಟ ಪರಿಪಾಕದಿಂದ ವ್ಯಕ್ತಾವ್ಯಕ್ತ ರೂಪಗಳಿಂದ ಕೂಡಿದ ಪ್ರಕೃತಿಯಿಂದ ಸೃಷ್ಟಿಕಾಲದಲ್ಲಿ ಈ ಮಿಥುನವು ಏರ್ಪಡುವುದು.

೧೩. ಪ್ರಕೃತಿಯ ಗುಣಾಧಿಕ್ಯವುಳ್ಳ ಒಂದು ರೂಪವಾದ ಬುದ್ಧಿಯೂ, ಮತ್ತು ಬ್ರಹ್ಮ ಎಂಬ ತತ್ತ್ವವೂ ಸೇರಿ ಮಿಥುನವಾಗಿ ಒಂದೇಸಲ ಜನಿಸುವುದು. ಆ ಮಿಥುನದಲ್ಲಿ ಜಡವಾದ ಪ್ರಧಾನವು ಅವ್ಯಕ್ತವೆಂದೂ ಚೇತನವು ಕ್ಷೇತ್ರಜ್ಞನೆಂದೂ ಕರೆಯಲ್ಪಡುವುದು.

೧೪. ಹೀಗೆ ಮೊದಲು ಹುಟ್ಟಿದ ಬ್ರಹ್ಮನು ದೇಹೇಂದ್ರಿಯ ಸಂಘಾತಸಿದಿ

**ಸ ವೈ ಶರೀರಪ್ರಥಮೋ ಧಾರಣತ್ವವ್ಯವಸ್ಥಿತಃ ।**
**ಜ್ಞಾನೇನಾಪ್ರತಿಮೋನೇಹ ವೈರಾಗ್ಯೇಣ ಚ ಸತ್ಪತಿಃ ॥ ೧೫ ॥**

**ಅವ್ಯಕ್ತತ್ವಾಯತೇನಾಸ್ಯ ಮನಸಾ ಯದ್ಯದಿಚ್ಛತಿ ।**
**ವಶೀಕೃತತ್ವಾತ್ತ್ರೈಗುಣ್ಯಾತ್ಸಾಪೇಕ್ಷತ್ವಾಚ್ಚ ಭಾವತಃ ॥ ೧೬ ॥**

**ಚತುರ್ಮುಖಸ್ತು ಬ್ರಹ್ಮತ್ವೇ ಕಾಲತ್ವೇ ಚಾಂತಕೃದ್ಭವಃ ।**
**ಸಹಸ್ರಮೂರ್ಧಾ ಪುರುಷಸ್ತಿಸ್ರೋವಸ್ಥಾಃ ಸ್ವಯಂಭುವಃ ॥ ೧೭ ॥**

**ಸರ್ಗಂ ರಜಶ್ಚ ಬ್ರಹ್ಮತ್ವೇ ಕಾಲತ್ವೇ ಚ ರಜಸ್ತಮಃ ।**
**ಸಾತ್ತ್ವಿಕಃ ಪುರುಷತ್ವೇ ಚ ಗುಣವೃತ್ತಂ ಸಂಯಂಭುವಃ ॥ ೧೮ ॥**

---

ಯುಳ್ಳವನೂ ನಿರುಪಮತೇಜಸ್ವಿಯೂ ಪ್ರಜ್ಞಾವಂತನೂ ಸೂಕ್ಷ್ಮನೂ ಮತ್ತು ಪರ ಪ್ರಕಾಶಕನೂ ಆಗಿರುವನು.

೧೫. ಶರೀರ ಧಾರಕ ಚೇತನವರ್ಗದಲ್ಲಿ ಮೊದಲನೆಯವನಾದ ಆ ಬ್ರಹ್ಮನು ಯಥಾಪೂರ್ವವಾಗಿ ಕಾರ್ಯಸೃಷ್ಟಿಯನ್ನು ಮಾಡುವ ವ್ಯವಸ್ಥೆಯುಳ್ಳವನಾಗಿ ಮತ್ತು ನಿರುಪಮ ಪ್ರಜ್ಞಾ-ವೈರಾಗ್ಯಗಳಿಂದ ಕೂಡಿರುವ ಸತ್ಕಾರ್ಯಗಳ ಅಧಿಪತಿಯಾಗಿರುವನು.

೧೬. ಅವ್ಯಕ್ತತತ್ತ್ವಕ್ಕೆ ಅಧೀನವಾದ ಈಕ್ಷಣರೂಪದಿಂದ ಯಾವ ಯಾವ ವಸ್ತುವನ್ನು ಅಪೇಕ್ಷಿಸುವನೋ ಅವೆಲ್ಲವನ್ನೂ ತ್ರಿಗುಣಾತ್ಮಕ ಪ್ರಕೃತಿ ನಿಯಮ್ಯನಾಗಿ ಭಾವವಸ್ತುಗಳ ಕರ್ಮಾದಿ ನಿಮಿತ್ತ ಕಾರಣಾಪೇಕ್ಷೆಯಿಂದ ಸೃಜಿಸುವನು.

೧೭. ಬ್ರಹ್ಮನ ಅಧಿಕಾರದಲ್ಲಿರುವಾಗ ಚತುರ್ಮುಖನೂ ಸಂಹಾರಾಧಿಕಾರದಲ್ಲಿರುವಾಗ ಕಾಲರೂಪಿಯೂ ಆಗಿರುವನು. ಸಾವಿರಾರು ಶಿರಸ್ಸು ಮುಂತಾದ ವಿಶ್ವರೂಪಾಕಾರಧಾರಿಯಾದ ಸ್ವಯಂಭುವಿಗೆ ಈ ಮೂರು ಅವಸ್ಥೆಗಳು.

೧೮. ಬ್ರಹ್ಮನಿಗೆ ತನ್ನ ಅಧಿಕಾರ ನಿರ್ವಾಹಕ್ಕೆ ಉಪಕರಣವೆಲ್ಲವೂ ರಜೋಗುಣವು, ಕಾಲಮೂರ್ತಿಗೆ ತಮೋಗುಣವು, ಪುರುಷರೂಪದಲ್ಲಿ ಸತ್ತ್ವಾಧಿಕ್ಯವು. ಈ ರೀತಿಯಾಗಿ ಗುಣಗಳ ತಾರತಮ್ಯವು ಸ್ವಯಂಭುವಿಗೆ ಇರುವುದು.

**ಬ್ರಹ್ಮತ್ವೇ ಸೃಜತೇ ಲೋಕಾನ್ ಕಾಲತ್ವೇ ಸಂಕ್ಷಯತ್ಯಪಿ ।**
**ಪುರುಷತ್ವ ಉದಾಸೀನಸ್ತಿಸ್ರೋಽವಸ್ಥಾಃ ಸ್ವಯಂಭುವಃ ॥ ೧೯ ॥**

**ಬ್ರಹ್ಮಾ ಕಮಲಪತ್ರಾಭಃ ಕಾಲೋ ಜಾತ್ಯಂಜನಪ್ರಭಃ ।**
**ಪುರುಷಃ ಪುಂಡರೀಕಾಕ್ಷೋ ರೂಪೇಣ ಪರಮಾತ್ಮನಃ ॥ ೨೦ ॥**

**ಏಕಧಾ ಸ ದ್ವಿಧಾ ಚೈವ ತ್ರಿಧಾ ಚ ಬಹುಧಾ ಪುನಃ ।**
**ಯೋಗೀಶ್ವರಃ ಶರೀರಾಣಿ ಕರೋತಿ ವಿಕರೋತಿ ಚ ॥ ೨೧ ॥**

**ನಾನಾಕೃತಿಕ್ರಿಯಾರೂಪನಾಮಾಶ್ರಯಂತಿ ಸ್ವಲೀಲಯಾ ।**
**ತ್ರಿಧಾ ಯದ್ವರ್ತತೇ ಲೋಕೇ ತಸ್ಮಾತ್ತ್ರಿಗುಣ ಉಚ್ಯತೇ ॥ ೨೨ ॥**

---

೧೯. ಬ್ರಹ್ಮನಾಗಿದ್ದುಕೊಂಡು ಲೋಕಗಳನ್ನು ಸೃಷ್ಟಿಸುತ್ತಲೂ ಕಾಲರೂಪ ದಿಂದ ಸಂಹರಿಸುತ್ತಲೂ ಪೂರ್ಣರೂಪವ ಪುರುಷಾಕಾರದಿಂದ ಉದಾಸೀನನಾಗಿಯೂ ಇರುವುದರಿಂದ ಒಬ್ಬನಿಗೆ ಮೂರು ಅವಸ್ಥೆಗಳು ಪ್ರಾಪ್ತವಾಗುವುವು.

೨೦. ಬ್ರಹ್ಮನು ಕಮಲಪತ್ರದಂತೆ ಕೆಂಪುಕಾಂತಿಯುಳ್ಳವನೂ ರುದ್ರನು ಉತ್ತಮ ಕಾಡಿಗೆಯಂತೆ ಕಪ್ಪುಕಾಂತಿಯುಳ್ಳವನೂ ವಿಷ್ಣುವು ಕಮಲದಂತೆ ಸುಂದರ ಕಣ್ಣುಳ್ಳವನೂ ಆಗಿರುವುದರಿಂದ ಪರಮಾತ್ಮನಿಗೆ ಗುಣೋಪಾಧಿಯಿಂದ ಆಗುವ ಭಿನ್ನ ರೂಪಗಳು.

೨೧. ಪರಮಾತ್ಮನೆಂಬ ಅಷ್ಟೈಶ್ವರ್ಯ ಸಿದ್ಧಿಯುಳ್ಳ ಯೋಗೀಶ್ವರನು ತನ್ನ ಸತ್ಯಸಂಕಲ್ಪಾನುಸಾರವಾಗಿ ಒಂದು, ಎರಡು, ಮೂರು, ಅಥವಾ ಅನೇಕ ಸ್ವರೂಪ ಗಳುಳ್ಳ ಶರೀರಗಳನ್ನು ತೆಗೆದುಕೊಳ್ಳುತ್ತಾ ವಿಕಾರಾವಸ್ಥೆಗಳಿಂದ ಅವುಗಳನ್ನು ಬಿಡುತ್ತಾ ಇರುವನು.

೨೨. ಮತ್ತು ತನ್ನ ಲೀಲೆಯಿಂದ ದ್ವಿತೀಯ ವಸ್ತುಗಳೆಲ್ಲವೂ ವಿವಿಧವಾದ ಆಕಾರ-ಕ್ರಿಯಾ-ರೂಪಗಳನ್ನು ಹೊಂದುತ್ತವೆ. ಲೋಕ ವಸ್ತುಗಳನ್ನು ಮೂರು ಜಾತಿಯಾಗಿ ವಿಂಗಡಿಸುವನಾದ್ದರಿಂದ ಅದಕ್ಕೆ ಕಾರಣವಾದ ಗುಣತ್ರಯಗಳ ಸಂಪರ್ಕ ದಿಂದ ತ್ರಿಗುಣಸ್ವರೂಪಿಯಾಗುವನು.

ಚತುರ್ಧಾ ಪ್ರವಿಭಕ್ತತ್ವಾಚ್ಚತುರ್ವ್ಯೂಹಃ ಪ್ರಕೀರ್ತಿತಃ ।
ಯದಾ ಶೇತೇ ತದಾಧ್ಯಾಂತೇ ಯದ್ಭುಂಕ್ತೇ ವಿಷಯಾನ್ಪ್ರಭುಃ॥ ೨೩॥

ಯತ್ಸ್ವಸ್ಥಾಃ ಸತತಂಭಾವಃ ತಸ್ಮಾದಾತ್ಮಾ ನಿರುಚ್ಯತೇ ।
ಋಷಿಃ ಸರ್ವಗತಶ್ಚಾತ್ರ ಶರೀರೇ ಸೋಽಭ್ಯಯಾತ್ಪ್ರಭುಃ ॥ ೨೪ ॥

ಸ್ವಾಮೀ ಸರ್ವಸ್ಯಯತ್ಸರ್ವಂ ವಿಷ್ಣುಃ ಸರ್ವಪ್ರವೇಶನಾತ್ ।
ಭಗವಾನಗ್ರಸದ್ಭಾವಾನ್ನಾಗೋ ನಾಗಸ್ವಸಂಶ್ರಯಾತ್ ॥ ೨೫ ॥

ಪರಮಃ ಸಂಪ್ರಹೃಷ್ಟತ್ವಾದ್ದೇವತಾದೋಮಿತಿ ಸ್ಮೃತಿಃ ।
ಸರ್ವಜ್ಞಃ ಸರ್ವವಿಜ್ಞಾನಾತ್ಸರ್ವಃ ಸರ್ವಯತಸ್ತತಃ ॥ ೨೬ ॥

---

೨೩. ಸಂಕರ್ಷಣ ವಾಸುದೇವ ಪ್ರದ್ಯುಮ್ನ ಅನಿರುದ್ಧರೆಂಬ ನಾಲ್ಕು ವ್ಯೂಹಗಳನ್ನು ರಚಿಸಿದುದರಿಂದ ಚತುರ್ವ್ಯೂಹನೆಂಬ ಪ್ರಸಿದ್ಧಿಯನ್ನು ಹೊಂದಿರುವನು. ತನ್ನ ಸ್ವಾಪಕಾಲದಲ್ಲಿ ಸಮಸ್ತವನ್ನೂ ತನ್ನಲ್ಲಿ ಲಯಮಾಡುವುದರಿಂದಲೂ ಜೀವ ಸ್ವರೂಪನಾಗಿ ವಿಷಯಗಳನ್ನು ಅನುಭವಿಸುವುದರಿಂದಲೂ ಸ್ವಸ್ವರೂಪದಿಂದ ಸಂತತ ಕಾಲದಲ್ಲಿರುವುದರಿಂದಲೂ " ಆತ್ಮಾ " ಎಂದೆನಿಸುವನು.

೨೪. ಸ್ವಪ್ರಕಾಶನೂ. ಸರ್ವವ್ಯಾಪಕನೂ ಆದ ಪರಮಾತ್ಮನು ತನ್ನಿಂದ ಸೃಷ್ಟಿಸಲ್ಪಟ್ಟ ಈ ಶರೀರದಲ್ಲಿ ಸ್ವಾಮಿಯಾಗಿ ಜೀವರೂಪದಿಂದ ಪ್ರವೇಶಿಸಿರುವನು.

೨೫. ಸರ್ವ ವಸ್ತುಗಳಿಗೂ ಸ್ವಾಮಿಯಾದುದರಿಂದ ಪ್ರಭುವೂ, ಸರ್ವವನ್ನೂ ಪ್ರವೇಶಿಸಿರುವುದರಿಂದ ವಿಷ್ಣುವೂ ನಾಗ (ಶೇಷ) ಸ್ವರೂಪವನ್ನು ತೆಗೆದುಕೊಂಡಿರುವುದರಿಂದ ನಾಗನೂ ಆಗಿರುವನು. ಇಂತಹ ಭಗವಂತನು ಸಂಹಾರಕಾಲದಲ್ಲಿ ಭಾವವಸ್ತುಗಳನ್ನು ಗ್ರಸನ ಮಾಡುವನು.

೨೬. ಸಂತತವೂ ಸಂತೋಷದಿಂದಿರುವನಾಗಿ ಪರಮನೂ, ಸಕಲವನ್ನೂ (ಅವನ) ರಕ್ಷಣ ಮಾಡುವನಾಗಿ ಓಂಕಾರ ರೂಪನೂ, ಸರ್ವವನ್ನು ಅರಿತವನಾಗಿ ಸರ್ವಜ್ಞನೂ, ಎಲ್ಲೆಲ್ಲಿಯೂ ವ್ಯಾಪಿಸಿದವನಾಗಿ ಸರ್ವಾತ್ಮಕನೂ ಆಗಿರುವನು.

**ನರಾಣಾಂ ಸ್ಥಾಪನಂ ಬ್ರಹ್ಮಾ ತಸ್ಮಾನ್ನಾರಾಯಣಃ ಸ್ಮೃತಃ।**
**ತ್ರಿಧಾ ವಿಭಜ್ಯ ಚಾತ್ಮಾನಂ ಸಕಲಃ ಸಂಪ್ರವರ್ತತೇ ॥ ೨೭ ॥**

**ಸೃಜತೇ ಗ್ರಸತೇ ಚೈವ ಪಾಲ್ಯತೇ ಚ ತ್ರಿಭಿಃ ಸ್ವಯಮ್।**
**ಸೋಽಗ್ರೇ ಹಿರಣ್ಯಗರ್ಭಃ ಸ ಪ್ರಾದುರ್ಭೂತಃ ಸ್ವಯಂಪ್ರಭುಃ ॥೨೮॥**

**ಆದ್ಯೋ ಹಿ ಸ್ವವಶಶ್ಚೈವ ಅಜಾತತ್ವಾದಜಃ ಸ್ಮೃತಃ।**
**ತಸ್ಮಾದ್ಧಿರಣ್ಯಗರ್ಭಶ್ಚ ಪುರಾಣೇಷು ನಿರುಚ್ಯತೇ ॥ ೨೯ ॥**

**ಸ್ವಯಂಭುವೋ ನಿವೃತ್ತಸ್ಯ ಕಾಲೋ ವರ್ಣಾಗ್ರತಸ್ತು ಯಃ।**
**ಸ ಶಕ್ಯಃ ಪರಿಸಂಖ್ಯಾತುಂ ಮನುವರ್ಷಶತೈರಪಿ ॥ ೩೦ ॥**

**ಕಲ್ಪಸಂಖ್ಯಾನಿವೃತ್ತಸ್ತು ಪರಾರ್ಧೋ ಬ್ರಹ್ಮಣಃ ಸ್ಮೃತಃ।**
**ತಾವತ್ಶೇಷೋಽಸ್ಯ ಕಾಲೋನ್ಯಸ್ತಸ್ಯಾಂತೇ ಪ್ರತಿಬುಧ್ಯತೇ ॥ ೩೧ ॥**

---

೨೭. ಬ್ರಹ್ಮನು ಮನುಷ್ಯರ ಸ್ಥಾಪಕಾಲದ ಅಯನ (ಆಧಾರ) ರೂಪನಾಗಿ ನಾರಾಯಣನೆಂದು ಕರೆಯಲ್ಪಟ್ಟಿರುವನು. ತಾನು ಮೂರು ಆಕಾರವಾಗಿ ವಿಭಕ್ತನಾಗಿ ಪ್ರತಿಯೊಂದು ಕರ್ತವ್ಯದಲ್ಲಿಯೂ ಪ್ರವರ್ತಿಸುವನು. ಭಗವಂತನ ಪ್ರತಿಯೊಂದು ನಾಮಗಳೂ ಅನ್ವರ್ಥವಾದವುಗಳೆಂದು ಭಾವವು.

೨೮. ಪರಮಾತ್ಮನು ತ್ರಿಮೂರ್ತಿ ಸ್ವರೂಪದಿಂದ ಪ್ರಪಂಚ ಸೃಷ್ಟಿ-ಸ್ಥಿತಿ-ಲಯಗಳನ್ನು ರಚಿಸಿದನು. ಅವನು ಆದಿಯಲ್ಲಿ ಹಿರಣ್ಯಗರ್ಭರೂಪದಿಂದ ಪ್ರಾದುರ್ಭವಿಸಿದನು.

೨೯. ಪರಮಾತ್ಮನು ಕಾರಣಾಧೀನನಲ್ಲದೇ ಸ್ವತಂತ್ರನಾದ್ದರಿಂದ ಆದ್ಯನು. ಜನ್ಮವಿಲ್ಲದ್ದರಿಂದ ಅಜನು. ಅವನಿಂದಲೇ ಹಿರಣ್ಯಗರ್ಭನೆಂಬ ಪ್ರಥಮ ಶರೀರಿಯು ಹುಟ್ಟಿರುವನೆಂದು ಪುರಾಣದಲ್ಲಿ ಪ್ರಸಿದ್ಧಿಯು.

೩೦. ನಾಮರೂಪಸೃಷ್ಟಿಯ ಮೊದಲು ನಿವೃತ್ತಿ ಶೀಲದಿಂದಿದ್ದ ಸ್ವಯಂಭುವಿಗೆ ಕಳೆದುಹೋದ ಕಾಲದ ಪರಿಮಾಣವನ್ನು ಮಾನವರ ವರ್ಷಶತದಿಂದ ಕೂಡ ಎಣಿಸಲು ಸಾಧ್ಯವಿಲ್ಲ.

೩೧. ಅವನಿಂದ ಆದ ಕಲ್ಪಗಳ ಸಂಖ್ಯಾನುಗುಣವಾಗಿ ಬ್ರಹ್ಮನಿಗೆ ಕಳೆದು ಹೋದ ಕಾಲವನ್ನು ಅದರ ಪರಿಮಾಣದಿಂದ ಪರಾರ್ಧವೆಂದು ಹೇಳಲ್ಪಡುವುದು. ಕಲ್ಪದ ಅವಸಾನವೂ ಅಷ್ಟೇ ಪರಿಮಾಣದ ಕಾಲವುಳ್ಳದ್ದು. ಅದರ ಸಮಾಪ್ತಿಯಲ್ಲಿ ಮತ್ತೆ ಎಚ್ಚರನಾಗುವನು.

**ಕೋಟಿವರ್ಷಸಹಸ್ರಾಣಿ ಗೃಹಭೂತಾನಿ ಯಾನಿ ಚ।**
**ಸಮತೀತಾನಿ ಕಲ್ಪಾನಾಂ ತಾವಚ್ಛೇಷಾತ್ಪರೇತು ಯೇ ॥ ೩೨ ॥**

**ಯತ್ಸ್ವಯಂ ವರ್ತತೇ ಕಲ್ಪೋ ವಾರಾಹಸ್ತಂ ನಿಬೋಧತ।**
**ಪ್ರಥಮಂ ಸಾಂಪ್ರತಸ್ತೇಷಾಂ ಕಲ್ಪೋऽನ್ಯೈ ವರ್ತತೇ ಚ ಯಃ।**
**ಪೂರ್ಣೇ ಯುಗಸಹಸ್ರೇ ತು ಪರಿಪಾಲ್ಯಂ ನರೇಶ್ವರೈಃ ॥ ೩೩ ॥**

**॥ ಇತಿ ಚತುರ್ಥೋऽಧ್ಯಾಯಃ ಸಮಾಪ್ತಃ ॥**

---

೩೨. ಹಿಂದೆ ಅನೇಕಾನೇಕ ಕಲ್ಪಗಳು ಕಳೆದುಹೋದ್ದರಿಂದ ಆ ಕಲ್ಪಗಳಿಗೆ ಸಾವಿರಾರು ಕೋಟಿ ವರ್ಷ ಪರಿಮಿತ ಕಾಲವು ಆಧಾರವಾಗಿದ್ದಿತು. ಆ ಅವಧಿಯಿಂದ ಈಚೆಗೆ ಕೆಲವು ಕಲ್ಪಗಳು ನಡೆಯಲಿವೆ.

೩೩. ಈ ಕಲ್ಪ ಪ್ರವಾಹಗಳಲ್ಲಿ ಒಂದಾದ ವಾರಾಹ ಕಲ್ಪವು ತಾನಾಗಿ ನಡೆಯುತ್ತಿದೆ. ಅದರ ವರ್ಣನೆಯನ್ನು ಕೇಳಿರಿ, ಮುಂದೆ ನಡೆಯಲಿರುವ ಕಲ್ಪಗಳಲ್ಲಿ ಈಗಿನ ವಾರಾಹ ಕಲ್ಪವು ಮೊದಲನೆಯದು. ಈ ಕಲ್ಪದ ಸಾವಿರ ಯುಗಗಳು ಪೂರ್ತಿಯಾಗಿ ಮುಗಿಯಲು ಕ್ಷತ್ರಿಯ ವಂಶಸಂಭೂತರಾದ ನರೇಶ್ವರ (ರಾಜ) ರು ಪರಿಪಾಲಿಸುವರು.

ಬ್ರಹ್ಮಾಂಡಪುರಾಣದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವು.

---

# ಪಂಚಮೋಽಧ್ಯಾಯಃ

**ಶ್ರೀ ಸೂತ ಉವಾಚ—**

**ಅಪೋಽಗ್ರೇ ಸರ್ವಗಾ ಆಸನ್ನೇತಸ್ಮಿನ್ ಪೃಥಿವೀತಲೇ।**
**ಶಾಂತವಾತೈಃ ಪ್ರಲೀನೇಽಸ್ಮಿನ್ನ ಪ್ರಾಜ್ಞಾಯತ ಕಿಂಚನ ॥ ೧ ॥**

**ಏಕಾರ್ಣವೇ ಸದಾ ತಸ್ಮಿನ್ನಷ್ಟೇ ಸ್ಥಾವರಜಂಗಮೇ।**
**ವಿಭುರ್ಭವತಿ ಸ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೨ ॥**

**ಸಹಸ್ರಶೀರ್ಷಾ ಪುರುಷೋ ರುಕ್ಮವರ್ಣೋ ಹ್ಯತೀಂದ್ರಿಯಃ।**
**ಬ್ರಹ್ಮ ನಾರಾಯಣಾಖ್ಯಸ್ತು ಸುಷ್ವಾಪ ಸಲಿಲೇ ತದಾ ॥ ೩ ॥**

**ಸತ್ತ್ವೋದ್ರೇಕಾನ್ನಿಷಿದ್ಧಸ್ತು ಶೂನ್ಯಂ ಲೋಕಮವೈಕ್ಷತ।**
**ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ॥ ೪ ॥**

---

೧. ಸೂತಮುನಿಯು ಹೀಗೆ ಹೇಳಿದನು. ಈ ಭೂಮಂಡಲದಲ್ಲಿ ಸೃಷ್ಟಿ ಆದಿಯಲ್ಲಿ ಸರ್ವ ಪ್ರದೇಶಗಳನ್ನು ವ್ಯಾಪಿಸಿ ಜಲತತ್ತ್ವ ಒಂದೇ ಇತ್ತು. ಪ್ರಲಯ ಕಾಲದ ಶಾಂತವಾತಗಳಿಂದ ನಿರ್ವಿಕಾರವಾದ ಜಲತತ್ತ್ವದ ಮುಂದೆ ಯಾವುದೊಂದು ತತ್ತ್ವವೂ ಕಾಣುತ್ತಿರಲಿಲ್ಲ.

೨. ಸಮುದ್ರಗಳೆಲ್ಲ ಏಕೀಭವಿಸಿ ಸ್ಥಾವರಜಂಗಮಗಳೆಲ್ಲವೂ ನಷ್ಟವಾದ ಆ ಅವಸ್ಥೆಯಲ್ಲಿ ಸಹಸ್ರ ನೇತ್ರ, ಸಹಸ್ರ ಪಾದಗಳಿಂದ ಕೂಡಿದ ಸರ್ವಾತ್ಮಕನಾದ ಭಗವಂತನು ಇರುತ್ತಾನೆ.

೩. ಸಹಸ್ರ ಶಿರಸ್ಸು, ಪುರುಷಾಕಾರ, ಸುವರ್ಣದಂತೆ ಉಜ್ವಲ ವರ್ಣಗಳಿಂದ ಕೂಡಿದ, ಅತೀಂದ್ರಿಯನಾದ, ಮತ್ತು ನಾರಾಯಣನೆಂಬ ಸಂಜ್ಞಾ ಅಂಕಿತನಾದ ಬ್ರಹ್ಮನು ಆ ನೀರಿನಲ್ಲಿ ಸ್ವಾಪಮಾಡಿದನು

೪. ಆ ಪರಮಾತ್ಮನು ಸತ್ತ್ವ ಮಾತ್ರ ಗುಣದ ಉದ್ರೇಕದಿಂದ ಕೂಡಿರುವನಾಗಿ ಆ ದಶೆಯಲ್ಲಿ ಲೋಕವೆಲ್ಲವೂ ಪ್ರಶಾಂತವಾಗಿ ಶೂನ್ಯವಾಗಿರುವುದನ್ನು ಕಂಡನು.

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ।
ಅಯನಂ ತಸ್ಯ ತಾಃ ಪ್ರೋಕ್ತಾ ಸ್ತೇನ ನಾರಾಯಣಃ ಸ್ಮೃತಃ ॥ ೫ ॥

ತುಲ್ಯಂ ಯುಗಸಹಸ್ರಸ್ಯ ವರ್ಷ ಕಾಲಮುಪಾಸ್ಯತಃ।
ಸ್ವರ್ಣಪತ್ರೇ ಪ್ರಕುರುತೇ ಬ್ರಹ್ಮತ್ವಾದರ್ಶ ಕಾರಣಾತ್ ॥ ೬ ॥

ಬ್ರಹ್ಮಾ ತು ಸಲಿಲೇ ತಸ್ಮಿನ್ನವಾಗ್ಭೂತ್ವಾ ತದಾಚರನ್।
ನಿಶಾಯಾಮಿವ ಖದ್ಯೋತಃ ಪ್ರಾವೃಟ್ಕಾಲೇ ತತಸ್ತತಃ ॥ ೭ ॥

ತತಸ್ತು ಸಲಿಲೇ ತಸ್ಮಿನ್ ವಿಜ್ಞಾಯಾಂತರ್ಗತೇ ಮಹತ್ ।
ಅನುಮಾನಾದಸಂಮೂಢೋ ಭೂಮೇರುದ್ಧರಣಂ ಪ್ರತಿ ॥ ೮ ॥

---

ಇವನಿಗೆ ನಾರಾಯಣನೆಂಬ ಸಂಜ್ಞೆಯು ಅನ್ವರ್ಥವೆಂಬ ವಿಷಯವಾಗಿ ಒಂದು ಪದ್ಯವನ್ನೇ ಉದಾಹರಿಸುವರು.

೫. ನರಾಕಾರನಾದ ಬ್ರಹ್ಮನ ಸೃಷ್ಟಿಯಲ್ಲಿ ಜಲವು ಮೊದಲನೆಯ ಕಾರ್ಯವಾದ್ದರಿಂದ " ನಾರಾ " ಎಂದು ಕರೆಯಲ್ಪಡುವುದು. ಆ ಜಲವು ಪರಮಾತ್ಮನ ಸ್ವಾಪಾಧಾರವಾದ್ದರಿಂದ ನಾರಾ+ಅಯನ ಇವೆರಡು ಶಬ್ದಗಳು ಸಮಾಸಹೊಂದಿ ನಾರಾಯಣ ಸಂಜ್ಞೆಯು ಬಂದಿರುವುದು.

೬. ಸಹಸ್ರ ಯುಗ ತುಲ್ಯವಾದ ಕಾಲದವರೆಗೆ ಆ ನೀರಿನಲ್ಲಿ ಚಿನ್ನದ ಪತ್ರದಲ್ಲಿ ನಿದ್ದೆಯನ್ನು ಸೇವಿಸುತ್ತಿದ್ದ ಭಗವಂತನಾದ ಬ್ರಹ್ಮನು ಭೂಮಿಯನ್ನು ಕಾಣುವುದಕ್ಕಾಗಿ ಪ್ರಯತ್ನಿಸಿದನು,

೭. ಆಗ ಬ್ರಹ್ಮನು ಆ ಪೂರ್ಣವೂ ವಿಸ್ತಾರವೂ ಆದ ನೀರಿನಲ್ಲಿ ಅಧೋಮುಖನಾಗಿ ಸಂಚರಿಸಿದನು. ಪ್ರಕಾಶರೂಪನಾದ ಆತ್ಮನು ಆ ಜಲಗರ್ಭದಲ್ಲಿ ಸಂಚರಿಸುವುದು ಮಳೆಗಾಲದ ರಾತ್ರಿವೇಳೆಯಲ್ಲಿ ಖದ್ಯೋತ (ದೀಪದ ಹುಳು) ವು ಮಿಂಚುವಂತೆ ಇತ್ತು.

೮. ಆಗ ನೀರಿನ ಒಳಗಡೆ ಮಹಾ ಭೂಮಿಯು ಮುಳುಗಿರುವುವನ್ನು ಮೋಹಾವರಣವಿಲ್ಲದ ಭಗವಂತನು ಕಂಡುಹಿಡಿದು ಆ ಭೂಮಿಯ ಉದ್ಧರಣಯತ್ನವನ್ನು ಚಿಂತಿಸಿದನು.

ಓಂಕಾರಾಷ್ಟತನುಂ ತ್ವಸ್ಯಾಂ ಕಲ್ಪಾದಿಷು ಯಥಾಪುರಾ ।
ತತೋ ಮಹಾತ್ಮಾ ಮನಸಾ ದಿವ್ಯರೂಪಮಚಿಂತಯುತ್ ॥ ೯ ॥

ಸಲಿಲೇನಪ್ಲುತಾಂ ಭೂಮಿಂ ದೃಷ್ಟ್ವಾ ಸ ಸಮಚಿಂತಯುತ್ ।
ಕಿಂತು ರೂಪಮಹಂ ಕೃತ್ವಾ ಸಲಿಲಾದುದ್ಧರೇ ಮಹೀಮ್ ॥ ೧೦ ॥

ಜಲಕ್ರೀಡಾಸಮುಚಿತಂ ವಾರಾಹಂ ರೂಪಮಸ್ಮರತ್ ।
ಅದೃಶ್ಯಂ ಸರ್ವಭೂತಾನಾಂ ವಾಙ್ಮಯಂ ಬ್ರಹ್ಮಸಂಜ್ಞಿತಮ್ ॥ ೧೧ ॥

ದಶಯೋಜನವಿಸ್ತೀರ್ಣಮಾಯತಂ ಶತಯೋಜನಮ್ ।
ನೀಲಮೇಘಪ್ರತೀಕಾಶಂ ಮೇಘಸ್ತನಿತನಿಃಸ್ವನಮ್ ॥ ೧೨ ॥

ಮಹಾಪರ್ವತವರ್ಷ್ಮಾಣಂ ಶ್ವೇತತೀಕ್ಷ್ಣೋಗ್ರದಂಷ್ಟ್ರಿಣಮ್ ।
ವಿದ್ಯುದಗ್ನಿಪ್ರತೀಕಾಶಂ ಆದಿತ್ಯಸಮತೇಜಸಮ್ ॥ ೧೩ ॥

---

೯. ಮಹಾತ್ಮನು ಇತರ ಕಲ್ಪಗಳ ಆದಿಯಲ್ಲಿ ಭೂಮಿಯನ್ನು ಉದ್ಧಾರ ಮಾಡಲು ಯತ್ನಮಾಡಿದ ಕ್ರಮದಲ್ಲಿ ತನ್ನ ತನುವನ್ನು ಉಬ್ಬಿದಂತೆಮಾಡಿ ಮನಸ್ಸಿನಿಂದ ದಿವ್ಯರೂಪವುಳ್ಳ ಒಂದು ಆಕಾರವನ್ನು ಚಿಂತಿಸಿದನು.

೧೦. ಅಗಾಧವಾದ ನೀರಿನಲ್ಲಿ ಮುಳುಗಿ ಹೋದ ಭೂಮಿಯನ್ನು ಕಂಡು ಯಾವ ರೂಪವನ್ನು ಧರಿಸಿ ಈ ಭೂಮಿಯನ್ನು ಮೇಲಕ್ಕೆ ಎತ್ತಲಿ ಎಂದು ಯೋಚಿಸಿದನು.

೧೧. ನೀರಿನಲ್ಲಿ ಮುಳುಗಿದ ಭೂಮಿಯನ್ನು ಎತ್ತಲು ಜಲಕ್ರೀಡೆಗೆ ಯೋಗ್ಯವಾದ ವರಾಹ ರೂಪವು ಸಾಧನವೆಂದು ಸ್ಮರಿಸಿಕೊಂಡನು. ಆ ದಿವ್ಯ ವರಾಹ ರೂಪವು ಸರ್ವ ಪ್ರಾಣಿಗಳಿಗೆ ಅದೃಶ್ಯವೂ, ಅನಾದಿ ವಾಙ್ಮಯವೇದ್ಯವೂ, ಬ್ರಹ್ಮ ಸಂಜ್ಞೆಯುಳ್ಳದ್ದೂ ಆದುದು.

೧೨. ಮತ್ತು ಆ ಅದ್ಭುತರೂಪವು ಮುಂದೆ ಹೇಳುವಂತೆ ಅನೇಕ ವಿಚಿತ್ರ ವಿಶೇಷಣಗಳಿಂದ ಕೂಡಿದೆ. ಹತ್ತು ಯೋಜನ ವಿಸ್ತಾರವೂ ನೂರು ಯೋಜನ ದೀರ್ಘವೂ ಕಾರ್ಮೋಡದಂತೆ ಕಪ್ಪು ಬಣ್ಣವುಳ್ಳದ್ದೂ ಮೇಘದಂತ ಗರ್ಜನೆಯುಳ್ಳದ್ದೂ ಆಗಿದೆ-

೧೩. ಮಹಾಪರ್ವತದಂತೆ ಭಾರಿ ಪ್ರಮಾಣದ ದೇಹವೂ, ಬಿಳಿಯ ಹರಿತವಾದ

**ಪೀನವೃತ್ತಾಯತಸ್ಕಂಧಂ ವಿಷ್ಣುವಿಕ್ರಮಗಾಮಿ ಚ ।**
**ಪೀನೋನ್ನತ ಕಟೀದೇಶಂ ವೃಷಲಕ್ಷಣಪೂಜಿತಮ್ ॥ ೧೪ ॥**

**ಆಸ್ಥಾಯ ರೂಪಮತುಲಂ ವಾರಾಹಮಮಿತಂ ಹರಿಃ ।**
**ಪೃಥಿವ್ಯುದ್ಧರಣಾರ್ಥಾಯ ಪ್ರವಿವೇಶ ರಸಾತಲಮ್ ॥ ೧೫ ॥**

**ದೀಕ್ಷಾಸಮಾಪ್ತೀಷ್ಟಿದಂಷ್ಟ್ರಃ ಕ್ರತುದಂತೋ ಜುಹೂಮುಖಃ ।**
**ಅಗ್ನಿಜಿಹ್ವೋ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ॥ ೧೬ ॥**

**ವೇದಸ್ಕಂಧೋ ಹವಿರ್ಗಂಧಿರ್ಹವ್ಯಕವ್ಯಾದಿವೇಗವಾನ್ ।**
**ಪ್ರಾಗ್ವಂಶಕಾಯೋ ದ್ಯುತಿಮಾನ್ ನಾನಾದೀಕ್ಷಾಭಿರನ್ವಿತಃ ॥ ೧೭ ॥**

---

ಕ್ರೂರದಂಷ್ಟ್ರೆಗಳೂ, ಮಿಂಚಿನ ಜ್ವಾಲೆಯಂತೆ ಜ್ವಾಲೆಯೂ, ಆದಿತ್ಯನಂತೆ ಥಳ ಥಳಿಸುವ ತೇಜಃಪುಂಜವೂ ಆ ರೂಪದಲ್ಲಿ ಅಡಗಿವೆ.

೧೪. ಸ್ಥೂಲ, ವರ್ತುಲ ಮತ್ತು ದೀರ್ಘವಾದ ಸ್ಕಂಧದಿಂದಲೂ, ವಾಮನಾವತಾರದ ವಿಕ್ರಮದಿಂದಲೂ, ಸ್ಥೂಲ ಉನ್ನತ ಕಟಿದೇಶದಿಂದಲೂ ವೃಷಭಲಕ್ಷಣದಿಂದಲೂ ಕೂಡಿದುದಾಗಿದೆ.

೧೫. ಹರಿಯು ನಿರುಪಮವಾದ ವರಾಹ ರೂಪವನ್ನು ಧರಿಸಿ ಪೃಥಿವಿಯನ್ನು ಎತ್ತಲು ರಸಾತಲವನ್ನು ಪ್ರವೇಶಮಾಡಿದನು.

೧೬. ಆ ವರಾಹ ರೂಪವು ವೇದ ವಿಹಿತಯಜ್ಞಾದಿ ಸತ್ಕರ್ಮಗಳಿಗೆ ಅಭಿಮಾನಿಯಾಗಿರುವುದರಿಂದ ಕರ್ಮಾಂಗಗಳು ಅದರ ಅವಯವವೆಂದು ಭಾವಿಸುವುದು ಉಚಿತವು. ದೀಕ್ಷಾ ಸಮಾಪ್ತಿಯಲ್ಲಿ ಮಾಡುವ ಇಷ್ಟಿಯು ದಂಷ್ಟ್ರಾ ರೂಪವಾಗಿಯೂ ಕ್ರತುಗಳು ದಂತವಾಗಿಯೂ ಜುಹೂ ಎಂಬ ಯಜ್ಞಪಾತ್ರವು ಮುಖವಾಗಿಯೂ ಅಗ್ನಿಯು ನಾಲಿಗೆಯಾಗಿಯೂ ದರ್ಭಗಳು ರೋಮಗಳಾಗಿಯೂ ಬ್ರಹ್ಮವು ತಲೆಯಾಗಿಯೂ ಇರುವ ಮಹಾತಪಸ್ವಿ ರೂಪವೆಂದು ಭಾವಿಸಲ್ಪಡಬೇಕು.

೧೭. ವೇದಗಳೆಂಬ ಸ್ಕಂಧ, ಆಜ್ಯಾದಿಹವಿಸ್ಸುಗಳ ಗಂಧ, ಹವ್ಯಕವ್ಯಗಳಿಗಾಗುವ ರೂಪಾಂತರವೆಂಬ ವೇಗ. ಪ್ರಾಗ್ವಂಶವೆಂಬ ಯಜ್ಞಶಾಲಾ ಭೂಮಿಸ್ವರೂಪವಾದ ದೇಹ, ಉತ್ತಮವಾದ ಕಾಂತಿ, ವಿವಿಧ ದೀಕ್ಷಾವಿಧಿ. ಇವುಗಳಿಂದ ಅನ್ವಿತವಾಗಿದೆ.

ದಕ್ಷಿಣಾಹೃದಯೋ ಯೋಗೀ ಶ್ರದ್ಧಾಸತ್ತ್ವಮಯೋ ವಿಭುಃ ।
ಉಪಾಕರ್ಮರುಚಿಶ್ಚೈವ ಪ್ರವರ್ಗ್ಯಾವರ್ತಭೂಷಣಃ ॥ ೧೮ ॥

ನಾನಾಛಂದೋಗತಿಪಥೋ ಗುಹ್ಯೋಪನಿಷದಾಸನಃ ।
ಮಾಯಾಪತ್ನೀಸಹಾಯೋ ವೈ ಗಿರಿಶೃಂಗಮಿವೋಚ್ಛ್ರಯಃ ॥ ೧೯ ॥

ಅಹೋರಾತ್ರೇಕ್ಷಣಧರೋ ವೇದಾಂಗಶ್ರುತಿಭೂಷಣಃ ।
ಆಜ್ಯಗಂಧಃ ಸ್ರುವಸ್ತುಂಡಃ ಸಾಮಘೋಷಸ್ವನೋ ಮಹಾನ್ ॥ ೨೦ ॥

ಸತ್ಯಧರ್ಮಮಯಃ ಶ್ರೀಮಾನ್ ಕರ್ಮವಿಕ್ರಮಸತ್ಕೃತಃ ।
ಪ್ರಾಯಶ್ಚಿತ್ತನಖೋ ಘೋರಃ ಪಶುಜಾನುರ್ಮಹಾಮುಖಃ ॥ ೨೧ ॥

ಉದ್ಗಾತಾಂತ್ರೋ ಹೋಮಲಿಂಗಃ ಫಲಬೀಜಮಹೌಷಧೀಃ ।
ವಾದ್ಯಂತರಾತ್ಮಸತ್ರಸ್ಯ ನಾಸ್ಮಿಕಸೋಮಶೋಣಿತಃ ॥ ೨೨ ॥

---

೧೮. ಯೋಗಿಯೂ ವಿಭುವೂ ಆದ ಆ ರೂಪಕ್ಕೆ ಯಜ್ಞಾಂಗದಕ್ಷಿಣೆಯು ಹೃದಯವು, ಶ್ರದ್ಧೆಯು ಸತ್ತ್ವವು, ಪಶೂಪಾಕರಣವು ರುಚಿಯು, ಪ್ರವರ್ಗ್ಯಕರ್ಮದ ಆವೃತ್ತಿಯು ಭೂಷಣವು.

೧೯. ವಿವಿಧವಾದ ವೇದಗಳು ಸಂಚಾರಮಾರ್ಗವು. ರಹಸ್ಯೋಪನಿಷತ್ತುಗಳು ಪೀಠವು. ಮಾಯೆಯು ಸಹಾಯಕಳಾದ ಪತ್ನಿಯು, ಬೆಟ್ಟದ ಶಿಖರದಂತೆ ಅತಿಶಯವಾದ ಉನ್ನತಿಯು.

೨೦. ಹಗಲು ಮತ್ತು ರಾತ್ರಿಗಳು ಎರಡು ಕಣ್ಣುಗಳು. ವೇದಾಂಗಗಳು ಕರ್ಣಭೂಷಣ, ಆಜ್ಯದಂತೆ ಗಂಧವು, ಸ್ರುವವೆಂಬ ಯಜ್ಞಪಾತ್ರವು ಮುಖ, ಸಾಮಘೋಷವು ಗಂಭೀರವಾದ ಉಚ್ಚಧ್ವನಿಯು.

೨೧. ಸತ್ಯವೆಂಬುದು ಅದರ ಅಸಾಧಾರಣ ಧರ್ಮ. ಸತ್ಕರ್ಮವು ವಿಕ್ರಮ. ಪ್ರಾಯಶ್ಚಿತ್ತಗಳು ನಖಗಳು, ಯಜ್ಞ ದ್ರವ್ಯವಾದ ಪಶುವು ಮೊಣಕಾಲು. ಈ ರೀತಿಯಲ್ಲಿ ಆ ವರಾಹರೂಪವು ಉತ್ಕೃಷ್ಟವಾದುದೂ ಮಹಾಯಜ್ಞ ರೂಪವೂ ಆಗಿದೆ.

೨೨. ಮತ್ತು ಉದ್ಗಾತಾ ಎಂಬ ಋತ್ವಿಜನು ಮೂಳೆ, ಹೋಮವು ಅದರ ಲಿಂಗಸ್ಥಾನವು. ಫಲ ಬೀಜಗಳು ಇದರ ಆಹಾರವಾದ ಭದ್ರಮುಸ್ತಾ ಮುಂತಾದ ಔಷಧಿಯು, ಸೋಮರಸವು ಇದರ ರಕ್ತವು.

ಭಕ್ತ್ಯಾ ಯಜ್ಞವರಾಹಾಂತಾ ಚಾಪಃ ಸಂಪ್ರಾವಿಶತ್ಪ್ರನಃ ।
ಅಗ್ನಿಸಂಛಾದಿತಾಂ ಭೂಮಿಂ ಸಮಾಮಿಚ್ಛನ್ಪ್ರಜಾಪತಿಮ್ ॥ ೨೩ ॥

ಉಪಗಮ್ಯಾಜುಹಾವೈತಾ ಮುದ್ಯಶ್ಚಾದ್ಯಸಮನ್ಯಸತ್ ।
ಸಾಮುದ್ರಾಶ್ಚ ಸಮುದ್ರೇಷು ನಾದೇಯಾಶ್ಚ ನದೀಷು ಚ ॥ ೨೪ ॥
ಪೃಥಕ್ತ್ವಾಸ್ತು ಸಮೀಕೃತ್ಯ ಪೃಥಿವ್ಯಾಂ ಸೋಽಚಿನೋದ್ಗಿರೀನ್ ।

ಪ್ರಾಕ್ಸರ್ಗೇ ದಹ್ಯಮಾನಾಸ್ತು ತದಾ ಸಂವರ್ತಕಾಗ್ನಿನಾ ।
ತೇನಾಗ್ನಿನಾ ವಿಲೀನಾಸ್ತೇ ಪರ್ವತಾ ಭುವಿ ಸರ್ವಶಃ ॥ ೨೫ ॥

ಸತ್ವಾದೇಕಾರ್ಣವೇ ತಸ್ಮಿನ್ ವಾಯುನಾ ಯತ್ತು ಸಂಹಿತಾಃ ।
ನಿಷಿಕ್ತಾ ಯತ್ರ ಯತ್ರಾಸಂಸ್ತತ್ರ ತತ್ರಾಚಲೋಽಭವತ್ ॥ ೨೬ ॥

ತತಸ್ತೇಷು ಪ್ರಕೀರ್ಣೇಷು ಲೋಕೋದಧಿಗಿರೀಂಸ್ತಥಾ ।
ವಿಶ್ವಕರ್ಮಾ ವಿಭಜತೇ ಕಲ್ಪಾದಿಷು ಪುನಃ ಪುನಃ ॥ ೨೭ ॥

---

೨೩. ಭಕ್ತರೆ! ಆ ಯಜ್ಞವರಾಹರೂಪಿಯೂ ಭಗವಂತನೂ ಆದ ಪ್ರಜಾಪತಿಯು ನೀರಿನಿಂದ ಮುಚ್ಚಿಹೋದ ಭೂಮಿಯನ್ನು ಎತ್ತಿ ಸಮಮಾಡಲು ಅಪೇಕ್ಷಿಸಿ ನೀರಿನೊಳಗೆ ಪ್ರವೇಶಮಾಡಿದನು.

೨೪. ಹಾಗೆ ಪ್ರವೇಶಮಾಡಿ ಭೂಮಿಯ ಬಳಿಗೆ ಬಂದು ಆಹ್ವಾನಿಸಿ ಮೇಲಕ್ಕೆ ಎತ್ತಿದನು. ಆಗ ಸಮುದ್ರ, ನದಿಗಳಲ್ಲಿ ಇರಬೇಕಾದ ಪ್ರಾಣಿ ಮುಂತಾದುವುಗಳನ್ನು ಅಲ್ಲಿಯೇ ಬೇರೆಯಾಗಿ ಇರಿಸಿ ಸೃಷ್ಟಿ ಸಮಯದಲ್ಲಿ ಇರಬೇಕಾದ ಕ್ರಮದಂತೆ ಸರಿಪಡಿಸಿ ಭೂಮಿಯನ್ನು ದೃಢವಾಗಿ ಇರಿಸಲು ಬೆಟ್ಟಗಳನ್ನು ಹುಡುಕಿದನು.

೨೫. ಪೂರ್ವ ಸೃಷ್ಟಿಯಲ್ಲಿ ಭೂಮಿಯಲ್ಲಿ ಸಮಸ್ತ ಬೆಟ್ಟಗಳೂ ಪ್ರಲಯಕಾಲದ ಕಾಲಾಗ್ನಿಯಿಂದ ಸುಡಲ್ಪಟ್ಟು ಕರಗಿ ನೀರಾಗಿ ಹೋದವು.

೨೬. ಪ್ರಲಯದಲ್ಲಿ ಸಕಲ ಪ್ರಪಂಚವೂ ಏಕಾರ್ಣವಪ್ರಾಯವಾಗಿ (ಜಲಮಯವಾಗಿ) ರಲು ಗಾಳಿಯಿಂದ ಆ ಪರ್ವತದ್ರವವು ಒಂದು ಕಡೆ ಸಂಧಿಸಿದಂತೆಲ್ಲ ಅಲ್ಲಲ್ಲಿ ಬೆಟ್ಟವಾಗಿ ಪರಿಣಾಮ ಹೊಂದಿತು.

೨೭. ಹೀಗೆ ಅಲ್ಲಲ್ಲಿ ಹರಡಿ ಹೋದ ಸ್ಥಳ, ಜಲ, ಪರ್ವತಗಳನ್ನು ವಿಶ್ವಕರ್ಮದೇವನು ಪ್ರತಿಯೊಂದು ಕಲ್ಪದ ಆದಿಯಲ್ಲಿ ಮತ್ತೆ ಮತ್ತೆ ವಿಭಾಗ ಮಾಡುವನು.

**ಸಸಮುದ್ರಾಮಿಮಾಂ ಪೃಥ್ವೀಂ ಸಪ್ತದ್ವೀಪಾಂ ಸಪರ್ವತಾಮ್ ।**
**ಭೂರಾದ್ಯಾಂಶ್ಚತುರೋ ಲೋಕಾನ್ ಪುನಃ ಪುನರಕಲ್ಪಯತ್ ॥ ೨೮ ॥**

**ಲೋಕಾನ್ ಪ್ರಕಲ್ಪಯಿತ್ವಾ ಚ ಪ್ರಜಾಸರ್ಗಂ ಸಸರ್ಜ ಹ ।**
**ಬ್ರಹ್ಮಾ ಸ್ವಯಂಭೂರ್ಭಗವಾನ್ ಸಿಸೃಕ್ಷುರ್ವಿವಿಧಾಃ ಪ್ರಜಾಃ ॥ ೨೯ ॥**

**ಸಸರ್ಜ ಸೃಷ್ಟಂ ತದ್ರೂಪಂ ಕಲ್ಪಾದಿಷು ಯಥಾ ಪುರಾ ॥ ೩೦ ॥**

**ತಸ್ಯಾಭಿಧ್ಯಾಯತಃ ಸರ್ಗಂ ತದಾ ವೈ ಬುದ್ಧಿಪೂರ್ವಕಮ್ ।**
**ಪ್ರಧಾನಸಮಕಾಲೇ ಚ ಪ್ರಾದುರ್ಭೂತಸ್ತಮೋಮಯಃ ॥ ೩೧ ॥**

**ತಮೋಮೋಹೋ ಮಹಾಮೋಹಸ್ತಾಮಿಸ್ರೋಹ್ಯಂಧಸಂಜ್ಞಿತಃ ।**
**ಅವಿದ್ಯಾ ಪಂಚಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ ॥ ೩೨ ॥**

**ಪಂಚಧಾವಸ್ಥಿತಃ ಸರ್ಗೋ ಧ್ಯಾಯತಃ ಸಾಭಿಮಾನಿನಃ ।**
**ಸರ್ವತಸ್ತಮಸಾ ಚೈವ ಬೀಜಕುಂಭಲತಾವೃತಾಃ ॥ ೩೩ ॥**

---

೨೮. ಮತ್ತು ಸಮುದ್ರ, ಸಪ್ತದ್ವೀಪ, ಕುಲಾಚಲ, ಇವುಗಳಿಂದ ಕೂಡಿದ ನಿಖಿಲ ಪೃಥಿವಿಯನ್ನೂ "ಭೂ" ಮುಂತಾದ ಚತುರ್ಲೋಕಗಳನ್ನೂ ಪುನಃ ಪುನಃ ಏರ್ಪಡಿಸಿದನು.

೨೯-೩೦. ಈ ರೀತಿಯಾಗಿ ಲೋಕಗಳನ್ನು ನಿರ್ಮಿಸಿ ಪ್ರಜೆಗಳನ್ನು ಸೃಷ್ಟಿ ಮಾಡಿದನು. ಅನಾದಿಯೂ ಭಗವಂತನೂ ಆದ ಬ್ರಹ್ಮದೇವನು ವಿವಿಧ ಪ್ರಜೆಗಳನ್ನು ಸೃಷ್ಟಿಸಲಿಚ್ಛಿಸಿ ಹಿಂದಿನ ಕಲ್ಪದಲ್ಲಿ ಯಾವ ಜಾತಿಯ ಪ್ರಜೆಗೆ ಯಾದ ವಿಧ ರೂಪ ವಿತ್ತೆಂಬುದನ್ನು ನೆನೆಸಿ ಅದರಂತೆ ನಿರ್ಮಾಣವನ್ನು ಅನುಸರಿಸಿದನು.

೩೧. ಸೃಷ್ಟಿಮಾಡುವ ಅಭಿಧ್ಯಾನ (ಸಂಕಲ್ಪ) ದಿಂದ ಕೂಡಿದ ಬ್ರಹ್ಮದೇವನಿಗೆ ಅಬುದ್ಧಿಪೂರ್ವಕವಾಗಿ ಪ್ರಧಾನ ತಾದಾತ್ಮ್ಯದಿಂದ ತಮೋಮಯರೂಪವು ಪ್ರಾಪ್ತ ವಾಯಿತು.

೩೨. ಈ ತಮಸ್ಸು ಅವಿದ್ಯೆಯ ಒಂದು ಮುಖ್ಯಾಕಾರವು. ಆ ಅವಿದ್ಯೆಗೆ ತಮಸ್ಸು ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರವೆಂದು ಐದು ಮುಖ್ಯರೂಪಗಳಿವೆ. ಇವುಗಳಿಂದ ಕೂಡಿ ಮಹಾತ್ಮನಾದ ಪರಮಾತ್ಮನಿಗೆ ಈಕ್ಷಣಾದಿವೃತ್ತಿಗಳನ್ನು ಹುಟ್ಟಿಸುವ ಉಪಾಧಿಯಾಗಿ ಸೇರಿದೆ.

೩೩. ಸೃಷ್ಟಿಕರ್ಮದ ಕರ್ತೃತ್ವ ಅಭಿಮಾನದಿಂದ ಕೂಡಿದ ಬ್ರಹ್ಮದೇವನಿಂದಾದ

**ಬಹಿರಂತಶ್ಚಾಪ್ರಕಾಶಸ್ತಥಾ ನಿಃಸಂಜ್ಞ ಏವ ಚ ।**
**ಯಸ್ಮಾತ್ತೇಷಾಂ ಕೃತಾ ಬುದ್ಧಿಃ ದುಃಖಾನಿ ಕರಣಾನಿ ಚ ॥ ೩೪ ॥**

**ತಸ್ಮಾಚ್ಚ ಸಂವೃತಾತ್ಮಾನೋ ನಗಾ ಮುಖ್ಯಾಃ ಪ್ರಕೀರ್ತಿತಾಃ ।**
**ಮುಖ್ಯಸರ್ಗೇ ತದೋದ್ಭೂತಂ ದೃಷ್ಟ್ವಾ ಬ್ರಹ್ಮಾತ್ಮಸಂಭವಃ ॥ ೩೫ ॥**
**ಅಪ್ರತೀಸಮನಾಃ ಸೋಽಥ ತದೋತ್ಪತ್ತಿಮಮನ್ಯತ ।**

**ತಸ್ಯಾಭಿಧ್ಯಾಯತಶ್ಚಾನ್ಯಸ್ತಿರ್ಯಕ್ಸ್ರೋತೋಽಭ್ಯವರ್ತತ ।**
**ಯಸ್ಮಾತ್ತಿರ್ಯಗ್ವಿವರ್ತೇತ ತಿರ್ಯಕ್ಸ್ರೋತಸ್ತತಃ ಸ್ಮೃತಃ ॥ ೩೬ ॥**

**ತಮೋಬಹುತ್ವಾತ್ತೇ ಸರ್ವೇ ಹ್ಯಜ್ಞಾನಬಹುಲಾಃ ಸ್ಮೃತಾಃ ।**
**ಉತ್ಪಾದ್ಯಗ್ರಾಹಿಣಶ್ಚೈವ ತೇಽಜ್ಞಾನೇ ಜ್ಞಾನಮಾನಿನಃ ॥ ೩೭ ॥**

---

ಪ್ರಪಂಚ ಸೃಷ್ಟಿಯು ಬೀಜ, ಕುಂಭ, ಲತೆಗಳು ಮೇಲಿನ ಸಿಪ್ಪೆ ಮುಂತಾದ ಮೇಲ್ಭಾಗದ ಆವರಣದಿಂದ ಮುಚ್ಚಿಹೋದಂತೆ ಸರ್ವಾಂಶದಲ್ಲಿಯೂ ತಮಸ್ಸಿನಿಂದ ಮುಚ್ಚಿಹೋಗಿದೆ.

೩೪. ಆದುದರಿಂದ ಸೃಜ್ಯವಸ್ತುಗಳೆಲ್ಲವೂ ಒಳ ಹೊರಭಾಗಗಳಲ್ಲಿ ಅಲ್ಪವಾದ ಪ್ರಕಾಶವೂ ಇಲ್ಲದೇ ಕಡೆಗೆ ಚೈತನ್ಯವೂ ಇಲ್ಲದಂತೆ ಆಗಿವೆ.

೩೫. ಯಾವ ನಿಮಿತ್ತದಿಂದ ಆ ಸೃಷ್ಟಿಯಲ್ಲಿ ದುಃಖಮಯಕರಣಗಳೂ ದುಃಖಾನುಭವವೂ ಇವೆಯೋ ಅದರಿಂದ ಆತ್ಮಸ್ವರೂಪವು ಸಂಪೂರ್ಣವಾಗಿ ಮುಚ್ಚಿಹೋಗಿ ನಗಗಳೆಂದು ಹೇಳಲ್ಪಟ್ಟಿವೆ. ಮುಖ್ಯಸರ್ಗವನ್ನು ಕಂಡು ಸ್ವಯಂಭು ಬ್ರಹ್ಮನು ತೃಪ್ತನಾಗದೆ ಪುನಃ ಸೃಷ್ಟಿಧ್ಯಾನದಿಂದ ಕೂಡಿದವನಾದನು.

೩೬. ಹೀಗೆ ಧ್ಯಾನಮಾಡುತ್ತಿರಲು ಆ ಬ್ರಹ್ಮದೇವನಿಂದ ತಿರ್ಯಕ್ (ಅಡ್ಡಲಾದ) ಸೃಷ್ಟಿಪ್ರವಾಹವು ಬೆಳೆಯಿತು. ಆ ಸೃಷ್ಟಿಗೆ ಸೇರಿದ ವ್ಯಕ್ತಿಸಾಮಾನ್ಯವೂ ಅಡ್ಡಲಾಗಿ ಹರಿಯುವ ಸ್ವಭಾವವುಳ್ಳದ್ದಾದುದರಿಂದ ತಿರ್ಯಕ್‌ಸ್ರೋತವೆಂದು ಕರೆಯಲ್ಪಡುತ್ತದೆ.

೩೭. ಅವೆಲ್ಲವೂ ತಮೋಗುಣದ ಪ್ರಾಚುರ್ಯದಿಂದ ಅಜ್ಞಾನಪರಿಪೂರ್ಣಗಳೆಂದೂ, ಬಿಸಿಲು ಮಳೆ ಮುಂತಾದುವುಗಳನ್ನು ಸಹಿಸುವ ಪ್ರಾಣಿಗಳೆಂದೂ ಅಜ್ಞಾನಾವಸ್ಥೆಯಲ್ಲಿಯೂ ಜ್ಞಾನ ಅಭಿಮಾನವಿರುವುವುಗಳೆಂದೂ ವರ್ಣಿಸಲ್ಪಟ್ಟಿವೆ.

**ಅಹಂಕೃತಾ ಅಹಂಮಾನಾ ಅಷ್ಟಾವಿಂಶದ್ವಿಧಾತ್ಮಿಕಾಃ ।**
**ಏಕಾದಶೇಂದ್ರಿಯವಿಧಾ ನವಧಾತ್ಮಾದಯಸ್ತಥಾ ॥ ೩೮ ॥**

**ಅಷ್ಟೌ ತು ತಾರಕಾದ್ಯಾಶ್ಚ ತೇಷಾಂ ಶಕ್ತಿವಧಾಃ ಸ್ಮೃತಾಃ ।**
**ಅಂತಃ ಪ್ರಕಾಶಾಸ್ತೇ ಸರ್ವೇ ಆವೃತಾಶ್ಚ ಬಹಿಃ ಪುನಃ ॥ ೩೯ ॥**

**ತಿರ್ಯಕ್ಸ್ರೋತಸ ಉಚ್ಯಂತೇ ವಶ್ಯಾತ್ಮಾನಸ್ತ್ರಿಸಂಜ್ಞಕಾಃ ॥ ೪೦ ॥**

**ತಿರ್ಯಕ್ಸ್ರೋತಸ್ತು ಸೃಷ್ಟ್ವಾ ವೈ ದ್ವಿತೀಯಂ ವಿಶ್ವಮೀಶ್ವರಃ ।**
**ಅಭಿಪ್ರಾಯಮಥೋದ್ಭೂತಂ ದೃಷ್ಟ್ವಾ ಸರ್ಗಂ ತಥಾವಿಧಮ್ ॥ ೪೧ ॥**

**ತಸ್ಯಾಭಿಧ್ಯಾಯತೋ ಯೋಽಂತ್ಯಃ ಸಾತ್ವಿಕಃ ಸಮಜಾಯತ ।**
**ಊರ್ಧ್ವಸ್ರೋತಸ್ತೃತೀಯಸ್ತು ತದ್ವೈ ಚೋರ್ಧ್ವಂ ವ್ಯವಸ್ಥಿತಮ್॥೪೨॥**

---

೩೮-೩೯. ಅಹಂಕಾರಾಭಿಮಾನಗಳಿಂದ ಕೂಡಿದ ಆ ಸೃಷ್ಟಿಯು ಮುಂದೆ ವಿವರಿಸಿರುವಂತೆ ಕಾರಣ ವಿಭಾಗದಿಂದ ಇಪ್ಪತ್ತೆಂಟು ವಿಧವೆಂದು ವಿಭಾಗಿಸಲ್ಪಟ್ಟಿದೆ. ತ್ವಾಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣವೆಂದು ಐದು ಜ್ಞಾನೇಂದ್ರಿಯಗಳೂ ವಾಕ್, ಪಾಣಿ, ಪಾದ, ಪಾಯು, ಉಪಸ್ಥವೆಂಬ ಐದು ಕರ್ಮೇಂದ್ರಿಯಗಳೂ ಮನಸ್ಸೂ ಸೇರಿ ಹತ್ತೊಂಭತ್ತು ಇಂದ್ರಿಯಗಳು, ಆತ್ಮ ಮುಂತಾದ ಒಂಭತ್ತು, ತಾರಕಾದಿಗಳು ಎಂಟು, ಇವೆಲ್ಲವೂ ಸೇರಿ ಇಪ್ಪತ್ತೆಂಟು ಶಕ್ತಿವಧವುಳ್ಳ ಬಗೆಗಳು.

೪೦. ಅಂತರದಲ್ಲಿ ಪ್ರಕಾಶವುಳ್ಳವುಗಳಾದರೂ ಬಾಹ್ಯಾವಯವಗಳಲ್ಲಿ ಸಂಪೂರ್ಣ ಆವರಣವಿರುವುದರಿಂದ ಅವುಗಳೆಲ್ಲವನ್ನೂ ಅಸ್ವತಂತ್ರವಾದ ಮೂಕಪ್ರಾಣಿ ಸಂಜ್ಞೆಯುಳ್ಳ ತಿರ್ಯಕ್ ಸ್ರೋತಸ್ಸುಗಳೆಂದು ಕರೆಯಲ್ಪಡುತ್ತವೆ.

೪೧. ಈಶ್ವರನು ತಿರ್ಯಕ್ ಸ್ರೋತಸ್ಸೆಂಬ ಎರಡನೆಯ ಸೃಷ್ಟಿಯನ್ನು ಪೂರ್ತಿಗೊಳಿಸಿ ಮತ್ತೊಂದು ಸೃಷ್ಟಿಯನ್ನು ಮಾಡಬೇಕೆಂಬ ಈಕ್ಷಣ ರೂಪವಾದ ಅಭಿಪ್ರಾಯವನ್ನು ಇಟ್ಟುಕೊಂಡನು.

೪೨. ಈ ರೀತಿಯಾಗಿ ಧ್ಯಾನಿಸಲು ಈಶ್ವರನಿಂದ ಮೂರನೆಯ ಸೃಷ್ಟಿಯು ಸತ್ತ್ವಗುಣಪರಿಪೂರ್ಣವಾಗಿ ಪ್ರಾದುರ್ಭವಿಸಿತು. ಆ ಸೃಷ್ಟಿಯು ಎಲ್ಲ ಸೃಷ್ಟಿಗಿಂತಲೂ ಊರ್ಧ್ವಸ್ಥಾನದಲ್ಲಿರುವುದಾದುದರಿಂದ ಊರ್ಧ್ವಸ್ರೋತವೆಂದು ವಿಂಗಡಿಸಲ್ಪಟ್ಟಿತು.

ಯಸ್ಮಾದೂರ್ಧ್ವಂ ನ್ಯವರ್ತಂತ ತದೂರ್ಧ್ವಸ್ರೋತಸಂಜ್ಞಕಮ್ ।
ತಾಃ ಸುಖಂ ಪ್ರೀತಿ ಬಹುಲಾ ಬಹಿರಂತಶ್ಚ ಹ್ಯಾವೃತಾಃ ॥ ೪೩ ॥

ಪ್ರಕಾಶಾ ಬಹಿರಂತಶ್ಚ ಊರ್ಧ್ವಸ್ರೋತಃಪ್ರಜಾಃ ಸ್ಮೃತಾಃ ।
ನವಧಾತಾದಯಸ್ತೇ ವೈ ತುಷ್ಟಾತ್ಮಾನೋ ಬುಧಾಃ ಸ್ಮೃತಾಃ ॥ ೪೪ ॥

ಊರ್ಧ್ವಸ್ರೋತಸ್ತೃತೀಯೋ ಯಃ ಸ್ಮೃತಃ ಸರ್ವಃ ಸ ದೈವಿಕಃ ।

ಊರ್ಧ್ವಸ್ರೋತಸ್ಸು ಸೃಷ್ಟೇಷು ದೇವೇಷು ಸ ತದಾ ಪ್ರಭುಃ ।
ಪ್ರೀತಿಮಾನಭವದ್ಬ್ರಹ್ಮಾ ತತೋಽನ್ಯಂ ನಾಭಿಮನ್ಯತ ॥ ೪೫ ॥

ಸರ್ಗಮನ್ಯಂ ಸಿಸೃಕ್ಷುಸ್ತಂ ಸಾಧಕಂ ಪುನರೀಶ್ವರಃ ॥ ೪೬ ॥

ತಸ್ಯಾಭಿಧ್ಯಾಯತಃ ಸರ್ಗಂ ಸತ್ಯಾಭಿಧ್ಯಾಯಿನಸ್ತದಾ ।
ಪ್ರಾದುರ್ಬಭೌ ಭೌತಸರ್ಗಃ ಸೋಽರ್ವಾಕ್ಸ್ರೋತಸ್ತು ಸಾಧಕಃ ॥ ೪೭ ॥

---

೪೩. ಹೀಗೆ ಊರ್ಧ್ವಸ್ಥಾನದಲ್ಲಿರುವಂತೆ ಈ ಸೃಷ್ಟಿಯು ನಿರ್ಮಿಸಲ್ಪಟ್ಟಿರುವುದರಿಂದ ಊರ್ಧ್ವಸ್ರೋತಸ್ಸು ಎಂಬ ಹೆಸರನ್ನು ಹೊಂದಿರುವುದು. ಆ ಸೃಷ್ಟಿಯಲ್ಲಿ ಸೇರಿದ ವ್ಯಕ್ತಿಗಳು ಸುಖ ಸಂತೋಷಗಳಿಂದ ಪರಿಪೂರ್ಣಗಳಾಗಿಯೂ ಅಂತರದಲ್ಲಿಯೂ ಬಾಹ್ಯದೇಶದಲ್ಲಿಯೂ ಆವರಣವಿಲ್ಲದವುಗಳಾಗಿಯೂ ಇರುವುವು.

೪೪. ಊರ್ಧ್ವಸ್ರೋತಸ್ಸುಗಳ ಸೃಷ್ಟಿಯಲ್ಲಿ ಜನಿಸಿದ ಪ್ರಜೆಗಳು ಮಾತ್ರ ಬಾಹ್ಯಾಂತರಗಳಲ್ಲಿ ಪ್ರಕಾಶಮಯರಾಗಿರುವರು. ಅವರು ನವಬ್ರಹ್ಮ ಮುಂತಾದ ಸಂತತವೂ ಸಂತುಷ್ಟಚಿತ್ತರಾದ ಬುಧರೆಂದು ಕರೆಯಲ್ಪಡುವರು.

೪೫. ಈ ರೀತಿ ಮೂರನೆಯದಾದ ದೇವಗಣ ಸೃಷ್ಟಿಯೆಂಬ ಊರ್ಧ್ವಸ್ರೋತಃ ಸೃಷ್ಟಿಯು ಮುಗಿದ ತರುವಾಯ ಬ್ರಹ್ಮದೇವನು ಸೃಷ್ಟಿವಿಷಯದಲ್ಲಿ ತೃಪ್ತಿಹೊಂದಿ ಮತ್ತೊಂದು ಉಚ್ಚವರ್ಗದ ಸೃಷ್ಟಿಯನ್ನು ನಿರ್ವಹಿಸಬೇಕೆಂಬುದಾಗಿ ಧ್ಯಾನ—ಅಭಿಮಾನಗಳನ್ನು ಹೊಂದಲಿಲ್ಲ.

೪೬-೪೭. ಆದರೆ ಹೀಗೆ ನಡೆದಿರುವ ಸೃಷ್ಟಿಗಳಿಗಿಂತ ವಿಲಕ್ಷಣವಾದ ಮತ್ತು ಬಹುಲಸೃಷ್ಟಿಗೆ ಸಾಧನದಾದ ಒಂದು ಸೃಷ್ಟಿಯನ್ನು ಮಾಡಲು ಸೃಜ್ಯಪ್ರಾಣಿಗಳ

**ಯಸ್ಮಾತ್ತೇಽರ್ವಾಕ್ ಪ್ರವರ್ತಂತೇ ತತೋಽರ್ವಾಕ್ಸ್ರೋತಸಸ್ತು ತೇ ।**
**ತೇ ಚ ಪ್ರಕಾಶಬಹುಲಾಸ್ತಮಸ್ಸ್ಪೃಷ್ಟರಜೋಽಧಿಕಾಃ ॥ ೪೮ ॥**

**ತಸ್ಮಾತ್ತೇ ದುಃಖಬಹುಲಂ ಭೂಯೋ ಭೂಯಶ್ಚ ಕಾರಿಣಃ ।**
**ಪ್ರಕಾಶಾ ಬಹಿರಂತಶ್ಚ ಮನುಷ್ಯಾಃ ಸಾಧಕಾಶ್ಚ ತೇ ॥ ೪೯ ॥**

**ಲಕ್ಷಣೈರ್ನಾರಕಾದ್ಯೈಸ್ತೈರಷ್ಟಧಾ ಚ ವ್ಯವಸ್ಥಿತಾಃ ।**
**ಸಿದ್ಧಾತ್ಮಾನೋ ಮನುಷ್ಯಾಸ್ತೇ ಗಂಧರ್ವೈಃ ಸಹಧರ್ಮಿಣಃ ॥ ೫೦ ॥**

**ಪಂಚಮೋಽನುಗ್ರಹಃ ಸರ್ಗಃ ಚತುರ್ಧಾ ಸ ವ್ಯವಸ್ಥಿತಃ ।**
**ವಿಪರ್ಯಯೇಣ ಶಕ್ತ್ಯಾ ಚ ಸಿದ್ಧಮುಖ್ಯಾಸ್ತಥೈವ ಚ ॥ ೫೧ ॥**

---

ಪೂರ್ವಕರ್ಮಗಳನ್ನು ಸ್ಮರಿಸಿ ಹಾಗೆಯೇ ಸೃಷ್ಟಿಯನ್ನು ಧ್ಯಾನಿಸಲಾಗಿ ಈಶ್ವರನಿಂದ ಭೌತಸರ್ಗವೆಂಬ ಅರ್ವಾಕ್ ಸ್ರೋತಸ್ಸುಗಳ ಸೃಷ್ಟಿಯು ಜನಿಸಿತು.

೪೮. ಈ ಸೃಷ್ಟಿಯಲ್ಲಿ ಜನಿಸಿದ ವ್ಯಕ್ತಿಗಳು ಅರ್ವಾಕ್ ಗತಿಯುಳ್ಳವುಗಳಾದ್ದರಿಂದ ಅರ್ವಾಕ್ ಸ್ರೋತಸ್ಸೆಂಬ ಹೆಸರನ್ನು ಪಡೆದಿವೆ. ಅವು ಪ್ರಕಾಶದಿಂದ ಕೂಡಿದ್ದರೂ ತಮೋಗುಣ ಸಂಪರ್ಕವುಳ್ಳ ರಜೋಗುಣದ ಪ್ರಾಧಾನ್ಯವುಳ್ಳವುಗಳಾಗಿ ಜನಿಸಿವೆ.

೪೯. ಇಂತಹ ತಮೋ-ರಜೋ ಗುಣಗಳ ಪ್ರಾಧಾನ್ಯದಿಂದ ಆ ಪ್ರಾಣಿಗಳು ದುಃಖಾನುಭವಿಗಳಾಗಿಯೂ ಮತ್ತೆ ಮತ್ತೆ ಪ್ರಕೃತಿಗೆ ಅನುಗುಣವಾಗಿ ಕರ್ತವ್ಯ ಕರ್ಮಗಳಲ್ಲಿ ಆಸಕ್ತಿಯನ್ನು ಹೊಂದಿದವುಗಳಾಗಿಯೂ ಬಾಹ್ಯಾಂತರಗಳಲ್ಲಿ ಜ್ಞಾನವೆಂಬ ಪ್ರಕಾಶೋದಯವುಳ್ಳ ಸಾಧಕ ಮನುಷ್ಯರೆಂದು ಕರೆಯಲ್ಪಡುವುವೂ ಆಗಿವೆ.

೫೦. ಇವು ನಾರಕ (ನರಕ ಲೋಕದ ಪ್ರಾಣಿ) ಮುಂತಾದ ವಿಭಜನೆಯಿಂದ ಬೇರೆ ಬೇರೆ ಲಕ್ಷಣಗಳಿಂದ ಕೂಡಿ ಎಂಟು ಬಗೆಯಾಗಿವೆ. ಸಿದ್ಧಿಗಳನ್ನು ಸಂಪಾದಿಸಿದ ಮನುಷ್ಯರು ಮಾತ್ರ ಗಂಧರ್ವರಿಗೆ ಸಮಾನವಾದ ಭೋಗಸಂಪತ್ತೆಂಬ ಧರ್ಮವುಳ್ಳವರಾಗಿರುವರು.

೫೧. ಐದನೆಯದಾಗಿ ಜನಿಸಿದ ಅನುಗ್ರಹಾತ್ಮಕವಾದ ಸೃಷ್ಟಿಯು ನಾಲ್ಕು ಬಗೆಯಿಂದ ವ್ಯವಸ್ಥೆ ಹೊಂದಿದೆ. ಜ್ಞಾನ-ಶಕ್ತಿಗಳ ತಾರತಮ್ಯದಿಂದ ಕೂಡಿ ಸಿದ್ಧರೇ ಮುಂತಾದವರು ಈ ಸೃಷ್ಟಿಯಲ್ಲಿ ಸೇರಿರುವರು.

ನಿವೃತ್ತಾ ವರ್ತಮಾನಾಶ್ಚ ಪ್ರಜಾಯಂತೇ ಪುನಃ ಪುನಃ ।
ಭೂತಾದಿಕಾನಾಂ ಸತ್ತ್ವಾನಾಂ ಷಷ್ಠಃ ಸರ್ಗಃ ಸ ಉಚ್ಯತೇ ॥ ೫೨ ॥

ಸ್ವಾದನಾಶ್ಚಾಪ್ಯಶೀಲಾಶ್ಚ ಜ್ಞೇಯಾ ಭೂತಾದಿಕಾಶ್ಚ ತೇ ।
ಪ್ರಥಮೋ ಮಹತಃ ಸರ್ಗೋ ವಿಜ್ಞೇಯೋ ಬ್ರಹ್ಮಣಸ್ತು ಸಃ ॥ ೫೩ ॥

ತನ್ಮಾತ್ರಾಣಾಂ ದ್ವಿತೀಯಸ್ತು ಭೂತಸರ್ಗಃ ಸ ಉಚ್ಯತೇ ।
ವೈಕಾರಿಕಸ್ತೃತೀಯಸ್ತು ಚೈಂದ್ರಿಯಃ ಸರ್ಗ ಉಚ್ಯತೇ ॥ ೫೪ ॥

ಇತ್ಯೇತೇ ಪ್ರಾಕೃತಾಃ ಸರ್ಗಾ ಉತ್ಪನ್ನಾ ಬುದ್ಧಿಪೂರ್ವಕಾಃ ॥ ೫೫ ॥

ಮುಖ್ಯಸರ್ಗಶ್ಚತುರ್ಥಸ್ತು ಮುಖ್ಯಾ ವೈ ಸ್ಥಾವರಾಃ ಸ್ಮೃತಾಃ ।
ತಿರ್ಯಕ್ಸ್ರೋತಸಸರ್ಗಸ್ತು ತೈರ್ಯಗ್ಯೋನಸ್ತು ಪಂಚಮಃ ॥ ೫೬ ॥

---

೫೨. ಇವರು ಸೃಷ್ಟಿಪ್ರವಾಹದಲ್ಲಿ ಎಷ್ಟೋ ಕೆಲವು ಮಂದಿ ಹಿಂದೆಯೇ ಕಳೆದು ಹೋದವರಾಗಿ ಮತ್ತೆ ಕೆಲವರು ವರ್ತಮಾನ ಕಾಲದಲ್ಲಿರುವವರಾಗಿ ಮತ್ತೆ ಮತ್ತೆ ಜನ್ಮಮೃತ್ಯುವ ಅವಶ್ಯಂಭಾವದಿಂದ ಕೂಡಿರುವರು. ಭೂತಾದಿ ಸತ್ತ್ವಗಳ ಸೃಷ್ಟಿಯು ಆರನೆಯದಾಗಿ ಗಣಿಸಲ್ಪಟ್ಟಿದೆ.

೫೩. ಈ ಭೂತಾದಿ ಪ್ರಾಣಿಗಳು ಅನ್ನೋದಕಗಳಿಂದ ಕ್ಷುತ್ ಪಿಪಾಸೆಗಳನ್ನು ಶಾಂತಿಗೊಳಿಸುವ ಸ್ವಭಾವವುಳ್ಳವುಗಳು. ಬ್ರಹ್ಮದೇವನಿಂದ ಆದ ಸೃಷ್ಟಿಪರಂಪರೆಯಲ್ಲಿ ಮಹತ್ತತ್ತ್ವದ ಸೃಷ್ಟಿಯು ಮೊದಲನೆಯದು.

೫೪. ತರುವಾಯ ತನ್ಮಾತ್ರಗಳೆಂಬ ಸೂಕ್ಷ್ಮಭೂತ ಸೃಷ್ಟಿಯು ಎರಡನೆಯ ದಾಗಿ ಪರಿಗಣಿಸಲ್ಪಟ್ಟಿದೆ. ವೈಕಾರಿಕವೆಂಬ ವಿಶಿಷ್ಟ ಸಂಜ್ಞೆಯನ್ನು ಹೊಂದಿ ಇಂದ್ರಿಯ ಗಳಿಗೆ ಸಂಬಂಧಪಟ್ಟು ಇರುವುದು ಮೂರನೆಯ ಸೃಷ್ಟಿಯು.

೫೫. ಇವೆಲ್ಲವೂ ಪ್ರಕೃತಿ ಸಂಬಂಧದಿಂದಾಗುವುದರಿಂದ ಪ್ರಾಕೃತಗಳೆಂದು ವ್ಯವಹರಿಸಲ್ಪಡುವುವೂ ಬ್ರಹ್ಮನಿಂದ ಬುದ್ಧಿಪೂರ್ವಕ ಹುಟ್ಟಿದವುಗಳೂ ಆಗಿವೆ.

೫೬. ಭೂಮಂಡಲದಲ್ಲಿ ಎಲ್ಲೆಲ್ಲಿಯೂ ವಿಸ್ತಾರವಾದ್ದರಿಂದ ಮುಖ್ಯ ವಸ್ತುಗಳೆ

ತಥೋರ್ಧ್ವಸ್ರೋತಸಾಂ ಸರ್ಗಃ ಷಷ್ಠೋ ದೈವತ ಉಚ್ಯತೇ ।
ತತೋರ್ಧ್ವಸ್ರೋತಸಾಂ ಸರ್ಗಃ ಸಪ್ತಮಃ ಸ ತು ಮಾನುಷಃ ॥ ೫೭ ॥

ಅಷ್ಟಮೋಽನುಗ್ರಹಃ ಸರ್ಗಃ ಸಾತ್ತ್ವಿಕಸ್ತಾಮಸಶ್ಚ ಸಃ ।
ಪಂಚೈತೇ ವೈಕೃತಾಃ ಸರ್ಗಾಃ ಪ್ರಾಕೃತಾದ್ಯಾಸ್ತ್ರಯಃ ಸ್ಮೃತಾಃ ॥ ೫೮ ॥

ಪ್ರಾಕೃತೋ ವೈಕೃತಶ್ಚೈವ ಕೌಮಾರೋ ನವಮಃ ಸ್ಮೃತಃ ।
ಪ್ರಾಕೃತಾ ಬುದ್ಧಿಪೂರ್ವಾಸ್ತು ತ್ರಯಃ ಸರ್ಗಾಸ್ತು ವೈಕೃತಾಃ ॥ ೫೯ ॥

ಬುದ್ಧಿಪೂರ್ವಾಃ ಪ್ರವರ್ತೇಯುಸ್ತದ್ವರ್ಗಾ ಬ್ರಾಹ್ಮಣಾಸ್ತು ವೈ ।
ವಿಸ್ತರಾಚ್ಚ ಯಥಾ ಸರ್ವೇ ಕೀರ್ತ್ಯಮಾನಂ ನಿಬೋಧತ ॥ ೬೦ ॥

ಚತುರ್ಧಾ ಚ ಸ್ಥಿತಃ ಸೋಽಪಿ ಸರ್ವಭೂತೇಷು ಕೃತ್ಸ್ನಶಃ ।
ವಿಪರ್ಯಯೇಣ ಶಕ್ತ್ಯಾ ಚ ಬುದ್ಧ್ಯಾ ಸಿದ್ಧ್ಯಾ ತಥೈವ ಚ ॥ ೬೧ ॥

---

ನಿಸುವ ಸ್ಥಾವರ ಜಂತುಗಳ ಸೃಷ್ಟಿಯು ನಾಲ್ಕನೆಯದು. ತಿರ್ಯಗ್ಯೋನಿಯಿಂದ ಜನಿಸಿದ ತಿರ್ಯಕ್ ಸ್ರೋತಸ್ಸೆಂಬ ಸೃಷ್ಟಿಯು ಐದನೆಯದಾಗಿದೆ.

೫೭. ಊರ್ಧ್ವಸ್ರೋತಸ್ಸುಗಳ ಸೃಷ್ಟಿಯಲ್ಲಿ ದೇವತಾರೂಪವಾದ ಸೃಷ್ಟಿಯು ಆರನೆಯದಾಗಿದೆ. ಮನುಷ್ಯರ ಸೃಷ್ಟಿಯು ಏಳನೆಯದಾಗಿ ಪರಿಗಣಿಸಲ್ಪಟ್ಟಿದೆ.

೫೮. ಅನುಗ್ರಹವೆಂಬ ಎಂಟನೆಯ ಸರ್ಗವು ಸತ್ತ್ವ-ತಮೋಗುಣದ್ವಯದಿಂದ ಕೂಡಿರುವುದು. ಹೀಗೆ ನಾಲ್ಕನೆಯ ಸೃಷ್ಟಿಯಿಂದ ಗಣಿಸಬಹುದಾದ ಐದು ಬಗೆಯ ಸೃಷ್ಟಿಯು ವೈಕೃತಸೃಷ್ಟಿಯೆಂದೂ ಅದಕ್ಕೆ ಮೊದಲಿನ ಮೂರು ಬಗೆಯ ಸೃಷ್ಟಿಯು ಪ್ರಾಕೃತ ಸೃಷ್ಟಿಯೆಂದೂ ವ್ಯವಹರಿಸಲ್ಪಟ್ಟಿವೆ.

೫೯-೬೦. ಈ ಎಲ್ಲ ಸೃಷ್ಟಿಗಳಲ್ಲಿ ಪ್ರಾಕೃತ-ವೈಕೃತಗಳು ಮಾತ್ರವಲ್ಲದೆ ಕೌಮಾರವೆಂಬ ಒಂಭತ್ತನೆಯ ಸೃಷ್ಟಿಯೊಂದುಬಗೆಯಿದೆ. ಬ್ರಹ್ಮದೇವನ ಸೃಷ್ಟಿ ಶ್ರೇಣಿಯಲ್ಲಿ ಅಬುದ್ಧಿಪೂರ್ವಕವಾದ ಮೂರು ಬಗೆಯ ಪ್ರಾಕೃತ ಸೃಷ್ಟಿಯೂ ಬುದ್ಧಿ ಪೂರ್ವಕವಾದ ಇತರ ವೈಕೃತ ಸೃಷ್ಟಿಯೂ ಪ್ರವಾಹರೂಪವಾಗಿ ನಡೆದು ಬಂದಿವೆ. ನೀವೆಲ್ಲರೂ ಈ ಸೃಷ್ಟಿಕ್ರಮದ ವಿಸ್ತಾರ ವಿಷಯದಲ್ಲಿ ನನ್ನ ವಚನವನ್ನು ಲಾಲಿಸಿರಿ.

೬೧. ಹೀಗೆ ಸರ್ವ ಭೂತಗಳನ್ನೂ ಸೃಜಿಸಿ ಪರಮಾತ್ಮನು ಪ್ರತಿಯೊಂದು

ಸ್ಥಾವರೇಷು ವಿಪರ್ಯಾಸಸ್ತಿರ್ಯಗ್ಯೋನಿಷು ಶಕ್ತಿತಃ ।
ಸಿದ್ಧಾತ್ಮಾನೋ ಮನುಷ್ಯಾಸ್ತು ಪುಷ್ಟಿರ್ದೇವೇಷು ಕೃತ್ಸ್ನಶಃ ॥ ೬೨ ॥

ಅಥೋ ಸಸರ್ಜ ವೈ ಬ್ರಹ್ಮಾ ಮಾನಸಾನಾತ್ಮನಃ ಸಮಾನ್ ।
ವೈವರ್ತ್ಯೇನ ತು ಜ್ಞಾನೇನ ನಿವೃತ್ತಾಸ್ತೇ ಮಹೌಜಸಃ ॥ ೬೩ ॥

ಸಂಬುದ್ಧ್ಯ ಚೈವ ನಾಮಾಥೋ ಅಪವೃತ್ತಾಸ್ತ್ರಯಸ್ತು ತೇ ।
ಅಸೃಷ್ಟ್ವೈವ ಪ್ರಜಾಸರ್ಗಂ ಪ್ರತಿಸರ್ಗಂ ತತಸ್ತತಃ ॥ ೬೪ ॥

ಬ್ರಹ್ಮಾ ತೇಷು ವ್ಯರಕ್ತೇಷು ತತೋಽನ್ಯಾನ್ ಸಾಧಕಾನ್ ಸೃಜನ್ ।
ಸ್ಥಾನಾಭಿಮಾನಿನೋ ದೇವಾಃ ಪುನರ್ಬ್ರಹ್ಮಾನುಶಾಸನಮ್ ।
ಅಭೂತಸೃಷ್ಟ್ಯವಸ್ಥಾ ಯೇ ಸ್ಥಾನಿನಸ್ತಾನ್ನಿಬೋಧ ಮೇ ॥ ೬೫ ॥

---

ಭೂತದಲ್ಲಿಯೂ ವಿಪರ್ಯಯ-ಶಕ್ತಿ-ಸಿದ್ಧಿಗಳೆಂಬ ಅಂಶಗಳಿಂದ ವಾಸಮಾಡಿರುವನು.

೬೨. ಸ್ಥಾವರ ಭೂತಗಳಲ್ಲಿ ವಿಪರ್ಯಯವೂ, ತಿರ್ಯಕ್ ಪ್ರಾಣಿಗಳಲ್ಲಿ ಶಕ್ತಿಯೂ, ಮನುಷ್ಯರಲ್ಲಿ ಬುದ್ಧಿಯೂ, ದೇವತೆಗಳಲ್ಲಿ ಸಿದ್ಧಿ ಅಥವಾ ಪುಷ್ಟಿಯೂ, ಪರಮಾತ್ಮನ ಅಂಶಗಳು ಪ್ರಕಾಶಿಸುತ್ತವೆ.

೬೩. ಹೀಗೆ ಸೃಷ್ಟಿಮಾಡಿ ತನಗೆ ಸಮಾನರಾಗಿ ಜ್ಞಾನಿಗಳಾದ ಮಾನಸ ಪುತ್ರರನ್ನು ಬ್ರಹ್ಮನು ಸೃಷ್ಟಿಯು ಹೆಚ್ಚಾಗಿ ಬೆಳೆಯುವುದಕ್ಕೆ ಸಹಾಯಕರಾಗಬೇಕೆಂಬ ಅಭಿಪ್ರಾಯದಿಂದ ಸೃಷ್ಟಿಮಾಡಿದನು. ಆದರೆ ಆ ಬ್ರಹ್ಮಮಾನಸಪುತ್ರರು ನಿವೃತ್ತಿ ಮಾರ್ಗಾವಲಂಬಿಗಳಾಗಿ ಮಹಾಧೀರರಾಗಿ ಸೃಷ್ಟಿಯ ವಿಷಯದಲ್ಲಿ ಪರಾಙ್ಮುಖರಾದರು.

೬೪. ಇವರು ಪ್ರಜಾಸೃಷ್ಟಿಯನ್ನು ನೆರವೇರಿಸದೇ ಪರಾಙ್ಮುಖರಾದುದನ್ನು ಕಂಡು ಬ್ರಹ್ಮನು ಮತ್ತೆ ಪ್ರಜಾ ಸೃಷ್ಟಿಯನ್ನು ಚಿಂತಿಸಿದನು.

೬೫. ಬ್ರಹ್ಮನು ಮಾನಸಪುತ್ರರೆಲ್ಲರೂ ವೈರಾಗ್ಯದಿಂದ ಸೃಷ್ಟಿಗೆ ಅನುಕೂಲರಾಗದಿರುವುದರಿಂದ ಇದಕ್ಕೆ ಸಾಧಕರಾದ ಮತ್ತೆ ಕೆಲವರನ್ನು ಸೃಷ್ಟಿಸಿ ಸೃಷ್ಟಿಯ ಅಧಿಕಾರ ಸ್ಥಾನವಾದ ಬ್ರಹ್ಮಪದವಿಯಲ್ಲೇ ಅಭಿಮಾನವಿಟ್ಟಿರುವ ದೇವತೆಗಳನ್ನು ನಿರ್ಮಿಸಿದನು. ಅವರು ಆ ಅಧಿಕಾರವನ್ನು ಬ್ರಹ್ಮಶಾಸನವೆಂದೂ ತಮ್ಮ ಕರ್ತವ್ಯವೆಂದೂ ಭಾವಿಸಿ

ಆಪೋಽಗ್ನಿಃ ಪೃಥಿವೀ ವಾಯು ರಂತರಿಕ್ಷೋ ದಿವಂ ತಥಾ ।
ಸ್ವರ್ಗೋ ದಿಶಃ ಸಮುದ್ರಾಶ್ಚ ನದ್ಯಶ್ಚೈವ ವನಸ್ಪತೀನ್ ॥ ೬೬ ॥

ಔಷಧೀನಾಂ ತಥಾತ್ಮಾನೋ ಹ್ಯಾತ್ಮನೋ ವೃಕ್ಷವೀರುಧಾಮ್ ।
ಲತಾಃ ಕಾಷ್ಠಾಃ ಕಲಾಶ್ಚೈವ ಮುಹೂರ್ತಾಃ ಸಂಧಿರಾತ್ರ್ಯಹಾಃ ॥ ೬೭ ॥

ಅರ್ಧಮಾಸಾಶ್ಚ ಮಾಸಾಶ್ಚ ಅಯನಾಬ್ದಯುಗಾನಿ ಚ ।
ಸ್ಥಾನೇ ಸ್ರೋತಃಸ್ವಭಿಮಾನಾಃ ಸ್ಥಾನಾಖ್ಯಾಶ್ಚೈವ ತೇ ಸ್ಮೃತಾಃ ॥೬೮॥

ಸ್ಥಾನಾತ್ಮಾನಃ ಸ ದೃಷ್ಟ್ವಾತು ತತೋಽನ್ಯಾನ್ ಸ ತದಾಽಸೃಜತ್ ।
ದೇವಾಂಶ್ಚೈವ ಪಿತೄಂಶ್ಚೈವ ಯೈರಿಮಾ ವರ್ಧಿತಾಃ ಪ್ರಜಾಃ ॥ ೬೯ ॥

ಭೃಗ್ವಂಗಿರಾ ಮರೀಚಿಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।
ದಕ್ಷೋಽತ್ರಿಶ್ಚ ವಸಿಷ್ಠಶ್ಚ ಸೋಽಸೃಜನ್ನವ ಮಾನಸಾನ್ ॥ ೭೦ ॥

---

ತವಭಿಮಾನಿಗಳಾದರು. ಸೃಷ್ಟಿ ಅವಸ್ಥೆ ಅಧಿಕಾರವನ್ನು ಹೊಂದಿದ ದೇವತೆಗಳೂ ಸ್ಥಾನಾಭಿಮಾನಿಗಳೂ ಯಾರಾರಿರುವುರೆಂಬುದನ್ನು ಕೇಳಿರಿ.

೬೬-೬೮. ಜಲ, ಅಗ್ನಿ, ಪೃಥಿವೀ, ವಾಯು, ಆಕಾಶ, ದ್ಯುಲೋಕ, ಸ್ವರ್ಗಲೋಕ, ದಿಕ್ಕು, ಸಮುದ್ರ, ನದೀ, ವನಸ್ಪತಿ, ಔಷಧಿ, ವೃಕ್ಷ, ಲತೆ, ಕಾಷ್ಠಾ, ಕಲಾ, ಮುಹೂರ್ತ, ರಾತ್ರಿ, ದಿನ, ಅಹೋರಾತ್ರಸಂಧಿ, ಅರ್ಧಮಾಸ, ಮಾಸ, ಅಯನ, ಸಂವತ್ಸರ, ಯುಗ, ಇವುಗಳೆಲ್ಲವೂ ಸೃಷ್ಟಿಯನ್ನು ನಿರ್ವಹಿಸುವ ದೇವತೆಗಳಿಗೆ ಅಭಿಮಾನಾಸ್ಪದವಾದ ಸ್ಥಾನಗಳ ಸ್ರೋತಸ್ಸು, ಈ ಸ್ಥಾನಗಳಲ್ಲಿದ್ದು ಸೃಷ್ಟಿಯನ್ನು ಮುಂದುವರಿಸುತ್ತಾರೆ.

೬೯. ಬ್ರಹ್ಮನು ಈ ರೀತಿಯಾಗಿ ಸ್ಥಾನಾಭಿಮಾನಿಗಳನ್ನು ಸೃಷ್ಟಿಮಾಡಿ ಮತ್ತು ಯಥೇಚ್ಛವಾಗಿ ಪ್ರಜೆಗಳನ್ನು ಸೃಷ್ಟಿಸಿ ಸೃಷ್ಟಿಯನ್ನು ವೃದ್ಧಿಗೆತರುವ ದೇವ-ಪಿತೃಗಳೆಂಬ ಮತ್ತೆ ಕೆಲವರ ಗಣವನ್ನು ಸೃಜಿಸಿದನು.

೭೦. ಹೀಗೆ ಹುಟ್ಟಿದವರು :—ಭೃಗು, ಅಂಗಿರ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠರೆಂಬುವರು, ಇವರೆಲ್ಲರೂ ಬ್ರಹ್ಮನ ಮಾನಸ ಪುತ್ರರು.

**ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ।**
**ಬ್ರಹ್ಮಾ ಯಥಾತ್ಮಕಾನಾಂ ತು ಸರ್ವೇಷಾಂ ಬ್ರಹ್ಮಯೋಗಿನಾಮ್ ॥ ೨೧ ॥**

**ತತೋಽಸೃಜತ್ಪುನರ್ಬ್ರಹ್ಮಾ ರುದ್ರಂ ರೋಷಾತ್ಮಸಂಭವಮ್ ।**
**ಸಂಕಲ್ಪಂ ಚೈವ ಧರ್ಮಂ ಚ ಸರ್ವೇಷಾಮೇವ ಪರ್ವತೌ ॥ ೨೨ ॥**

**ಸೋಽಸೃಜದ್ವ್ಯವಸಾಯಂ ತು ಬ್ರಹ್ಮಾ ಭೂತಸುಖಾತ್ಮಕಮ್ ।**
**ಸಂಕಲ್ಪಾಚ್ಚೈವ ಸಂಕಲ್ಪೋ ಜಜ್ಞೇ ಸೋಽವ್ಯಕ್ತಯೋನಿನಃ ॥ ೨೩ ॥**

**ಪ್ರಾಣಾದ್ದಕ್ಷೋಽಸೃಜದ್ವಾಚಂ ಚಕ್ಷುರ್ಭ್ಯಾಂ ಚ ಮರೀಚಿನಮ್ ।**
**ಭೃಗುಶ್ಚ ಹೃದಯಾಜ್ಜಜ್ಞೇ ಋಷಿಃ ಸಲಿಲಯೋನಿನಃ ॥ ೨೪ ॥**

**ಶಿರಸಶ್ಚಾಂಗಿರಾಶ್ಚೈವ ಶ್ರೋತ್ರಾದತ್ರಿಸ್ತಥೈವ ಚ ।**
**ಪುಲಸ್ತ್ಯಶ್ಚ ತಥೋದಾನಾದ್ವ್ಯಾನಾತ್ತು ಪುಲಹಸ್ತಥಾ ॥ ೨೫ ॥**

---

೨೧. ಈ ಬ್ರಹ್ಮ ಮಾನಸಪುತ್ರರು ಒಂಭತ್ತು ಮಂದಿಯೆಂದು ಪುರಾಣಪ್ರಸಿದ್ಧರಾದವರು, ಮತ್ತು ಎಲ್ಲರೂ ಮುಖ್ಯ ಬ್ರಹ್ಮನಲ್ಲಿ ಅವನ ಶಾಸನದಂತಿರುವ ಯೋಗಾಭ್ಯಾಸವುಳ್ಳವರೂ ಬ್ರಹ್ಮನೇ ಆತ್ಮಭೂತನೆಂದು ಅರಿತವರೂ ಆಗಿರುವರು.

೨೨. ಅನಂತರದಲ್ಲಿ ಬ್ರಹ್ಮನು ಕೋಪಸ್ವರೂಪನಾದ ರುದ್ರನೆಂಬ ಪುತ್ರನನ್ನು ನಿರ್ಮಿಸಿದನು. ಹಾಗು ಸರ್ವರಿಗೂ ಅತಿ ಮುಖ್ಯಗಳಾದ ಧರ್ಮಸಂಕಲ್ಪಗಳನ್ನು ಸೃಷ್ಟಿಮಾಡಿದನು.

೨೩. ಮತ್ತು ಸರ್ವಪ್ರಾಣಿಗಳಿಗೆ ಸುಖವನ್ನು ನೀಡುವ ವ್ಯವಸಾಯವನ್ನು ತನ್ನ ಸಂಕಲ್ಪಮಾತ್ರದಿಂದ ಹುಟ್ಟಿಸಿದನು. ಆ ವಿಧದ ಸಂಕಲ್ಪವು ಬ್ರಹ್ಮದೇವನಿಗೆ ಅವ್ಯಕ್ತತತ್ತ್ವದ ಸಂಪರ್ಕವೆಂಬ ಕಾರಣದಿಂದ ಹುಟ್ಟಿತು.

೨೪-೨೬. ಪುರುಷಾಕಾರನಾದ ಬ್ರಹ್ಮನು ಹಿಂದೆ ಹೇಳಿದ ನವಬ್ರಹ್ಮರನ್ನು ಸೃಷ್ಟಿಮಾಡಿದ ಕ್ರಮವು ಈರೀತಿಯಾಗಿದೆ. ತನ್ನ ಪ್ರಾಣವಾಯುವಿನಿಂದ ದಕ್ಷಬ್ರಹ್ಮನನ್ನೂ ಚಕ್ಷುರಿಂದ್ರಿಯಗಳಿಂದ ಮರೀಚಿ ಬ್ರಹ್ಮನನ್ನೂ ಜ್ಞಾನಮಯವಾದ ಹೃದಯಾಂಶದಿಂದ ಭೃಗುಋಷಿಯನ್ನೂ ಶಿರಸ್ಸಿನಿಂದ ಅಂಗಿರಮುನಿಯನ್ನೂ ಶ್ರೋತ್ರೇಂದ್ರಿಯದಿಂದ ಅತ್ರಿಯನ್ನೂ ಉದಾನವಾಯುವಿನಿಂದ ಪುಲಸ್ತ್ಯಬ್ರಹ್ಮನನ್ನೂ ವ್ಯಾಸ

**ಸಮಾನತೋ ವಸಿಷ್ಠಶ್ಚ ಹ್ಯಪಾನಾನ್ನಿರ್ಮಮೇ ಕ್ರತುಮ್ ।**
**ಇತ್ಯೇತೇ ಬ್ರಹ್ಮಣಃ ಶ್ರೇಷ್ಠಾ ಪುತ್ರಾ ವೈ ದ್ವಾದಶ ಸ್ಮೃತಾಃ ॥ ೭೬ ॥**

**ಧರ್ಮಾದಯಃ ಪ್ರಥಮಜಾ ವಿಜ್ಞೇಯಾ ಬ್ರಹ್ಮಣಃ ಸುತಾಃ ।**
**ಭೃಗ್ವಾದಯಸ್ತು ಯೇ ಸೃಷ್ಟಾ ನ ಚ ತೇ ಬ್ರಹ್ಮವಾದಿನಃ ॥ ೭೭ ॥**

**ಗೃಹಮೇಧಿಪುರಾಣಾಸ್ತೇ ವಿಜ್ಞೇಯಾ ಬ್ರಹ್ಮಣಃ ಸುತಾಃ ।**
**ದ್ವಾದಶೈತೇ ಪ್ರಸೂಯಂತೇ ಸಹ ರುದ್ರೇಣ ಚ ದ್ವಿಜಾಃ ॥ ೭೮ ॥**

**ಕ್ರತುಃ ಸನತ್ಕುಮಾರಶ್ಚ ದ್ವಾವೇತಾವೂರ್ಧ್ವರೇತಸೌ ।**
**ಪೂರ್ವೋತ್ಪತ್ತೌ ಪುರಾ ಹ್ಯೇತೌ ಸರ್ವೇಷಾಮಪಿ ಪೂರ್ವಜೌ ॥ ೭೯ ॥**

**ವ್ಯತೀತೌ ಸಪ್ತಮೇ ಕಲ್ಪೇ ಪುರಾಣೌ ಲೋಕಸಾಧಕೌ ।**
**ವಿರಜೇತೇಽತ್ರ ವೈ ಲೋಕೇ ತೇಜಸಾಕ್ಷಿಪ್ಯ ಚಾತ್ಮನಃ ॥ ೮೦ ॥**

---

ವಾಯುವಿನಿಂದ ಪುಲಹಬ್ರಹ್ಮನನ್ನೂ ಸಮಾನವಾಯುವಿನಿಂದ ವಸಿಷ್ಠ ಮುನಿಯನ್ನೂ ಅಪಾನದಿಂದ ಕ್ರತುಬ್ರಹ್ಮನನ್ನೂ ಸೃಷ್ಟಿಮಾಡಿರುವನು. ಈರೀತಿಯಾಗಿ ಧರ್ಮ, ಸಂಕಲ್ಪ, ವ್ಯವಸಾಯಗಳೂ, ದಕ್ಷನೇ ಮುಂತಾದ ನವಬ್ರಹ್ಮರೂ ಸೇರಿ ಹನ್ನೆರಡುಮಂದಿ ಶ್ರೇಷ್ಠರಾದ ಪ್ರಜೆಗಳು ಪ್ರಪಂಚಕಾರಣರಾಗಿ ಜನಿಸಿದರು.

೭೭. ಧರ್ಮ ಮುಂತಾದ ಹಿಂದೆ ಹೇಳಿದ ತತ್ತ್ವಗಳು ಬ್ರಹ್ಮಪುತ್ರರಾಗಿ ಮೊದಲಾಗಿ ಜನ್ಮ ಎತ್ತಿದವು. ಭೃಗು ಮುಂತಾದ ನವಬ್ರಹ್ಮರು ಬ್ರಹ್ಮವಾದಿಗಳಾದ ಮಹಾತ್ಮರಾಗಿ ಸೃಷ್ಟಿಸಲ್ಪಟ್ಟಿರುವರು.

೭೮. ದ್ವಿಜರೆ: ಇವರೆಲ್ಲರು ಗೃಹಸ್ಥಧರ್ಮವನ್ನು ಮೊದಲು ಕೈಗೊಂಡಿರುವ ಪ್ರಾಚೀನ ಗೃಹಸ್ಥರಾದ ಬ್ರಹ್ಮಮಾನಸಪುತ್ರರು, ಈ ಹನ್ನೆರಡು ಮಂದಿ ರುದ್ರನ ಸಂಗಡ ಜನ್ಮವೆತ್ತಿರುವರು.

೭೯. ಕ್ರತು ಸನತ್ಕುಮಾರರೆಂಬೀರ್ವರು ಊರ್ಧ್ವರೇತಸ್ಸು (ಸ್ತಬ್ಧವೀರ್ಯರು) ಗಳಾಗಿ ಎಲ್ಲರಿಗೂ ಪೂರ್ವಜರಾಗಿ ಸೃಷ್ಟಿಯ ಆದಿಯಲ್ಲಿ ಹುಟ್ಟಿದವರು.

೮೦. ಅವರೀರ್ವರು ಬ್ರಹ್ಮನ ಏಳನೆಯ ಕಲ್ಪದ ಸೃಷ್ಟಿಕಾಲವು ನಡೆಯುವಾಗ

ತಾವುಭೌ ಯೋಗಧರ್ಮಾಣಾವಾರೋಪ್ಯಾತ್ಮಾನಮಾತ್ಮನಾ ।
ಪ್ರಜಾಧರ್ಮಂ ಚ ಕಾಮಂ ಚ ವರ್ತಯೇತೇ ಮಹೌಜಸೌ ॥ ೮೧ ॥

ಯಥೋತ್ಪನ್ನಸ್ತಥೈವೇಹ ಕುಮಾರ ಇತಿ ಚೋಚ್ಯತೇ ।
ತತಃ ಸನತ್ಕುಮಾರೇತಿ ನಾಮ ತಸ್ಯ ಪ್ರತಿಷ್ಠಿತಮ್ ॥ ೮೨ ॥

ತೇಷಾಂ ದ್ವಾದಶ ತೇ ವಂಶಾ ದಿವ್ಯಾ ದೇವಗಣಾನ್ವಿತಾಃ ।
ಕ್ರಿಯಾವಂತಃ ಪ್ರಜಾವಂತೋ ಮಹರ್ಷಿಭಿರಲಂಕೃತಾಃ ॥ ೮೩ ॥

ಪ್ರಾಣಜಾಂಸ್ತು ಸ ದೃಷ್ಟ್ವಾ ವೈ ಬ್ರಹ್ಮಾ ದ್ವಾದಶ ಸಾತ್ತ್ವಿಕಾನ್ ।
ತತೋಽಸುರಾನ್ ಪಿತೄನ್ ದೇವಾನ್ ಮನುಷ್ಯಾಂಶ್ಚಾಸೃಜತ್ಪ್ರಭುಃ ।
॥ ೮೪ ॥

---

ಲೋಕಕ್ಕೆ ಸಾಧಕರೂ ಪುರಾಣಪುಣ್ಯಾತ್ಮರೂ ಆಗಿದ್ದು ಅತೀತರಾದರು. ಅವರು ತೇಜೋಮಯರಾಗಿ ಈ ಲೋಕದಲ್ಲಿ ಪ್ರಕಾಶಿಸುತ್ತಿದ್ದರು.

೮೧. ಮತ್ತು ಸಂತತವೂ ಯೋಗಮಾರ್ಗತತ್ಪರರಾಗಿ ಆತ್ಮನಲ್ಲಿಯೇ ಆತ್ಮವನ್ನು (ಚಿತ್ತವನ್ನು) ಅಚಲವಾಗಿಟ್ಟು ಮಹಾಮಹಿಮೆಯಿಂದ ಕೂಡಿ ಪ್ರಜಾಧರ್ಮವನ್ನೂ ಧರ್ಮಯುತವಾದ ಕಾಮವನ್ನೂ ಸಂಚಾಲನ ಮಾಡುತ್ತಿರುವರು.

೮೨. ಅವರಲ್ಲಿ ಕುಮಾರನೆಂಬುವನು ಹುಟ್ಟುವಾಗ ಯಾವ ವಿಧದ ರೂಪ ಆಕಾರಗಳಿಂದ ಹುಟ್ಟಿದನೋ ಅದೇ ಶಾಶ್ವತವಾದ ರೂಪ-ಆಕಾರಗಳು ಇರುವುದರಿಂದ ಕುಮಾರನೆಂಬ ಸಂಜ್ಞೆಯ ಪ್ರಸಿದ್ಧಿಯನ್ನು ಹೊಂದಿದನು.

೮೩. ಅವರ ಆ ಹನ್ನೆರಡು ವಂಶಗಳು ದಿವ್ಯಾಂಶಗಳು, ದೇವಗಣಾನ್ವಯ, ಸತ್ಕರ್ಮಾಚರಣೆ, ಅವಿಚ್ಛಿನ್ನವಾದ ಪ್ರಜೆ ಇವುಗಳಿಂದ ಕೂಡಿದ ಮಹರ್ಷಿಗಳಿಂದ ಶೋಭಿಸಲ್ಪಟ್ಟಿದ್ದವು.

೮೪. ಸರ್ವಪ್ರಭುವಾದ ಬ್ರಹ್ಮನು ತನ್ನ ಕಾರ್ಯಕರಣಗಳಿಂದ ಸಾತ್ವಿಕರಾಗಿರುವ ಪೂರ್ವೋಕ್ತರಾದ ಹನ್ನೆರಡು ಮಂದಿಯ ಸೃಷ್ಟಿಯಾದ ತರುವಾಯ ಅಸುರ-ಪಿತೃ-ದೇವ-ಮನುಷ್ಯ ಮೊದಲಾದ ಗಣಗಳನ್ನು ನಿರ್ಮಾಣಮಾಡಿದನು.

**ಮುಖಾದ್ದೇವಾನಜನಯತ್ ಪಿತ್ರ್ಯಾಂಶ್ಚೈವಾಥ ವಕ್ಷಸಃ ।**
**ಪ್ರಜನಾನ್ಮನುಷ್ಯಾನ್ ವೈ ಜಘನಾನ್ನಿರ್ಮಮೇಽಸುರಾನ್ ॥ ೮೫ ॥**

**ನಕ್ತಂ ಸೃಜನ್ ಪುನರ್ಬ್ರಹ್ಮಾ ಜ್ಯೋತ್ಸ್ನಯಾ ಮಾನುಷಾತ್ಮನಃ ।**
**ಸುಧಾಯಾಶ್ಚ ಪಿತ್ರ್ಯಾಂಶ್ಚೈವ ದೇವದೇವಃ ಸಸರ್ಜ ಹ ॥ ೮೬ ॥**

**ಮುಖ್ಯಾನಮುಖ್ಯಾನ್ ಸೃಜನ್ ದೇವಾನಸುರಾಂಶ್ಚ ತತಃ ಪುನಃ ।**
**ಮನಸಶ್ಚ ಮನುಷ್ಯಾಂಶ್ಚ ಪಿತೃವನ್ಮಹತಃ ಪಿತ್ರ್ಯಾನ್ ॥ ೮೭ ॥**

**ವಿದ್ಯುತೋಽಶನಿ ಮೇಘಾಂಶ್ಚ ಲೋಹಿತೇಂದ್ರ ಧನೂಂಷಿ ಚ ।**
**ಋಚೋ ಯಜೂಂಷಿ ಸಾಮಾನಿ ನಿರ್ಮಮೇ ಯಜ್ಞಸಿದ್ಧಯೇ ॥೮೮॥**

**ಉಚ್ಚಾವಚಾನಿ ಭೂತಾನಿ ಮಹಸಸ್ತಸ್ಯ ಜಜ್ಞಿರೇ ।**
**ಬ್ರಹಣಸ್ತು ಪ್ರಜಾಸರ್ಗಂ ದೇವರ್ಷಿಪಿತೃಮಾನವಮ್ ॥ ೮೯ ॥**

---

೮೫. ಬ್ರಹ್ಮನ ಮುಖದಿಂದ ಸಮಸ್ತ ದೇವತೆಗಳೂ, ಹೃದಯದಿಂದ ಪಿತೃ ದೇವತೆಗಳೂ, ಪ್ರಜನನೇಂದ್ರಿಯದಿಂದ ಮನುಷ್ಯರೂ, ಜಘನಭಾಗದಿಂದ ಅಸುರರೂ ಜನಿಸಿದರು.

೮೬. ಸಕಲ ದೇವತೆಗಳಿಗೂ ದೇವತೆಯಾದ ಪ್ರಭುವಾದ ಪರಮಾತ್ಮನು ಅಸುರರನ್ನು ರಾತ್ರಿಂಚರ ಸ್ವಭಾವಾತ್ಮಕರನ್ನಾಗಿಯೂ ಮನುಷ್ಯರನ್ನೂ ಬೆಳೆದಿಂಗಳು ಮುಂತಾದ ಪ್ರಕಾಶ ಅಭಿರುಚಿಯುಳ್ಳ ಪ್ರಕಾಶಾತ್ಮಕರನ್ನಾಗಿಯೂ ಪಿತೃಗಳನ್ನು ಅಮೃತಾಹಾರಿಗಳನ್ನಾಗಿಯೂ ಒಂದೊಂದು ವಿಶೇಷ ಲಕ್ಷಣದಿಂದ ಸೃಷ್ಟಿಮಾಡಿರುವನು.

೮೭. ದೇವ-ಅಸುರರೆಂಬ ಮುಖ್ಯ ಅಮುಖ್ಯವಾದ ಸೃಷ್ಟಿ ಸಂತತಿಯನ್ನೂ ಮನೋನಿಯಾಮಕ ಶಕ್ತಿಯುಳ್ಳ ಮನುಷ್ಯರನ್ನೂ ಪಿತೃಗಳಲ್ಲಿ ಉತ್ತಮರಾದ ಪಿತೃಗಳನ್ನೂ ಸೃಷ್ಟಿಸಿದನು.

೮೮. ಮತ್ತು ಮಿಂಚು, ಸಿಡಿಲು, ಮೋಡ, ವಿವಿಧ ವರ್ಣರಂಜಿತವಾದ ಕಾಮನಬಿಲ್ಲು, ಇವುಗಳನ್ನೆಲ್ಲ ಸೃಷ್ಟಿಸಿ ಯಜ್ಞಕರ್ಮಗಳು ಸಿದ್ಧಿಸುವುದಕ್ಕೆ ಅದಕ್ಕೆ ಸಾಧನಗಳಾದ ಋಗ್ವೇದ-ಯಜುರ್ವೇದ, ಸಾಮವೇದಗಳನ್ನು ನಿರ್ಮಾಣಮಾಡಿದನು.

೮೯. ಹೀಗೆ ಆ ಬ್ರಹ್ಮನ ಪ್ರಭಾವದಿಂದ ಉಚ್ಚಾವಚ (ಹೀನಾಧಿಕಭಾವದಿಂದ

ಪುನಃ ಸೃಜತಿ ಭೂತಾನಿ ಚರಾಣಿ ಸ್ಥಾವರಾಣಿ ಚ।
ಯಕ್ಷಾನ್ ಪಿಶಾಚಾನ್ ಗಂಧರ್ವಾನ್ ಸರ್ವಶೋಽಪ್ಸರಸಸ್ತಥಾ ॥೯೦॥

ನರಕಿನ್ನರರಕ್ಷಾಂಸಿ ವಯಃಪಶುಮೃಗೋರಗಾನ್।
ಅವ್ಯಯಂ ವಾ ವ್ಯಯಶ್ಚೈವ ದ್ವಯಂ ಸ್ಥಾವರಜಂಗಮಮ್ ॥೯೧॥

ತೇಷಾಂ ತು ಯಾನಿ ಕರ್ಮಾಣಿ ಪ್ರಾಕ್ ಸೃಷ್ಟಾನಿ ಸ್ವಯಂಭುವಾ।
ತಾನ್ಯೇವ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ॥೯೨॥

ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮೌ ಕೃತಾಕೃತೇ।
ತೇಷಾಮೇವ ಪೃಥಕ್ ಸೂತಮವಿಭಕ್ತಂ ತ್ರಯಂ ವಿದುಃ ॥೯೩॥

---

ಕೂಡಿದ) ವಾದ ಪ್ರಾಣಿಗಳು ಜನ್ಮವೆತ್ತಿದವು. ಅವೆಲ್ಲ ದೇವ-ಋಷಿ-ಪಿತೃ-ಮಾನವ ರೆಂಬ ವಿಭಾಗದಿಂದ ಬ್ರಹ್ಮಸೃಷ್ಟಿಯಲ್ಲಿ ಸೇರಿದವುಗಳಾದವು.

೯೦-೯೧. ಇಷ್ಟೇಅಲ್ಲದೇ ಸ್ಥಾವರ.ಜಂಗಮ ಪ್ರಾಣಿಗಳನ್ನು ಮತ್ತೆ ಸೃಜಿಸುತ್ತಾನೆ ಮತ್ತೊಂದು ವಿಧವಾದ ಸೃಷ್ಟಿಯಲ್ಲಿ ಯಕ್ಷ-ಪಿಶಾಚ- ಗಂಧರ್ವ-ಅಪ್ಸರಃಸ್ತ್ರೀ-ನರ- ಕಿನ್ನರ-ರಾಕ್ಷಸ-ಪಕ್ಷಿ-ಪಶು-ಸರ್ಪ-ಮುಂತಾದ ಗಣನಾತೀತವಾದ ಪ್ರಾಣಿಸೃಷ್ಟಿಯನ್ನು ನಿರ್ವಹಿಸಿ ಕೆಲವು ಪರಿಣಾಮದಿಂದ ನಿತ್ಯವೂ ಕೆಲವು ಅತ್ಯಲ್ಪಕಾಲವಿದ್ದು ನಶಿಸುವುದಾಗಿ ಅನಿತ್ಯವೂ ಆದ ವಿವಿಧ ವ್ಯಕ್ತಿ ಗರ್ಭಿತವಾದ ಪ್ರಪಂಚದ ಸೃಷ್ಟಿಯ ಚಕ್ರವನ್ನು ವ್ಯಯವಿಲ್ಲದ ತಾನು ಮುಂದೆ ನಡೆಸಿದನು.

೯೨. ಹೀಗೆ ಹುಟ್ಟಿದ ಪ್ರಾಣಿಗಳಲ್ಲಿ ಪೂರ್ವ ಕಲ್ಪದ ಸೃಷ್ಟಿಯಲ್ಲಿ ಯಾವ ಪ್ರಾಣಿಯು ತನ್ನ ಜಾತಿಗೆ ಅನುಸಾರವಾಗಿ ಯಾವ ವಿಧದ ಕರ್ಮವನ್ನು ಅವಲಂಬಿಸಿ ಇತ್ತೋ ಆ ಪ್ರಾಣಿಯು ಮತ್ತೊಂದು ಕಲ್ಪದಲ್ಲಿ ಸೃಜಿಸಲ್ಪಡುವಾಗ ಅದೇ ಕರ್ಮಾಚರಣೆಯ ಸ್ವಭಾವದಿಂದ ಬದ್ಧವಾಗಿ ಜನಿಸಿತು. ಹೀಗೆ ಮತ್ತೆ ಮತ್ತೆ ಆಯಾಯ ಜಾತಿಯ ಪ್ರಾಣಿಗೆ ಆಯಾಯ ಕರ್ಮವೇ ನಿಯತವು.

೯೩. ಹಿಂಸಕ-ಶಾಂತ, ಮೃದು-ಕ್ರೂರ, ಧರ್ಮ-ಅಧರ್ಮ, ಕರ್ಮಲಂಪಟ-ಅಲಸ ಈ ರೀತಿಯಾದ ಪರಸ್ಪರ ವಿರೋಧಭಾವದಿಂದ ಕೂಡಿರುವ ವಿವಿಧ ಪ್ರಾಣಿಗಳು ಕಲ್ಪಾಂತರಗಳಲ್ಲಿಯೂ ಅದೇ ಸ್ವಭಾವ ವಿಭಾಗದಿಂದಲೇ ಬೇರೆಯಾಗಿ ಹುಟ್ಟುತ್ತವೆ.

ಏತದೇವಂ ಚ ನೈವಂ ಚ ನ ಚೋಭೇ ನಾನುಭೇ ತಥಾ ।
ಕರ್ಮಸ್ವವಿಷಯಂ ಪ್ರಾಹುಃ ಸತ್ತ್ವಸ್ಥಾಃ ಸಮದರ್ಶಿನಃ || ೯೪ ||

ನಾಮಾತ್ಮಪಂಚಭೂತಾನಾಂ ಭೂತಾನಾಂ ಚ ಪ್ರಪಂಚನಾಮ್ ।
ವೇದಶಬ್ದೇನ ಸಂಚಕ್ರೇ ನಿರ್ಮಮೋ ಸ ಮಹೇಶ್ವರಃ || ೯೫ ||

ಆರ್ಷಾಣಿ ಚೈವ ನಾಮಾನಿ ಯಾಶ್ಚ ದೇವೇಷು ಸೃಷ್ಟಯಃ ।
ಶರ್ವರ್ಯಾಂ ನ ಪ್ರಸೂಯಂತೇ ಪುನಸ್ತೇಭ್ಯೋಽದಧಾತ್ಪ್ರಜಾಃ|| ೯೬ ||

ಇತ್ಯೇವಂ ಕಾರಣಾದ್ಭೂತೋ ಲೋಕಸರ್ಗಃ ಸ್ವಯಂಭುವಃ ।
ಮಹದಾದ್ಯೋ ವಿಶೇಷಾಂತೋ ವಿಕಾರಃ ಪ್ರಾಕೃತಃ ಸ್ವಯಮ್ ॥ ೯೭ ॥

ಚಂದ್ರಸೂರ್ಯಪ್ರಭೋ ಲೋಕೋ ಗ್ರಹನಕ್ಷತ್ರಮಂಡಿತಃ ।
ನದೀಭಿಶ್ಚಸಮುದ್ರೈಶ್ಚ ಪರ್ವತೈಶ್ಚ ಸಹಸ್ರಶಃ ॥ ೯೮ ॥

---

೯೪. ಸತ್ತ್ವಗುಣದ ಆವಿರ್ಭಾವದಿಂದ ಸಾಮ್ಯಬುದ್ಧಿಯನ್ನು ಆರ್ಜಿಸಿದ ವಿವೇಕಿಗಳು ಮೂಲಭೂತವಾದ ಕರ್ಮವೆಂಬ ತತ್ತ್ವದ ವಿಷಯದಲ್ಲಿ ಇದು ಹೀಗೆಂಬುದಾಗಲಿ, ಹೀಗಲ್ಲವೆಂದಾಗಲಿ, ವಿರುದ್ಧವಾದ ಅಂಶದ್ವಯದಿಂದ ಕೂಡಿದೆಯೆಂದಾಗಲಿ, ಎರಡರಿಂದಲೂ ಶೂನ್ಯವೆಂದಾಗಲಿ ಖಚಿತವಾಗಿ ಹೇಳಲಾಗದ ಅನಿರ್ವಚನೀಯತತ್ತ್ವವೆಂದು ಅಭಿಪ್ರಾಯವುಳ್ಳವರಾಗಿದ್ದಾರೆ.

೯೫. ಪೃಥಿವ್ಯಾದಿ ಪಂಚಭೂತಗಳ ವಿಚಿತ್ರವೂ ವಿಸ್ತಾರವೂ ಆದ ಸನ್ನಿವೇಶದಿಂದ ಕೂಡಿದ ಪಾಂಚಭೌತಿಕವಾದ ನಾಮರೂಪಗಳನ್ನು ಮಹೇಶ್ವರನಾದ ಪರಮಾತ್ಮನು ವೇದಶಬ್ದಗಳಿಂದ ಸೃಜಿಸಿದನು.

೯೬. ಮತ್ತು ದೈವಿಕವಾದ ಸೃಷ್ಟಿ ಆಯಾಯ ಸಂಜ್ಞೆ ಎಲ್ಲವನ್ನೂ ಸೃಷ್ಟಿಶೂನ್ಯವಾದ ಪ್ರಲಯಕಾಲವು ಸಮಾಪ್ತಿಯಾದ ತರುವಾಯ ವೇದಶಬ್ದಗಳಿಂದಲೇ ಸೃಷ್ಟಿಸಿ ಅವರವರಿಗೆ ಆಯಾಯ ನಾಮರೂಪಗಳನ್ನು ವಿಂಗಡಿಸಿಕೊಟ್ಟನು.

೯೭. ಈ ರೀತಿಯಾಗಿ ಸ್ವಯಂಭು ಬ್ರಹ್ಮನೆಂಬ ಕಾರಣದಿಂದ ಲೋಕಗಳೆಲ್ಲ ಸೃಷ್ಟಿಯಾಗಿ ಮಹತ್ತತ್ತ್ವಮೊದಲಾಗಿ ಸಕಲವಿಕಾರಾಂತವಾದ ಪ್ರಾಕೃತಸೃಷ್ಟಿಯು ಜರುಗಿತು.

೯೮. ಸೃಷ್ಟಿಯಲ್ಲಿ ಹುಟ್ಟಿರುವ ಪ್ರಪಂಚವು ಚಂದ್ರ-ಸೂರ್ಯ ಅವರೀರ್ವರ

ಪುರೈಶ್ಚ ವಿವಿಧೈರಮ್ಯೈಃ ಸ್ಫೀತೈರ್ಜನಪದೈಸ್ತಥಾ ।
ಅಸ್ಮಿನ್ ಬ್ರಹ್ಮವನೇಽವ್ಯಕ್ತೋ ಬ್ರಹ್ಮಾ ಚರತಿ ಸರ್ವವಿತ್ ॥ ೯೯ ॥

ಅವ್ಯಕ್ತಬೀಜಪ್ರಭವಸ್ತಸ್ಯೈವಾನುಗ್ರಹೇ ಸ್ಥಿತಃ ।
ಬುದ್ಧಿಸ್ಕಂಧಮಯಶ್ಚೈವ ಇಂದ್ರಿಯಾಂತರಕೋಟರಃ ॥ ೧೦೦ ॥

ಮಹಾಭೂತಪ್ರಕಾಶಶ್ಚ ವಿಶೇಷೈಃ ಪತ್ರವಾಂಸ್ತು ಸಃ ।
ಧರ್ಮಾಧರ್ಮಸಪುಷ್ಪಸ್ತು ಸುಖದುಃಖಫಲೋದಯಃ ॥ ೧೦೧ ॥

ಆಜೀವಃ ಸರ್ವಭೂತಾನಾಂ ಬ್ರಹ್ಮವೃಕ್ಷಃ ಸನಾತನಃ ।
ಏತದ್ಬ್ರಹ್ಮವನಂ ಚೈವ ಬ್ರಹ್ಮವೃಕ್ಷಸ್ಯ ತಸ್ಯತತ್ ॥ ೧೦೨ ॥

---

ಪ್ರಭೆಯಿಂದ ವ್ಯಾಪ್ತವಾದುದಾಗಿಯೂ ಗ್ರಹಗಣ-ನಕ್ಷತ್ರ ಇವುಗಳ ಮಾಲೆಯಿಂದ ಅಲಂಕರಿಸಲ್ಪಟ್ಟದ್ದಾಗಿಯೂ ಸಾವಿರಾರು ನದಿ-ಸಮುದ್ರ-ಬೆಟ್ಟ ಇವುಗಳಿಂದ ಕೂಡಿ ವಿಶಾಲವಾದುದಾಗಿಯೂ ಇದೆ.

೯೯. ರಮಣೀಯವಾದ ನಾನಾ ಬಗೆಯ ನಗರಗಳಿಂದಲೂ ಸಮೃದ್ಧಿಯಿಂದ ಕೂಡಿದ ಜನಪದಗಳಿಂದಲೂ ತುಂಬಿರುವ ಈ ಬ್ರಹ್ಮನಿರ್ಮಿತವಾದ ಸೃಷ್ಟಿಯೆಂಬ ವನದಲ್ಲಿ ಅವ್ಯಕ್ತರೂಪದಿಂದ ಸರ್ವಜ್ಞನಾದ ಬ್ರಹ್ಮನು ಸಂಚರಿಸುತ್ತಿರುವನು.

೧೦೦. ಕಾರ್ಯಕಾರಣಗಳು ಅಭಿನ್ನತತ್ತ್ವಗಳಾದ್ದರಿಂದ ಸೃಷ್ಟಿವನದಲ್ಲಿ ಹುಟ್ಟಿದ ಬ್ರಹ್ಮವೃಕ್ಷವು ಅವ್ಯಕ್ತವೆಂಬ ಬೀಜದಿಂದ ಹುಟ್ಟಿ ಆದರ ಅನುಗ್ರಹಾಧೀನವಾಗಿಯೇ ಇರುವುದು. ಮತ್ತು ಬುದ್ಧಿ ಎಂಬ ರೆಂಬೆಗಳೂ ಬೇರೆ ಬೇರೆ ಇಂದ್ರಿಯಗಳೆಂಬ ಪೊಟರೆಗಳೂ ಇದರಲ್ಲಿ ತುಂಬಿವೆ.

೧೦೧. ಮಹಾಭೂತಗಳೆಂಬ ಪ್ರಕಾಶವೂ ಅನೇಕ ತಾರತಮ್ಯಗಳೆಂಬ ಎಲೆಗಳೂ ಧರ್ಮ-ಅಧರ್ಮಗಳೆಂಬ ಹೂಗಳೂ ಸುಖದುಃಖಗಳೆಂಬ ಫಲೋತ್ಪತ್ತಿಯೂ ಸೇರಿ ಇವುಗಳಿಂದ ವೃಕ್ಷಾವಯುವಗಳು ಪೂರ್ತಿಗೊಂಡಿವೆ.

೧೦೨. ಈ ಬ್ರಹ್ಮವೃಕ್ಷವು ಸರ್ವಜೀವಗಳಿಗೆ ಆಧಾರವಾಗಿಯೂ ಅನಾದಿಯಾಗಿಯೂ ಇರುವುದು. ಈ ಬ್ರಹ್ಮವೃಕ್ಷವು ಉತ್ಪತ್ತಿಯಾಗುವ ಬ್ರಹ್ಮವನವು ಅವ್ಯಕ್ತವು.

**ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಮ್ ।**
**ಪ್ರಧಾನಂ ಪ್ರಕೃತಿಂ ಮಾಯಾಂ ಚೈವಾಹುಸ್ತತ್ತ್ವಚಿಂತಕಾಃ ॥ ೧೦೩ ॥**

**ಇತ್ಯೇಷೋಽನುಗ್ರಹಃ ಸರ್ಗೋ ಬ್ರಹ್ಮನೈಮಿತ್ತಿಕಃ ಸ್ಮೃತಃ।**
**ಅಬುದ್ಧಿಪೂರ್ವಕಾಃ ಸರ್ಗಾ ಬ್ರಹ್ಮಣಃ ಪ್ರಾಕೃತಾ ಸ್ತ್ರಯಃ ॥ ೧೦೪ ॥**

**ಮುಖ್ಯಾದಯಸ್ತು ಷಟ್ಸರ್ಗಾ ವೈಕೃತಾ ಬುದ್ಧಿಪೂರ್ವಕಾಃ।**
**ವೈಕಲ್ಪಾತ್ಸಂಪ್ರವರ್ತಂತೇ ಬ್ರಹ್ಮಣಸ್ತೇಽಭಿಮನ್ಯವಃ ॥ ೧೦೫ ॥**

**ಇತ್ಯೇತೇ ಪ್ರಾಕೃತಾಶ್ಚೈವ ವೈಕೃತಾಶ್ಚ ನವ ಸ್ಮೃತಾಃ ।**
**ಸರ್ಗಾಃ ಪರಸ್ಪರೋತ್ಪನ್ನಾಃ ಕಾರಣಂ ತು ಬುಧೈಃ ಸ್ಮೃತಮ್ ॥ ೧೦೬ ॥**

**ದ್ಯಾಂ ಮೂರ್ಧಾನಂ ಯಸ್ಯ ವೇದಾ ವದಂತಿ ವಿಯನ್ನಾಭಿಂಚಂದ್ರ ಸೂರ್ಯೌ ಚ ನೇತ್ರೇ ।**
**ದಿಶಃ ಶ್ರೋತ್ರೇ ವಿದ್ಧಿ ಪಾದೌ ಕ್ಷಿತಿಂ ಚ ಸೋಽಚಿಂತ್ಯಾತ್ಮಾ ಸರ್ವಭೂತ ಪ್ರಣೇತಾ ॥ ೧೦೭ ॥**

---

೧೦೩. ಅವ್ಯಕ್ತವು ನಾನಾ ವಿಧದ ಬ್ರಹ್ಮವೃಕ್ಷೋತ್ಪತ್ತಿಗೆ ಕಾರಣವೂ ವ್ಯಕ್ತಾವ್ಯಕ್ತ ವಿವಿಧರೂಪಗಳಿಂದ ಕೂಡಿದುದೂ ಆಗಿದೆ. ಇದನ್ನು ತತ್ತ್ವವಿಮರ್ಶಕರು ಪ್ರಧಾನ, ಪ್ರಕೃತಿ ಅಥವಾ ಮಾಯಾ ಎಂಬ ಹೆಸರಿನಿಂದ ಕರೆಯುತ್ತಾರೆ.

೧೦೪. ಈ ಎಲ್ಲ ಸರ್ಗವು ಬ್ರಹ್ಮನಿಂದ ನಿಮಿತ್ತ ಪೂರ್ವಕವಾಗಿ ಆದ ಅನುಗ್ರಹ ಸರ್ಗವೆನಿಸಲ್ಪಡುವುದು. ಬ್ರಹ್ಮನಿಂದ ಹುಟ್ಟಿದ ಹಿಂದೆ ಹೇಳಿರುವ ಮೂರು ಪ್ರಾಕೃತ ಸರ್ಗಗಳು ಅಬುದ್ಧಿ ಪೂರ್ವಕಗಳು.

೧೦೫. ಮುಖ್ಯ ಮುಂತಾದ ಆರು ಸರ್ಗಗಳು ಬುದ್ಧಿ ಪೂರ್ವಕವಾದ ಸರ್ಗಗಳು. ಇವು ಪ್ರತಿಕಲ್ಪದಲ್ಲಿಯೂ ಬ್ರಹ್ಮನ ಅಭಿಧ್ಯಾನದಿಂದ ನಾನಾ ವಿಧರೂಪಾಕೃತಿಗಳಿಂದ ಪ್ರವರ್ತಿಸುತ್ತವೆ.

೧೦೬. ಈ ವಿಧವಾಗಿ ಪ್ರಾಕೃತ ವೈಕೃತಗಳೆಂಬ ವಿಭಜನೆಯಿಂದ ಕೂಡಿದ ಒಂಭತ್ತು ವಿಧದ ಸರ್ಗಗಳು ಒಂದರಿಂದೊಂದು ಹುಟ್ಟುವುದರಿಂದ ಪ್ರವಾಹರೂಪವಾಗಿ ಪರಸ್ಪರ ಕಾರಣಜನ್ಯವಾಗಿವೆ. ಇವಕ್ಕೆ ಕಾರಣವು ಅವ್ಯಕ್ತವೆಂದು ವಿದ್ವಾಂಸರಿಂದ ತಿಳಿಸಲ್ಪಟ್ಟಿದೆ.

೧೦೭. ಸರ್ವಸ್ವರೂಪನಾಗಿ ಆವಿರ್ಭಾವಹೊಂದಿದ ವಿರಾಟ್‌ರೂಪನಾದ

**ವಕ್ತ್ರಾದ್ಯಸ್ಯ ಬ್ರಾಹ್ಮಣಾಃ ಸಂಪ್ರಸೂತಾ ವಕ್ಷಸಶ್ಚೈವ ಕ್ಷತ್ರಿಯಾಃ ಪೂರ್ವಭಾಗೇ ।**
**ವೈಶ್ಯಾ ಊರುಭ್ಯಾಂ ಯಸ್ಯ ಪದ್ಭ್ಯಾಂ ಚ ಶೂದ್ರಾಃ ಸರ್ವೇ ವರ್ಣಾ ಗಾತ್ರತಃ ಸಂಪ್ರಸೂತಾಃ ॥ ೧೦೮ ॥**

**ನಾರಾಯಣಃ ಪರೋಽವ್ಯಕ್ತಾದಂಡಮವ್ಯಕ್ತಸಂಜ್ಞಿತಮ್ ।**
**ಅಂಡಜಸ್ತು ಸ್ವಯಂ ಬ್ರಹ್ಮಾ ಲೋಕಾಸ್ತೇನ ಕೃತಾಃ ಸ್ವಯಮ್ ॥ ೧೦೯ ॥**
**ತತ್ರ ಕಲ್ಪಾನ್ ದಶ ಸ್ಥಿತ್ವಾ ಸತ್ಯಂ ಗಚ್ಛಂತಿ ತೇ ಪುನಃ ।**
**ತೇ ಲೋಕಾ ಬ್ರಹ್ಮಲೋಕಂ ವೈ ಅಪರಾವರ್ತಿನೀಂ ಗತಿಮ್ ॥ ೧೧೦ ॥**

---

ಬ್ರಹ್ಮನಿಗೆ ದ್ಯುಲೋಕವು ಮೂರ್ಧಸ್ಥಾನವು. ಆಕಾಶವು ನಾಭಿಯು, ಚಂದ್ರ ಸೂರ್ಯರು ನೇತ್ರದ್ವಯ, ದಿಕ್ಕುಗಳು ಶ್ರವಣೇಂದ್ರಿಯಗಳು, ಭೂಮಿಯು ಪಾದ ದ್ವಯ, ಈ ರೀತಿಯಾಗಿ ಸರ್ವಭೂತಗಳಿಗೆ ಜನಕನಾದ ಬ್ರಹ್ಮನು ಜನ್ಯವಾದ ಮಹಾ ವಸ್ತುಗಳಿಂದ ಪೂರ್ಣಾಕಾರನಾಗಿ ಮಾನಸಾಗೋಚರನಾಗಿ ಪ್ರಕಾಶಿಸುವನೆಂದು ವೇದಗಳು ಸಾರುತ್ತವೆ.

೧೦೮. ಆ ವಿಶ್ವರೂಪದ ಮುಖದಿಂದ ಬಾಹ್ಮಣರೂ ವಕ್ಷಸ್ಸಿನಿಂದ ಪ್ರಾಚೀನ ರಾದ ಕ್ಷತ್ರಿಯ ಶ್ರೇಷ್ಠರೂ ತೊಡೆಗಳಿಂದ ವೈಶ್ಯರೂ ಕಾಲುಗಳಿಂದ ಶೂದ್ರರೂ ಹುಟ್ಟಿರುವರಾದ್ದರಿಂದ ಪ್ರಸಿದ್ಧವಾದ ಚಾತುರ್ವರ್ಣ್ಯವು ಅವನ ಶರೀರದಿಂದ ಉತ್ಪನ್ನವಾಗಿದೆ.

೧೦೯. ನಾರಾಯಣನೆಂಬ ಪರಮಾತ್ಮನು ಅವ್ಯಕ್ತ ಸಂಜ್ಞೆಯುಳ್ಳ ಬೀಜ ಕಾರಣಕ್ಕಿಂತ ಪರರೂಪವುಳ್ಳವನು. ಆ ಅವ್ಯಕ್ತದಿಂದ ಹಿರಣ್ಯಗರ್ಭನೆಂಬ ಅಂಡವೂ ಅದರಿಂದ ವಿರಾಟ್ ಬ್ರಹ್ಮರೂಪನಾದ ಬ್ರಹ್ಮನೂ ಜನಿಸಿ ವಿರಾಟ್ ಬ್ರಹ್ಮನು ಲೋಕ ಗಳನ್ನು ನಿರ್ಮಾಣಮಾಡಿದವನಾದನು.

೧೧೦. ಈ ಸೃಷ್ಟಿಯ ಅಧಿಕಾರಕ್ಕೆ ಪಾತ್ರರಾದ ಬ್ರಹ್ಮಾದಿಗಳು ತಮ್ಮ ಅಧಿಕಾ ರವನ್ನು ನೆರವೇರಿಸುತ್ತ ಹತ್ತು ಕಲ್ಪಗಳ ಕಾಲವಿದ್ದು ಮತ್ತೆ ಸತ್ಯಲೋಕವನ್ನು ಹೊಂದಿ ಪರಂಪರೆಯಿಂದ ಪುನರಾವೃತ್ತಿರಹಿತವಾದ ಬ್ರಹ್ಮಲೋಕವೆಂಬ ಸದ್ಗತಿ ಯನ್ನು ಹೊಂದುತ್ತಾರೆ.

**ಆಧಿಪತ್ಯಂ ವಿನಾ ತೇ ವೈ ಐಶ್ವರ್ಯೇಣ ತು ತತ್ಸಮಾಃ ।**
**ಭವಂತಿ ಬ್ರಹ್ಮಣಾ ತುಲ್ಯಾ ರೂಪೇಣ ವಿಷಯೇಣ ಚ ॥ ೧೧೧ ॥**

**ತತ್ರ ತೇಽಹ್ಯವತಿಷ್ಠಂತೇ ಪ್ರೀತಿಯುಕ್ತಾಃ ಸ್ವಸಂಯುಮಾನ್ ।**
**ಅವಶ್ಯಭಾವಿನಾರ್ಥೇನ ಪ್ರಾಕೃತಂ ತನುತೇ ಸ್ವಯಮ್ ॥ ೧೧೨ ॥**

**ನಾನಾತ್ವೇನಾಭಿಸಂಬಂಧಾಸ್ತದಾ ತತ್ಕಾಲಭಾವಿತಾಃ ।**
**ಸ್ವಪತೋಽಬುದ್ಧಿಪೂರ್ವಂ ಹಿ ಬೋಧೋ ಭವತಿ ವೈ ಯಥಾ॥ ೧೧೩ ॥**

**ತತ್ಕಾಲಭಾವಿತೇ ತೇಷಾಂ ತಥಾ ಜ್ಞಾನಂ ಪ್ರವರ್ತತೇ ।**
**ಪ್ರತ್ಯಾಹಾರೈಸ್ತು ಭೇದಾನಾಂ ಯೇಷಾಂ ಹಿ ನನು ಶುಷ್ಮಿಣಾಮ್॥೧೧೪॥**

---

೧೧೧. ಬ್ರಹ್ಮಲೋಕವನ್ನು ಸೇರಿದ ಆಧಿಕಾರಿಕ ಪುರುಷರಾದಿಯಾದ ಸಕಲ ಮುಮುಕ್ಷುಗಳು ಬ್ರಹ್ಮದೇವನ ಆಧಿಪತ್ಯ ಒಂದು ವಿನಹ ಐಶ್ವರ್ಯ, ರೂಪ ಮುಂತಾದವುಗಳಿಂದ ಬ್ರಹ್ಮ ಸಮಾನರಾಗಿ ಬ್ರಹ್ಮನಂತೆ ವಿಷಯಭೋಗವನ್ನು ಅನುಭವಿಸುತ್ತಿರುತ್ತಾರೆ.

೧೧೨. ಅಲ್ಲಿ ಅವರೆಲ್ಲರೂ ಸ್ವಸ್ವರೂಪ ಚಿಂತನದಲ್ಲಿ ಆಸಕ್ತರಾಗಿ ಪ್ರೀತಿಯಿಂದ ಕೂಡಿದವರಾಗಿ ಇರುತ್ತಾರೆ. ಅವರಿಗೆ ಬೇಕಾದ ಸಕಲಭೋಗ ಸಾಮ್ರಾಜ್ಯವನ್ನೂ ಅವಶ್ಯಂಭಾವಿಯಾದ ಅರ್ಥದಿಂದ ಪ್ರೇರೇಪಿತವಾದ ಪ್ರಾಕೃತ (ಪ್ರಧಾನ)ವು ಒದಗಿಸುತ್ತದೆ.

೧೧೩. ತತ್ತತ್ಕಾಲದ ಭಾವನೆಯಿಂದ ನಾನಾತ್ವ (ಭೇದ) ದೃಷ್ಟಿಯಿಂದ ಧ್ಯಾನಿಸಲ್ಪಟ್ಟು ಹುಟ್ಟುವ ವಿಚಿತ್ರ ಸೃಷ್ಟಿಯು ಅವರ ಭೋಗಸಾಧನವು. ನಿದ್ರಾಸಕ್ತನಿಗೆ ಆಕಸ್ಮಿಕವಾದ ಪ್ರಬೋಧವು ಅಬುದ್ಧಿಪೂರ್ವಕವಾಗಿ ಪ್ರಾಪ್ತವಾಗುವಂತೆ ಅವರ ಪುಣ್ಯಪರಿಪಾಕವಶದಿಂದ ಭಾವನಾ ವಿಶೇಷದಿಂದ ಸಮ್ಯಗ್‌ಜ್ಞಾನವು ಪ್ರಾಪ್ತವಾಗುವುದು.

೧೧೪. ಆಗ ಬ್ರಹ್ಮಜ್ಞಾನ ತೇಜಸ್ಸಿನಿಂದ ಜ್ವಲಿಸುವ ಆ ಮುಮುಕ್ಷುಗಳಿಗೆ ಭೇದವಸ್ತುಗಳೆಲ್ಲವೂ ಉಪಸಂಹಾರ ಹೊಂದುತ್ತವೆ.

ತೈಶ್ಚ ಸಾರ್ಧಂ ಪ್ರವರ್ತಂತೇ ಕಾರ್ಯಾಣಿ ಕರಣಾನಿ ಚ ।
ನಾನಾತ್ವದರ್ಶಿನಾಂ ತೇಷಾಂ ಬ್ರಹ್ಮಲೋಕನಿವಾಸಿನಾಮ್ ॥ ೧೧೫ ॥

ವಿನಿವೃತ್ತವಿಕಾರಾಣಾಂ ಸ್ವೇನ ಧರ್ಮೇಣ ತಿಷ್ಠತಾಮ್ ॥ ೧೧೬ ॥

ತುಲ್ಯಲಕ್ಷಣಸಿದ್ಧಾಸ್ತು ಶುಭಾತ್ಮಾನೋ ನಿರಂಜನಾಃ ।
ಪ್ರಾಕೃತೈಃ ಕರಣೋಪೇತಾಃ ಸ್ವಾತ್ಮನ್ಯೇವ ವ್ಯವಸ್ಥಿತಾಃ ॥ ೧೧೭ ॥

ಪ್ರಖ್ಯಾಪಯಿತ್ವಾ ಚಾತ್ಮಾನಂ ಪ್ರಕೃತಿಸ್ತೇಷು ತತ್ತ್ವತಃ ।
ಪುರುಷಾನ್ಯಬಹುತ್ವೇನ ಪ್ರತೀತಾತ್ರಪ್ರವರ್ತತೇ ॥ ೧೧೮ ॥

ಪ್ರವರ್ತತೇ ಪುನಸ್ಸರ್ಗೇತೇಷಾಂ ಸಾ ಕಾರಣಾತ್ಮನಾಮ್ ।
ಸಂಯೋಗೇ ಪ್ರಕೃತಿಜ್ಞೇಯಾ ಮುಕ್ತಾನಾಂ ತತ್ತ್ವದರ್ಶಿನಾಮ್ ॥
॥ ೧೧೯ ॥

೧೧೫-೧೧೬. ಹಿಂದೆ ನಾನಾತ್ವ ಬುದ್ಧಿಯುಳ್ಳವರಾದ್ದರಿಂದ ಬ್ರಹ್ಮಲೋಕ ನಿವಾಸಿಗಳೂ ಮನಸ್ಸು ಇಂದ್ರಿಯಗಳ ವಿಕಾರಶೂನ್ಯರೂ ಸ್ವಧರ್ಮದಿಂದಿರುವವರೂ ಆದ ಆ ಮುಮುಕ್ಷುಗಳ ಕಾರ್ಯ-ಕರಣಗಳು (ಶರೀರ-ಇಂದ್ರಿಯಗಳು) ಭೇದಜ್ಞಾನ ದಿಂದ ಪ್ರವರ್ತಿಸುತ್ತಲೂ ಅದು ಶಾಂತವಾದಾಗ ಪ್ರವೃತ್ತಿಶೂನ್ಯವಾದುವೂ ಆಗುವುವು.

೧೧೭. ಬ್ರಹ್ಮಲೋಕವನ್ನು ಸತ್ಯಾದಿ ಸಾಧನಗಳಿಂದ ಜಯಿಸಿ ಅಲ್ಲಿ ವಾಸಿಸು ವವರು ಬ್ರಹ್ಮನಿಗೆ ಸಮಾನವಾದ ಲಕ್ಷಣ ಸಿದ್ಧಿಯುಳ್ಳವರೂ ಮಂಗಳಕರವಾದ ಆತ್ಮ ನುಳ್ಳವರೂ ನಿರ್ದೋಷರೂ ಸಾಕ್ಷಾತ್ಪ್ರಕೃತಿಯಿಂದ ಜನಿಸಿದ ಕರಣಗಳಿಂದ ಕೂಡಿ ಸ್ವಾತ್ಮರೂಪದಲ್ಲಿಯೇ ನಿಷ್ಠೆಯುಳ್ಳವರೂ ಆಗಿರುವರು.

೧೧೮. ಆತ್ಮಸ್ವರೂಪವನ್ನು ತತ್ತ್ವಾಂಶದಿಂದ ವ್ಯಕ್ತಪಡಿಸಿ ಪ್ರಕೃತಿಪುರುಷರ ಅನ್ಯತಾ (ಭೇದಖ್ಯಾತಿ) ಖ್ಯಾತಿಯಿಂದ ಪುರುಷನ ಐಕ್ಯರೂಪದಿಂದ ತೋರಿ ಪುನಃ ಸಂಸಾರಜನಕವಾಗುವಂತೆ ಪ್ರವರ್ತಿಸುವುದು.

೧೧೯. ಕಾರಣ ಸ್ವರೂಪವನ್ನು ಹೊಂದಿರುವ ತತ್ತ್ವದರ್ಶಿಗಳಾದ ಆ ಯೋಗಿ ಗಳಿಗೆ ಪ್ರಕೃತಿಯ ಸಂಯೋಗವುಂಟಾಗಿ ಅದರಿಂದ ಸತ್ತ್ವಪುರುಷರ ಐಕ್ಯ ಭ್ರಾಂತಿ ಯಿಂದ ಪುನಃ ಸೃಷ್ಟಿಯು ಪ್ರವರ್ತಿಸುತ್ತದೆ.

**ತತ್ರಾಪವರ್ಗಿಣಾಂ ತೇಷಾಂ ಅಪುನರ್ಭಾರಗಾಮಿನಾಮ್ ।**
**ಅಭಾವತಃ ಪುನಃ ಸತ್ವಂ ಶಾಂತಾನಾಮರ್ಚಿಷಾಮಿವ ॥ ೧೨೦ ॥**

**ತತಸ್ತೇಷು ಗತೇಷೂರ್ಧ್ವಂ ತ್ರೈಲೋಕ್ಯಾತ್ತು ಮುದಾತ್ಮಸು ।**
**ತೈಃ ಸಾರ್ಧಂ ಯೈರ್ಮಹರ್ಲೋಕಸ್ತದಾನಾಸಾದಿತಸ್ತು ವೈ ।**
**ತಚ್ಛಿಷ್ಯಾ ಯೇಹ ತಿಷ್ಠಂತಿ ಕಲ್ಪದಾಹ ಉಪಸ್ಥಿತೇ ॥ ೧೨೧ ॥**

**ಗಂಧರ್ವಾದ್ಯಾಃ ಪಿಶಾಚಾಶ್ಚ ಮಾನುಷಾ ಬ್ರಾಹ್ಮಣಾದಯಃ ।**
**ಪಶವಃ ಪಕ್ಷಿಣಶ್ಚೈವ ಸ್ಥಾವರಾಃ ಸಸರೀಸೃಪಾಃ ॥ ೧೨೨ ॥**

**ತಿಷ್ಠತ್ಸು ತೇಷು ತತ್ಕಾಲಂ ಪೃಥಿವೀತಲವಾಸಿಷು ।**
**ಸಹಸ್ರಂ ಯತ್ತು ರಶ್ಮೀನಾಂ ಸೂರ್ಯಸ್ಯೇಹ ವಿನಶ್ಯತಿ ॥ ೧೨೩ ॥**

**ತೇ ಸಪ್ತರಶ್ಮಯೋ ಭೂತ್ವಾ ಏಕೈಕೋ ಜಾಯತೇ ರವಿಃ ।**
**ಕ್ರಮೇಣ ಶತಮಾನಾಸ್ತೇ ತ್ರೀನ್ ಲೋಕಾನ್ಪ್ರದಹಂತ್ಯುತ ॥ ೧೨೪ ॥**

---

೧೨೦. ಪುನಃ ಸಂಸಾರಾದಿಭಾರವನ್ನು ಹೊಂದದಿರುವ ಆ ಯೋಗಿಗಳಿಗೆ ಮೊದಲು ವಿಘ್ನರೂಪವಾಗಿ ಆ ಪ್ರಕೃತಿಯು ಸೇರಿದ್ದು ಪ್ರಕೃತಿಪುರುಷರ ಭೇದಜ್ಞಾನದಿಂದ ಅದು ಲಯವಾದಾಗ ಶಾಂತವಾದ ಅಗ್ನಿಯು ಅಗ್ನಿ ತತ್ತ್ವದಲ್ಲಿ ಐಕ್ಯವನ್ನು ಹೊಂದಿದಂತೆ ಸ್ವರೂಪದಲ್ಲಿ ಸೇರುವರು.

೧೨೧. ಅನಂತರದಲ್ಲಿ ಆನಂದಮಯರಾಗಿ ತ್ರೈಲೋಕ್ಯದಿಂದ ಊರ್ಧ್ವಲೋಕಕ್ಕೆ ಸೇರಲು ಮಹರ್ಲೋಕವನ್ನು ಹೊಂದದೇ ಇರುವ ಅವರ ಶಿಷ್ಯರು ಇಲ್ಲಿ ವಾಸವಾಗಿರುವರು. ಆ ಸಮಯದಲ್ಲಿ ಪ್ರಲಯಕಾಲವು ಪ್ರಾಪ್ತವಾಗುವುದು

೧೨೨-೧೨೩. ಹೀಗೆ ಪ್ರಲಯಕಾಲವೊದಗಲಾಗಿ ಗಂಧರ್ವ ಮುಂತಾದವರು ಪಿಶಾಚ, ಮನುಷ್ಯ, ಬ್ರಾಹ್ಮಣಾದಿಗಳು, ಪಶು, ಪಕ್ಷಿ ಸ್ಥಾವರ, ಸರ್ಪ, ಮುಂತಾದ ಭೂಮಂಡಲವಾಸಿಯಾದ ಪ್ರಾಣಿಗಳುಎಲ್ಲವೂ ಅದುವರೆಗೂ ಹಾಗೆಯೇ ಇರುತ್ತಿರಲು, ಸೂರ್ಯನ ಸಾವಿರ ಕಿರಣಗಳು ಸಂಪೂರ್ಣವಾಗಿ ನಾಶಹೊಂದುವುದು.

೧೨೪. ಅವುಗಳಲ್ಲಿ ಸಾರರೂಪವಾದ ಏಳು ಕಿರಣಗಳು ಮಾತ್ರ ಒಂದೊಂದೂ ಸೂರ್ಯರೂಪವಾಗಿ ಜನಿಸುವುವು. ಆ ಸೂರ್ಯರು ಒಂದುನೂರು ವರ್ಷಗಳಕಾಲ ಪರಿಮಾಣದವರೆಗೆ ಕ್ರಮವಾಗಿ ಮೂರು ಲೋಕಗಳನ್ನು ಸುಡುತ್ತವೆ.

**ಜಂಗಮಾನ್ ಸ್ಥಾವರಾಂಶ್ಚೈವ ನದೀಃ ಸರ್ವಾಂಶ್ಚ ಪರ್ವತಾನ್ ।**
**ಶುಷ್ಕೇ ಪೂರ್ವಮನಾವೃಷ್ಟ್ಯಾ ಯೈಸ್ತೈಶ್ಚೈವ ಪ್ರತಾಪಿತಾಃ ॥ ೧೨೫ ॥**

**ತದಾ ತೇ ವಿವಶಾಃ ಸರ್ವೇ ನಿರ್ದಗ್ಧಾಃ ಸೂರ್ಯರಶ್ಮಿಭಿಃ ।**
**ಜಂಗಮಾಃ ಸ್ಥಾವರಾಶ್ಚೈವ ಧರ್ಮಾಧರ್ಮಾದಿಕಾಸ್ತು ವೈ ॥ ೧೨೬ ॥**

**ದಗ್ಧದೇಹಾಸ್ತದಾ ತೇ ತು ಧೂತಪಾಪಾ ಯುಗಾತ್ಯಯೇ ।**
**ಖ್ಯಾತಾತಪಾ ವಿನಿರ್ಮುಕ್ತಾಃ ಶುಭಯಾ ಚಾತಿಬಂಧಯಾ ॥ ೧೨೭ ॥**

**ತತಸ್ತೇಹ್ಯುಪಪದ್ಯಂತೇ ತುಲ್ಯರೂಪೈರ್ಜನೈರ್ಜನಾಃ ।**
**ಉಷಿತ್ವಾ ರಜನೀಂ ತೇ ಚ ಬ್ರಹ್ಮಣೋಽವ್ಯಕ್ತಜನ್ಮನಃ ॥ ೧೨೮ ॥**

**ಪುನಃ ಸರ್ಗೇ ಭವಂತೀಹ ಮಾನಸ್ಯೋ ಬ್ರಹ್ಮಣಃ ಪ್ರಜಾಃ ।**
**ತತಸ್ತೇಷು ಪ್ರಪನ್ನೇಷು ಜನೈಸ್ತ್ರೈಲೋಕ್ಯವಾಸಿಷು ॥ ೧೨೯ ॥**

---

೧೨೫. ಜಂಗಮ-ಸ್ಥಾವರ, ನದೀ, ಸಕಲಪರ್ವತ ಇವುಗಳು ಮೊದಲು ಅನಾವೃಷ್ಟಿಯಿಂದ ಸುಟ್ಟುಹೋಗಿರುತ್ತವೆ. ಅಂತಹ ಶುಷ್ಕವಾದ ನದೀ-ಪರ್ವತಾದಿಗಳು ಸೂರ್ಯರಿಂದಲೂ ತಪಿಸಲ್ಪಟ್ಟು ಬೆಂದು ಹೋಗುವುವು.

೧೨೬. ಆಗ ಪ್ರಕೃತಿ ಪರವಶಗಳಾದ ಆ ಸ್ಥಾವರಾದಿ ಪ್ರಾಣಿಗಳೆಲ್ಲವೂ ಸೂರ್ಯನ ರಶ್ಮಿಗಳಿಂದ ದಹಿಸಲ್ಪಡುತ್ತವೆ. ಆದರೆ ಜಗತ್ತಿಗೆ ಪ್ರಧಾನಕಾರಣಗಳಾದ ಧರ್ಮ-ಅಧರ್ಮ ಮುಂತಾದುವುಗಳಿಗೆ ಮಾತ್ರ ಸ್ಥಾವರಾದಿಗಳಂತೆ ಭಸ್ಮವಾಗಿ ಸಂಪೂರ್ಣವಾಗಿ ತತ್ತ್ವದ ವಿಲಯವು ಪ್ರಾಪ್ತವಾಗುವುದಿಲ್ಲ.

೧೨೭. ಆ ಧರ್ಮಾದಿಗಳು ಸುಟ್ಟುಹೋದ ದೇಹವನ್ನು ತ್ಯಜಿಸಿ ಯುಗಾವಸಾನಕಾಲದಲ್ಲಿ ಪಾಪಸಂಪರ್ಕವಿಲ್ಲದವರಾಗಿ ಪ್ರಸಿದ್ಧವಾದ ತಪೋಮಹಿಮೆಯೆಂಬ ತೇಜೋಜ್ವಾಲೆಯುಳ್ಳವರಾಗಿ ಶುಭಕರವಾದ ಬಂಧದಿಂದಲೂ ಮುಕ್ತರಾಗುವರು.

೧೨೮. ಅನಂತರದಲ್ಲಿ ಅವ್ಯಕ್ತದಿಂದ ಆವಿರ್ಭೂತನಾದ ಸತ್ಯಲೋಕವಾಸಿಯಾದ ಬ್ರಹ್ಮದೇವನೊಡನೆ ಪ್ರಲಯಕಾಲವೆಂಬ ಒಂದು ರಾತ್ರಿ ವಾಸಮಾಡಿ ಪುನಃ ಜನರ ರೂಪವನ್ನು ಅನುಕರಿಸುವ ಆಕಾರವನ್ನು ಧರಿಸಿದ ಜನರಾಗಿ ಪರಿಣಮಿಸುವರು.

೧೨೯-೧೩೦. ಮತ್ತು ಪುನಃ ಸೃಷ್ಟಿಯಲ್ಲಿ ಮತ್ತೆ ಬ್ರಹ್ಮನ ಮಾನಸಪುತ್ರರಾಗಿ ಜನಿ

**ನಿರ್ದಗ್ಧೇಷು ಚ ಲೋಕೇಷು ತದಾ ಸೂರ್ಯ್ಯೈಸ್ತು ಸಪ್ತಭಿಃ ।**
**ವೃಷ್ಟ್ಯಾಕ್ಷಿತೌ ಪ್ಲಾವಿತಾಯಾಂ ವಿಜನೇಷ್ವರ್ಣವೇಷು ವಾ ॥ ೧೩೦ ॥**

**ಸಮುದ್ರಾಶ್ಚೈವ ಮೇಘಾಶ್ಚ ಆಪಶ್ಚೈವಾಥ ಪಾರ್ಥಿವಾಃ ।**
**ಶೀರ್ಯಮಾಣಾ ವ್ರಜಂತ್ಯೇವ ಸಲಿಲಾಖ್ಯಾಸ್ತಥಾಚಲಾಃ ॥ ೧೩೧ ॥**

**ಆಗತಾಗತಿಕಂ ಚೈವ ಯದಾ ತು ಸಲಿಲಂ ಬಹು ।**
**ಸಂಛಾದ್ಯೇಮಾಂ ಸ್ಥಿತಾಂ ಭೂಮಿಮರ್ಣವಾಖ್ಯಂ ತದಾಭವತ್ ॥೧೩೨॥**

**ಆಭಾತಿ ಯಸ್ಮಾಚ್ಚಾಭಾಸಾದ್ಭಾಶಬ್ದಃ ಕಾಂತಿದೀಪ್ತಿಷು ।**
**ಸ ಸರ್ವಃ ಸಮನುಪ್ರಾಪ್ತಾಮಾಸಾಂ ಭಾಭ್ಯೋ ವಿಭಾವ್ಯತೇ ॥ ೧೩೩ ॥**

---

ಸುವರು. ಆಗ ಆ ಬ್ರಹ್ಮಮಾನಸಪುತ್ರರು ಜನ್ಮವೆತ್ತಿದಾಗ ತ್ರಿಲೋಕಗಳಲ್ಲಿ ವಾಸಿಸುವ ಇತರ ಸಮಸ್ತ ಜನಗಳೂ ಲೋಕಗಳೂ ಏಳು ಸೂರ್ಯರಿಂದ ಸುಟ್ಟುಹೋಗಲಾಗಿ ಆಗ ಜಗತ್ಪ್ರಲಯವನ್ನು ಮಾಡುವ ವೃಷ್ಟಿಯು ಸುರಿಯಲುಪಕ್ರಮಿಸಿ ಭೂಮಿಯೆಲ್ಲವೂ ನೀರಿನಲ್ಲಿ ತೇಲಿಹೋಗಿ ಜನಶೂನ್ಯವಾದ ಜಗತ್ತೆಲ್ಲವೂ ಏಕಾರ್ಣವವಾಗುವುದು.

೧೩೧. ಆಗ ಸಮುದ್ರ, ಮೇಘ, ಜಲ, ಪಾರ್ಥಿವಾಂಶ, ಪರ್ವತ ಎಲ್ಲವೂ ನೀರಿನ ಭರಕ್ಕೆ ಸಿಲುಕಿ ಎಲ್ಲವೂ ಜಲಮಯವಾಗಿ ಜೀರ್ಣಾವಸ್ಥೆಯನ್ನು ಹೊಂದುವುವು.

೧೩೨. ಸಂಪೂರ್ಣ ಜಲಮಯವಾಗಿರುವ ಆ ಅವಸ್ಥೆಯಲ್ಲಿ ಎಲ್ಲೆಡೆಯಲ್ಲಿಯೂ ವಿಸ್ತಾರವಾಗಿ ಹರಡಿದ ನೀರು ಗತಿ ಆಗತಿಗಳಿಂದ ಚಲಿಸುತ್ತ ಈ ಸಮಸ್ತ ಭೂಮಿಯನ್ನೂ ಮುಳುಗಿಸಿ ಆಚ್ಛಾದನಮಾಡಿ ಅರ್ಣವವೆಂಬ ಸಂಜ್ಞೆಯನ್ನು ಹೊಂದಿತು.

೧೩೩. "ಭಾ" ಎಂಬ ಧಾತುವು ಕಾಂತಿ ಅಥವಾ ದೀಪ್ತಿಯೆಂಬ ಅರ್ಥದಲ್ಲಿ ಧಾತು ಪಾಠದಲ್ಲಿ ಪಠಿತವಾಗಿದೆ. ಆ ಅರ್ಥವನ್ನು ಅನುಸರಿಸಿ "ಆಭಾತಿ-ಯಸ್ಮಾತ್" ಯಾವುದರಿಂದ ಸಕಲವೂ ಪ್ರಕಾಶಿಸುವುದೋ ಎಂಬ ವ್ಯುತ್ಪತ್ತಿಯಿಂದ ಮತ್ತೊಂದನು ಪ್ರಕಾಶಪಡಿಸುವ ಶಕ್ತಿಯಿಂದ ಆಭಾಸವೆಂದಾಗುವುದು. ಪ್ರಲಯ ಸಮಯದ ಜಲದಕಾಂತಿಗಳಿಂದ ಜಲದಲ್ಲಿ ಅಡಗಿದ 'ಪ್ರತಿಯೊಂದು ವಸ್ತುವೂ ಜಲಮಯವಾಗಿ ಪ್ರಕಾಶಿಸುತ್ತಾ ತೋರುವುದು.

**ತದಂತಸ್ತನುತೇ ಯಸ್ಮಾತ್ಸರ್ವಾಂ ಪೃಥ್ವೀಂ ಸಮಂತತಃ ।**
**ಧಾತುಸ್ತನೋತಿ ವಿಸ್ತಾರಂ ತತೋಽಪತನವಃ ಸ್ಮೃತಾಃ ॥ ೧೩೪ ॥**

**ಶಾರ ಇತ್ಯೇವ ಶೀರ್ಣೇ ತು ನಾನಾರ್ಥೋ ಧಾತುರುಚ್ಯತೇ ।**
**ಏಕಾರ್ಣವೇ ಭವಂತ್ಯಾಪೋ ನ ಶೀರ್ಣಾಸ್ತೇನ ತಾ ನರಾಃ ॥ ೧೩೫ ॥**

**ತಸ್ಮಿನ್ ಯುಗಸಹಸ್ರಾಂತೇ ಸಂಸ್ಥಿತೇ ಬ್ರಹ್ಮಣೋಽಹನಿ ।**
**ತಾವತ್ಕಾಲಂ ರಜನ್ಯಾಂ ಚ ವರ್ತಂತ್ಯಾಂ ಸಲಿಲಾತ್ಮನಃ ॥ ೧೩೬ ॥**

**ತತಸ್ತೇ ಸಲಿಲೇ ತಸ್ಮಿನ್ನಷ್ಟಾಗ್ನೌ ಪೃಥಿವೀತಲೆ ।**
**ಪ್ರಶಾಂತವಾತೇಂಧಕಾರೇ ನಿರಾಲೋಕೇ ಸಮಂತತಃ ॥ ೧೩೭ ॥**

**ಯೇನೈವಾಧಿಷ್ಠಿತಂ ಹೀದಂ ಬ್ರಹ್ಮಣಃ ಪುರುಷಃ ಪ್ರಭುಃ ।**
**ವಿಭಾಗಮಸ್ಯ ಲೋಕಸ್ಯ ಪ್ರಕರ್ತುಂ ಪುನರೈಚ್ಛತ ॥ ೧೩೮ ॥**

---

೧೩೪. ಅಂತಹ ಜಲದೊಳಗೆ ಸುತ್ತಮುತ್ತಲೂ ಸಮಸ್ತಪೃಥಿವಿಯನ್ನೂ ವಿಸ್ತಾರವಾಗಿಟ್ಟುಕೊಂಡಿರುವುದರಿಂದ ವಿಸ್ತಾರವೆಂಬ ಅರ್ಥದಲ್ಲಿರುವ "ತನು" ಎಂಬ ಧಾತು ಸಂಬಂಧದಿಂದ ಆದ "ಅಪತನು" ಎಂಬ ಸಂಜ್ಞೆಯಿಂದ ಜಲಗಳು ಕರೆಯಲ್ಪಡುತ್ತವೆ.

೧೩೫. ಹೀಗೆಯೇ ಜಲಗಳಿಗೆ ನರಾ ಎಂಬುದೊಂದು ಹೆಸರಿದೆ. ಆ ಸಂಜ್ಞೆಯಲ್ಲಿ ಸೇರಿದ "ರ"ಎಂಬುದು"ಶಾರ" ಧಾತುವಿಗೆ ಸಂಬಂಧಿಸಿರುವುದು. ಶಾರಧಾತುವು ಶೀರ್ಣ= ಶಿಥಿಲವಾದುದು ಎಂಬ ಅರ್ಥದಿಂದ ಕೂಡಿದುದು. ಧಾತುಗಳು ಪ್ರಾಯಕವಾಗಿ ನಾನಾ ಅರ್ಥಗಳನ್ನು ಬೋಧಿಸುವುವು. ಏಕಾರ್ಣವರೂಪವಾದ ಜಲರಾಶಿಯಲ್ಲಿ ಜಲಗಳು ಶಿಥಿಲವಾಗದಿರುವುದರಿಂದ "ನ+ಶೀರ್ಣಾಃ" ಸೇರಿ ನರಾ ಎಂದು ಕರೆಯಲ್ಪಡುತ್ತವೆ.

೧೩೬. ಬ್ರಹ್ಮನಿಗೆ ಒಂದುಸಲ ಒಂದುಸಾವಿರ ಯುಗಗಳು ಕಳೆದರೆ ಒಂದು ಹಗಲು ಮಾತ್ರವಾಗುವುದು. ಮತ್ತೆ ಅಷ್ಟೇ ಪರಿಮಾಣದ ರಾತ್ರಿಯಲ್ಲಿ ಎಲ್ಲವೂ ಪೂರ್ಣವಾದ ಜಲಾತ್ಮಕವಾಗಿರುವುದು.

೧೩೭. ಸಲಿಲರೂಪದಿಂದ ಅಷ್ಟು ರಾತ್ರಿಕಾಲವು ಕಳೆಯುವ ವೇಳೆಯಲ್ಲಿ ಪೃಥಿವೀ, ಅಗ್ನಿ ಎಲ್ಲವೂ ಜಲದಲ್ಲಿ ನಷ್ಟವಾಗಿ ವಾಯುವು ಶಾಂತನಾಗಿ ಸ್ವಲ್ಪವೂ ತೇಜಸ್ಸು ಇಲ್ಲದೆ ಮಹಾಂಧಕಾರವು ಎಲ್ಲೆಲ್ಲಿಯೂ ವ್ಯಾಪ್ತವಾಗಿರುವುದು.

೧೩೮. ಹೀಗಿರಲು ಪ್ರಭುವೂ ಪರಮಾತ್ಮನು ಪರಿಗ್ರಹಿಸಿದ ಪುರುಷಾಕಾರವೂ

**ಏಕಾರ್ಣವೇ ತತಸ್ತಸ್ಮಿನ್ನಷ್ಟೇ ಸ್ಥಾವರಜಂಗಮೇ ।**
**ತದಾ ಭವತಿ ಸ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೧೩೯ ॥**

**ಸಹಸ್ರ ಶೀರ್ಷಾ ಪುರುಷೋ ರುಕ್ಮವರ್ಣೋಽಹ್ಯತೀಂದ್ರಿಯಃ ।**
**ಬ್ರಹ್ಮಾ ನಾರಾಯಣಾಖ್ಯಸ್ತು ಸುಷ್ವಾಪ ಸಲಿಲೇ ತದಾ ॥ ೧೪೦ ॥**

**ಸತ್ವೋದ್ರೇಕಾತ್ಪ್ರಬುದ್ಧಸ್ತು ಶೂನ್ಯಂ ಲೋಕಮುವೈಕ್ಷತ ।**
**ಅನೇನಾದ್ಯೇನ ಪಾದೇನ ಪುರಾಣಂ ಪರಿಕೀರ್ತಿತಮ್ ॥ ೧೪೧ ॥**

**ಇತಿ ಶ್ರೀ ಬ್ರಂಹ್ಮಾಂಡಪುರಾಣೇ ಪಂಚಮೋಽಧ್ಯಾಯಃ ಸಮಾಪ್ತಃ.**
**ಇತಿ ಪ್ರಕ್ರಿಯಾಪಾದಃ ಪ್ರಥಮಃ**

---

ಆದ ಬ್ರಹ್ಮದೇವನು ಹಿಂದೆ ಸಕಲವನ್ನೂ ನಡೆಸಿಕೊಂಡು ಬಂದಂತೆ ಮತ್ತೆ ಈ ಲೋಕಗಳ ವಿಭಾಗವನ್ನು ಮಾಡಲು ಇಚ್ಛಿಸಿದನು.

೧೩೯-೧೪೦. ಸ್ಥಾವರ-ಜಂಗಮ ಪ್ರಾಣಿಗಳೆಲ್ಲ ನಾಶಹೊಂದಿ ಎಲ್ಲೆಲ್ಲಿಯೂ ವ್ಯಾಪಿಸಿರುವ ಆ ಏಕಾರ್ಣವದಲ್ಲಿ ಸಹಸ್ರ ನೇತ್ರ, ಪಾದ, ಶಿರಸ್ಸುಗಳಿಂದ ಕೂಡಿದ ಚಿನ್ನದ ಬಣ್ಣವುಳ್ಳ, ಇಂದ್ರಿಯಗಳಿಗೆ ಗೋಚರನಾಗದ, ಪುರುಷರೂಪಿಯಾದ ಬ್ರಹ್ಮನು ಇರುತ್ತಾನೆ. ಪುನಃ ಸೃಷ್ಟೀಚ್ಛೆಯು ಉಂಟಾಗುವವರೆಗೆ ನಾರಾಯಣ ರೂಪಿಯಾದ ಬ್ರಹ್ಮನು ಆ ನೀರಿನಲ್ಲಿ ನಿದ್ದೆಯನ್ನು ಅನುಭವಿಸಿದನು.

೧೪೧. ಸತ್ತ್ವಗುಣದ ಉದ್ರೇಕದಿಂದ ಪ್ರಬೋಧವೆಂಬ ವೃತ್ತಿಯನ್ನು ಹೊಂದಿ ಲೋಕವೆಲ್ಲವೂ ಶೂನ್ಯವಾಗಿರುವುದನ್ನು ಕಂಡನು. ಇದುವರಗೆ ಪುರಾಣದ ಮೊದಲನೆಯ ಪಾದ ಸಂಪೂರ್ಣವಾಗಿ ಉಪದೇಶಿಸಲ್ಪಟ್ಟಿತು.

ಬ್ರಹ್ಮಾಂಡಪುರಾಣದಲ್ಲಿ ಪಂಚಮಾಧ್ಯಾಯವು ಸಮಾಪ್ತವು
ಪ್ರಕ್ರಿಯಾಪಾದವು ಸಮಾಪ್ತವು.

---

## ಷಷ್ಠೋಽಧ್ಯಾಯಃ

**ಸೂತ ಉವಾಚ—**

**ಇತ್ಯೇವಂ ಪ್ರಥಮಂ ಪಾದಂ ಪ್ರಕೃತ್ಯರ್ಥಂ ಪ್ರಕೀರ್ತಿತಮ್ ।**
**ಶ್ರುತ್ವಾ ತು ಸಂಹೃಷ್ಟಮನಾಃ ಕಾಪೇಯಃ ಸಂಶಯಾಯತಿ ॥ ೧ ॥**

**ಆರಾಧ್ಯ ವಚಸಾ ಸೂತಂ ತಸ್ಯಾರ್ಥಂ ತ್ವಪರಾಂ ಕಥಾಮ್ ।**
**ಅಥಪ್ರಭೃತಿಕಲ್ಪಜ್ಞಾಃ ಪ್ರತಿಸಂಧಿಃ ಪ್ರಚಕ್ಷತೇ ॥ ೨ ॥**

**ಸಮತೀತಸ್ಯ ಕಲ್ಪಸ್ಯ ವರ್ತಮಾನಸ್ಯ ಚಾನಯೋಃ ।**
**ಕಲ್ಪಯೋರಂತರಂ ಯತ್ರ ಪ್ರತಿಸಂಧಿಶ್ಚ ಯಸ್ತಯೋಃ ॥ ೩ ॥**

**ಏತದ್ವೇದಿತು ಮಿಚ್ಛಾಮಿ ಯಥಾವತ್ಕುಶಲೋ ಹ್ಯಸಿ ।**
**ಕಾಪೇಯೇನೈವ ಮುಕ್ತಸ್ತು ಸೂತಃ ಪ್ರವದತಾಂ ವರಃ ॥ ೪ ॥**

**ತ್ರೈಲೋಕ್ಯಸ್ಯೋದ್ಭವಂ ಕೃತ್ಸ್ನಂ ಆಖ್ಯಾತುಮುಪಚಕ್ರಮೇ ॥ ೫ ॥**

---

೧-೨. ಸೂತ ಮುನಿಯು ಹೇಳಿದನು. ಈ ರೀತಿಯಾಗಿ ಪ್ರಕೃತಿಯು ನಾನಾ ವಿಧ ಸೃಷ್ಟಿಗೆ ಕಾರಣವೂ ಆದಿಯೂ ಎಂಬ ವಿಷಯವಾಗಿ ಹೇಳಿರುವ ಮೊದಲನೆಯ ಪಾದದ ಸಮಗ್ರ ಅರ್ಥವನ್ನು ಕೇಳಿ ಸಂತುಷ್ಟವಾದ ಮನಸ್ಸುಳ್ಳವನಾಗಿ ಕಾಪೇಯನೆಂಬ ಶಿಷ್ಯನು ಮುಂದಿನ ಕಥಾನಕ ವಿಷಯವಾಗಿ ಜಿಜ್ಞಾಸೆಪಡುತ್ತಾನೆ. ಸೂತಮುನಿಯನ್ನು ಸ್ತುತಿವಚನಗಳಿಂದ ಸತ್ಕರಿಸಿ ಮುಂದೆ ತಾನು ಶ್ರವಣಮಾಡಬೇಕೆಂದಿರುವ ಕಥೆಯನ್ನು ಸೂಚಿಸಿದನು. ಕಲ್ಪಜ್ಞರೆಲ್ಲರೂ ಕಲ್ಪಗಳ ಪ್ರತಿಸಂಧಿಯನ್ನು ಜ್ಞೇಯವೆಂದು ಹೇಳುವರು.

೩. ಪ್ರತಿಸಂಧಿಯೆಂದರೆ :—ಹಿಂದೆ ಕಳೆದ ಒಂದು ಕಲ್ಪ ಮತ್ತು ಮುಂದೆ ನಡೆಯುತ್ತಲಿರುವ ಮತ್ತೊಂದು ಕಲ್ಪ ಇವುಗಳ ಮಧ್ಯಕಾಲವಾದ ಕಲ್ಪದ್ವಯ ಅಂತ ರಾಳವು ಪ್ರತಿಸಂಧಿಯೆಂದು ಕರೆಯಲ್ಪಡುವುದು.

೪-೫. ಸರ್ವಜ್ಞನಾದ ನೀನು ಬೋಧಕನಾಗಿ ಸಿಕ್ಕಿರುವ ಈ ಮಹಾ ಸುಸಮಯ ದಲ್ಲಿ ಈ ಪ್ರತಿಸಂಧಿಯ ಸ್ವರೂಪವನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಎಂದು ಕಾಪೇ

**ಸೂತ ಉವಾಚ—**

ಅತ್ರ ಸ್ತೈ ವರ್ಣಯಿಷ್ಯಾಮಿ ಯಾಥಾತಥ್ಯೇನ ಸುವ್ರತಾಃ ।
ಕಲ್ಪಂ ಭೂತಂ ಭವಿಷ್ಯಂ ಚ ಪ್ರತಿಸಂಧಿಶ್ಚ ಯಸ್ತಯೋಃ ॥ ೬ ॥

ಮನ್ವಂತರಾಣಿ ಕಲ್ಪೇಷು ಯಾನಿ ಯಾನಿ ಚ ಸುವ್ರತಾಃ ।
ಯಶ್ಚಾಯಂ ವರ್ತತೇ ಕಲ್ಪೋ ವಾರಾಹಃ ಸಾಂಪ್ರತಃ ಶುಭಃ ॥ ೭ ॥

ಅಸ್ಮಾತ್ಕಲ್ಪಾತ್ತು ಯಃ ಪೂರ್ವಃ ಕಲ್ಪೋಽತೀತಃ ಸನಾತನಃ ।
ತಸ್ಯ ಚಾಸ್ಯ ಚ ಕಲ್ಪಸ್ಯ ಮಧ್ಯಾವಸ್ಥಾಂ ನಿಬೋಧತ ॥ ೮ ॥

ಪ್ರತ್ಯಾಗತೇ ಪೂರ್ವಕಲ್ಪೇ ಪ್ರತಿಸಂಧಿಂ ವಿನಾನಘಾಃ ।
ಅನ್ಯಃ ಪ್ರವರ್ತತೇ ಕಲ್ಪೋ ಜನಲೋಕಾದಯಃ ಪುನಃ ॥ ೯ ॥

ವ್ಯುಚ್ಛಿನ್ನಪ್ರತಿಸಂಧಿಸ್ತು ಕಲ್ಪಾತ್ಕಲ್ಪಃ ಪರಸ್ಪರಮ್ ।
ವ್ಯುಚ್ಛಿದ್ಯಂತೇ ಪ್ರಜಾಃ ಸರ್ವಾಃ ಕಲ್ಪಾಂತೇ ಸರ್ವಶಸ್ತದಾ ।
ತಸ್ಮಾತ್ಕಲ್ಪಾತ್ತು ಕಲ್ಪಸ್ಯ ಪ್ರತಿಸಂಧಿರ್ನವಿದ್ಯತೇ ॥ ೧೦ ॥

---

ಯನು ಪ್ರಶ್ನಿಸಲು ಆ ವಾಗ್ಮಿಗಳಲ್ಲಿ ಅಗ್ರಗಣ್ಯರಾದ ಸೂತಮುನಿಯು ತ್ರಿಲೋಕಗಳ ಸಂಪೂರ್ಣ ಉತ್ಪತ್ತಿಕ್ರಮವನ್ನು ವಿವರಿಸಿ ಪ್ರಶ್ನೆಗೆ ಸದುತ್ತರವನ್ನು ಹೇಳಲಾರಂಭಿಸಿದನು.

೬. ಸೂತಮುನಿಯು ಇಂತೆಂದನು:—ವ್ರತನಿಯಮಾಸಕ್ತರಾದ ಮುನಿಗಳೆ! ಭೂತ-ಭವಿಷ್ಯ ಕಲ್ಪಗಳನ್ನೂ ಅವುಗಳ ಪ್ರತಿಸಂಧಿಯನ್ನೂ ಕೂಡ ಯಥಾವತ್ತಾಗಿ ವರ್ಣಿಸುತ್ತೇನೆ.

೭. ತಪಸ್ವಿಗಳೇ ಕಲ್ಪಗಳಲ್ಲಿ ಯಾವ ಯಾವ ಮನ್ವಂತರಗಳಿರುವುವು? ಈಗ ನಡೆಯುತ್ತಲಿರುವ ಮಂಗಲಕರವಾದ ವಾರಾಹ ಕಲ್ಪವೆಂಬುದು ಯಾವುದು? ಮುಂತಾದ ಸಕಲ ವಿಷಯಗಳನ್ನೂ ನಿರೂಪಣ ಮಾಡುತ್ತೇನೆ.

೮. ಮತ್ತು ಈ ಕಲ್ಪದ ಹಿಂದೆ ಯಾವ ಅನಾದಿಯಾದ ಕಲ್ಪವಿದ್ದು ಅತೀತವಾಯಿತೋ ಆ ಕಲ್ಪ ಮತ್ತು ಈಗ ನಡೆಯುವ ಕಲ್ಪಗಳ ಮಧ್ಯಾವಸ್ಥೆಯನ್ನು ಕೇಳಿರಿ.

೯. ನಿಷ್ಕಲ್ಮಷರಾದ ಶ್ರೋತೃಗಳೆ! ಹಿಂದಿನ ಕಲ್ಪವು ಸಂಪೂರ್ಣವಾಗಿ ಕಳೆದು ಹೋಗಿ ಮತ್ತೊಂದು ಕಲ್ಪದ ಪ್ರಾರಂಭವು ಜನಲೋಕಾದಿಗಳಲ್ಲಿ ಪ್ರತಿಸಂಧಿಯಿಲ್ಲದೇ ಪ್ರವರ್ತಿಸುವುದು.

೧೦. ಪರಸ್ಪರ ಅಂತರವೆಂಬ ಪ್ರತಿಸಂಧಿಯಿಲ್ಲದ ಕಲ್ಪಗಳಲ್ಲಿ ಹಿಂದಿನ ಕಲ್ಪದ

**ಮನ್ವಂತರೇ ಯುಗಾಖ್ಯಾನಾಮವಿಚ್ಛಿನ್ನಾಸ್ತು ಸಂಧಯಃ ।**
**ಪರಸ್ಪರಾತ್ಪ್ರವರ್ತಂತೇ ಮನ್ವಂತರಯುಗೈಃ ಸಹ ॥ ೧೧ ॥**

**ಉಕ್ತಾ ಯೇ ಪ್ರಕ್ರಿಯಾರ್ಧೇನ ಪೂರ್ವಕಲ್ಪಾಃ ಸಮಾಸತಃ ।**
**ತೇಷಾಂ ಪರಾರ್ಧಂಕಲ್ಪಾನಾಂ ಪೂರ್ವೋ ಯಸ್ಮಾತ್ತು ಯಃ ಪರಃ॥೧೨॥**

**ಅಸೀತ್ಕಲ್ಪೇಽನ್ಯತೀತೇಽನ್ಯೈ ಪರಾರ್ಧಾತ್ಪರಮಸ್ತುಯಃ ।**
**ಕಲ್ಪಾಸ್ತ್ವನ್ಯೇ ಭವಿಷ್ಯಾ ಯೇ ಹ್ಯಪರಾರ್ಧಗುಣೀಕೃತಾಃ ॥ ೧೩ ॥**

**ಪ್ರಥಮಃ ಸಾಂಪ್ರತಸ್ತೇಷಾಂ ಕಲ್ಪೋ ಯೋ ವರ್ತತೇ ದ್ವಿಜಾಃ ।**
**ಅಸ್ಮಿನ್ ಪೂರ್ವೇ ಪರಾರ್ಧೇ ತು ದ್ವಿತೀಯಃ ಪರ ಉಚ್ಯತೇ ॥ ೧೪ ॥**

**ಏಷ ಸಂಸ್ಥಿತಕಾಲಸ್ತು ಪ್ರತ್ಯಾಹಾರಸ್ತತಃ ಸ್ಮೃತಃ ।**
**ಅಸ್ಮಾತ್ಕಲ್ಪಾತ್ತತಃ ಪೂರ್ವಂ ಕಲ್ಪೋಽತೀತಃ ಪುರಾತನಃ ॥ ೧೫ ॥**

---

ಅಂತದಲ್ಲಿ ಸಕಲಪ್ರಜೆಗಳೂ ಲಯವಾಗುತ್ತಾರೆ. ಅನಂತರ ಮತ್ತೊಂದು ಕಲ್ಪವು ಪ್ರಾರಂಭಿಸುತ್ತದೆ. ಆದ್ದರಿಂದ ಕಲ್ಪದ್ವಯಕ್ಕೆ ಪ್ರತಿಸಂಧಿಯೆಂಬುದು ಇಲ್ಲವು.

೧೧. ಮನ್ವಂತರಗಳಲ್ಲಿ ಯುಗಗಳ ಪರಸ್ಪರ ಸಂಧಿಗಳು ಅವಿಚ್ಛಿನ್ನವಾಗಿರುವುವು. ಸಂಧಿಸಿರುವ ಮನ್ವಂತರಗಳು ಆಯಾಯ ಯುಗಗಳೊಡನೆ ಒಂದರಿಂದೊಂದು ಹುಟ್ಟುವುವು.

೧೨. ಪ್ರಕ್ರಿಯಾಪಾದದಿಂದ ಹಿಂದೆ ಸಂಗ್ರಹವಾಗಿ ಪ್ರತಿಪಾದಿಸಲ್ಪಟ್ಟ ಪರಾರ್ಧ ಕಲ್ಪಗಳಲ್ಲಿ ಪ್ರಥಮಪರಾರ್ಧ ಕಲ್ಪವೆಂಬುದು ಕಳೆದು ಮುಂದಿನ ಪರಾರ್ಧಕಲ್ಪವು ಪ್ರಾಪ್ತವಾಗಿರುವುದು.

೧೩. ಹಿಂದೆ ಅನೇಕಾನೇಕ ಕಲ್ಪಗಳು ಸಮಾಪ್ತಿಗೊಂಡು ಪ್ರಥಮಪರಾರ್ಧ ಕಲ್ಪದ ಅನಂತರದಲ್ಲಿ ಮತ್ತೊಂದು ಪರಾರ್ಧ ಕಲ್ಪವು ಒಂದಿರುವಂತೆ ಇದು ಕಳೆದ ತರುವಾಯ ಪರಾರ್ಧಕಲ್ಪ ಪರಿಮಾಣದಿಂದ ಗುಣಿಸಲ್ಪಟ್ಟ ಇತರ ಕಲ್ಪಗಳು ಮುಂದೆ ನಡೆಯುವುವು.

೧೪. ದ್ವಿಜರೆ! ಈಗಿನ ಪ್ರಥಮ ಪರಾರ್ಧವೆಂದು ಕರೆಯಲ್ಪಡುವ ಕಲ್ಪವು ಮುಗಿದ ಅನಂತರ ಪ್ರಾಪ್ತವಾಗುವುದು ದ್ವಿತೀಯಪರಾರ್ಧವೆಂದು ಹೇಳಲ್ಪಡುತ್ತದೆ.

೧೫-೧೬. ಒಂದು ಪರಾರ್ಧ ಮುಗಿದು ಮತ್ತೊಂದು ಪ್ರಾರಂಭಿಸುವಾಗ ಅವಾಂತರ ಪ್ರಲಯವಾಗುವುದರಿಂದ ಪ್ರತ್ಯಾಹಾರವೆಂದು ಆ ಸಂಧಿಯು ಕರೆಯಲ್ಪ

ಚತುರ್ಯುಗಸಹಸ್ರಾಂತೇ ಸಹ ಮನ್ವಂತರೈಃ ಪುರಾ ॥ ೧೭ ॥

ನಕ್ಷತ್ರಗ್ರಹತಾರಾಶ್ಚ ಚಂದ್ರಸೂರ್ಯಾದಯಸ್ತು ತೇ ।
ಅಷ್ಟಾವಿಂಶತಿರೇವೈತಾಃ ಕೋಟ್ಯಸ್ತು ಸುಕೃತಾತ್ಮನಾಮ್ ॥ ೧೭ ॥

ಮನ್ವಂತರೇ ಯಥೈಕಸ್ಮಿನ್ ಚತುರ್ದಶಸು ವೈ ತಥಾ ।
ತ್ರೀಣಿ ಕೋಟಿಶತಾನ್ಯಾಸನ್ ಕೋಟ್ಯೋ ದ್ವಿನವತಿಸ್ತಥಾ ॥ ೧೮ ॥

ಅಥಾಧಿಕಾ ಸಪ್ತತಿಶ್ಚ ಸಹಸ್ರಾಣಾಂ ಪುರಾ ಸ್ಮೃತಾ ।
ಏಕೈಕಸ್ಮಿಂಸ್ತು ಕಲ್ಪೇ ವೈ ದೇವಾ ವೈಮಾನಿಕಾಃ ಸ್ಮೃತಾಃ ॥ ೧೯ ॥

ಅಥ ಮನ್ವಂತರೇಷ್ವಾಸಂಶ್ಚತುರ್ದಶಸು ಖೇ ದಿವಿ ।
ದೇವಾಶ್ಚ ಪಿತರಶ್ಚೈವ ಋಷಯೋಽಮೃತಪಾಸ್ತಥಾ ॥ ೨೦ ॥

ತೇಷಾಮನುಚರಾಶ್ಚೈವ ಪತ್ನ್ಯಃ ಪುತ್ರಾಸ್ತಥೈವ ಚ ।
ವರ್ಣಾಶ್ರಮಾತಿರಿಕ್ತಾಶ್ಚ ತಸ್ಮಿನ್ ಕಾಲೇ ತು ಖೇ ಸುರಾಃ ॥ ೨೧ ॥

---

ಡುವುದು. ಪೂರ್ವದಲ್ಲಿದ್ದ ಮನ್ವಂತರಗಳೊಂದಿಗೆ ಸಹಸ್ರಸಂಖ್ಯೆಯಿಂದ ನಾಲ್ಕು ಯುಗಗಳು ಕಳೆದು ಈ ಕಲ್ಪಕ್ಕಿಂತ ಪೂರ್ವಕಲ್ಪ ಒಂದು ಜರುಗಿರುವುದು.

೧೭. ನಕ್ಷತ್ರಗಳು, ಗ್ರಹಗಣ, ತಾರಕೆಗಳು ಮತ್ತು ಚಂದ್ರಸೂರ್ಯರು ಮೊದಲಾಗಿ ಇಪ್ಪತ್ತೆಂಟು ಕೋಟಿ ಪುಣ್ಯವಂತರು ಇರುವರು.

೧೮-೧೯. ಒಂದು ಮನ್ವಂತರದಲ್ಲಿ ಯಾವರೀತಿಯಲ್ಲಿ ಪ್ರಜಾಗಣವು ವರ್ತಿಸುವುದೋ ಅದೇ ರೀತಿಯಲ್ಲಿ ಹದಿನಾಲ್ಕು ಮನ್ವಂತರಗಳಲ್ಲಿಯೂ ವರ್ತಿಸುವುದು. ತಾರತಮ್ಯವಾವುದೂ ಇಲ್ಲ. ಹಿಂದೆ ಜರುಗಿದ ಕಲ್ಪಗಳಲ್ಲಿ ಒಂದೊಂದರಲ್ಲಿ ಮೂರುನೂರು ಕೋಟಿ, ತೊಂಬತ್ತೆರಡು ಕೋಟಿ, ಇದಕ್ಕಿಂತ ಹೆಚ್ಚಾಗಿ ಎಪ್ಪತ್ತುಸಾವಿರ, ಹೀಗೆ ವಿವಿಧವಾದ ಸಂಖ್ಯೆಯಿಂದ ವಿಮಾನಾರೂಢರಾದ ದೇವತೆಗಳು ವಿರಾಜಿಸುತ್ತಿದ್ದರು.

೨೦. ಮತ್ತು ಹದಿನಾಲ್ಕು ಮನ್ವಂತರಗಳಲ್ಲಿಯೂ ದೇವತೆ-ಪಿತೃ-ಋಷಿ-ಅಮೃತಪಾನವಂತರು ಮುಂತಾದ ಸುಕೃತವಂತರು ಆಕಾಶದಲ್ಲಿ ವಿಮಾನರೂಢರಾಗಿದ್ದರು.

೨೧. ಹಿಂದೆ ಹೇಳಿದ ದೇವಪಿತೃಗಣಗಳ ಅನುಚರರೂ ಪತ್ನೀ ಪುತ್ರ ಮುಂತಾ

ತೈಸ್ತ್ಯೈಃ ಸಾಯುಜ್ಯಗೈಃ ಸಾರ್ಧಂ ಪ್ರಾಪ್ತೇ ವಸ್ತುಮಯೇ ತದಾ ।
ತುಲ್ಯನಿಷ್ಠಾ ಭವನ್ಸರ್ವೇ ಪ್ರಾಪ್ತೇ ಹ್ಯಾಭೂತಸಂಪ್ಲವೇ ॥ ೨೨ ॥

ತತಸ್ತೇಽವಶ್ಯಭಾವಿತ್ವಾದ್ ಬುದ್ಧ್ಯಾಃ ಪರ್ಯಾಯಮಾತ್ಮನಃ ।
ತ್ರೈಲೋಕ್ಯವಾಸಿನೋ ದೇವಾ ಇಹ ತಾನಭಿಮಾನಿನಃ ॥ ೨೩ ॥

ಸ್ಥಿತಿಕಾಲೇ ತದಾ ಪೂರ್ಣೇ ಆಸನ್ನೇ ಪಶ್ಚಿಮೋತ್ತರೇ ।
ಕಲ್ಪಾವಸಾನಿಕಾ ದೇವಾಸ್ತಸ್ಮಿನ್ ಪ್ರಾಪ್ತೇ ಹ್ಯುಪಪ್ಲವೇ ॥ ೨೪ ॥

ತತೋತ್ಸುಕಾ ವಿಷಾದೇನ ತ್ಯಕ್ತ್ವಾಸ್ಥಾನಾನಿ ಭಾಗಶಃ ।
ಮಹರ್ಲೋಕಾಯ ಸಂವಿಗ್ನಾಸ್ತತಸ್ತೇ ದಧಿರೇ ಮನಃ ॥ ೨೫ ॥

ತೇಽಯುಕ್ತಾನುಪಪದ್ಯಂತೇ ಮಹತೀಂ ಚ ಶರೀರಿಕೇ ।
ವಿಶುದ್ಧಿಬಹುಲಾಃ ಸರ್ವೇ ಮಾನಸೀಂ ಸಿದ್ಧಿಮಾಸ್ಥಿತಾಃ ॥ ೨೬ ॥

---

ದವರೂ ಆ ಕಾಲದಲ್ಲಿ ವರ್ಣಾಶ್ರಮಧರ್ಮಾಧಿಕಾರವನ್ನು ಮೀರಿಸಿದ ದೇವಮಂಡ ಲಕ್ಕೆ ಸೇರಿ ಆಕಾಶದಲ್ಲಿ ಇದ್ದರು.

೨೨. ಆಯಾಯ ಪರಸ್ಪರ ಸಾಯುಜ್ಯವನ್ನು ಹೊಂದಿದ ದೇವವ್ಯಕ್ತಿಗಳಿಂದ ದೇವಲೋಕವು ಪೂರ್ಣವಾಗಲು ಒದಗಿರುವ ಪ್ರಲಯಕಾಲದಲ್ಲಿ ಸಕಲರೂ ಸಮಾನ ವಾದ ಸ್ಥಿತಿಯುಳ್ಳವರಾದರು.

೨೩. ತರುವಾಯ ತ್ರಿಲೋಕಗಳಲ್ಲಿ ವಾಸಿಸುವ ದೇವತೆಗಳೆಲ್ಲರೂ ಸೃಷ್ಟ್ಯಾದಿ ಪರ್ಯಾಯವು ಮುಂದೆ ತಪ್ಪದೇ ನಡೆಯಬೇಕಾಗಿರುವುದರಿಂದ ಅದಕ್ಕೆ ಅನುಗುಣ ವಾದ ತಮ್ಮ ಅಧಿಕಾರಪರ್ಯಾಯದ ಅಭಿಮಾನವುಳ್ಳವರಾದರು.

೨೪. ಪ್ರಲಯಕಾಲದ ಮೊದಲು ಇದ್ದ ಸ್ಥಿತಿಸಮಯವು ಪೂರ್ತಿಗೊಂಡು ಆಗ ಕಲ್ಪದ ಆದಿ-ಅಂತವೆಂಬ ಪರಿಚ್ಛೇದ ಕಾಲವು ಸುನಿಶ್ಚಿತವಾಗಿ ಪ್ರಲಯದ ನಾನಾವಿಧ ಉಪಪ್ಲವಗಳು ತಲೆದೋರಲು ಕಲ್ಪಾವಸಾನಕ್ಕೆ ಸಾಕ್ಷಿಭೂತರಾಗಿ ದೇವತೆಗಳಿದ್ದರು.

೨೫. ಆಗ ತಮ್ಮ ಅಭಿಮಾನಿಕ ಸ್ಥಾನಗಳನ್ನು ವಿಷಾದದಿಂದ ಬಿಟ್ಟು ಉತ್ಸುಕ ರಾಗಿ ತಮಗೆ ದೊರಕುವ ಅವಶ್ಯಭಾವಿ ಭಾಗವನ್ನು ನೆನೆಸಿಕೊಂಡು ಮಹರ್ಲೋಕ ವನ್ನು ಸೇರಲು ಮನಸ್ಸನ್ನಿಟ್ಟರು.

೨೬. ಅವರು ಶರೀರಾಂತರ್ವರ್ತಿಯಾದ ಆತ್ಮನಲ್ಲಿ ಮಹತ್ತಾದ ಯೋಗಧಾರ ಣೆಯನ್ನು ಅವಲಂಬಿಸಿ ಅತಿಶಯವಾದ ಶುದ್ಧಿಯನ್ನೂ ಮಾನಸ ಸಂಕಲ್ಪಸಿದ್ಧಿಯನ್ನೂ

ತೈಃ ಕಲ್ಪವಾಸಿಭಿಃ ಸಾರ್ಧಂ ಮಹಾನಾಸಾದಿತಸ್ತದಾ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಸ್ತದ್ಭಕ್ತೈಶ್ಚಾಪರೈರ್ಜನೈಃ ॥ ೨೭ ॥

ಗತ್ವಾ ತು ತೇ ಮಹರ್ಲೋಕಂ ದೇವಸಂಘಾಶ್ಚತುರ್ದಶ ।
ತತಸ್ತೇ ಜನಲೋಕಾಯ ಸೋದ್ವೇಗಾ ದಧಿರೇ ಮನಃ ॥ ೨೮ ॥

ಏತೇನ ಕ್ರಮಯೋಗೇನ ಯಯುಸ್ತೇ ಕಲ್ಪವಾಸಿನಃ ।
ಏವಂ ದೇವಯುಗಾನಾಂ ತು ಸಹಸ್ರಾಣಿ ಪರಸ್ಪರಮ್ ॥ ೨೯ ॥

ವಿಶುದ್ಧಿಬಹುಲಾಃ ಸರ್ವೇ ಮಾನಸೀಂ ಸಿದ್ಧಿಮಾಸ್ಥಿತಾಃ ।
ತೈಃ ಕಲ್ಪವಾಸಿಭಿಃ ಸಾರ್ಧಂ ಜನ ಆಸಾದಿತಸ್ತು ವೈ ॥ ೩೦ ॥

ತತ್ರ ಕಲ್ಪಾನ್ ದಶ ಸ್ಥಿತ್ವಾ ಸತ್ಯಂ ಗಚ್ಛಂತಿ ವೈ ಪುನಃ ।
ಗತ್ವಾ ತೇ ಬ್ರಹ್ಮಲೋಕಂ ವೈ ಅಪರಾವರ್ತಿನೀಂ ಗತಿಮ್ ॥ ೩೧ ॥

---

ಹೊಂದಿರುವರು. ಯೋಗಧಾರಣಾನುಕೂಲವಾದ ಸಿದ್ಧಿಪ್ರಾಪ್ತಿಯು ಯುಕ್ತವಾದುದು.

೨೭. ಆ ಕಲ್ಪವಾಸಿಗಳಾದ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ಮತ್ತು ಅವರಿಂದ ಹುಟ್ಟಿದ ಇತರ ಸಮಸ್ತ ಪ್ರಜೆಗಳಿಂದ ಕೂಡಿ ಅವರಿಂದ ಮಹರ್ಲೋಕವು ಆರ್ಜಿಸಲ್ಪಟ್ಟಿತು.

೨೮. ಆ ಹದಿನಾಲ್ಕು ದೇವಸಂಘಗಳು ಮಹರ್ಲೋಕವನ್ನು ಸೇರಿ ಅದರ ಮುಂದಿನ ಜನಲೋಕವನ್ನು ಸೇರಬೇಕೆಂದು ಕುತೂಹಲವುಳ್ಳವರಾದರು.

೨೯. ಕಲ್ಪವಾಸಿಗಳಾದ ಆ ಸುಕೃತಿಗಳು ಇಲ್ಲಿ ನಿರೂಪಿಸಿರುವ ಕ್ರಮದಿಂದ ಉತ್ತಮ ಲೋಕಗಳನ್ನು ಹೊಂದಿ ದೇವಮಾನದ ಯುಗಗಳು ಸಹಸ್ರ ಆವೃತ್ತಿಯಾಗುವವರೆಗೂ ಪರಸ್ಪರಾವಲಂಬಿಗಳಾಗಿದ್ದರು.

೩೦. ಅವರು ಅತ್ಯಂತ ಪವಿತ್ರರಾಗಿಯೂ ಯೋಗಬಲದಿಂದ ಸಾಧಿಸಿದ ಮಾನಸ ಸಿದ್ಧಿಯುಳ್ಳವರಾಗಿಯೂ ಇದ್ದರು. ಅಂತಹ ಕಲ್ಪವಾಸಿಗಳಿಂದ ಕ್ರಮವಾಗಿ ಜನಲೋಕವು ಹೊಂದಲ್ಪಟ್ಟಿತು.

೩೧. ಆ ಜನಲೋಕದಲ್ಲಿ ಹತ್ತು ಕಲ್ಪಗಳ ಕಾಲವಿದ್ದು ತರುವಾಯ ಅಲ್ಲಿಂದ ಸತ್ಯಲೋಕವನ್ನು ಹೊಂದುತ್ತಾರೆ. ಸತ್ಯಲೋಕವೆಂಬುದು ಬ್ರಹ್ಮಲೋಕವು. ಅದನ್ನು ಸೇರಿದವರು ಮತ್ತೆ ಸಂಸಾರಪಥಕ್ಕೆ ಇಳಿಯುವುದಿಲ್ಲ. ಅಂತಹ ಉತ್ತಮವಾದ ಗತಿಯು.

ಆಧಿಪತ್ಯಂ ವಿಮಾನೇ ವೈ ಐಶ್ವರ್ಯೇಣ ತು ತತ್ಸಮಾಃ ।
ಭವಂತಿ ಬ್ರಹ್ಮಣಾ ತುಲ್ಯಾ ರೂಪೇಣ ವಿಷಯೇಣ ಚ ॥ ೩೨ ॥

ತತ್ರ ತೇ ಹ್ಯವತಿಷ್ಠಂತೇ ಪ್ರೀತಿಯುಕ್ತಾಶ್ಚ ಸಂಯಮಾನ್ ।
ಆನಂದಂ ಬ್ರಹ್ಮಣಃ ಪ್ರಾಪ್ಯ ಮುಚ್ಯಂತೇ ಬ್ರಹ್ಮಣಾ ಸಹ ॥ ೩೩ ॥

ಅವಶ್ಯಭಾವಿನಾಽರ್ಥೇನ ಪ್ರಾಕೃತೇನೈವ ತೇ ಸ್ವಯಮ್ ।
ನಾನಾರ್ಚನಾಭಿಃ ಸಂಬದ್ಧಾಸ್ತದಾ ತತ್ಕಾಲಭಾವಿತಾಃ ॥ ೩೪ ॥

ಸ್ವಪತೋಽಬುದ್ಧಿಪೂರ್ವಂ ತು ಬೋಧೋ ಭವತಿ ವೈ ಯಥಾ ।
ತಥಾ ತು ಭಾವಿತೇ ತೇಷಾಂ ತಥಾನಂದಃ ಪ್ರವರ್ತತೇ ॥ ೩೫ ॥

ಪ್ರತ್ಯಾಹಾರೈಸ್ತು ಭೇದಾನಾಂ ಯೇಷಾಂ ಭಿನ್ನಾನಿ ಶುಷ್ಮಿಣಾಮ್
ತೈಃ ಸಾರ್ಧಂ ವರ್ಧತೇ ತೇಷಾಂ ಕಾರ್ಯಾಣಿ ಕರಣಾನಿ ಚ ॥ ೩೬ ॥

---

೩೨. ಅಲ್ಲಿ ಬ್ರಹ್ಮನಿಗೆ ಸಮಾನವಾದ ಭೋಗವು ಅವರವರ ಉಪಾಸನಾಪುಣ್ಯ ಪರಿಪಾಕದಿಂದ ಲಭಿಸುವುದು. ಆದ್ದರಿಂದ ವಿಮಾನಾಧಿಪತ್ಯ, ಐಶ್ವರ್ಯ, ರೂಪ, ಭೋಗ್ಯವಿಷಯ ಮುಂತಾದ ಬ್ರಹ್ಮತುಲ್ಯವಾದ ಸೌಖ್ಯಸಾಮಗ್ರಿಯುಳ್ಳವರಾಗುವರು.

೩೩. ಆ ಬ್ರಹ್ಮಲೋಕದಲ್ಲಿ ಅವರು ಪ್ರಸನ್ನಚಿತ್ತರಾಗಿಯೂ ಜಿತೇಂದ್ರಿಯರಾಗಿಯೂ ಇದ್ದು ಬ್ರಹ್ಮಾನಂದವನ್ನು ಸಾಕ್ಷಾತ್ಕರಿಸಿ ಬ್ರಹ್ಮನೊಡನೆ ಪರಮಮುಕ್ತಿಯನ್ನು ಹೊಂದುತ್ತಾರೆ.

೩೪. ಬ್ರಹ್ಮಲೋಕದಲ್ಲಿ ವಾಸಮಾಡುವಾಗ ಅವರು ಪ್ರಕೃತಿಸ್ವಭಾವದಿಂದ ದತ್ತವಾಗಿಯೂ ಅವಶ್ಯಭಾವಿಯಾಗಿಯೂ ಇದ್ದ ಭೋಗಗಳಿಂದಲೂ ಮಾನ=ಸತ್ಕಾರಗಳಿಂದಲೂ ಕೂಡಿ ಅದಕ್ಕೆ ಅನುಗುಣವಾದ ಪವಿತ್ರ ಭಾವನೆಯುಂದಿರುವರು.

೩೫. ನಿದ್ದೆಮಾಡುತ್ತಿದ್ದ ಪುರುಷನಿಗೆ ನಿದ್ರಾ ಅವಸಾನದಲ್ಲಿ ತನ್ನ ಕರ್ತವ್ಯಬುದ್ಧಿ=ಸಂಕಲ್ಪಗಳಿಲ್ಲದೆ ಆಕಸ್ಮಿಕವಾಗಿ ಎಚ್ಚರವಾಗುವಂತೆ ಬ್ರಹ್ಮಲೋಕ ವಾಸಿಗಳಾದ ಸುಕೃತಿಗಳಿಗೆ ಪವಿತ್ರಭಾವನೆಯಲ್ಲಿರುವಾಗ ಬ್ರಹ್ಮಾನಂದಾನುಭವವು ಆವಿರ್ಭವಿಸುವುದು.

೩೬. ಇಂದ್ರಿಯಗಳ ಚಪಲತೆಯಿಂದ ಕಾರ್ಯಕರಣ ಸಂಘಾತವನ್ನು ಶೋಷಣ

ನಾನಾತ್ವದರ್ಶಿನಾಂ ತೇಷಾಂ ಬ್ರಹ್ಮಲೋಕೇ ನಿವಾಸಿನಾಮ್ ।
ವಿನಿವೃತ್ತಾಧಿಕಾರಾಣಾಂ ಸ್ವೇನ ಧರ್ಮೇಣ ತಿಷ್ಠತಾಮ್ ॥ ೩೭ ॥

ತೇ ತುಲ್ಯಲಕ್ಷಣಾಃ ಸಿದ್ಧಾಃ ಶುದ್ಧಾತ್ಮಾನೋ ನಿರಂಜನಾಃ ।
ಪ್ರಾಕೃತೇ ಕರಣೋಪೇತಾಃ ಸ್ವಾತ್ಮನ್ಯೇವ ವ್ಯವಸ್ಥಿತಾಃ ॥ ೩೮ ॥

ಪ್ರಖ್ಯಾಪಯಿತ್ವಾ ಚಾತ್ಮಾನಂ ಪ್ರಕೃತಿಸ್ತ್ವೇಷು ತತ್ತ್ವತಃ ।
ಪುರುಷಾನ್ಯಬಹುತ್ವೇನ ಪ್ರತೀತಾ ನಪ್ರವರ್ತತೇ ॥ ೩೯ ॥

ಪ್ರವರ್ತತೇ ಪುನಃಸರ್ಗೇ ತೇಷಾಂ ಸಾ ಕಾರಣಾತ್ಮನಾಮ್ ।
ಸಂಯೋಗೇ ಪ್ರಕೃತಿಜ್ಞೇಯಾ ಮುಕ್ತಾನಾಂ ತತ್ತ್ವದರ್ಶಿನಾಮ್ ॥ ೪೦ ॥

---

ಮಾಡುವ ಸಕಲ ವಿಷಯಗಳನ್ನು ಪರಿತ್ಯಾಗಮಾಡಿ ಅವುಗಳ ವಾಸನಾ ಸಂಸ್ಕಾರ ರೂಪವಾದ ರಸದಿಂದಲೂ ವರ್ಜಿತರಾಗಿ ಬ್ರಹ್ಮಾನಂದವನ್ನು ಅನುಭವಿಸುವರು.

೩೭. ಪ್ರಕೃತಿ-ಪುರುಷರ ನಾನಾತ್ವದರ್ಶನವೆಂಬ ಸಮ್ಯಗ್‌ಜ್ಞಾನವುಳ್ಳ ಬ್ರಹ್ಮ ಲೋಕವಾಸಿಗಳು ಬ್ರಹ್ಮಾನಂದ ಸಾಕ್ಷಾತ್ಕಾರದ ತರುವಾಯ ಅಧಿಕಾರವಿನಿರ್ಮುಕ್ತ ರಾಗಿ ಸ್ವಸ್ವರೂಪಧರ್ಮವಾದ ಆನಂದಾದಿಗಳಿಂದ ವಿರಾಜಿಸುತ್ತಿರುವರು.

೩೮. ಆದರೆ ಪೂರ್ವಭಾವಿಯಾದ ಬ್ರಹ್ಮಲೋಕವಾಸದಲ್ಲಿ ನಿರತರಾಗಿರುವಾಗ ಆ ಸಿದ್ಧರು ಒಂದೇ ವಿಧವಾದ ಲಕ್ಷಣಗಳಿಂದಲೂ, ಪವಿತ್ರವಾದ ಮಾನಸದಿಂದಲೂ, ಪ್ರಾಕೃತವಾದ ಕರಣಗಳಿಂದಲೂ ಕೂಡಿದವರಾಗಿ ಯಾವ ವಿಧದ ದೋಷಸಂಪರ್ಕವೂ ಇಲ್ಲದೇ ಸ್ವಸ್ವರೂಪದಲ್ಲಿಯೇ ಆಸಕ್ತರಾಗಿರುವರು.

೩೯. ಗುಣಮಯವಾದ ಪ್ರಕೃತಿಯು ಈ ಆತ್ಮನಿಷ್ಠರಾದ ಜನಗಳಿಗೆ ಮೋಕ್ಷ ಸಾಧನೆಗಾಗಿ ಪ್ರವರ್ತಿಸುತ್ತಲಿದ್ದು ತನಗಿಂತಲೂ ಬೇರೆಯಾದ ಆತ್ಮ(ಪುರುಷ) ನ ಯಾಥಾತ್ಮ್ಯವನ್ನು ಪ್ರಕಾಶಪಡಿಸಿ ತಾನು ನಿವೃತ್ತವಾಗುವುದು.

೪೦. ಪ್ರಥಮ ಕಲ್ಪವು ಸೃಷ್ಟಿಪ್ರಲಯ ಸಹಿತವಾಗಿ ಕಳೆದು ಮತ್ತೊಂದು ಕಲ್ಪದ ಪುನಃ ಸೃಷ್ಟಿಯು ಪ್ರಾರಂಭವಾಗುವಾಗ ಮುಕ್ತರೂ ತತ್ತ್ವಜ್ಞರೂ ಆದ ಅಧಿ ಕಾರಿಕ ಪುರುಷರಿಗೆ ಪ್ರಕೃತಿಯು ಐಕ್ಯರೂಪದಿಂದ ಸಂಬಂಧಿಸಿ ಕಾರಣಸ್ವರೂಪವನ್ನು ಕೊಟ್ಟಿರುವುದು.

**ತತ್ರಾಪಸರ್ಗಿಣಾಂ ತೇಷಾಂ ನ ಪುನರ್ಮಾರ್ಗಗಾಮಿನಾಮ್ ।**
**ಅಭಾವಃ ಪುನರುತ್ಪನ್ನಃ ಶಾಂತಾನಾಮರ್ಚಿಷಾಮಿವ ॥ ೪೧ ॥**

**ತತಸ್ತೇಷು ಗತೇಷೂರ್ಧ್ವಂ ತ್ರೈಲೋಕ್ಯೇಷು ಮಹಾತ್ಮಸು ।**
**ಏತೈಃ ಸಾರ್ಧಂ ಮಹರ್ಲೋಕಸ್ತದಾ ನಾಸಾದಿತಸ್ತು ವೈ ॥ ೪೨ ॥**

**ತಚ್ಛಿಷ್ಯಾ ವೈ ಭವಿಷ್ಯಂತಿ ಕಲ್ಪದಾಹ ಉಪಸ್ಥಿತೇ ।**
**ಗಂಧರ್ವಾದ್ಯಾಃ ಪಿಶಾಚಾಶ್ಚ ಮಾನುಷಾ ಬ್ರಾಹ್ಮಣಾದಯಃ ॥ ೪೩ ॥**

**ಪಶವಃ ಪಕ್ಷಿಣಶ್ಚೈವ ಸ್ಥಾವರಾಶ್ಚ ಸರೀಸೃಪಾಃ ।**
**ತಿಷ್ಠತ್ಸು ತೇಷು ತತ್ಕಾಲಂ ಪೃಥಿವೀತಲವಾಸಿಷು ॥ ೪೪ ॥**

**ಸಹಸ್ರಂ ಯತ್ತು ರಶ್ಮೀನಾಂ ಸ್ವಯಮೇವ ವಿಭಾವ್ಯತೇ ।**
**ತತ್ಸಪ್ತರಶ್ಮಯೋ ಭೂತ್ವಾ ಏಕೈಕೋ ಜಾಯತೇ ರವಿಃ ॥ ೪೫ ॥**

---

೪೧. ಅಂಥವರು ಪುನರಾವೃತ್ತಿಯಿಲ್ಲದ ಮುಕ್ತಿಸಾಮ್ರಾಜ್ಯವನ್ನು ಹೊಂದಿ ಜ್ವಾಲೆಯು ಶಾಂತವಾದ ನಿರ್ವಿಕಾರವಾದ ತೇಜಃಪುಂಜದಂತೆ ಪ್ರಕಾಶಿಸುವರು. ವಿಕಾರ ಸ್ವರೂಪಗಳೆಲ್ಲವೂ ಲಯವಾಗುವುದರಿಂದ ಆ ಸ್ವರೂಪದಿಂದ ಅದೃಶ್ಯರಾಗುವರು.

೪೨. ಹೀಗೆ ಜ್ಞಾನಿಗಳಾದ ಮಹಾತ್ಮರು ತ್ರಿಲೋಕಗಳನ್ನು ಅತಿಕ್ರಮಿಸಿದ ಊರ್ಧ್ವಗತಿಯಾದ ಮುಕ್ತಿಯನ್ನು ಹೊಂದಲಾಗಿ ಯೋಗಸಿದ್ಧಿಯ ತಾರತಮ್ಯದಿಂದ ಅವರೊಡನೆ ಮಹರ್ಲೋಕವನ್ನು ಸೇರದೇ ಇರುವ ಅವರ ಶಿಷ್ಯರಾದ ಪುಣ್ಯಾತ್ಮರು ಕೆಲವರಿರುವರು.

೪೩-೪೪. ಕಲ್ಪಾವಸಾನದ ದಾಹವು ಏಕಪ್ರಕಾರವಾಗಿ ಪ್ರಾಪ್ತವಾಗಲು ಗಂಧರ್ವ ಪಿಶಾಚ ಬ್ರಾಹ್ಮಣ ಮುಂತಾದ ಪೃಥಿಯಲ್ಲಿ ವಾಸಿಸುವ ಸಕಲ ಪ್ರಾಣಿಗಳ ಮೇಲೆ ಪ್ರಲಯದ ಕಷ್ಟಪರಿಣಾಮವು ಒದಗುವುದು.

೪೫. ಮತ್ತು ಸೂರ್ಯನಿಗೆ ಇರುವ ಸಹಸ್ರ ಕಿರಣಗಳೂ ಒಟ್ಟಾಗಿ ಸೇರಿದರೆ ಆಗುವಷ್ಟು ತಾಪದಿಂದ ಕೂಡಿದ ಅತಿತೀಕ್ಷ್ಣಕಿರಣಗಳಿಂದ ಕೂಡಿದ ಏಳು ಸೂರ್ಯರು ಉದಯಿಸುವರು.

ಕ್ರಮೇಣೋತ್ತಿಷ್ಠಮಾನಾಸ್ತೇ ತ್ರೀನ್ ಲೋಕಾನ್ ಪ್ರದಹಂತ್ಯುತ ।
ಜಂಗಮಾಃ ಸ್ಥಾವರಾಶ್ಚೈವ ನದ್ಯಃ ಸರ್ವೇ ಚ ಪರ್ವತಾಃ ॥ ೪೬ ॥

ಶುಷ್ಕಾಃ ಪೂರ್ವಮನಾವೃಷ್ಟ್ಯಾ ಸೂರ್ಯೈಸ್ತೇ ಚ ಪ್ರಧೂಪಿತಾಃ ।
ತದಾ ತು ವಿವಶಾಃ ಸರ್ವೇ ನಿರ್ದಗ್ಧಾಃ ಸೂರ್ಯರಶ್ಮಿಭಿಃ ॥ ೪೭ ॥

ಜಂಗಮಾಃ ಸ್ಥಾವರಾಶ್ಚೈವ ಧರ್ಮಾಧರ್ಮಾತ್ಮಕಾಸ್ತು ವೈ ।
ದಗ್ಧದೇಹಾಸ್ತದಾ ತೇ ತು ಧೂತಪಾಪಾ ಯುಗಾಂತರೇ ॥ ೪೮ ॥

ಖ್ಯಾತಾತಪಾ ವಿನಿರ್ಮುಕ್ತಾಃ ಶುಭಯಾ ಚಾತಿಬಂಧಯಾ ।
ತತಸ್ತೇ ಹ್ಯುಪಪದ್ಯಂತೇ ತುಲ್ಯರೂಪೈರ್ಜನೈರ್ಜನಾಃ ॥ ೪೯ ॥

ಉಷಿತ್ವಾ ರಜನೀಂ ತತ್ರ ಬ್ರಹ್ಮಣೋಽವ್ಯಕ್ತಜನ್ಮನಃ ।
ಪುನಃ ಸರ್ಗೇ ಭವಂತೀಹ ಮಾನಸಾ ಬ್ರಹ್ಮಣಃ ಸುತಾಃ ॥ ೫೦ ॥

---

೪೬-೪೭. ಸಪ್ತಸೂರ್ಯರು ಕ್ರಮವಾಗಿ ತ್ರಿಲೋಕವೇ ಮುಂತಾದ ಸಕಲ ವಸ್ತುಗಳನ್ನು ಭಸ್ಮಮಾಡುವರು. ಜಂಗಮ-ಸ್ಥಾವರ ಪ್ರಾಣಿಗಳು ಸಕಲ ನದೀ-ಪರ್ವತಗಳು ಇವೆಲ್ಲವೂ ಅನಾವೃಷ್ಟಿಯಿಂದ ಮೊದಲು ಸುಟ್ಟುಹೋಗಿದ್ದು ಈ ಸಪ್ತ ಸೂರ್ಯಕಿರಣಗಳಿಂದ ಮತ್ತೆ ಸುಡಲ್ಪಟ್ಟು ನಿಶ್ಶೇಷಗಳಾಗಿ ಬೆಂದುಹೋಗುವುವು.

೪೮. ಪ್ರಪಂಚ ಮೂಲಕಾರಣವಾದ ಧರ್ಮ ಅಧರ್ಮತತ್ತ್ವಗಳು ಮಾತ್ರ ಈ ದಾಹದಿಂದ ಪುಟಕ್ಕೆ ಹಾಕಿದ ಚಿನ್ನದಂತೆ ಪಾಪಕಲ್ಮಷ ಶೂನ್ಯಗಳಾಗಿ ಮುಂದಿನ ಯುಗದ ಸೃಷ್ಟಿಗೆ ಅನುಕೂಲಗಳಾಗಿರುವುವು.

೪೯. ಧರ್ಮಾದಿಗಳು ಸೂರ್ಯನ ದಾಹವೆಂಬ ಸಂಸ್ಕಾರದಿಂದ ಖ್ಯಾತಿಹೊಂದಿದ ನಿಯಮವಂತರೂ ಬಂಧಕವಾದ ಶುಭಾಶುಭವಾಸನಾ ರಹಿತರೂ ಆಗಿ ಮನುಷ್ಯರಂತೆ ಸಮಾನರೂಪ ಅಂಶಗಳಿಂದ ಕೂಡಿರುವರು.

೫೦. ಅವರು ಅವ್ಯಕ್ತವೆಂಬ ಕಾರಣದಿಂದ ಜನಿಸಿದ ಬ್ರಹ್ಮನ ರಾತ್ರಿಕಾಲವೆಂದೆನಿಸಿದ ಆ ಸಂಹಾರಕಾಲದಲ್ಲಿ ಶುದ್ಧರೂಪದಿಂದ ಇದ್ದು ಮತ್ತೆ ಆರಂಭವಾಗುವ ಸೃಷ್ಟಿಯ ಆದಿಯಲ್ಲಿ ಬ್ರಹ್ಮನ ಮಾನಸಪುತ್ರರಾಗುವರು.

**ತತಸ್ತೇಷೂಪಪನ್ನೇಷು ಜನ್ಯೈಸ್ತ್ರೈಲೋಕ್ಯವಾಸಿಷು ।**
**ನಿರ್ದಗ್ಧೇಷು ಚ ಲೋಕೇಷು ತದಾ ಸೂರ್ಯೈಸ್ತು ಸಪ್ತಭಿಃ ॥ ೫೦ ॥**

**ವೃಷ್ಟ್ಯಾ ಕ್ಷಿತೌ ಪ್ಲಾವಿತಾಯಾಂ ವಿಜನೇಷ್ವರ್ಣವೇಷು ಚ ।**
**ಸಾಮುದ್ರಾಶ್ಚೈವ ಮೇಘಾಶ್ಚ ಆಪಃ ಸರ್ವಾಶ್ಚ ಪಾರ್ಥಿವಾಃ ॥ ೫೧ ॥**

**ಶೀರ್ಯಮಾಣಾ ವ್ರಜಂತ್ಯೇವ ಸಲಿಲಾಖ್ಯಾಸ್ತಥಾನುಗಾಃ ।**
**ಆಗತಾಗತಿಕಂ ಚೈವ ಯದಾ ತತ್ಸಲಿಲಂ ಬಹು ॥ ೫೨ ॥**

**ಸಂಛಾದ್ಯೇಮಾಂ ಸ್ಥಿತಾಂ ಭೂಮಿಂ ಅರ್ಣವಾಖ್ಯಂ ತದಾಭವತ್ ।**
**ಆಭಾತಿ ಯಸ್ಮಾತ್ತಸ್ಮಾಚ್ಚ ಭಾಸೋ ಭಾಶಬ್ದೋ ವ್ಯಾಪ್ತಿದೀಪ್ತಿಷು ॥ ೫೩ ॥**

---

೫೦. ಹೀಗೆ ಒಂದು ಕಲ್ಪದ ಅವಸಾನಕಾಲದಲ್ಲಿ ಸತ್ಯಲೋಕವಾಸಿಗಳು ಮುಕ್ತರೂ, ಧರ್ಮಾದಿಗಳು ಶುದ್ಧ ಸ್ವರೂಪರೂ ಆಗುವರು. ತ್ರಿಲೋಕಗಳಲ್ಲಿ ವಾಸಿಸುವ ಜನರೆಲ್ಲರೂ ಒಂದೇಸಲ ಉದಯಿಸಿದ ಸಪ್ತಸೂರ್ಯರಿಂದ ದಗ್ಧರಾಗುವರು.

೫೧. ಎಲ್ಲವೂ ಸುಟ್ಟು ಬೂದಿಯಾದಮೇಲೆ ಅತಿಯಾದ ಮಳೆಯು ಸುರಿದು ಭೂಮಿಯು ನೀರಿನಲ್ಲಿ ಮುಳುಗಿಹೋಗುವುದು. ಆಗ ಪೃಥಿವೀಭೂತವಾಗಲಿ ಸಮುದ್ರ-ಮೇಘ-ಸಾಧಾರಣ ಜಲ ಮುಂತಾದ ಜಲಮಯ ಭೂತವಾಗಲಿ ಯಾವುದೊಂದು ವಸ್ತುವೂ ಪ್ರತ್ಯೇಕವಾಗಿ ತೋರುವುದಿಲ್ಲ.

೫೨. ವಿಜಾತೀಯವಾದ ಸಕಲ ಪದಾರ್ಥಗಳೂ ವಿನಾಶವಾಗಿ ನೀರಿನೊಡನೆ ಐಕ್ಯವನ್ನು ಹೊಂದುವುವು. ಆ ನೀರು ಎಲ್ಲೆಲ್ಲಿಯೂ ವ್ಯಾಪಿಸಿ ಗತಿ-ಆಗತಿಗಳಿಂದ ಪೂರ್ಣವಾಗಿರುವುದು.

೫೩. ಅಂತಹ ಜಲವು ಸಕಲ ಪೃಥಿವಿಯನ್ನು ಮುಚ್ಚಿಹೋಗುವಂತೆ ಆವರಿಸಿರುವುದರಿಂದ ಅರ್ಣವವೆಂದು ಕರೆಯಲ್ಪಟ್ಟಿತು. ಮತ್ತು ನೀರಿಗೆ " ಅಂಭಃ " ಎಂಬುದು ಒಂದು ಹೆಸರು. ಅದು ಆ + ಭಾ ಎಂಬ ಎರಡು ಅವಯವಗಳು ಸೇರಿ ವರ್ಣವಿಕಾರಾದಿಗಳಿಂದ ರೂಪವನ್ನು ಹೊಂದಿದೆ. " ಭಾ " ಧಾತುವು ವ್ಯಾಪ್ತಿ ಮತ್ತು ದೀಪ್ತಿ ಎಂಬ ಅರ್ಥಗಳನ್ನು ಕೊಡುವುದು. ಎಂದರೆ ವ್ಯಾಪಿಸಿದ ವಿಶಾಲವಾದ ಕಾಂತಿ ಎಂದು ಅರ್ಥ ಸಮಸ್ತವೂ ಜಲಮಯವಾದಾಗ ಎಲ್ಲೆಲ್ಲಿಯೂ ವ್ಯಾಪಿಸಿ ಪೂರ್ಣರೂಪದಿಂದ ಪ್ರಕಾಶಿಸಿರುವುದರಿಂದ " ಅಂಭಃ " ಎಂಬ ಸಂಜ್ಞೆ ಬಂದಿರುವುದು.

ಸರ್ವತಃ ಸಮನುಪ್ರಾಪ್ಯ ತಾಸಾಂ ಚಾಂಭೋ ವಿಭಾವ್ಯತೇ ।
ತದಂತಸ್ತನುತೇ ಯಸ್ಮಾತ್ಸರ್ವಾಂ ಪೃಥ್ವೀಂ ಸಮಂತತಃ ॥ ೫೫ ॥

ಧಾತುಸ್ತನೋತಿ ವಿಸ್ತಾರೇ ನಚೈತಾಸ್ತನವಃ ಸ್ಮೃತಾಃ ।
ಶರ ಇತ್ಯೇಷ ಶೀರ್ಣೇ ತು ನಾನಾರ್ಥೋ ಧಾತುರುಚ್ಯತೇ ॥ ೫೬ ॥

ಏಕಾರ್ಣವೇ ಭವಂತ್ಯಾಪೋ ನ ಶೀರ್ಣಾಸ್ತೇನ ತೇ ನರಾಃ ।
ತಸ್ಮಿನ್ ಯುಗಸಹಸ್ರಾಂತೇ ಸಂಸ್ಥಿತೇ ಬ್ರಹ್ಮಣೋಽಹನಿ ॥ ೫೭ ॥

ತಾವತ್ಕಾಲೇ ರಜನ್ಯಾಂ ಚ ವರ್ತಂತ್ಯಾಂ ಸಲಿಲಾತ್ಮನಾ ।
ತತಸ್ತು ಸಲಿಲೇ ತಸ್ಮಿನ್ನಷ್ಟಾಗ್ನೌ ಪೃಥಿವೀತಲೇ ॥ ೫೮ ॥

ಪ್ರಶಾಂತವಾತೇಂಧಕಾರೇ ನಿರಾಲೋಕೇ ಸಮಂತತಃ ।
ಏತೇನಾಧಿಷ್ಠಿತಂ ಹೀದಂ ಬ್ರಹ್ಮಾ ಸ ಪುರುಷಃ ಪ್ರಭುಃ ॥ ೫೯ ॥

---

೫೫. ಹೀಗೆಯೇ ಸಕಲ ವಸ್ತುಗಳನ್ನೂ ತನ್ನಲ್ಲಿ ಅವಕಾಶಕೊಟ್ಟು ವಿಸ್ತಾರವಾಗಿಟ್ಟುಕೊಂಡಿರುವುದರಿಂದ ಎಂದರೆ ತನ್ನಲ್ಲಿ ಲಯಮಾಡಿಕೊಂಡಿರುವುದರಿಂದ ವಿಸ್ತಾರವೆಂಬ ಅರ್ಥವನ್ನು ಕೊಡುವ "ತನು" ಧಾತುವಿನಿಂದ ರೂಪಹೊಂದಿದ "ತನು" ಸಂಜ್ಞೆಯನ್ನೂ ಹೊಂದಿವೆ.

೫೬. ಮತ್ತು ಶೀರ್ಣ=ಶಿಥಿಲವಾದ ಅವಯವವುಳ್ಳದ್ದು ಎಂಬ ಅರ್ಥದಲ್ಲಿ ಶರ ಧಾತುವು ಪಠಿತವಾಗಿದೆ. ಏಕಾರ್ಣವಪ್ರಾಯವಾದ ಪ್ರಪಂಚದಲ್ಲಿ ಜಲವು ಎಲ್ಲಿಯೂ ಶಿಥಿಲವಾಗದೆ ಪೂರ್ಣವಾಗಿಯೇ ಇರುವುದರಿಂದ " ನರಾ " ಎಂಬ ಸಂಕೇತವನ್ನೂ ಹೊಂದಿವೆ.

೫೭-೫೮. ಬ್ರಹ್ಮನ ಅಹಃ ಕಾಲವು ಸಹಸ್ರಯುಗಗಳ ಪರಿಣಾಮವುಳ್ಳದ್ದು. ಅದರಂತೆ ರಾತ್ರಿಯಪರಿಣಾಮವೂ ಸಹಸ್ರಯುಗ ಪರ್ಯಂತವಾಗಿರುವುದು. ಅಹಃ ಕಾಲವು ಮುಗಿದು ಪ್ರಾಪ್ತವಾಗುವ ರಾತ್ರಿ ಕಾಲದಲ್ಲಿ ಹಿಂದೆ ಹೇಳಿದಂತೆ ಜಲಮಯವಾಗಲು ಪೃಥಿವೀ, ತೇಜಸ್ಸುಗಳೆಲ್ಲವೂ ಅಡಗಿಹೋಗುವುವು.

೫೯. ಪೃಥಿವೀ, ತೇಜಸ್ಸುಗಳಂತೆ ವಾಯುವೆಂಬ ಮಹಾಭೂತ ವಿಕಾರಗಳು ಲಯಹೊಂದುವುವು. ಆಗ ಆಲೋಕ (ಪ್ರಕಾಶ) ಶೂನ್ಯವಾದ ಸೂಕ್ಷ್ಮರೂಪದಿಂದಿರುವ ಈ ಜಗತ್ತನ್ನು ಬ್ರಹ್ಮನು ಅಧಿಷ್ಠಾನಮಾಡುವನು.

ವಿಭಾಗಮಸ್ಯ ಲೋಕಸ್ಯ ಪ್ರಕರ್ತುಂ ಪುನರೈಚ್ಛತ ।
ಏಕಾರ್ಣವೇ ತದಾ ತಸ್ಮಿನ್ನಷ್ಟೇ ಸ್ಥಾವರಜಂಗಮೇ ॥ ೬೦ ॥

ತದಾ ಭವತಿ ಸ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ।
ಸಹಸ್ರಶೀರ್ಷಾ ಪುರುಷೋ ರುಕ್ಮವರ್ಣೋ ಜಿತೇಂದ್ರಿಯಃ ॥ ೬೧ ॥

ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ।
ಆಪೋ ನಾರಾಸ್ತತ್ತನವ ಇತ್ಯರ್ಥಾನಸುಶುಶ್ರುಮ ॥ ೬೨ ॥

ಆಪೂರ್ಯಮಾಣಾಸ್ತತ್ರಾಸ್ತೇ ತೇನ ನಾರಾಯಣಃ ಸ್ಮೃತಃ ॥ ೬೩ ॥

ಸಹಸ್ರಶೀರ್ಷಾ ಸುಮನಾಃ ಸಹಸ್ರಪಾತ್ ಸಹಸ್ರಚಕ್ಷುರ್ವದನಃ ಸಹಸ್ರಕೃತ್ ।
ಸಹಸ್ರಬಾಹುಃ ಪ್ರಥಮಃ ಪ್ರಜಾಪತಿಸ್ತ್ರಯೀಮಯೋಽಯಂ ಪುರುಷೋ ನಿರುಚ್ಯತೇ ॥ ೬೪ ॥

---

೬೦. ಸ್ಥಾವರ ಜಂಗಮಗಳೆಲ್ಲವೂ ನಾಶವಾಗಿ ಏಕಾರ್ಣವವಾಗಿರುವ ಸಮಯದಲ್ಲಿ ಬ್ರಹ್ಮನು ಈ ಲೋಕದ ಪುನರ್ವಿಭಾಗರಚನೆಯನ್ನು ಮಾಡಬೇಕೆಂದು ಇಚ್ಛಿಸಿದನು.

೬೧. ಆಗ ಬ್ರಹ್ಮನು ಸಹಸ್ರನೇತ್ರ-ಸಹಸ್ರಪಾದ-ಸಹಸ್ರ ಶಿರಸ್ಸು ಮುಂತಾದ ಅದ್ಭುತವಾದ ಆಕಾರವುಳ್ಳವನೂ ಚಿನ್ನದಂತೆ ಉಜ್ಜ್ವಲಕಾಂತಿಯುಳ್ಳವನೂ ಜಿತೇಂದ್ರಿಯನೂ ಆದ ಪುರುಷಾಕಾರಧಾರಿಯಾಗುವನು.

೬೨-೬೩. "ನಾರಾಯಣ" ಎಂಬ ಸಂಕೇತಶಬ್ದದ ಅವಯವಾರ್ಥಗಳನ್ನು ವಿವರಿಸುವ ಸಲುವಾಗಿ ಈ ಒಂದು ಪದ್ಯವನ್ನು ಪ್ರಾಜ್ಞರು ಉದಾಹರಿಸಿರುತ್ತಾರೆ. ಪ್ರಲಯದಲ್ಲಿ ಏಕಾರ್ಣವಪ್ರಾಯವಾದ ಜಲರಾಶಿಯಲ್ಲಿ ಅಧಿಷ್ಠಾನದಿಂದಿರುವುದರಿಂದ ನಾರಾ=ಜಲ, ಅಯನ=ಅಧಿಷ್ಠಾನವೆಂಬ ಎರಡು ಶಬ್ದಗಳು ಸೇರಿ ನಾರಾಯಣ ಎಂಬ ಸಂಕೇತವು ಬಂದಿದೆ. ನಾರಾ ಶಬ್ದದ ಅರ್ಥವಾದ ಜಲವು ಪರಮಾತ್ಮನ ಶರೀರವಾಗಿರುವುದು.

೬೪. ಸಕಲವನ್ನೂ ತನ್ನಲ್ಲಿ ಉಪಸಂಹರಿಸಿಕೊಂಡು ವಿರಾಡ್ ರೂಪದಿಂದಲೂ ಪುರುಷಾಕಾರದಿಂದಲೂ ಇರುವ ಪರಮಾತ್ಮನು ಸಹಸ್ರ-ಶಿರಸ್ಸು, ಪಾದ, ನೇತ್ರ, ಮುಖ, ಬಾಹುಗಳಿಂದ ಕೂಡಿದವನೂ, ಒಳ್ಳೆಯ ಮನಸ್ಸುಳ್ಳವನೂ, ಸಹಸ್ರವ್ಯಾ

**ಆದಿತ್ಯವರ್ಣೋ ಭುವನಸ್ಯ ಗೋಪ್ತಾ ಏಕೋ ಹ್ಯಮೂರ್ತಃ ಪ್ರಥಮ ಸ್ತ್ವಸೌ ವಿರಾಟ್ ।**
**ಹಿರಣ್ಯಗರ್ಭಃ ಪುರುಷೋ ಮಹಾತ್ಮಾ ಸಂಪದ್ಯತೇ ವೈ ಮನಸಃ ಪರಸ್ತಾತ್ ॥ ೬೫ ॥**

**ಕಲ್ಪಾದೌ ರಜಸೋದ್ರಿಕ್ತೋ ಬ್ರಹ್ಮಾ ಭೂತ್ವಾಸೃಜತ್ಪ್ರಜಾಃ ।**
**ಕಲ್ಪಾಂತೇ ತಮಸೋದ್ರಿಕ್ತಃ ಕಾಲೋ ಭೂತ್ವಾಗ್ರಸತ್ಪುನಃ ॥ ೬೬ ॥**

**ಸ ವೈ ನಾರಾಯಣೋ ಭೂತ್ವಾಸತ್ವೋದ್ರಿಕ್ತೋ ಜಲಾಶಯೇ ।**
**ತ್ರಿಧಾ ವಿಭಜ್ಯ ಚಾತ್ಮಾನಂ ತ್ರೈಲೋಕ್ಯೇ ಸಂಪ್ರವರ್ತತೇ ॥ ೬೭ ॥**

**ಸೃಜತಿ ಗ್ರಸತೇ ಚೈವ ವೀಕ್ಷ್ಯತೇ ಚ ತ್ರಿಭಿಃ ಸ್ವಯಮ್ ।**
**ಏಕಾರ್ಣವೇ ತದಾ ತಸ್ಮಿನ್ನಷ್ಟೇ ಸ್ಥಾವರ ಜಂಗಮೇ ॥ ೬೮ ॥**

---

ಪಾರವುಳ್ಳವನೂ, ಸೃಷ್ಟಿಕರ್ತನಿಗೂ ಸೃಷ್ಟಿಕರ್ತನೂ, ವೇದತ್ರಯಾತ್ಮಕನೂ ಆಗಿರುವನೆಂದು ಪ್ರಾಜ್ಞರಿಂದ ಹೇಳಲ್ಪಡುವನು.

೬೫. ಮತ್ತು ಆದಿತ್ಯನಂತೆ ವರ್ಣವುಳ್ಳವನೂ, ಸಕಲಭುವನರಕ್ಷಕನೂ, ಅದ್ವಿತೀಯನೂ ತಾತ್ತ್ವಿಕಾಕಾರಶೂನ್ಯನೂ ಮೊದಲನೆಯವನೂ ವಿರಾಡ್ರೂಪನೂ ಮಹಾತ್ಮನೂ ಪೂರ್ಣಸ್ವರೂಪವುಳ್ಳವನೂ ಆದ ಹಿರಣ್ಯಗರ್ಭನು ಮನಸ್ಸಿನಿಂದ ಗ್ರಹಿಸಲು ಅಶಕ್ಯನಾಗಿರುವನು.

೬೬. ಒಬ್ಬನೇ ಪರಮಾತ್ಮನು ಕಲ್ಪದ ಆದಿಯಲ್ಲಿ ರಜೋಗುಣವೆಂಬ ಉಪಾಧಿ ಮಿಳಿತನಾಗಿ ಆ ಗುಣದ ಉದ್ರೇಕದಿಂದ ಬ್ರಹ್ಮರೂಪಿಯಾಗಿ ಪ್ರಜೆಗಳನ್ನು ಸೃಜಿಸಿದನು. ಅವಸಾನದಲ್ಲಿ ತಮೋಗುಣೋದ್ರೇಕದಿಂದ ಕಾಲರೂಪಿಯಾಗಿ ಗ್ರಾಸಮಾಡಿದನು.

೬೭. ಸತ್ತ್ವಗುಣದ ಉದ್ರೇಕದಿಂದ ಜಲಾಶಯದಲ್ಲಿ ಯೋಗನಿದ್ರಾವಲಂಬಿಯಾಗಿ ಜಗತ್ತಿನ ಸ್ಥಿತಿಯನ್ನು ರಕ್ಷಿಸಿ ನಾರಾಯಣನೆಂದು ಕರೆಯಲ್ಪಡುವನು. ಹೀಗೆ ತನ್ನನ್ನು ಗುಣಗಳೆಂಬ ಉಪಾಧಿಮಹಿಮೆಯಿಂದ ಮೂರಾಗಿ ವಿಂಗಡಿಸಿ ತ್ರೈಲೋಕ್ಯದ ಸೃಷ್ಟಿ-ಸ್ಥಿತಿ-ಲಯಗಳ ಅಧಿಕಾರವನ್ನು ನಿರ್ವಹಿಸುವನು.

೬೮. ಈ ತ್ರಿಗುಣಮಯವಾದ ಅಧಿಕಾರಗಳಿಂದ ಸೃಷ್ಟಿ-ಗ್ರಾಸ-ವೀಕ್ಷಣಗಳೆಂಬ ವಿವಿಧ ವ್ಯಾಪಾರಗಳನ್ನು ನಡೆಯಿಸುವನು.

**ಚತುರ್ಯುಗಸಹಸ್ರಾಂತೇ ಸರ್ವತಃ ಸ ಜಲಾವೃತೇ ।**
**ಬ್ರಹ್ಮಾ ನಾರಾಯಣಾಖ್ಯಸ್ತು ಸ ಚಕಾಶೇ ಭವೇ ಸ್ವಯಮ್ ॥ ೬೯ ॥**

**ಚತುರ್ವಿಧಾಃ ಪ್ರಜಾಃ ಸರ್ವಾ ಬ್ರಹ್ಮಶಕ್ತ್ಯಾ ತಮೋವೃತಾಃ ।**
**ಪಶ್ಯಂತಿ ತಂ ಮಹರ್ಲೋಕೇ ಕಾಲಂ ಸುಪ್ತಂ ಮಹರ್ಷಯಃ ॥ ೭೦ ॥**

**ಭೃಗ್ವಾದಯೋ ಯಥೋದ್ದಿಷ್ಟಾಸ್ತಸ್ಮಿನ್ ಕಾಲೇ ಮಹರ್ಷಯಃ ।**
**ಸತ್ಯಾದಯಸ್ತಥಾತ್ವಷ್ಟೌ ಕಲ್ಪೇ ಲೀನೇ ಮಹರ್ಷಯಃ ।**
**ತದಾ ವಿವರ್ತ್ಯವಾನ್ಯೈಸ್ತ್ರೈರ್ಮಹತ್ಪರಿಗತಂ ಪರಾಮ್ ॥ ೭೧ ॥**

**ಗತ್ಯರ್ಥಾದೃಷತೇರ್ಧಾತೋರ್ನಾಮನಿಷ್ಪತ್ತಿರುಚ್ಯತೇ ।**
**ಯಸ್ಮಾದೃಷತಿ ಸತ್ತ್ವೇನ ಮಹತ್ತಸ್ಮಾನ್ಮಹರ್ಷಯಃ ॥ ೭೨ ॥**

---

೬೯. ಸ್ಥಾವರ-ಜಂಗಮಗಳೆಲ್ಲ ನಾಶಹೊಂದಿ ಏಕಾರ್ಣವಪ್ರಾಯವಾದ ಜಲರಾಶಿಯಲ್ಲಿ ಚತುರ್ಯುಗ ಸಹಸ್ರವು ಕಳೆದು ನಾರಾಯಣನೆಂಬ ಸಂಜ್ಞಾಂಕಿತನಾದ ಪರಮಾತ್ಮನು ಸ್ವಯಂಪ್ರಕಾಶನಾಗಿರುವನು.

೭೦. ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜವೆಂಬ ನಾಲ್ಕು ಬಗೆಯ ಪ್ರಜೆಗಳು ಬ್ರಹ್ಮನ ಶಕ್ತಿಸ್ವರೂಪವಾದ ಅಜ್ಞಾನವೆಂಬ ಕತ್ತಲೆಯಿಂದ ಆವರಿಸಲ್ಪಟ್ಟು ಪ್ರಕಾಶಹೀನವಾಗಿವೆ. ಮಹರ್ಲೋಕದಲ್ಲಿ ಮಹರ್ಷಿಗಳು ಸಕಲವ್ಯಾಪಾರಗಳನ್ನು ತ್ಯಜಿಸಿದ್ದ ಕಾಲಾತ್ಮಕನ ತಾತ್ತ್ವಿಕ ರೂಪಗಳನ್ನು ಸಾಕ್ಷಾತ್ಕರಿಸುವರು.

೭೧. ಮತ್ತು ಭೃಗು ಮುಂತಾದ ಹಿಂದೆ ಹೇಳಿದ ಸಕಲಜ್ಞಾನಿಗಳಾದ ಮಹರ್ಷಿಗಳೂ ಸತ್ಯ ಮುಂತಾದ ಎಂಟು ಮಂದಿಯೂ ಆ ಕಲ್ಪಾವಸಾನದಲ್ಲಿ ಸುತ್ತುಮುತ್ತಲೂ ಮಹಾತ್ಮರಿಂದ ಸೇವಿಸಲ್ಪಡುತ್ತಿದ್ದ ನಿರ್ವ್ಯಾಪಾರಸ್ಥಿತಿಯಲ್ಲಿದ್ದ ಶ್ರೀಮನ್ನಾರಾಯಣನನ್ನು ಸಾಕ್ಷಾತ್ಕರಿಸುತ್ತಾರೆ.

೭೨. ಗತಿ ಅಥವಾ ಜ್ಞಾನವೆಂಬ ಅರ್ಥದಲ್ಲಿ ಋಷಿ ಧಾತುವು ಪಠಿತವಾಗಿದೆ. ಆ ಧಾತುವಿನಿಂದ ಋಷಿಶಬ್ದವು ರೂಪಹೊಂದಿದೆ. ಋಷಿ ಶಬ್ದದ ಅರ್ಥವಾದ ಮಹಾತತ್ತ್ವದ ಜ್ಞಾನವನ್ನು ಸತ್ವಗುಣದ ಆಧಿಕ್ಯದಿಂದ ಅತಿಶಯವಾಗಿ ಹೊಂದಿದವರಾದ್ದರಿಂದ ಮಹರ್ಷಿಗಳೆಂದು ಪ್ರಸಿದ್ಧರಾಗಿರುವರು.

**ಮಹರ್ಲೋಕಸ್ಥಿತೈರ್ದೃಷ್ಟಃ ಕಾಲಃ ಸುಪ್ತಸ್ತದಾ ಚ ತೈಃ ।**
**ಸತ್ವಾದ್ಯಾಃ ಸಪ್ತ ಯೇ ತ್ವಾಸನ್ ಕಲ್ಪೇಽತೀತೇ ಮಹರ್ಷಯಃ ॥ ೭೩ ॥**

**ಏವಂ ಬ್ರಹ್ಮಾ ತಾಸು ತಾಸು ರಜನೀಷು ಸಹಸ್ರಶಃ ।**
**ದೃಷ್ಟವಂತಸ್ತದಾನೀತಾಃ ಕಾಲಂ ಸುಪ್ತಂ ಮಹರ್ಷಯಃ ॥ ೭೪ ॥**

**ಕಲ್ಪಸ್ಯಾದೌ ಸುಬಹುಲಾ ಯಸ್ಮಾತ್ಸಂಸ್ಥಾಶ್ಚತುರ್ದಶ ।**
**ಕಲ್ಪಯಾಮಾಸ ವೈ ಬ್ರಹ್ಮಾ ತಸ್ಮಾತ್ಕಲ್ಪೋ ನಿರುಚ್ಯತೇ ॥ ೭೫ ॥**

**ಸ ಸ್ರಷ್ಟಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ।**
**ವ್ಯಕ್ತಾವ್ಯಕ್ತೋ ಮಹಾದೇವಸ್ತಸ್ಯ ಸರ್ವಮಿದಂ ಜಗತ್ ॥ ೭೬ ॥**

**ಇತ್ಯೇಷ ಪ್ರತಿಸಂಬಂಧಃ ಕೀರ್ತಿತಃ ಕಲ್ಪಯೋರ್ದ್ವಯೋಃ ।**
**ಸಾಂಪ್ರತಂ ಹಿ ತಯೋರ್ಮಧ್ಯೇ ಪ್ರಾಗವಸ್ಥಾ ಬಭೂವ ಹ ॥ ೭೭ ॥**

---

೭೩. ಅತೀತ ಕಲ್ಪದಲ್ಲಿದ್ದ ಸತ್ತ್ವ ಮುಂತಾದ ಸಪ್ತ ಮಹರ್ಷಿಗಳು ಮಹರ್ಲೋಕದಲ್ಲಿ ನಿರ್ವ್ಯಾಪಾರನಾಗಿ ಸುಪ್ತನಾಗಿದ್ದ ಕಾಲಾತ್ಮನನ್ನು ಸಾಕ್ಷಾತ್ಕರಿಸುವರು.

೭೪. ಈ ರೀತಿಯಾಗಿ ಆದಿಕಾರಣನಾದ ಬ್ರಹ್ಮನು ಆಗಾಗ ಒದಗುವ ಪ್ರತಿಯೊಂದು ರಾತ್ರಿಯಲ್ಲಿಯೂ ಸಮಸ್ತವನ್ನೂ ಲಯಮಾಡಿ ಸ್ವಯಂಪ್ರಕಾಶಮಾನನಾಗಿರುವನು. ಆಗ ಅಲ್ಲಿದ್ದ ಮಹರ್ಷಿಗಳು ಆ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಧನ್ಯರಾಗುವರು.

೭೫. ಕಲ್ಪಾದಿಯಲ್ಲಿ ಪರಮಾತ್ಮನು ಅತಿಶಯ ವಿಸ್ತಾರವುಳ್ಳ ಹದಿನಾಲ್ಕು ಸಂಸ್ಥೆ (ಕಾಲವಿಭಾಗ) ಗಳನ್ನು ಏರ್ಪಡಿಸಿರುವುದರಿಂದ ಆ ಪ್ರತಿಯೊಂದು ವಿಭಾಗಕ್ಕೆ ಕಲ್ಪವೆಂಬ ಹೆಸರು ಬಂದಿರುವುದು.

೭೬. ಆ ಪರಮಾತ್ಮನು ಪ್ರತಿಯೊಂದು ಕಲ್ಪದಲ್ಲಿಯೂ ಮತ್ತೆ ಮತ್ತೆ ಭೂತಸೃಷ್ಟಿಯನ್ನು ಕೈಗೊಳ್ಳುತ್ತಾ ಸರ್ವಾತ್ಮಕವಾದ ವಿಶ್ವರೂಪದಿಂದ ವ್ಯಕ್ತನೂ ಸ್ವರೂಪದಿಂದ ಅವ್ಯಕ್ತನೂ ಆಗಿ ಪ್ರಕಾಶಮಾತ್ರರೂಪನಾಗಿರುವನು. ಈ ಜಗತ್ತು ಎಲ್ಲವೂ ಆ ಪರಮಾತ್ಮನಿಂದ ಸತ್ತೆಯನ್ನು ಹೊಂದಿರುವುದು.

೭೭. ಈ ರೀತಿಯಾಗಿ ಎರಡು ಕಲ್ಪಗಳ ಸಂಧಿಯನ್ನು ನಿಮಗೆ ವಿವರಿಸಲಾಗಿದೆ. ಆ ಸಂಧಿಕಾಲದಲ್ಲಿ ಜಗತ್ತಿನ ಪ್ರಾಗವಸ್ಥೆಯು ಮಾತ್ರವಿರುವುದು.

**ಕೀರ್ತಿತಸ್ತು ಸಮಾಸೇನ ಪೂರ್ವಕಲ್ಪೇ ಯಥಾತಥಮ್ ।**
**ಸಾಂಪ್ರತಂ ಸಂಪ್ರವಕ್ಷ್ಯಾಮಿ ಕಲ್ಪಮೇತಂ ನಿಬೋಧತ ॥ ೭೮ ॥**

**ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಷಷ್ಠೋಽಧ್ಯಾಯಃ ಸಮಾಪ್ತಃ**

---

೭೮. ಹಿಂದಿನ ಅಧ್ಯಾಯದಲ್ಲಿ ಹಿಂದಿನ ಕಲ್ಪದ ಯಥಾಸ್ಥಿತವಾದ ಸ್ವರೂಪವು ವರ್ಣಿಸಲ್ಪಟ್ಟಿತು. ಇನ್ನು ಮುಂದೆ ವರ್ತಮಾನಕಲ್ಪದ ವಿಷಯವನ್ನು ವಿವರಿಸುತ್ತೇನೆ.

ಬ್ರಹ್ಮಾಂಡಪುರಾಣದಲ್ಲಿ ಆರನೆಯ ಅಧ್ಯಾಯವು ಮುಗಿದುದು.

# ಸಪ್ತಮೋಽಧ್ಯಾಯಃ

**ಸೂತ ಉವಾಚ—**

**ತುಲ್ಯಂ ಯುಗಸಹಸ್ರಂ ವೈ ನೈಶಂ ಕಾಲಮುಪಾಸ್ಯ ಸಃ ।**
**ಶರ್ವರ್ಯಂತೇ ಪ್ರಕುರುತೇ ಬ್ರಹ್ಮತ್ವಂ ಸರ್ಗಕಾರಣಾತ್ ॥ ೧ ॥**

**ಬ್ರಹ್ಮಾ ತು ಸಲಿಲೇ ತಸ್ಮಿನ್ ವಾಯುರ್ಭೂತ್ವಾ ತದಾಚರತ್ ।**
**ಅಂಧಕಾರಾರ್ಣವೇ ತಸ್ಮಿನ್ನಷ್ಟೇ ಸ್ಥಾವರಜಂಗಮೇ ॥ ೨ ॥**

**ಜಲೇನ ಸಮನುಪ್ಲಾವ್ಯ ಸರ್ವತಃ ಪೃಥಿವೀತಲೇ ।**
**ಪ್ರವಿಭಾಗೇನ ಭೂತೇಷು ಸತ್ತ್ವಮಾತ್ರೇ ಸ್ಥಿತೇಷು ವಾ ॥ ೩ ॥**

**ನಿಶಾಯಾಮಿವ ಖದ್ಯೋತಃ ಪ್ರಾವೃಟ್ಕಾಲೇ ತತಸ್ತದಾ ।**
**ತದಾ ಕಾಮೇನ ತರಸಾ ಮನ್ಯಮಾನಃ ಸ್ವಯಂ ಧಿಯಾ ॥ ೪ ॥**

---

೧. ಸೂತಮುನಿಯು ಇಂತೆಂದನು. ಪರಮಾತ್ಮನು ಕಾಲಚಕ್ರದಲ್ಲಿ ಯುಗ ಸಹಸ್ರ ಪರಿಮಿತವಾದ ರಾತ್ರಿಕಾಲವನ್ನು ಪ್ರಲಯಾವಸ್ಥೆಯಲ್ಲಿ ಕಳೆಯಲಾಗಿ ಆ ರಾತ್ರಿ ಕಾಲದ ಅವಸಾನದಲ್ಲಿ ಪ್ರಪಂಚದ ಪುನಃಸೃಷ್ಟಿಗೆ ಬ್ರಹ್ಮಾಧಿಕಾರವನ್ನು ನಿರ್ವಹಿಸಲು ಉಪಕ್ರಮಿಸುತ್ತಾನೆ.

೨. ಸೃಷ್ಟಿರಚನೆಗೆ ಉನ್ಮುಖನಾದ ಬ್ರಹ್ಮನು ಸ್ಥಾವರ-ಜಂಗಮ ಪ್ರಾಣಿಗಳೆಲ್ಲವೂ ನಾಶಹೊಂದಿ ಪ್ರಕಾಶವಿಲ್ಲದ್ದರಿಂದ ಅಂಧಕಾರದಿಂದ ಆವೃತವಾದ ಆ ಸಮುದ್ರದಲ್ಲಿ ವಿಸ್ತೀರ್ಣವಾದ ನೀರಿನಲ್ಲಿ ವಾಯುರೂಪನಾಗಿ ಸಂಚರಿಸಿದನು.

೩. ಆಗಿನ ಸ್ಥಿತಿಯಲ್ಲಿ ಪೃಥಿವೀತಲವು ನೀರಿನಿಂದ ಮುಳುಗಿಹೋಗಿ ಪೃಥಿವಿಯ ಸಮಸ್ತ ಭೂತಗಳು ಕಾರಣಸ್ವರೂಪವಾದ ಸನ್ಮಾತ್ರ (ಪರಮಾತ್ಮ) ತತ್ತ್ವದಲ್ಲಿ ಅಡಗಿ ವಿಭಕ್ತಗಳಾದ ಸಂಸ್ಕಾರರೂಪದಿಂದ ಇದ್ದವು.

೪. ವರ್ಷಋತುವಿನಲ್ಲಿ ಕಗ್ಗತ್ತಲೆಯ ರಾತ್ರಿವೇಳೆಗಳಲ್ಲಿ ಮಿಣುಕು ಹುಳುವು ತನ್ನ ಪೃಷ್ಠಭಾಗದ ಪ್ರಕಾಶಲೇಶದಿಂದ ಮಿಣುಕುವ ಹಾಗೆ ಬ್ರಹ್ಮನು ಸೃಷ್ಟಿಕಾಮನೆಯ

ಸೋಽಪ್ಯುಪಾಯಂ ಪ್ರತಿಷ್ಠಾಯಾಂ ಮಾರ್ಗಮಾಣಸ್ತದಾ ಭುವಮ್ ।
ತತಸ್ತು ಸಲಿಲೇ ತಸ್ಮಿನ್ ಜ್ಞಾತ್ವಾ ತ್ವಂತರ್ಗತೋ ಮಹೀಮ್ ॥ ೫ ॥

ಅಂಥಮನ್ಯತಮಂ ಬುದ್ಧ್ವಾ ಭೂಮೇರುದ್ಧರಣಕ್ಷಮಃ ।
ಚಕಾರ ಕಂ ತು ದೇವೋಽಥ ಪೂರ್ವಕಲ್ಪಾದಿಷು ಸ್ಮೃತಃ ॥ ೬ ॥

ಸತ್ಯಂ ರೂಪಂ ವರಾಹಸ್ಯ ಕೃತ್ವಾಂಭೋಽನುಪ್ರವಿಶ್ಯ ಚ ।
ಅದ್ಭಿಃ ಸಂಛಾದಿತಾಮಿಚ್ಛನ್ ಪೃಥಿವೀಂ ಸ ಪ್ರಜಾಪತಿಃ ॥ ೭ ॥

ಉದ್ಧೃತ್ಯೋರ್ವೀಮಥ ನ್ಯಸ್ತಾ ಸಾಪತ್ಯಾತುಮತಿನ್ಯಸತ್ ।
ಸಾಮುದ್ರಾಶ್ಚ ಸಮುದ್ರೇಷು ನಾದೇಯಾಶ್ಚ ನದೀಷು ಚ ॥ ೮ ॥

ಪೃಥಕ್ತಾಸ್ತು ಸಮೀಕೃತ್ಯ ಪೃಥಿವ್ಯಾಂ ಸೋಽಚಿನೋದ್ಗಿರೀನ್ ।
ಪ್ರಾಕ್ಸರ್ಗೇ ದಹ್ಯಮಾನೇ ತು ಪುರಾ ಸಂವರ್ತಕಾಗ್ನಿನಾ ॥ ೯ ॥

---

ವೇಗದಿಂದ ಉಂಟಾದ ತನ್ನ ಬುದ್ಧಿಯ ಒಂದು ವೃತ್ತಿಯಿಂದ ಸೃಷ್ಟಿಯ ಅಭಿಮಾನವುಳ್ಳವನಾದನು.

೫. ತಾನು ಚಿಂತಿಸಿದ ಸೃಷ್ಟಿಯನ್ನು ಪ್ರತಿಷ್ಠೆಗೊಳಿಸಲು ಮೊದಲು ಆ ಜಲಾರ್ಣವದಲ್ಲಿ ಭೂಮಿಯನ್ನು ಹುಡುಕಲಾರಂಭಿಸಿ ಆ ನೀರಿನಲ್ಲಿ ಭೂಮಿಯು ಅಂತರ್ಗತವಾಗಿರುವುದನ್ನು ಅರಿತನು.

೬. ಅನಾದಿಯಾದ ಕಲ್ಪಪ್ರವಾಹದಲ್ಲಿ ಹಿಂದಿನ ಕಲ್ಪಾದಿಯಲ್ಲಿ ಜಲಾಂತರ್ಗತ ಭೂಮಿಯನ್ನು ಮೇಲಕ್ಕೆತ್ತಲು ಸಾಧನವಾಗಿದ್ದ ವರಾಹರೂಪವನ್ನು ನೆನೆಸಿಕೊಂಡು ಭೂಮಿಯನ್ನು ಎತ್ತಲು ದಕ್ಷವಾದ ಮತ್ತು ಸುಕರವಾದ ವರಾಹರೂಪವನ್ನು ಮಾಡಿಕೊಂಡನು.

೭. ಹಾಗೆಯೇ ತನ್ನ ಉದ್ದೇಶ್ಯವನ್ನು ತಪ್ಪದೇ ಸಾಧಿಸುವ ವರಾಹರೂಪವನ್ನು ಧರಿಸಿ ನೀರಲ್ಲಿ ಮುಳುಗಿ ನೀರಿನಿಂದ ಮುಚ್ಚಿಹೋಗಿದ್ದ ಭೂಮಿಯ ಪ್ರಾಪ್ತಿಯನ್ನು ಧ್ಯಾನಿಸುತ್ತಾ ಆ ಪ್ರಜಾಪತಿಯು ಸಂಚರಿಸಿದನು.

೮. ಆಗ ನೀರಿನಿಂದ ಸಮುದ್ರ-ನದಿಗಳಲ್ಲಿದ್ದ ಜಲಚರಗಳೊಂದಿಗೆ ಭೂಮಿಯನ್ನು ಮೇಲಕ್ಕೆತ್ತಿ ಇರಿಸಿದನು.

೯. ನದೀ ಮತ್ತು ಸಮುದ್ರಗಳನ್ನು ವಿಂಗಡಿಸಿ ಭೂಮಿಯನ್ನು ಮೇಲಕ್ಕೆತ್ತಿದ

**ತೇನಾಗ್ನಿನಾ ವಿಲೀನಾಸ್ತೇ ಪರ್ವತಾ ಭುವಿ ಸರ್ವಶಃ**
**ಶೈಲ್ಯಾದೇಕಾರ್ಣವೇ ತಸ್ಮಿನ್ ವಾಯುನಾ ಯೇ ತು ಸಂಹಿತಾಃ ॥ ೧೦ ॥**

**ನಿಷಿಕ್ತಾ ಯತ್ರ ಯತ್ರಾಸಂಸ್ತತ್ರ ತತ್ರಾಚಲೋಽಭವತ್ ।**
**ಸ್ಕಂಧಾಚಲತ್ವಾದಚಲಾಃ ಪರ್ವಭಿಃ ಪರ್ವತಾಃ ಸ್ಮೃತಾಃ ॥ ೧೧ ॥**

**ಗಿರಯೋ ಹಿ ನಿಗೀರ್ಣತ್ವಾದಯನಾತ್ತು ಶಿಲೋಚ್ಚಯಾಃ ।**
**ತತಸ್ತಾವಾಸಮುದ್ಧೃತ್ಯ ಕ್ಷಿತಿಮಂತರ್ಜಲಾತ್ಪ್ರಭುಃ ॥ ೧೨ ॥**

**ಸಪ್ತ ಸಪ್ತ ತು ವರ್ಷಾಣಿ ತಸ್ಯಾ ದ್ವೀಪೇಷು ಸಪ್ತಸು ।**
**ವಿಷಮಾಣಿ ಸಮೀಕೃತ್ಯ ಶಿಲಾಭಿರಭಿತೋ ಗಿರೀನ್ ॥ ೧೩ ॥**

---

ತರುವಾಯ ಹಿಂದಿನ ಸೃಷ್ಟಿಯ ಅವಸಾನದಲ್ಲಿ ಪ್ರಲಯಾಗ್ನಿ ಜ್ವಾಲೆಯಿಂದ ಸುಟ್ಟು ಹೋಗಿದ್ದ ಬೆಟ್ಟಗಳನ್ನು ಅಲ್ಲಲ್ಲಿ ಹುಡುಕಿದನು.

೧೦. ಭೂಮಿಯಲ್ಲಿದ್ದ ಸಕಲ ಪರ್ವತಗಳು ಹಿಂದೆ ಕಲ್ಪಾಗ್ನಿಯಿಂದ ಸುಟ್ಟು ಕರಗಿದಂತೆ ಆಗಿ ವಾಯುವಿನಿಂದ ಆ ಏಕಾರ್ಣವದಲ್ಲಿ ಶಿಲೆಗಳ ಘನಭಾವದ ಸಾರ ರೂಪವಾಗಿ ಅಲ್ಲಲ್ಲಿ ಸೇರಿಸಲ್ಪಟ್ಟಿದ್ದವು.

೧೧. ಆ ಶಿಲಾಘನಪ್ರದೇಶಗಳು ಎಲ್ಲೆಲ್ಲಿ ಇರಿಸಲ್ಪಟ್ಟವೋ ಆಯಾಯ ಸ್ಥಳಗಳಲ್ಲಿ ಒಂದೊಂದು ಅಚಲವಾಗಿ ಪರಿಣಮಿಸಿದವು. ಹೀಗೆ ಉತ್ಪನ್ನವಾದ ಬೆಟ್ಟಗಳು ಚಲನವಿಲ್ಲದ ಸ್ವಭಾವವುಳ್ಳವುಗಳಾದ್ದರಿಂದ ಅಚಲಗಳೆಂದೂ ಪರ್ವತಶ್ರೇಣಿಯಲ್ಲಿ ಅನೇಕ ಪರ್ವಗಳು ಇರುವುದರಿಂದ ಪರ್ವತಗಳೆಂದೂ ಪ್ರಸಿದ್ಧಿ ಹೊಂದಿದವು.

೧೨. ಮತ್ತು ನೀರಿನಿಂದ ನುಂಗಲ್ಪಟ್ಟಿರುವುದರಿಂದ ಗಿರಿ ಎಂದೂ ಶಿಲೆಗಳ ಸಂಘಾತರೂಪವಾಗಿ ಸೇರಿದ್ದರಿಂದ ಶಿಲೋಚ್ಚಯವೆಂದೂ ವಿವಿಧವಾದ ಅನ್ವರ್ಥಸಂಜ್ಞೆಗಳನ್ನು ಹೊಂದಿದವು. ಪ್ರಭುವಾದ ಪರಮಾತ್ಮನು ನೀರಿನಿಂದ ಭೂಮಿಯನ್ನು ಮೇಲಕ್ಕೆತ್ತಿ ಅದರ ವಿಭಾಗವನ್ನು ಏರ್ಪಡಿಸಿದನು.

೧೩. ಸಮಸ್ತ ಪೃಥಿವಿಯನ್ನು ಏಳು ದ್ವೀಪಗಳಾಗಿಯೂ ಒಂದೊಂದು ದ್ವೀಪದಲ್ಲಿಯೂ ಪ್ರತ್ಯೇಕವಾಗಿ ಒಂದೊಂದು ಖಂಡವಾಗಿಯೂ ವಿಭಜಿಸಿ ಆ ಖಂಡಗಳ ಎಲ್ಲೆಗಳು ಸಂಕರಹೊಂದದಹಾಗೆ ಪಕ್ಕಗಳಲ್ಲಿ ಬೆಟ್ಟಗಳನ್ನು ಸ್ಥಾಪಿಸಿದನು.

ದ್ವೀಪೇಷು ತೇಷು ವರ್ಷಾಣಿ ಚತ್ವಾರಿಂಶತ್ತಥೈವ ತು ।
ತಾವಂತಃ ಪರ್ವತಾಶ್ಚೈವ ವರ್ಷಾಂತೇ ಸಮುಪಸ್ಥಿತಾಃ ॥ ೧೪ ॥

ಸ್ವರ್ಗಾದೌ ಕಾಂತಿವಿಷ್ಟಾಸ್ತೇ ಸ್ವಭಾವೇನೈವ ನಾನ್ಯಥಾ ।
ಸಪ್ತದ್ವೀಪಾಂ ಸಮುದ್ರಾಶ್ಚ ಅನ್ಯೋನ್ಯಸ್ಯಾನುಮಂಡಲಮ್ ॥ ೧೫ ॥

ಸನ್ನಿವಿಷ್ಟಾಃ ಸ್ವಭಾವೇನ ಸಮಾವೃತ್ಯ ಪರಸ್ಪರಮ್ ।
ಭೂರಾದ್ಯಾಶ್ಚತುರೋ ಲೋಕಾಶ್ಚಂದ್ರಾದಿತ್ಯೌ ಗ್ರಹೈಃ ಸಹ ॥ ೧೬ ॥

ಪೂರ್ವವನ್ನಿರ್ಮಮೇ ಬ್ರಹ್ಮಾ ಸ್ಥಾವರಾಣೀಹ ಸರ್ವಶಃ ।
ಕಲ್ಪಸ್ಯ ಚಾಸ್ಯ ಬ್ರಹ್ಮಾ ಚಾಸೃಜದ್ಯಃ ಸ್ಥಾನಿನಃ ಸುರಾನ್ ॥ ೧೭ ॥

ಆಪೋಽಗ್ನಿಂ ಪೃಥಿವೀಂ ವಾಯುಮಂತರಿಕ್ಷಂ ದಿವಂ ತಥಾ ।
ಸ್ವರ್ಗಂ ದಿಶಃ ಸಮುದ್ರಾಂಶ್ಚ ನದೀಃ ಸರ್ವಾಂಸ್ತು ಪರ್ವತಾನ್ ॥ ೧೮ ॥

---

೧೪. ಇವೆಲ್ಲವೂ ಒಟ್ಟಾಗಿ ಸೇರಿ ಸಪ್ತದ್ವೀಪಗಳಲ್ಲಿ ನಲವತ್ತಕ್ಕೆ ಕಡಿಮೆಯಿಲ್ಲದಷ್ಟು ವರ್ಷ (ಖಂಡ) ಗಳೂ ಪ್ರತಿಯೊಂದು ಖಂಡದ ಎಲ್ಲೆಯಲ್ಲಿ ಇರುವ ಅಷ್ಟೇ ಸಂಖ್ಯೆಯ ಪರ್ವತಗಳೂ ರಚಿತವಾದವು.

೧೫. ಹೀಗೆ ದ್ವೀಪಗಳೂ ಸಮುದ್ರಗಳೂ ಮಂಡಲಾಕಾರವಾಗಿ ಒಂದನ್ನೊಂದು ಸಂಬಂಧಿಸಿ ಸೃಷ್ಟಿಯ ಆದಿಯಲ್ಲಿ ಹಿಂದಿನಿಂದ ಬಂದಿರುವ ಕ್ರಮದ ಸ್ವಭಾವವನ್ನು ಮೀರದಂತೆ ಸರ್ಗಾದಿಯಲ್ಲಿ ಸನ್ನಿವೇಶವನ್ನು ಹೊಂದಿದವು.

೧೬. ಸೃಷ್ಟಿ ಮಾಡಲ್ಪಟ್ಟ ಗಿರಿ, ನದೀ, ಭೂಮಿಭಾಗಗಳೆಲ್ಲವೂ ಒಂದನ್ನೊಂದು ಅವಲಂಬಿಸಿ ಪರಸ್ಪರ ಆವರಣದಿಂದ ಸ್ಥಿತಿಯನ್ನು ಹೊಂದಿದವು. ಆಗ ಬ್ರಹ್ಮನು ಭೂಃ ಮುಂತಾದ ನಾಲ್ಕು ಲೋಕಗಳನ್ನೂ ಅನೇಕ ಗ್ರಹಗಳಿಂದ ಕೂಡಿದ ಚಂದ್ರ-ಆದಿತ್ಯರನ್ನೂ ಸೃಷ್ಟಿಸಿದನು.

೧೭. "ಧಾತಾ ಯಥಾಪೂರ್ವಮಕಲ್ಪಯತ್" ಎಂಬ ಶ್ರುತಿಪ್ರಮಾಣಾನುಸಾರವಾಗಿ ಸ್ಥಾವರಾದಿಗಳನ್ನೂ ಹಿಂದಿನ ಕಲ್ಪದಲ್ಲಿದ್ದಂತೆಯೇ ಸೃಷ್ಟಿಮಾಡಿ ವರ್ತಮಾನ ಕಲ್ಪದಲ್ಲಿಯೂ ಆಯಾಯ ಸ್ಥಾನವಿಶೇಷಾಭಿಮಾನದಿಂದ ಸ್ಥಾನಪತಿಗಳಾದ ದೇವತೆಗಳನ್ನು ನಿರ್ಮಿಸಿದನು.

೧೮. ಮತ್ತು ಜಲ, ಅಗ್ನಿ, ಪೃಥಿವೀ, ವಾಯು, ಆಕಾಶ, ದ್ಯುಲೋಕ, ಸ್ವರ್ಗ, ದಿಕ್ಕು, ನದೀ, ಸಮುದ್ರ, ಮುಂತಾದ ವಿವಿಧ ವಸ್ತು ಸೃಷ್ಟಿಯನ್ನು ರಚಿಸಿದನು.

**ಓಷಧೀನಾಮಾತ್ಮನಶ್ಚ ಆತ್ಮನೋ ವೃಕ್ಷವೀರುಧಾಮ್ ।**
**ಲವಾಕಾಷ್ಠಾಃ ಕಲಾಶ್ಚೈವ ಮುಹೂರ್ತಾನ್ ಸಂಧಿರಾತ್ರ್ಯಹಾನ್ ॥ ೧೯ ॥**

**ಅರ್ಧಮಾಸಾಂಶ್ಚ ಮಾಸಾಂಶ್ಚ ಅಯನಾಬ್ದಾನ್ ಯುಗಾನಿ ಚ ।**
**ಸ್ಥಾನಾಭಿಮಾನಿನಶ್ಚೈವ ಸ್ಥಾನಾನಿ ಚ ಪೃಥಕ್ ಪೃಥಕ್ ॥ ೨೦ ॥**

**ಸ್ಥಾನಾತ್ಮನಸ್ತು ಸೃಷ್ಟ್ವಾ ಚ ಯುಗಾವಸ್ಥಾ ವಿನಿರ್ಮಮೇ ।**
**ಕೃತಂ ತ್ರೇತಾ ದ್ವಾಪರಂ ಚ ತಿಷ್ಯಂ ಚೈವ ತಥಾ ಯುಗಮ್ ॥ ೨೧ ॥**

**ಕಲ್ಪಸ್ಯಾದೌ ಕೃತಯುಗೇ ಪ್ರಥಮಂ ಸೋಽಸೃಜತ್ಪ್ರಜಾಃ ।**
**ಪ್ರಾಗುಕ್ತಾಶ್ಚ ಮಯಾ ತುಭ್ಯಂ ಪೂರ್ವೇ ಕಲ್ಪೇ ಪ್ರಜಾಸ್ತು ತಾಃ ॥**
**॥ ೨೨ ॥**

**ತಸ್ಮಿನ್ ಸಂವರ್ತಮಾನೇ ತು ಕಲ್ಪೇ ದಗ್ಧಾಸ್ತದಗ್ನಿನಾ ।**
**ಅಪ್ರಾಪ್ತಾ ಯಾಸ್ತಪೋಲೋಕಂ ಪೃಥಿವ್ಯಾಂ ಯಾಃ ಸಮಾಸತ ॥೨೩॥**

---

೧೯. ಹಾಗೆ ವಿವಿಧಓಷಧಿ, ವೃಕ್ಷ, ಲತೆ, ಇವುಗಳ ಆಕಾರಗಳನ್ನು ಸೃಜಿಸಿ ಲವ, ಕಾಷ್ಠಾ, ಕಲಾ, ಮುಹೂರ್ತ, ಸಂಧಿ, ರಾತ್ರಿ, ಹಗಲು ಎಂಬ ಕಾಲಪರಿಮಾಣ ವಿಶೇಷಗಳನ್ನು ಸೃಜಿಸಿದನು.

೨೦. ಮತ್ತು ಅರ್ಧಮಾಸ, ಮಾಸ, ಅಯನ, ಸಂವತ್ಸರ, ಯುಗಗಳೆಂಬ ಕಾಲಾಂಶರೂಪವಾದ ಸ್ಥಾನಗಳನ್ನೂ ಆಯಾಯ ಸ್ಥಾನಾಭಿಮಾನಿಗಳನ್ನೂ ಬೇರೆಬೇರೆ ಯಾಗಿ ವಿಂಗಡಿಸಿ ರಚಿಸಿದನು.

೨೧. ಸ್ಥಾನಾಭಿಮಾನಿಗಳ ಸೃಷ್ಟಿಯನ್ನು ಸಮಾಪ್ತಿಗೊಳಿಸಿ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಮಾಂಕಿತವಾದ ಚತುರ್ಯುಗಗಳ ಅವಸ್ಥಾ ವಿಶೇಷಗಳನ್ನು ರಚಿಸಿದನು.

೨೨. ಹಿಂದಿನ ಕಲ್ಪದ ಆದಿಯಲ್ಲಿ ನಡೆದ ಕೃತಯುಗದಲ್ಲಿ ಯಾವ ಪ್ರಜೆಗಳು ಯಾವ ವಿಧದಿಂದಿರುವರೆಂದು ನನ್ನಿಂದ ಉಪದಿಷ್ಟವಾಗಿದೆಯೋ ಅದೇ ರೀತಿಯಲ್ಲಿ ಈ ಕಲ್ಪಾದಿಯ ಕೃತಯುಗದಲ್ಲಿ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಮಾಡಿದನು.

೨೩. ಹಿಂದಿನ ಕಲ್ಪವು ಪ್ರಲಯಾಗ್ನಿ ಜ್ವಾಲೆಗೆ ತುತ್ತಾಗುತ್ತಿರಲು ಪೃಥಿವಿಯ ಲ್ಲಿದ್ದ ತಪಸ್ವಿ ಮತ್ತು ಯೋಗಿಗಳು ಕೆಲವರು ಯೋಗಸಿದ್ಧಿಯನ್ನು ಹೊಂದದೆ ಇರು ವುದರಿಂದ ತಪೋಲೋಕವನ್ನು ಸೇರದೇ ಪೃಥಿವಿಯಲ್ಲಿಯೇ ವಾಸವಾಗಿದ್ದರು.

ಆವರ್ತಂತೇ ಪುನಃ ಸರ್ಗೇ ವೀಕ್ಷಾರ್ಥಂ ತಾ ಭವಂತಿ ಹಿ ।
ವೀಕ್ಷಾರ್ಥಂ ತಾಃ ಸ್ಥಿತಾಸ್ತತ್ರ ಪುನಃ ಸರ್ಗಸ್ಯ ಕಾರಣಾತ್ ॥ ೨೪ ॥

ತತಸ್ತಾಃ ಸೃಜ್ಯಮಾನಾಸ್ತು ಸಂತಾನಾರ್ಥಂ ಭವಂತಿ ಹಿ ।
ಧರ್ಮಾರ್ಥಕಾಮಮೋಕ್ಷಾಣಾಮಿಹ ತಾಃ ಸಾಧಿತಾಃ ಸ್ಮೃತಾಃ ॥೨೫॥

ದೇವಾಶ್ಚ ಪಿತರಶ್ಚೈವ ಕ್ರಮಶೋ ಮಾನವಾಸ್ತಥಾ ।
ತತಸ್ತೇ ತಪಸಾ ಯುಕ್ತಾಃ ಸ್ಥಾನಾನ್ಯಾಪೂರಯನ್ ಪುರಾ ॥ ೨೬ ॥

ಬ್ರಹ್ಮಣೋ ಮಾನವಸ್ತೇ ವೈ ಸಿದ್ಧಾತ್ಮಾನೋ ಭವಂತಿ ಹಿ ।
ಆಸಂಗದ್ವೇಷಯುಕ್ತೇನ ಕರ್ಮಣಾ ತೇ ದಿವಂ ಗತಾಃ ॥ ೨೭ ॥

---

೨೪. ಆ ವ್ಯಕ್ತಿಗಳು ಪುನಃ ಸೃಷ್ಟಿಯಲ್ಲಿ ಪುನರಾವೃತ್ತಿಯನ್ನು ಹೊಂದಿ ಬಂದು ಜಗಚ್ಚಕ್ರದ ಪುನಃಸೃಷ್ಟಿಯ ವೀಕ್ಷಣಾಧಿಕಾರವನ್ನು ವಹಿಸುವರು. ತಮ್ಮ ಸಂತಾನದಿಂದ ಸೃಷ್ಟಿಯನ್ನು ಬೆಳೆಸುವುದು ಮತ್ತು ಸೃಷ್ಟಿಮಾಡಿದ ಪ್ರಜೆಗಳಿಗೆ ಧರ್ಮ ಮುಂತಾದ ನಾಲ್ಕು ಪುರುಷಾರ್ಥ—ಅವುಗಳ ಸಾಧನಗಳನ್ನು ನಿರ್ದೇಶಿಸುವುದು ಮುಂತಾದ ವೀಕ್ಷಣ ವ್ಯಾಪಾರದಿಂದ ಜಗಚ್ಚಕ್ರವು ಶಾಶ್ವತವಾಗಿ ನಡೆಯುವುದು.

೨೫. ಗತಕಲ್ಪದ ಆ ವ್ಯಕ್ತಿಗಳು ಸಂತಾನಕ್ಕೋಸ್ಕರ ಪುನಃ ಸೃಜಿಸಲ್ಪಡುವರು. ಮತ್ತು ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸಲು ಆ ಪ್ರಜೆಗಳು ಸೃಜಿಸಲ್ಪಟ್ಟಿರುವರು.

೨೬. ಹೀಗೆಯೇ ಅನೇಕ ದೇವತೆಗಳು, ಪಿತೃಗಳು, ಮಾನವರು ಎಲ್ಲರೂ ತಪಸ್ಸಿನಿಂದ ಕೂಡಿದವರಾಗಿ ಮೊದಲು ತಮ್ಮ ಸ್ಥಾನಗಳನ್ನು ಕ್ರಮವಾಗಿ ಪೂರ್ತಿ ಮಾಡಿದರು.

೨೭. ಬ್ರಹ್ಮನಿಂದ ನಿರ್ಮಿಸಲ್ಪಟ್ಟ ಆ ಪ್ರಜೆಗಳು ಸಂಸ್ಕಾರ ವಿಶೇಷವನ್ನು ಆರ್ಜಿಸಿದ ಪವಿತ್ರಾತ್ಮರಾಗಿ ವಿಹಿತ ಕರ್ಮದಲ್ಲಿ ಸಂಗ, ನಿಷಿದ್ಧ ಕರ್ಮದಲ್ಲಿ ದ್ವೇಷ ಎಂಬ ಭಾವನಾವಿಶೇಷದಿಂದ ಕರ್ಮಗಳನ್ನು ಆಚರಿಸಿ ಆ ಪವಿತ್ರಾಚರಣೆಯಿಂದ ಸ್ವರ್ಗವನ್ನು ಸೇರಿದರು.

**ಆವರ್ತಮಾನಾಸ್ತೇ ದೇಹೇ ಸಂಭವಂತಿ ಯುಗೇ ಯುಗೇ ।**
**ಸ್ವಕರ್ಮಫಲಶೇಷೇಣ ಖ್ಯಾತಾಶ್ಚೈವ ತದಾತ್ಮಕಾಃ ॥ ೨೮ ॥**

**ಸಂಭವಂತಿ ಜನೇ ಲೋಕಾಃ ಕಲ್ಪಾಗಮ ನಿಬಂಧನಾಃ ।**
**ಅಪ್ಸು ಯಃ ಕಾರಣಂ ತೇಷಾಂ ಬೋಧಯನ್ಕರ್ಮಣಾ ತು ಸಃ ॥ ೨೯ ॥**

**ಕರ್ಮಭಿಸ್ತೈಸ್ತು ಜಾಯಂತೇ ಜನಲೋಕಾಚ್ಛುಭಾಶುಭೈಃ ।**
**ಗೃಹ್ಣಂತಿ ತೇ ಶರೀರಾಣಿ ನಾನಾರೂಪಾಣಿ ಯೋನಿಷು ॥ ೩೦ ॥**

**ದೇವಾದ್ಯಾಃ ಸ್ಥಾವರಾಂತಾಸ್ತು ಉಪದ್ಯಂತೇ ಪರಸ್ಪರಮ್ ।**
**ತೇಷಾಂ ಮೇಧ್ಯಾನಿ ಕರ್ಮಾಣಿ ಪ್ರಾಯಶಃ ಪ್ರತಿಪೇದಿರೇ ॥ ೩೧ ॥**

**ತಸ್ಮಾದ್ಯನ್ನಾಮರೂಪಾಣಿ ತಾನ್ಯೇವ ಪ್ರತಿಪೇದಿರೇ ।**
**ಪುನಃ ಪುನಸ್ತೇ ಕಲ್ಪೇಷು ಜಾಯಂತೇ ನಾಮರೂಪಿಣಃ ॥ ೩೨ ॥**

---

೨೮. ಇಂತಹ ಮಹಾತ್ಮರು ಪ್ರತಿಯೊಂದು ಯುಗದ ಆವೃತ್ತಿಯಲ್ಲಿ ಸ್ವಕರ್ಮ ಫಲದ ಶೇಷಾಂಶದಿಂದ ಪುನರಾವೃತ್ತಿಯನ್ನು ಹೊಂದುತ್ತ ಆ ಭಾವನಾಮಯರಾಗಿ ಹಾಗೆಯೇ ಪ್ರಸಿದ್ಧಿಯನ್ನು ಹೊಂದುತ್ತಲಿರುವರು.

೨೯. ಕಲ್ಪಗಳ ಆರಂಭವೆಂಬ ನಿಮಿತ್ತಕ್ಕೆ ಅಧೀನರಾಗಿ ಆ ಸಿದ್ಧರು ಪುನರ್ಜನ್ಮ ವನ್ನು ತಾಳುವರು. ಅವರು ಈ ವಿಧವಾಗಿ ಜನ್ಮವೆತ್ತಲು ಅವರ ಪೂರ್ವಕೃತಕರ್ಮ ಶೇಷವೆಂಬ ಕರ್ಮಾಶಯವೇ ಕಾರಣವೆಂದು ತಿಳಿಯಬೇಕು.

೩೦. ಸಮಸ್ತ ಜನರೂ ತಾವು ಮಾಡಿದ ಶುಭಾಶುಭ ಕರ್ಮಗಳಿಂದ ಬದ್ಧರಾಗಿ ಅನೇಕ ಯೋನಿಗಳಲ್ಲಿ ಜನ್ಮವೆತ್ತಿ ನಾನಾರೂಪವಾದ ಶರೀರಗಳನ್ನು ಪರಿಗ್ರಹಿಸುತ್ತಾರೆ.

೩೧. ಕರ್ಮವಶರಾಗಿ ಹೊಂದಬೇಕಾದ ಜನ್ಮಗಳು ದೇವಜನ್ಮ ಮೊದಲು ಗೊಂಡು ಸ್ಥಾವರ ಜನ್ಮಪರ್ಯಂತವಾಗಿ ವಿಚಿತ್ರಗಳಾಗಿವೆ. ಪ್ರಾಯಕವಾಗಿ ಉತಮ್ತ ಸಂಸ್ಕಾರವುಳ್ಳ ಪ್ರಾಣಿಯು ಪವಿತ್ರಕರ್ಮದಲ್ಲಿಯೇ ಅಭಿರುಚಿಯುಳ್ಳವನಾಗುವನು.

೩೨. ಆದ್ದರಿಂದ ಹಿಂದೆ ಆಚರಿಸಿದ ಕರ್ಮ-ಅದರ ಫಲಾನುಭವಗಳ ವಾಸನಾ ಸಂಸ್ಕಾರದಿಂದ ಕೂಡಿದ ಪ್ರಾಣಿಯು ಅದೇ ನಾಮರೂಪಗಳನ್ನು ಧರಿಸಿ ಜನ್ಮವೆತ್ತಿ

ತತಃ ಸರ್ಗೋ ಹ್ಯುಪಸೃಷ್ಟಿಂ ಸಿಸೃಕ್ಷೋರ್ಬ್ರಹ್ಮಣಸ್ತು ವೈ ।
ತಾಃ ಪ್ರಜಾ ಧ್ಯಾಯತಸ್ತಸ್ಯ ಸತ್ಯಾಭಿಧ್ಯಾಯಿನಸ್ತದಾ ॥ ೩೩ ॥

ಮಿಥುನಾನಾಂ ಸಹಸ್ರಂ ತು ಮುಖಾತ್ಸಮಭವತ್ಕಿಲ ।
ಜನಾಸ್ತೇ ಹ್ಯುಪಪದ್ಯಂತೇ ಸತ್ತ್ವೋದ್ರಿಕ್ತಾಃ ಸುತೇಜಸಃ ॥ ೩೪ ॥

ವಕ್ಷಸೋಽನ್ಯತ್ಸಹಸ್ರಂ ತು ಮಿಥುನಾನಾಂ ಸಸರ್ಜ ಹ ।
ತೇ ಸರ್ವೇ ರಜಸೋದ್ರಿಕ್ತಾಃ ಶುಷ್ಮಿಣಶ್ಚಾಪ್ಯಮರ್ಷಿಣಃ ॥ ೩೫ ॥

ಸಹಸ್ರಮನ್ಯದಸೃಜದ್ಬಾಹೂನಾಮುಸತಾಂ ಪುನಃ ।
ರಜಸ್ತಮೋಭ್ಯಾಮುದ್ರಿಕ್ತಾ ಗೃಹಶೀಲಾಸ್ತತಃ ಸ್ಮೃತಾಃ ॥ ೩೬ ॥

---

ಅದನ್ನು ಮತ್ತೆ ಆಚರಿಸಿ ಪುನಃ ಸೃಷ್ಟಿಯಲ್ಲಿ ಆ ನಾಮ-ರೂಪ-ಕರ್ಮಗಳಿಂದ ಸಹಿತ ನಾಗಿಯೇ ಹುಟ್ಟುವನು. ಹೀಗೆ ಚಕ್ರಾಕಾರವಾಗಿ ಜನ್ಮ ಮರಣಗಳು ನಡೆಯು ತ್ತಿರುವುವು.

೩೩. ಸೃಷ್ಟಿಯನ್ನು ಪ್ರಾರಂಭಿಸಿದ ಬ್ರಹ್ಮನು ಅತ್ಯಧಿಕವಾದ ಪ್ರಜಾಸೃಷ್ಟಿಯನ್ನು ನಿರ್ವಹಿಸಬೇಕೆಂದು ಸತ್ಯಸಂಕಲ್ಪವುಳ್ಳವನಾದನು. ಬ್ರಹ್ಮನು ಸೃಷ್ಟಿಮಾಡಲು ಸೃಜ್ಯ ವಸ್ತುವಿನ ನಾಮರೂಪ ಚಿಂತನ ಮತ್ತು ಸೃಜಿಸಬೇಕೆಂಬ ಈಕ್ಷಣಗಳು ಸೃಷ್ಟಿಸಾಧನ ಗಳು.

೩೪. ಆಗ ಬ್ರಹ್ಮನ ಮುಖದಿಂದ ಒಂದು ಸಾವಿರ ಮಿಥುನಗಳ ಸೃಷ್ಟಿಯಾ ಯಿತು. ಆ ಮಿಥುನ ಸೃಷ್ಟಿಯಲ್ಲಿ ಸೇರಿದ ಪ್ರಜೆಗಳು ಉದ್ರಿಕ್ತವಾದ ಸತ್ತ್ವಗುಣ ವುಳ್ಳವರಾಗಿಯೂ ದಿವ್ಯವಾದ ತೇಜಸ್ಸುಳ್ಳವರಾಗಿಯೂ ಹುಟ್ಟುವರು.

೩೫. ಸೃಷ್ಟಿಕರ್ತನು ತನ್ನ ವಕ್ಷಸ್ಸಿನಿಂದ ಮತ್ತೊಂದು ಸಾವಿರ ಮಿಥುನಗಳನ್ನು ಸೃಷ್ಟಿ ಮಾಡಿದನು. ಈ ಮಿಥುನಗಳು ರಜೋಗುಣದ ಉದ್ರೇಕದಿಂದ ಕೂಡಿದ ವರೂ, ವೀರ್ಯಸಂಪನ್ನರೂ ಮತ್ತು ಸಹನೆಯಿಲ್ಲದ ಸ್ವಭಾವವುಳ್ಳವರೂ ಆಗಿರುವರು.

೩೬. ಮತ್ತು ಮುಖದಿಂದಲೂ ವಕ್ಷಸ್ಸಿನಿಂದಲೂ ಹುಟ್ಟಿದ ಪ್ರಜೆಗಳಿಗಿಂತ ಅಧಮರಾದ ಮತ್ತೊಂದು ಮಿಥುನ ಸಹಸ್ರವನ್ನು ತನ್ನ ಬಾಹುಗಳಿಂದ ಸೃಷ್ಟಿಸಿದನು. ಅವರು ರಜೋಗುಣ ತಮೋಗುಣಗಗಳ ಮಿಶ್ರಣದ ಉದ್ರೇಕವುಳ್ಳವರಾಗಿ ಗೃಹಕರ್ಮ ತತ್ಪರತೆಯ ಶೀಲವುಳ್ಳವರಾದರು.

**ಆಯುಷೋಽಂತೇ ಪ್ರಸೂಯಂತೇ ಮಿಥುನಾನ್ಯೇವ ವಾಸಕೃತ್ ।**
**ಕೂಟಕಾಕೂಟಕಾಶ್ಚೈವ ಉತ್ಪದ್ಯಂತೇ ಮುಮೂರ್ಷುಣಾಮ್ ॥೩೭॥**

**ಕುತೋ ಕುಲಮಥೋತ್ಪಾದ್ಯ ತಾಃ ಶರೀರಾಣಿ ತತ್ಯಜುಃ ।**
**ತತಃ ಪ್ರಭೃತಿ ಕಲ್ಪೇಽಸ್ಮಿನ್ ಮೈಥುನಾನಾಂ ಚ ಸಂಭವಃ ॥ ೩೮ ॥**

**ಧ್ಯಾನೇನ ಮನಸಾ ತಾಸಾಂ ಪ್ರಜಾನಾಂ ಜಾಯತೇ ಕೃತೇ ।**
**ಶಬ್ದಾದಿವಿಷಯಃ ಶುದ್ಧಃ ಪ್ರತ್ಯೇಕಂ ಪಂಚಲಕ್ಷಣಮ್ ॥ ೩೯ ॥**

**ಇತ್ಯೇವಂ ಮಾನಸೈರ್ಭಾವೈಃ ಪ್ರೇಷ್ಠಂ ತಿಷ್ಠತಿ ಚಾಪ್ರಜಾಃ ।**
**ತಥಾನ್ವಯಾಸ್ತು ಸಂಭೂತಾ ಯೈರಿದಂ ಪೂರಿತಂ ಜಗತ್ ॥ ೪೦ ॥**

---

೩೭. ಈ ಪ್ರಜೆಗಳು ತಮ್ಮ ಕರ್ಮಶೇಷದಿಂದ ಪ್ರಾಪ್ತವಾದ ಸಕಲ ಆಯುಷ್ಯವನ್ನು ಅನುಭವಿಸಿ ಅಂತದಲ್ಲಿ ಮರಣಹೊಂದಿ ಮತ್ತೆ ಮಿಥುನರೂಪದಿಂದ ಹುಟ್ಟುವರು. ಮರಣಕಾಲದಲ್ಲಿ ಆ ಮುಮೂರ್ಷುಗಳಿಗೆ ಮುಂದೆ ಹೊಂದಬೇಕಾದ ಜನ್ಮಕ್ಕೆ ತಕ್ಕಂತೆ ಸಾಧು ಅಸಾಧು ಭಾವನೆಗಳು ಉದಯಿಸುತ್ತವೆ.

೩೮. ಈ ರೀತಿಯಾಗಿ ಮಿಥುನಗಳು ವಂಶಾವಳಿಯನ್ನು ಬೆಳೆಸಿ ತಮ್ಮ ಶರೀರಗಳನ್ನು ಬಿಟ್ಟರು. ಆ ಮೊದಲ್ಗೊಂಡು ಈ ಕಲ್ಪದಲ್ಲಿ ಮಿಥುನಕ್ಕೆ ಸಂಬಂಧಪಟ್ಟಿರುವ ಮೈಥುನ ವ್ಯಾಪಾರಗಳು ಸಂಭವಿಸಿದವು.

೩೯. ಕೃತಯುಗದಲ್ಲಿ ವಾಸಿಸುವ ಪ್ರಜೆಗಳಿಗೆ ಪಂಚಜ್ಞಾನೇಂದ್ರಿಯಗಳಿಂದ ಶಬ್ದಾದಿ ವಿಷಯಗಳ ದುಃಖಸಂಪರ್ಕವಿಲ್ಲದ ಪವಿತ್ರಭೋಗವು ಮನಸ್ಸಿನಿಂದ ಧ್ಯಾನಿಸಿದ ಒಡನೆಯೇ ಪ್ರಾಪ್ತವಾಗುವುದು. ಸಂಕಲ್ಪಮಾತ್ರದಿಂದ ಉತ್ತಮ ಭೋಗವನ್ನು ಅನುಭವಿಸುವ ಸುಕೃತವುಳ್ಳವರಾಗಿರುವರು.

೪೦. ಈ ರೀತಿಯಾಗಿ ಮನೋವಿಕಾರಗಳಾದ ಭಾವನಾವಿಶೇಷಗಳಿಂದ ಕೂಡಿದ ಪ್ರಜಾಪರಂಪರೆಯು ವಿಸ್ತಾರವಾಗಿ ಬೆಳೆದು ಜಗತ್ತನ್ನೆಲ್ಲ ವ್ಯಾಪಿಸಿರುವಂತೆ ವಿವಿಧವಾದ ಅನೇಕ ವಂಶಗಳು ಹುಟ್ಟಿದವು.

ಸರಿತ್ಸರಃಸಮುದ್ರಾಂಶ್ಚ ಸೇವಂತೇ ಪರ್ವತಾನಪಿ ।
ತದಾ ತಾ ಹ್ಯಲ್ಪಸಂತೋಷಾ ಯುದ್ಧೇ ತಸ್ಮಿಂಶ್ಚರಂತಿ ವೈ ॥ ೪೧ ॥

ಪೃಥ್ವೀ ರಸವತೀ ನಾಮ ಆಹಾರಂ ವ್ಯಾಹರಂತಿ ಚ ।
ತಾಃ ಪ್ರಜಾಃ ಕಾಮಚಾರಿಣ್ಯೋ ಮಾನಸೀಂ ಸಿದ್ಧಿಮಿಚ್ಛತಃ ॥ ೪೨ ॥

ತುಲ್ಯಮಾಯುಃ ಸುಖಂ ರೂಪಂ ತಾಸಾಮಾಸೀತ್ಕೃತೇ ಯುಗೇ ।
ಧರ್ಮಾಧರ್ಮೌ ತದಾ ನ ಸ್ತಃ ಕಲ್ಪಾದೌ ಪ್ರಥಮೇ ಯುಗೇ ॥ ೪೩ ॥

ಸ್ವೇನ ಸ್ವೇನಾಧಿಕಾರೇಣ ಜಜ್ಞಿರೇ ತು ಯುಗೇ ಯುಗೇ ।
ಚತ್ವಾರಿ ತು ಸಹಸ್ರಾಣಿ ವರ್ಷಾಣಾಂ ದಿವ್ಯಸಂಖ್ಯಯಾ ॥ ೪೪ ॥

ಆದೌ ಕೃತಯುಗಂ ಪ್ರಾಹುಃ ಸಂಧ್ಯಾಂಶೌ ಚ ಚತುಃಶತೌ ।
ತತಃ ಸಹಸ್ರಶಸ್ತಾಸ್ತು ಪ್ರಜಾಸು ಪ್ರಥಿತಾಸ್ವಿಹ ॥ ೪೫ ॥

---

೪೧. ಆ ಪ್ರಜೆಗಳು ನದೀ-ಸಮುದ್ರ-ಪರ್ವತ ಮುಂತಾದ ಪ್ರದೇಶಗಳಲ್ಲಿ ವಿಹರಿಸುತ್ತ ಅಲ್ಪ ವಿನೋದದಿಂದ ಬಹಳ ಸಂತೋಷವುಳ್ಳವರಾಗಿ ಸಂಚರಿಸುವರು.

೪೨. ಆಗ ಅವರ ವಾಸಭೂಮಿಯು ರಸಪರಿಪೂರ್ಣವಾಗಿ ಬೇಕಾದ ಉತ್ತಮ ಆಹಾರವನ್ನು ಕೊಡುವುದು. ಅದನ್ನು ಭುಂಜಿಸುತ್ತ ಕಾಮಾನುಸಾರವಾಗಿ ಸಂಚರಿಸುವ ಪ್ರಜೆಗಳು ಮಾನಸ ಸಿದ್ಧಿಯನ್ನು ಹೊಂದಿರುವರು.

೪೩. ಕೃತಯುಗದಲ್ಲಿ ಸಕಲ ಪ್ರಜೆಗಳಿಗೂ ತುಲ್ಯವಾದ ಆಯುಸ್ಸು, ಸುಖ, ರೂಪಗಳು ಇದ್ದವು. ಕಲ್ಪಾದಿಯಲ್ಲಿ ಸಂಭವಿಸಿದ ಆ ಕೃತಯುಗದಲ್ಲಿ ಆಯುಷ್ಯ ಮುಂತಾದುವುಗಳಲ್ಲಿ ತಾರತಮ್ಯವನ್ನು ಕೊಡುವ ಧರ್ಮ-ಅಧರ್ಮಗಳ ತಾರತಮ್ಯವು ಇರಲಿಲ್ಲ.

೪೪. ತಮ್ಮ ತಮ್ಮ ಅಧಿಕಾರದಿಂದ ಆಯಾಯ ಫಲಗಳ ಸ್ವಾಮಿತ್ವದಿಂದ ಎಲ್ಲವನ್ನು ಭುಂಜಿಸಿ ಪ್ರತಿಯೊಂದು ಯುಗದಲ್ಲಿಯೂ ಹುಟ್ಟುತ್ತಾರೆ. ದೇವಮಾನದಿಂದ ಕೃತಯುಗದ ಪರಿಮಾಣವು ನಾಲ್ಕು ಸಹಸ್ರ ಸಂವತ್ಸರಗಳು, ಯುಗಸಂಧಿಯ ಅಂಶಗಳು ನಾಲ್ಕು ಶತ ಪರಿಮಾಣವುಳ್ಳವುಗಳು.

೪೫-೪೬. ಅಲ್ಲಿಂದ ಮುಂದೆ ಸಾವಿರಾರು ಸಂಖ್ಯೆಯಿಂದ ಪ್ರಜೆಗಳು ಪ್ರಚುರವಾಗುತ್ತಿರಲು ಆ ಪ್ರಜೆಗಳಿಗೆ ಯಾವ ಭಾಗದಲ್ಲಿಯೂ ಕೇಡನ್ನುಂಟುಮಾಡುವ ಆಘಾತಗ

ನ ತಾಸಾಂ ಪ್ರತಿಘಾತೋಽಸ್ತಿ ನ ದ್ವಂದ್ವಂ ನಾಪಿ ಚ ಕ್ರಮಃ ।
ಪರ್ವತೋದಧಿವಾಸಿನ್ಯೋ ಹ್ಯನಿಕೇತಾಶ್ರಯಾಸ್ತು ತಾಃ ॥ ೪೬ ॥

ವಿಶೋಕಾಃ ಸತ್ತ್ವಬಹುಲಾ ಏಕಾಂತಸುಖಿನಃ ಪ್ರಜಾಃ ।
ತಾಃ ಶಶ್ವತ್ಕಾಮಚಾರಿಣ್ಯೋ ನಿತ್ಯಂ ಮುದಿತಮಾನಸಾಃ ॥ ೪೭ ॥

ಪಶವಃ ಪಕ್ಷಿಣಶ್ಚೈವ ನ ತದಾಸನ್ ಸರೀಸೃಪಾಃ ।
ನೋದ್ಭಿಜ್ಜಾ ನೋತ್ಕಟಾಶ್ಚೈವ ಧರ್ಮಸ್ಯ ಪ್ರಕ್ರಿಯಾ ತು ಸಾ ॥ ೪೮ ॥

ಸಮೂಲಫಲಪುಷ್ಪಾಣಿ ವರ್ತನಾಯ ತ್ವಶೇಷತಃ ।
ಸರ್ವೈಕಾಂತಸುಖಃ ಕಾಲೋ ನಾತ್ಯರ್ಥಂ ಹ್ಯುಷ್ಣಶೀತಲಃ ॥ ೪೯ ॥

---

ಳಾಗಲಿ ಸುಖದುಃಖರೂಪವಾದ ದ್ವಂದ್ವಗಳಾಗಲಿ ಭೋಗಗಳಲ್ಲಿ ಪರಾಧೀನವಾದ ಕ್ರಮವಿಶೇಷವಾಗಲಿ ಯಾವುದೂ ಇಲ್ಲದೇ ನಿಯತವಾದ ಒಂದು ವಾಸಭೂಮಿಯ ಅಭಿನಿವೇಶ ನಿರ್ಬಂಧವಿಲ್ಲದೇ ಪರ್ವತ-ಸಮುದ್ರ ಮುಂತಾದ ರಮ್ಯ ಸ್ಥಳಗಳಲ್ಲಿ ಎಲ್ಲಿ ಯಾದರಲ್ಲಿ ಸುಖಾನುಭವಿಗಳಾಗಿದ್ದರು.

೪೭. ಸುಕೃತದಿಂದ ತುಂಬಿದ ಆ ಪ್ರಜೆಗಳು ಸುಕೃತಲಭ್ಯವಾದ ಫಲಗಳನ್ನು ಅನುಭವಿಸುತ್ತ ಶೋಕವಿಲ್ಲದವರೂ ಸತ್ತ್ವಗುಣಪರಿಪೂರ್ಣರೂ ದುಃಖಸಂಪರ್ಕ ವಿಲ್ಲದ ಏಕಾಂತಸುಖಪರರೂ ಯಾವಾಗಲೂ ಕಾಮಚಾರವುಳ್ಳವರೂ ಸಂತತವೂ ಸಂತುಷ್ಟಚಿತ್ತರೂ ಆಗಿರುವರು.

೪೮. ಪಶು ಪಕ್ಷಿ ಸರ್ಪ ಮುಂತಾದ ಪ್ರಾಣಿಗಳಾವುವೂ ಉದ್ವೇಗವನ್ನುಂಟು ಮಾಡುವುವೂ ಭಯಂಕರವಾದುವುಗಳೂ ಆಗಿರಲಿಲ್ಲ. ಆ ಯುಗವು ಸಂಪೂರ್ಣ ಧರ್ಮದ ಪ್ರಕರಣದ ಕಾಲವು. ಆದ್ದರಿಂದ ಯಾವ ವಿಧದ ಬಾಧೆಯೂ ಇಲ್ಲದಂತೆ ಲೋಕವೆಲ್ಲವೂ ಸುಖಮಯವಾಗಿದ್ದಿತು.

೪೯. ಮೂಲ-ಫಲಪುಷ್ಪಗಳಿಂದ ಸಂಪೂರ್ಣ ಸುಖವನ್ನು ಅನುಭವಿಸುತ್ತಿದ್ದ ಕಾಲವು ಆ ಪ್ರಜೆಗಳಿಗೆ ದೊರೆತಿದ್ದರಿಂದ ಏಕಾಂತ ಸುಖವನ್ನು ಕೊಡುವ ಕಾಲವಾ ಗಿದ್ದು ಸುಖದುಃಖಕರವಾದ ಉಷ್ಣಶೀತಾದಿ ದ್ವಂದ್ವಗಳ ಬಾಧೆಯೊಂದೂ ಇರಲಿಲ್ಲ.

**ಮನೋಽಭಿಲಷಿತಃ ಕಾಮಸ್ತಾಸಾಂ ಸರ್ವತ್ರ ಸರ್ವದಾ ।**
**ಉತ್ತಿಷ್ಠಂತಿ ಪೃಥಿವ್ಯಾಂ ವೈ ತೇಷಾಂ ಧ್ಯಾನ್ಯೈ ರಸಾತಲಾತ್ ॥ ೫೦ ॥**

**ಬಲವರ್ಣಕರೀ ತೇಷಾಂ ಜರಾ ರೋಗಪ್ರಣಾಶನೀ ।**
**ಅಸಂಕಾರ್ಯೈಃ ಶರೀರೈಸ್ತು ಪ್ರಜಾಸ್ತಾಃ ಸ್ಥಿರಯೌವನಾಃ ॥ ೫೧ ॥**

**ತಾಸಾಂ ವಿನಾ ತು ಸಂಕಲ್ಪಾಜ್ಜಾಯಂತೇ ಮಿಥುನಾತ್ಪ್ರಜಾಃ ।**
**ಸಮಂ ಜನ್ಮ ಚ ರೂಪಂ ಚ ಪ್ರೀಯಂತೇ ಚೈವ ತಾಃ ಸಮಾಃ ॥ ೫೨ ॥**

**ತದಾ ಸತ್ಯಮಲೋಭಶ್ಚ ಸಂತುಷ್ಟಿಶ್ಚ ಸುಖಂ ದಮಃ ।**
**ನಿರ್ವಿಶೇಷಾಶ್ಚ ತಾಃ ಸರ್ವಾ ರೂಪಾಯುಃ ಶಿಲ್ಪಚೇಷ್ಟಿತೈಃ ॥ ೫೩ ॥**

---

೫೦. ಆ ಸುಕೃತಿಗಳಿಗೆ ಪೃಥಿವಿಯಲ್ಲಿ ಯಾವ ಸುಖವನ್ನು ಅನುಭವಿಸುವುದರಲ್ಲಿ ಕಾಮವು ಉದಯಿಸುವುದೋ ಆ ಇಷ್ಟವು ರಸಾತಲ ಲೋಕದಿಂದ ಯಾವಾಗಲೂ ಎಲ್ಲ ಎಡೆಗಳಲ್ಲಿಯೂ ಉದ್ಭವಿಸಿ ಬರುತ್ತಲಿತ್ತು.

೫೧ ಆ ಪ್ರಜೆಗಳಿಗೆ ಬರುತ್ತಲಿದ್ದ ವಾರ್ಧಕಾವಸ್ಥೆಯು ವಿಲಕ್ಷಣ ಸ್ವಭಾವವುಳ್ಳದ್ದಾಗಿತ್ತು. ಈಗಿನ ಕಾಲದ ಪ್ರಜೆಗಳಿಗೆ ಜರಾ ಎಂಬುದು ಅದರ ಅನ್ವರ್ಥನಾಮಕ್ಕೆ ತಕ್ಕಂತೆ ಶಕ್ತಿಯನ್ನು ಕ್ಷೀಣಮಾಡುವುದಾಗಿದೆಯಷ್ಟೆ. ಆದರೆ ಆ ಪ್ರಜೆಗಳ ಜರೆಯು ಶರೀರ ಶಕ್ತಿಯನ್ನೂ ಶರೀರ ಸೌಂದರ್ಯವನ್ನೂ ಹೆಚ್ಚಿಸುತ್ತಲೂ ರೋಗಾದಿ ಉಪದ್ರವಗಳನ್ನು ಕಳೆಯುತ್ತಲೂ ಇತ್ತು. ಬಾಲ್ಯಾದಿ ಅವಸ್ಥೆಗಳು ಒಂದಕ್ಕಿಂತ ಒಂದು ಬಲಾದಿಗಳನ್ನು ದೃಢಪಡಿಸುವಂತೆ ಜರೆಯೂ ಅಂತಹದಾಗಿಯೇ ಇತ್ತು. ಮತ್ತು ಶರೀರಕ್ಕೆ ಯಾವವಿಧದ ಸಂಸ್ಕಾರಾಪೇಕ್ಷೆಯೂ ಇಲ್ಲದೆ ಸ್ಥಿರವಾದ ಯೌವನದಿಂದ ಪೂರ್ಣವಾಗಿದ್ದರು.

೫೨. ಆ ಪ್ರಜೆಗಳಿಗೆ ಸಂಕಲ್ಪವಿಲ್ಲದೇ ಮಿಥುನಧರ್ಮದಿಂದ ಪ್ರಜೆಗಳು ಹುಟ್ಟುವರು. ಹುಟ್ಟಿದ ಪ್ರಜೆಗಳ ಜನ್ಮ, ರೂಪ, ಮತ್ತು ತೃಪ್ತಿ ಇವುಗಳೆಲ್ಲವೂ ಒಂದೇ ವಿಧವಾಗಿರುವುವು.

೫೩. ಆ ಪ್ರಜೆಗಳಿಗೆ ಸತ್ಯ, ಅಲೋಭ, ಸಂತೋಷ, ಸುಖ, ದಮ ಇವೆಲ್ಲವೂ ಸ್ವಧರ್ಮಗಳಾಗಿದ್ದವು. ಎಲ್ಲ ಪ್ರಜೆಗಳೂ ರೂಪ, ಆಯುಷ್ಯ, ಶಿಲ್ಪಜ್ಞಾನ, ಇತರ ವ್ಯಾಪಾರ ಸರ್ವಾಂಶಗಳಲ್ಲಿಯೂ ಯಾವ ತರದ ತಾರತಮ್ಯವೂ ಇಲ್ಲದೇ ಇದ್ದರು.

**ಅಬುದ್ಧಿಪೂರ್ವಿಕಾ ವೃತ್ತಿಃ ಪ್ರಜಾನಾಂ ಭವತಿ ಸ್ವಯಮ್ ।**
**ಅಪ್ರವೃತ್ತಿಃ ಕೃತದ್ವಾರೇ ಕರ್ಮಣಃ ಶುಭಪಾಪಯೋಃ ॥ ೫೪ ॥**

**ವರ್ಣಾಶ್ರಮವ್ಯವಸ್ಥಾಶ್ಚ ನ ತದಾಸನ್ನ ತತ್ಕರಾಃ ।**
**ಅನಿಚ್ಛಾದ್ವೇಷಯುಕ್ತಾಸ್ತಾ ವರ್ತಯಂತಿ ಪರಸ್ಪರಮ್ ॥ ೫೫ ॥**

**ತುಲ್ಯರೂಪಾಯುಷಃ ಸರ್ವಾ ಅಧಮೋತ್ತಮವರ್ಜಿತಾಃ ।**
**ಸುಖಪ್ರಾಯಾ ವಿಶೋಕಾಶ್ಚ ಉತ್ಪದ್ಯಂತೇ ಕೃತೇ ಯುಗೇ ॥ ೫೬ ॥**

**ಲಾಭಾಲಾಭೌ ನ ವಾ ಸ್ಯಾತಾಂ ಮಿತ್ರಾಮಿತ್ರೌ ಪ್ರಿಯಾಪ್ರಿಯೇ ।**
**ಮನಸಾ ವಿಷಯಸ್ತಾಸಾಂ ನಿರೀಹಾಣಾಂ ಪ್ರವರ್ತತೇ ॥ ೫೭ ॥**

---

೫೪. ಕೃತಯುಗದ ಸಮಯದಲ್ಲಿ ಪ್ರಜೆಗಳಿಗೆ ಯಾವದೊಂದು ಕರ್ತವ್ಯದಲ್ಲಿಯೂ ಬುದ್ಧಿಸಂಕಲ್ಪ ವೃತ್ತಿಯಿಲ್ಲದೆ ತಾನಾಗಿ ಹುಟ್ಟುವುದು, ಮತ್ತು ಶುಭ ಅಥವ ಅಶುಭ ಸಂಸ್ಕಾರಗಳನ್ನು ಹುಟ್ಟಿಸುವ ಕರ್ಮಗಳಲ್ಲಿ ಪ್ರವೃತ್ತಿಯೇ ಇಲ್ಲವು.

೫೫. ಈಗಿರುವಂತೆ ಬ್ರಾಹ್ಮಣ್ಯಾದಿ ವರ್ಣಗಳ, ಬ್ರಹ್ಮಚರ್ಯಾದಿ ಆಶ್ರಮಗಳ ವ್ಯವಸ್ಥೆಗಳೂ ಆ ವ್ಯವಸ್ಥೆಗೆ ಬದ್ಧರಾಗಿ ಅದನ್ನು ಆಚರಿಸುವವರೂ ಆ ಸಮಯದಲ್ಲಿ ಇರಲಿಲ್ಲ. ಇಚ್ಛಾ ಮತ್ತು ದ್ವೇಷಗಳಿಲ್ಲದೇ ಪರಸ್ಪರವಾಗಿ ನಡೆದುಕೊಂಡಿದ್ದರು.

೫೬. ಸೌಂದರ್ಯ-ಆಯುಸ್ಸ್ಯ ಎಲ್ಲ ಭೋಗಗಳಲ್ಲಿ ಒಂದೇವಿಧವಾಗಿರುವುದರಿಂದ ಆ ಗಣದಲ್ಲಿ ಒಬ್ಬರಿಗಿಂತ ಉತ್ತಮ ಅಥವಾ ಅಧಮನೆಂದು ಇನ್ನೊಬ್ಬನನ್ನು ಗಣಿಸಲು ಅವಕಾಶವಿರಲಿಲ್ಲ. ಎಲ್ಲರೂ ಶೋಕವಿಲ್ಲದ ಸುಖಮಯ ಪ್ರಜೆಗಳಾಗಿಯೇ ಕೃತಯುಗದಲ್ಲಿ ಜನಿಸುತ್ತಿದ್ದರು.

೫೭. ಅವರ ಮನಸ್ಸಿಗೆ ಒಂದು ವಿಷಯದಲ್ಲಿ ಲಾಭ ಅಲಾಭವೆಂಬ ದೃಷ್ಟಿಯು ಇರಲಿಲ್ಲ. ಹಾಗೆಯೇ ಮಿತ್ರ-ಅಮಿತ್ರ, ಪ್ರಿಯ-ಅಪ್ರಿಯರೆಂಬ ವಿಭಾಗ ಬುದ್ಧಿಯು ಇರಲಿಲ್ಲ. ಆಪ್ತಕಾಮರಾಗಿರುವಂತೆ ಆ ಪ್ರಜೆಗಳಿಗೆ ಸಕಲ ವಿಷಯಗಳೂ ಯುಗ ಮಹಿಮೆಯಿಂದ ಒದಗುತ್ತಲಿದ್ದವು.

ನಾತಿಹಿಂಸಂತಿ ವಾನ್ಯೋನ್ಯಂ ನಾನುಗೃಹ್ಣಂತಿ ವೈ ತದಾ ।
ಜ್ಞಾನಂ ವರಂ ಕೃತಯುಗೇ ತ್ರೇತಾಯಾಂ ಯಜ್ಞ ಉಚ್ಯತೇ ॥ ೫೮ ॥

ಪ್ರವೃತ್ತಂ ದ್ವಾಪರೇ ಯುದ್ಧಂ ಸ್ತೇಯಮೇವ ಕಲೌ ಯುಗೇ ।
ಸತ್ತ್ವಂ ಕೃತಂ ರಜಸ್ತ್ರೇತಾ ದ್ವಾಪರಂ ತು ರಜಸ್ತಮಃ ॥ ೫೯ ॥

ಕಲಿಸ್ತಮಸ್ತು ವಿಜ್ಞೇಯಂ ಗುಣವೃತ್ತಂ ಗುಣೇಷು ತತ್ ।
ಕಾಲಃ ಕೃತಯುಗೇ ತ್ವೇಷ ತಸ್ಯ ಸಂಧ್ಯಾಂ ನಿಬೋಧತ ॥ ೬೦ ॥

---

೫೮. ಕೃತಯುಗದಲ್ಲಿ ಪ್ರಜೆಗಳು ಒಬ್ಬರಿಗೆ ಅತಿಯಾಗಿ ಹಿಂಸೆಯನ್ನೂ ಕೊಡುತ್ತಿರಲಿಲ್ಲ. ಇನ್ನೊಬ್ಬರನ್ನು ಹಿಂಸಿಸಿ ಹೊಂದಬೇಕಾಗಿರುವ ಲಾಭವು ಇಲ್ಲ. ಹಾಗೆಯೇ ಒಬ್ಬರನ್ನು ವಿಶೇಷ ಅನುಗ್ರಹಿಸುತ್ತಲೂ ಇರಲಿಲ್ಲ. ಒಬ್ಬರ ಅನುಗ್ರಹದಿಂದ ಸುಖವನ್ನು ಬಯಸುವ ಅನುಗ್ರಾಹ್ಯನೂ ಇರಲಿಲ್ಲ. ಇಂತಹ ಕೃತಯುಗದಲ್ಲಿ ಜ್ಞಾನವು ಅತಿಯಾಗಿ ಪ್ರಚಾರದಲ್ಲಿದ್ದಿತು. ತ್ರೇತಾಯುಗದಲ್ಲಿ ಯಜ್ಞಾನುಷ್ಠಾನಕ್ಕೆ ಪ್ರಾಧಾನ್ಯವು ಉಂಟಾಯಿತು.

೫೯. ಹೀಗೆ ಇವೆರಡು ಯುಗಗಳಲ್ಲಿ ವಿಹಿತ ಮಾರ್ಗಗಳೇ ಪ್ರಧಾನವಾಗಿದ್ದಾಗ್ಯೂ ಕೂಡ ಕಡೆಯ ದ್ವಾಪರ-ಕಲಿಯುಗಗಳಲ್ಲಿ ದುರ್ಮಾರ್ಗಗಳು ಹೆಚ್ಚಿ ಅಕಾರ್ಯಗಳಿಗೆ ಪ್ರಾಧಾನ್ಯವು ತಲೆದೋರುವಂತಾಯಿತು. ಅದರಲ್ಲೂ ದ್ವಾಪರಯುಗದಲ್ಲಿ ಯುದ್ಧವು ಪ್ರಧಾನವಾಯಿತು. ಅದಕ್ಕಿಂತಲೂ ನೀಚ ಕರ್ಮವಾದ ಚೌರ್ಯವು ಕಲಿಯುಗದ ಮುಖ್ಯ ಧರ್ಮವಾಯಿತು. ಹೀಗೆ ಕೃತಯುಗವು ಸತ್ತ್ವಗುಣದ ಆಕಾರವೂ ತ್ರೇತಾಯುಗವು ರಜೋಗುಣದ ಆಕಾರವೂ, ದ್ವಾಪರವು ತಮೋಗುಣ ಮಿಶ್ರ ರಜೋಗುಣದ ಆಕಾರವೂ ಕಲಿಯುಗವು ಕೇವಲ ತಮೋಗುಣದ ಆಕಾರವೂ ಆದವು.

೬೦. ಈ ರೀತಿಯಾಗಿ ಚತುರ್ಯುಗಗಳಲ್ಲಿಯೂ ಗುಣಸಂಘಾತ ರೂಪವಾದ ಪ್ರಕೃತಿಗೆ ವಶವಾಗಿ ಗುಣಗಳ ವರ್ತನಗಳು ನಡೆಯುವುವು. ಹೀಗೆ ಅನಾದಿಕಾಲ ಪ್ರವಾಹದಲ್ಲಿ ಕೃತಯುಗವೆಂಬ ಕಾಲವು ಪವಿತ್ರವಾದುದು, ಅದರ ಪರಿಮಾಣವನ್ನು ತಿಳಿಯಿರಿ.

ಚತ್ವಾರಿ ತು ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಮ್ ।
ಸಾಧ್ಯಾಂಶೌ ತಸ್ಯ ದಿವ್ಯಾನಿ ಶತಾನ್ಯಷ್ಟೌ ತು ಸಂಖ್ಯಯಾ ॥ ೬೧ ॥

ಚತ್ವಾರ್ಯೇವ ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ತು ।
ತದಾ ತಾಸು ಭವಂತ್ಯಾಶು ನೋತ್ಕ್ಲೇಶಾಚ್ಚ ವಿಪರ್ಯಯಾಃ ॥೬೨॥

ತತಃ ಕೃತಯುಗೇ ತಸ್ಮಿನ್ ಸಸಂಧ್ಯಾಂಶೇ ಗತೇ ತದಾ ।
ಪಾದಾವಶಿಷ್ಟೋ ಭವತಿ ಯುಗಧರ್ಮಸ್ತು ಸರ್ವಶಃ ॥ ೬೩ ॥

ಸಂಧ್ಯಾಯಾಸ್ತು ವ್ಯತೀತಾಯಾಃ ಸಾಂಧ್ಯಃ ಕಾಲೋ ಯುಗಸ್ಯ ಸಃ ।
ಪಾದಮಿಶ್ರಾವಶಿಷ್ಟೇನ ಸಂಧ್ಯಾಧರ್ಮೋ ಪುನಃ ಪುನಃ ॥ ೬೪ ॥

ಏವಂ ಕೃತಯುಗೇ ತಸ್ಮಿನ್ನಿಃಶೇಷೇಽಂತರ್ದಧೇ ತದಾ ।
ತಸ್ಯಾಂ ಚ ಸಂಧೌ ನಷ್ಟಾಯಾಂ ಮಾನಸೀ ಚಾಭವತ್ಪ್ರಜಾ ॥೬೫॥

---

೬೧. ನಾಲ್ಕುಸಾವಿರ ವರ್ಷಗಳ ಪರಿಮಾಣವುಳ್ಳದ್ದು ಕೃತಯುಗವು. ಅದರ ಸಂಧಿ ಅಂಶಗಳು ಎಂಟುನೂರು ವತ್ಸರ ಪರಿಮಾಣವುಳ್ಳವುಗಳು. ಈ ವರ್ಷ ಪರಿಮಾಣವು ದೇವಮಾನದಿಂದ ಗಣಿಸಲ್ಪಟ್ಟಿರುವುದು.

೬೨. ಮಾನುಷ ಪರಿಮಾಣದಿಂದ ಈ ಸಂಧಿಯು ನಾಲ್ಕುಸಾವಿರ ವರ್ಷ ಪರಿಮಾಣವುಳ್ಳದ್ದಾಗಿದೆ. ಈ ಪರಿಮಾಣದಲ್ಲಿ ಪ್ರಜೆಗಳಿಗೆ ಕೃತಯುಗದ ಸ್ಥಿತಿಯನ್ನು ಬಿಟ್ಟು ಕ್ಲೇಶಕಾರಕವಾದ ವಿಪರ್ಯಯಗಳು ಯಾವುವೂ ಇರಲಾರವು.

೬೩. ಸಂಧ್ಯಾಂಶದಿಂದ ಕೂಡಿದ ಈ ಕೃತಯುಗವು ಈ ರೀತಿಯಾಗಿ ಪೂರ್ತಿ ಕಳೆಯಲು ಸರ್ವ ಪ್ರಕಾರದಿಂದಲೂ ಯುಗಧರ್ಮವು ಪಾದಮಾತ್ರವೇ ಅವಶಿಷ್ಟವಾಗುವುದು.

೬೪. ಸಂಧ್ಯಾಕಾಲವು ಕಳೆಯುವುದರೊಳಗೆ ನಡೆಯುವುದು ಆ ಯುಗದ ಸಾಂಧ್ಯಕಾಲವೆನಿಸುವುದು. ಆಗ ಸಂಧ್ಯಾ ಧರ್ಮಗಳು ಮತ್ತೆ ಪಾದಮಾತ್ರ ಅವಶಿಷ್ಟವಾಗಿರುವುವು.

೬೫. ಈ ರೀತಿಯಾಗಿ ಸಂಪೂರ್ಣ ಕೃತಯುಗವು ಪೂರ್ತಿ ಕಳೆದು ಹೋಗಲಾಗಿ ಕೃತಯುಗದ ಅಸಾಧಾರಣ ಸಿದ್ಧಿಯು ಕ್ಷೀಣವಾಗಿ ಹೋಗಲು ಮಾನಸಪ್ರಜೆಯು ಉತ್ಪನ್ನವಾಯಿತು.

ಸಿದ್ಧಿರನ್ಯಯುಗೇ ತಸ್ಮಿಂಸ್ತ್ರೇತಾಖ್ಯೇಽನಂತರೇ ಕೃತಾತ್ ।
ಸರ್ಗಾದೌ ಯಾ ಮಯಾಷ್ಟೌ ತು ಮಾನಸ್ಯೋ ವೈ ಪ್ರಕೀರ್ತಿತಾಃ
॥ ೬೬ ॥

ಅಷ್ಟೌ ತಾಃ ಕ್ರಮಯೋಗೇನ ಸಿದ್ಧಯೋ ಯಾಂತಿ ಸಂಕ್ಷಯಮ್ ।
ಕಲ್ಪಾದೌ ಮಾನಸೀ ಹ್ಯೇಕಾ ಸಿದ್ಧಿರ್ಭವತಿ ಸಾ ಕೃತೇ ॥ ೬೭ ॥

ಮನ್ವಂತರೇಷು ಸರ್ವೇಷು ಚತುರ್ಯುಗ ವಿಭಾಗಶಃ ।
ವರ್ಣಾಶ್ರಮಾಚಾರಕೃತಃ ಕರ್ಮಸಿದ್ಧ್ಯುದ್ಭವಃ ಕೃತಃ ॥ ೬೮ ॥

ಸಂಧ್ಯಾ ಕೃತಸ್ಯ ಪಾದೇನ ಸಂಕ್ಷೇಪೇಣ ವಶಾತ್ತತಃ ।
ಕೃತಸಂಧ್ಯಾಂಶಕಾ ಹ್ಯೇತೇ ತ್ರೀನಾದಾಯ ಪರಸ್ಪರಮ್ ॥ ೬೯ ॥

ಹೀಯಂತೇ ಯುಗಧರ್ಮಾಸ್ತೇ ತಪಃಶ್ರುತಬಲಾಯುಷಃ ।
ಕೃತೇ ಕೃತಾಂಶೇಽತೀತೇ ತು ಬಭೂವ ತದನಂತರಮ್ ॥ ೭೦ ॥

---

೬೬. ಕೃತಯುಗದ ತರುವಾಯ ಪ್ರಾಪ್ತವಾಗುವ ತ್ರೇತಾಯುಗದಲ್ಲಿ ಮತ್ತೊಂದು ವಿಧವಾದ ಸಿದ್ಧಿಯು ಪ್ರಕಾಶಿಸುವುದು. ಸರ್ಗಾದಿಯಲ್ಲಿ ಎಂಟು ಮಾನಸ ಸಿದ್ಧಿಗಳು ಇರುವುದಾಗಿ ಹಿಂದೆ ನನ್ನಿಂದ ಹೇಳಲ್ಪಟ್ಟಿವೆಯಲ್ಲವೆ.

೬೭. ಆ ಎಂಟು ಸಿದ್ಧಿಗಳು ಕ್ರಮವಾಗಿ ನಾಶವನ್ನು ಹೊಂದುವುವು. ಕೃತ್ಕ ಯುಗದ ಸರ್ಗಾದಿ ಸಿದ್ಧಿಗಳು ಅನೇಕವಿರುವಂತೆ ಮುಂದಿನ ಯುಗದಲ್ಲಿ ಮಾನಸೀ ಸಿದ್ಧಿಯೊಂದು ಮಾತ್ರವಿರುವುದು.

೬೮. ಎಲ್ಲ ಮನ್ವಂತರಗಳಲ್ಲಿಯೂ ಕೃತ-ತ್ರೇತಾ-ದ್ವಾಪರ-ಕಲಿಯೆಂಬ ನಾಲು ಯುಗ ವಿಭಾಗವನ್ನು ಅವಲಂಬಿಸಿ ವರ್ಣ-ಆಶ್ರಮಗಳ ಆಚಾರ ತಾರತಮ್ಯದಂತೆ ಕರ್ಮಸಿದ್ಧಿ ವಿಶೇಷಗಳ ಉತ್ಪತ್ತಿಯು ರಚಿಸಲ್ಪಟ್ಟಿತು.

೬೯. ಯುಗ ಸಂಧಿಕಾಲದ ಪ್ರಾಬಲ್ಯದಿಂದ ಪಾದಾಂಶ ಯುಗ ಧರ್ಮವು ಸಂಕ್ಷಿಪ್ತ ವಾಗಿ ಹೋಗುವುದರಿಂದಸಂಧ್ಯಾಂಶಗಳು ಧರ್ಮದ ಮೂರುಪಾದಗಳನ್ನು ಕಳೆಯುವುವು.

೭೦. ಆಯಾಯ ಯುಗಕ್ಕೆ ಅಸಾಧಾರಣವಾಗಿ ಏರ್ಪಡಿಸಲ್ಪಟ್ಟ ಯುಗಧರ್ಮ ಗಳೂ ಅದನ್ನು ಅವಲಂಬಿಸಿರುವ ತಪಸ್ಸು, ಶಾಸ್ತ್ರಾಧ್ಯಯನ, ಶಕ್ತಿ, ಆಯುಸ್ಸು ಎಲ್ಲವೂ ಹ್ರಾಸವನ್ನು ಹೊಂದುತ್ತವೆ. ಅದರಂತೆ ಕೃತಯುಗ ಅದರ ಅಂತಿಮಾಂಶ ಎಲ್ಲವೂ ಸಂಪೂರ್ಣವಾಗಿ ಅವಸಾನ ಹೊಂದುವುದು.

ತ್ರೇತಾಯುಗಸಮುತ್ಪತ್ತಿಃ ಸಾಂಶಾ ಚ ಋಷಿಸತ್ತಮಾಃ ।
ತಸ್ಮಿನ್ ಕ್ಷೀಣೇ ಕೃತಾಂಶೇ ವೈ ತಾಸು ಶಿಷ್ಟಾಸು ಸಪ್ತಸು ॥ ೭೧ ॥

ಕಲ್ಪಾದೌ ಸಂಪ್ರವೃತ್ತಾಯಾಃ ತ್ರೇತಾಯಾಃ ಪ್ರಮುಖೇ ತದಾ ।
ಪ್ರಣಶ್ಯತಿ ತದಾ ಸಿದ್ಧಿಃ ಕಾಲಯೋಗೇನ ನಾನ್ಯಥಾ ॥ ೭೨ ॥

ತಸ್ಯಾಂ ಸಿದ್ಧೌ ಪ್ರಣಷ್ಟಾಯಾಮನ್ಯಾ ಸಿದ್ಧಿರಜಾಯತ ।
ಅಪಾಂಶೌ ತು ಪ್ರತಿಗತೌ ತದಾ ಮೇಘಾತ್ಮನಾ ತು ವೈ ॥ ೭೩ ॥

ಮೇಘೇಭ್ಯಃ ಸ್ತನಯಿತ್ನುಭ್ಯಃ ಪ್ರವೃತ್ತಂ ವೃಷ್ಟಿವರ್ಜನಮ್ ।
ಸಕೃದೇವ ತಯಾ ವೃಷ್ಟ್ಯಾ ಸಂಸಿದ್ಧೇ ಪೃಥಿವೀತಲೇ ॥ ೭೪ ॥

ಪ್ರಜಾ ಆಸಂಸ್ತತಸ್ತಾಸಾಂ ವೃಕ್ಷಾಶ್ಚ ಗೃಹಸಂಜ್ಞಿತಾಃ ।
ಸರ್ವಃ ಪ್ರತ್ಯುಪಭೋಗಸ್ತು ತಾಸಾಂ ತೇಭ್ಯೋ ವ್ಯಜಾಯತ ॥ ೭೫ ॥

---

೭೧. ಹೀಗೆ ಕೃತಯುಗದ ಅವಸಾನ ಪ್ರಾಪ್ತಿ ಸಮಯದಲ್ಲಿ ತನ್ನ ಅಂಶಗಳಿಂದ ಕೂಡಿದ ತ್ರೇತಾಯುಗವು ಹುಟ್ಟುವುದು. ಆ ತ್ರೇತಾಯುಗವು ಪ್ರಾಪ್ತವಾಗಲು ಕೃತ ಯುಗದ ಅಂಶವೂ ಕ್ಷೀಣವಾಗಿ ಸರ್ಗಾದಿಯಲ್ಲಿರುವ ಎಂಟು ಸಿದ್ಧಿಗಳೂ ಲಯ ಹೊಂದುವುವು.

೭೨. ಕಲ್ಪದ ಆದಿಯಲ್ಲಿ ಪ್ರವೃತ್ತವಾದ ಮಾನಸ ಸಿದ್ಧಿಯು ತ್ರೇತಾಯುಗದ ಪ್ರಾರಂಭದಲ್ಲಿ ಕಾಲದೈರ್ಘ್ಯವೆಂಬ ನಿಮಿತ್ತದಿಂದ ನಶಿಸುವುದು. ಸಿದ್ಧಿನಾಶಕ್ಕೆ ಕಾಲ ದೈರ್ಘ್ಯಹೊರತು ಇನ್ನಾವುದೂ ನಿಮಿತ್ತವಿಲ್ಲ.

೭೩. ಆ ಸಿದ್ಧಿಯು ನಾಶವಾದ ಮೇಲೆ ನಡೆಯುತ್ತಿರುವ ಮುಂದಿನ ಯುಗಕ್ಕೆ ಅನುಗುಣವಾದ ಮತ್ತೊಂದು ಸಿದ್ಧಿಯು ಹುಟ್ಟುವುದು. ಆಗ ಆ ಯುಗ ಸಿದ್ಧಿಯ ವೈಶಿಷ್ಟ್ಯವೇನೆಂದರೆ ನೀರಿನ ಸಾರಾಂಶಗಳು ಮೇಘರೂಪವಾಗಿ ಪರಿಣಮಿಸುವುವು.

೭೪. ಗುಡುಗಿನ ಶಬ್ದದಿಂದ ಕೂಡಿದ ಮೇಘಗಳಿಂದ ಬೇಕಾದಷ್ಟು ಮಳೆಯು ಸುರಿಯಲಾರಂಭಿಸುವುದು. ಒಂದುಸಲ ಮಳೆಯು ಸುರಿದ ಮಾತ್ರದಿಂದ ಪೃಥಿವಿಯ ಭಾಗವೆಲ್ಲವೂ ನೆನೆದು ಮಳೆಯಿಂದಾಗುವ ಫಲಸಿದ್ಧಿಯನ್ನು ಕೊಡುವುದು.

೭೫. ಆಗಿನ ಪ್ರಜೆಗಳಿಗೆ ಗೃಹಪ್ರಾಯವಾದ್ದರಿಂದ ಗೃಹಸಂಜ್ಞೆಯಿಂದ ಅಂಕಿತ ವಾದ ವೃಕ್ಷಗಳು ಎಲ್ಲೆಲ್ಲಿಯೂ ತುಂಬಿಕೊಂಡವು. ಮತ್ತು ಸಕಲ ಉಪಭೋಗವೂ ಮೇಘಗಳಿಂದ ಸುರಿದ ಜಲನಿರ್ಮಿತವಾಗಿ ಒದಗಿತು.

ವರ್ತಯಂತೇ ಸ್ಮ ತೇಭ್ಯಸ್ತಾಸ್ತ್ರೇತಾಯುಗಮುಖೇ ಪ್ರಜಾಃ ।
ತತಃ ಕಾಲೇನ ಮಹತಾ ತಾಸಾಮೇವ ವಿಪರ್ಯಯಾತ್ ॥ ೭೬ ॥

ರಾಗಲೋಭಾತ್ಮಕೋ ಭಾವಸ್ತದಾ ಹ್ಯಾಕಸ್ಮಿಕೋಽಭವತ್ ॥ ೭೭ ॥

ಯತ್ತದ್ಭವತಿ ನಾರೀಣಾಂ ಜೀವಿತಾಂತೇ ತದಾರ್ತವಮ್ ।
ತದಾ ತದ್ವೈ ನ ಭವತಿ ಪುನರ್ಯುಗಬಲೇನ ತು ॥ ೭೮ ॥

ತಾಸಾಂ ಪುನಃ ಪ್ರವೃತ್ತಂ ತನ್ಮಾಸಿ ಮಾಸಿ ತದಾರ್ತವಮ್ ।
ತತಸ್ತೇನೈವ ಯೋಗೇನ ವರ್ತತೇ ಮೈಥುನಂ ತದಾ ॥ ೭೯ ॥

ತೇಷಾಂ ತತ್ಕಾಲಭಾವಿತ್ವಾನ್ಮಾಸಿ ಮಾಸ್ಯುಪಗಚ್ಛತಾಮ್ ।
ಅಕಾಲೇ ಚಾರ್ತವೋತ್ಪತ್ತ್ಯಾ ಗರ್ಭೋತ್ಪತ್ತಿಸ್ತದಾಽಭವತ್ ॥ ೮೦ ॥

---

೭೬. ತ್ರೇತಾಯುಗದ ಆದಿಯಲ್ಲಿ ಪ್ರಜೆಗಳು ಸಕಲ ಭೋಗಗಳನ್ನೂ ಆ ಜಲಾಂಶಗಳಿಂದ ನೆರವೇರಿಸುತ್ತಿರುವರು. ಹಾಗೂ ಕೆಲವು ಕಾಲ ಕಳೆದ ತರುವಾಯ ಆ ವಿಧದಿಂದ ಇರುವ ಪ್ರಜೆಗಳಿಗೂ ವಿಪರ್ಯಯವು ಒದಗುವುದು.

೭೭. ಹೀಗೆ ಕಾಲ ವಿಪರ್ಯಯ ಬಲದಿಂದ ಆಗಿರುವ ಸಕಲ ಪ್ರಜೆಗಳಿಗೂ ವಿಷಯ ಸುಖಾಭಿಲಾಷೆ ಮತ್ತು ಅನುಭವಿಸಿದ ಸೌಖ್ಯದಲ್ಲಿ ತೃಪ್ತಿಯಿಲ್ಲದಂತೆ ಅಧಿಕವಾಗಿ ಅಪೇಕ್ಷಿಸುವಿಕೆಗಳೆಂಬ ರಾಗ-ಲೋಭಗಳು ಉಂಟಾದುವು.

೭೮. ಇಂತಹ ಕಾಲವು ಪ್ರಾಪ್ತವಾಗುವವರೆಗೂ ಸ್ತ್ರೀಯರಿಗೆ ಜೀವಿತಕಾಲದ ಅವಸಾನದಲ್ಲಿ ಮಾತ್ರ ಪ್ರಾಪ್ತವಾಗುವ ಋತು (ರಜಸ್ವಲಾವಸ್ಥೆ) ವು ರಾಗ ಲೋಭಗಳು ಹೆಚ್ಚಾಗಿಲ್ಲದ ಯುಗಧರ್ಮದ ಬಲದಿಂದ ಆಗಾಗ ಸಂಭವಿಸುತ್ತಿರಲಿಲ್ಲ.

೭೯. ಮತ್ತೆ ರಾಗ-ಲೋಭಗಳಿಗೆ ಅಧೀನವಾಗುವ ವಿಪತ್ತಿನ ಅವಸ್ಥಾ ಸಮಯವು ಪ್ರಾಪ್ತವಾದ ಮೇಲೆ ಆ ಋತುಧರ್ಮವು ಪ್ರತಿಮಾಸದಲ್ಲಿಯೂ ಸಂಭವಿಸಿ ಅದರಿಂದ ಮೈಥುನವೆಂಬ ಗ್ರಾಮ್ಯ ಧರ್ಮವು ಪ್ರವೃತ್ತವಾಯಿತು.

೮೦. ಪ್ರಜೆಗಳು ಆಯಾಯ ಕಾಲಧರ್ಮದ ಭಾವನಾಮಯರಾಗಿರುವುದರಿಂದ ಆ ತ್ರೇತಾಯುಗಾವಸಾನದ ಪ್ರಜೆಗಳು ಮೈಥುನಧರ್ಮಾವಲಂಬನ ತತ್ಪರರಾಗಿ ಋತುಕಾಲಗಳಲ್ಲಿ ನಾರೀ ಸಮಾಗಮ ಮಾಡುವ ಸ್ವಭಾವವುಳ್ಳವರಾದರು. ಆಗ ಸ್ತ್ರೀಯರಿಗೆ ಅಕಾಲದಲ್ಲಿ ಆರ್ತವವೂ ಗರ್ಭೋತ್ಪತ್ತಿಯೂ ಆಗಲಾರಂಭಿಸಿದವು.

**ವಿಪರ್ಯಯೇಣ ತೇಷಾಂ ತು ತೇನ ತತ್ಕಾಲಭಾವಿತಾಃ ।**
**ಪ್ರಣಶ್ಯಂತಿ ತತಃ ಸರ್ವೇ ವೃಕ್ಷಾಸ್ತೇ ಗೃಹಸಂಜ್ಞಿತಾಃ ॥ ೮೧ ॥**

**ತತಸ್ತೇಷು ಪ್ರಣಷ್ಟೇಷು ವಿಭ್ರಾಂತಾ ವ್ಯಾಕುಲೇಂದ್ರಿಯಾಃ ।**
**ಅಭಿಧ್ಯಾಯಂತಿ ತಾಃ ಸಿದ್ಧಿಂ ಸತ್ಯಾಭಿಧ್ಯಾಯಿನಸ್ತದಾ ॥ ೮೨ ॥**

**ಪ್ರಾದುರ್ಬಭೂವುಸ್ತೇಷಾಂ ತು ವೃಕ್ಷಾಸ್ತೇ ಗೃಹಸಂಜ್ಞಿತಾಃ ।**
**ವಸ್ತ್ರಾಣಿ ಚ ಪ್ರಸೂಯಂತೇ ಫಲಾನ್ಯಾಭರಣಾನಿ ಚ ॥ ೮೩ ॥**

**ತಥೈವ ಜಾಯತೇ ತೇಷಾಂ ಗಂಧವರ್ಣಾಂ ರಸಾನ್ವಿತಮ್ ।**
**ಅನ್ವೀಕ್ಷಿಕಂ ಮಹಾವೀರ್ಯಂ ಪುಟಕೇ ಪುಟಕೇ ಮಧು ॥ ೮೪ ॥**

---

೮೧. ಹೀಗೆ ಆಯಾಯ ಕಾಲದಲ್ಲಿ ಒದಗುವ ಪ್ರಜೆಗಳ ಶೀಲದ ವಿಪರ್ಯಯದಿಂದ ಪುಣ್ಯಕಾಲ ಭಾವನೆಯಿಂದ ಸಿದ್ಧವಾದ, ಹಿಂದೆ ಹೇಳಿದ ಗೃಹಸಂಜ್ಞೆಯನ್ನು ಹೊಂದಿದ ವೃಕ್ಷಗಳು ಎಲ್ಲವೂ ನಶಿಸುವುವು.

೮೨. ಹಿಂದಿನ ಗೃಹಸಂಜ್ಞೆಯುಳ್ಳ ವೃಕ್ಷಗಳೆಲ್ಲವೂ ನಾಶವಾದ ಬಳಿಕ ಆ ವೃಕ್ಷ ನಾಶ ಶೋಕದಿಂದ ಭ್ರಮಗೊಂಡವರೂ ಮತ್ತು ವ್ಯಾಕುಲವಾದ ಇಂದ್ರಿಯಗಳುಳ್ಳವರೂ ಆದ ಸತ್ಯ, ಸಂಕಲ್ಪ, ಧ್ಯಾನಗಳಿಂದ ಕೂಡಿದ ಆ ಪ್ರಜೆಗಳು ತಮ್ಮ ಸಿದ್ಧಿಯನ್ನು ನೆನೆಸಿಕೊಂಡರು.

೮೩. ಆ ಸಿದ್ಧಿಯಿಂದ ಮತ್ತೆ ಕೆಲವು ಗೃಹಸಂಜ್ಞೆಯುಳ್ಳ ವೃಕ್ಷಗಳು ಜನಿಸಿ ಪ್ರಜೆಗಳಿಗೆ ಭೋಗ ಸಾಮಗ್ರಿಯಾದ ವಸ್ತ್ರಾಭರಣಗಳನ್ನೂ ಅನೇಕವಿಧ ಫಲಪುಷ್ಪಗಳನ್ನೂ ಒದಗಿಸಿ ಕೊಡುವುವುಗಳಾದವು.

೮೪. ವೃಕ್ಷಗಳಿಂದ ನೀಡಲ್ಪಟ್ಟ ಸಮಸ್ತ ಭೋಗ ಸಾಮಗ್ರೀ ಬಲದಿಂದ ಗಂಧ-ರೂಪ-ರಸ ಮುಂತಾದ ಸಕಲ ಸುಖಾನುಭವವೂ ಉಂಟಾಯಿತು. ಮತ್ತು ಯಥೇಚ್ಛವಾದ ವೀರ್ಯ ಸಂಪಾದಕವಾದ ಮಧುವು ಆ ವೃಕ್ಷಗಳ ಪ್ರತಿಯೊಂದು ಎಲೆಯಲ್ಲಿಯೂ ಲಭಿಸುತ್ತಲಿತ್ತು.

**ತೇನ ತಾ ವರ್ತಯಂತಿ ಸ್ಮ ಮುಖೇ ತ್ರೇತಾಯುಗಸ್ಯ ವೈ ।**
**ಹೃಷ್ಟ ಪುಷ್ಟಾಸ್ತಯಾ ಸಿದ್ಧ್ಯಾ ಪ್ರಜಾಸ್ತಾ ವಿಗತಜ್ವರಾಃ ॥ ೮೫ ॥**

**ತತಃ ಕಾಲಾಂತರೇಽಪ್ಯೇವಂ ಪುನರ್ಲೋಭಾವೃತಾಃ ಪ್ರಜಾಃ ।**
**ವೃಕ್ಷಾಂಸ್ತಾಃ ಪರ್ಯಗೃಹ್ಣಂತ ಮಧು ವಾ ಮಾಕ್ಷಿಕಂ ಬಲಾತ್ ॥ ೮೬ ॥**

**ತಾಸಾಂ ತೇನಾಪಚಾರೇಣ ಪುನರ್ಲೋಭಕೃತೇನ ವೈ ।**
**ಪ್ರಣಷ್ಟಾ ಮಧುನಾ ಸಾರ್ಧಂ ಕಲ್ಪವೃಕ್ಷಾಃ ಕ್ವಚಿತ್ಕ್ವಚಿತ್ ॥ ೮೭ ॥**

**ತಸ್ಯಾಮೇವಾಲ್ಪಶಿಷ್ಟಾಯಾಂ ಸಿದ್ಧ್ಯಾಂ ಕಾಲವಶಾತ್ತದಾ ।**
**ವರ್ತಂತೇ ಚಾಸಯಾ ತಾಸಾಂ ದ್ವಂದ್ವಾನ್ಯಭ್ಯುತ್ಥಿತಾನಿ ತು ॥ ೮೮ ॥**

**ಶೀತವಾತಾತಪಾಸ್ತೀವ್ರಾಸ್ತತಸ್ತಾ ದುಃಖಿತಾ ಭೃಶಮ್ ।**
**ದ್ವಂದ್ವೈಸ್ತೈಃ ಪೀಡ್ಯಮಾನಾಸ್ತು ಚಕ್ರುರಾವರಣಾನಿ ತು ॥ ೮೯ ॥**

---

೮೫. ತ್ರೇತಾಯುಗದ ಆದಿಯಲ್ಲಿ ಆ ಪ್ರಜೆಗಳು ಗೃಹಸಂಜ್ಞೆಯುಳ್ಳ ವೃಕ್ಷಗಳಿಂದ ಲಭಿಸಿದ ಮಧು ಮುಂತಾದ ವಸ್ತುಗಳ ಉಪಭೋಗದಿಂದ ತಮ್ಮ ಜೀವಿತವನ್ನು ಸಾಗಿಸುತ್ತಲಿದ್ದರು. ಮತ್ತು ಆ ಸಿದ್ಧಿವಿಶೇಷದಿಂದ ಯಾವ ವಿಧದ ಸಂತಾಪವೂ ಇಲ್ಲದೆ ಹೃಷ್ಟಪುಷ್ಟರಾಗಿದ್ದರು.

೮೬. ಹೀಗೆ ಕಾಲವು ಅತಿಕ್ರಮಿಸಿ ಹೋದಹಾಗೆಲ್ಲ ಮತ್ತೆ ಲೋಭವಶರಾಗಿ ಪ್ರಜೆಗಳು ಆ ವೃಕ್ಷಗಳಿಂದ ಬಲಾತ್ಕಾರವಾಗಿ ಜೇನುತುಪ್ಪವೆಂಬ ಮಧುವನ್ನು ಪರಿಗ್ರಹಿಸಿದರು.

೮೭. ಆದರೆ ಪುನಃ ಪುನಃ ಲೋಭಪಡುವುದೆಂಬ ಅಪಚಾರದಿಂದ ಮಧುಸಹಿತವಾಗಿ ಗೃಹಸಂಜ್ಞಕವಾದ ಕಲ್ಪವೃಕ್ಷಗಳೆಲ್ಲವೂ ಎಲ್ಲೆಲ್ಲಿಯೋ ಮಾಯವಾದವು.

೮೮. ಕಾಲವಶದಿಂದ ಸಿದ್ಧಿಯು ಕ್ಷೀಣವಾಗಿ ಅಲ್ಪಮಾತ್ರ ಅವಶೇಷವಾಗಿರುವಾಗ ಅದರ ಜೊತೆಗೆ ದ್ವಂದ್ವ ದುಃಖಗಳೆಲ್ಲವೂ ಅತಿಯಾಗಿ ಉದ್ಭವಿಸಿದವು.

೮೯. ದ್ವಂದ್ವ ದುಃಖಗಳು ಉತ್ಪತ್ತಿಯಾಗಲು ಶೀತ-ವಾತ-ಆತಪ (ಗಾಳಿ-ಮಳೆ-ಬಿಸಿಲು) ಗಳು ಸಹಿಸಲಾರದಷ್ಟು ಹುಟ್ಟಿ ಅವುಗಳನ್ನು ತಡೆಯಲಾರದೆ ಅತ್ಯಂತ ಪಿಡಿತರೂ ಖಿನ್ನರೂ ಆಗಿ ವಾಸಕ್ಕೆ ಆವರಣಗಳನ್ನು ಮಾಡಿಕೊಂಡರು.

**ಕೃತ್ವಾ ದ್ವಂದ್ವಪ್ರತೀಘಾತಂ ನಿಕೇತಾನಿ ವಿಚೇತಸಃ ।**
**ಪೂರ್ವಂ ನಿಕಾಮಚಾರಾಸ್ತೇ ಹ್ಯನಿಕೇತಾ ಯಥಾಽಭವನ್ ॥ ೯೦ ॥**

**ಯಥಾಯೋಗಂ ಯಥಾಪ್ರೀತಿ ನಿಕೇತೇಷ್ವವಸನ್ ಪುರಾ ।**
**ಮಧು ಧನ್ವತ್ಸು ವೃಕ್ಷೇಷು ಪರ್ವತೇಷು ನದೀಷು ಚ ॥ ೯೧ ॥**

**ಸಂಶ್ರಯಂತಿ ಚ ದುರ್ಗಾಣಿ ಧನ್ವ ಪಾರ್ವತಮೌದಕಮ್ ।**
**ಯಥಾಜೋಷಂ ಯಥಾಕಾಮಂ ಸಮೇಷು ವಿಷಮೇಷು ಚ ॥ ೯೨ ॥**

**ಆರಬ್ಧಾಸ್ತಾನ್ನಿಕೇತಾನ್ ವೈ ಕರ್ತುಂ ಶೀತೋಷ್ಣವಾರಣಾನ್ ।**
**ತತಸ್ತಾನ್ನಿರ್ಮಯಾಮಾಸುಃ ಖೇಟಾನಿ ಚ ಪುರಾಣಿ ಚ ॥ ೯೩ ॥**

---

೯೦. ಶೀತವಾತಾದಿ ದ್ವಂದ್ವಗಳನ್ನು ನಿವಾರಿಸುವ ಆವರಣರೂಪವಾದ ಗೃಹಗಳನ್ನು ದ್ವಂದ್ವ ದುಃಖ ಪೀಡಿತರಾದ ಪ್ರಜೆಗಳು ನಿರ್ಮಿಸಿದರು. ಈ ಗೃಹಾವರಣ ನಿರ್ಮಾಣಕ್ಕೆ ಮೊದಲು ಕಾಮಚಾರವುಳ್ಳವರೂ ಗೃಹವೆಂಬ ವಿಶೇಷಾಶ್ರಯಶೂನ್ಯರೂ ಆಗಿದ್ದರು.

೯೧. ತಮ್ಮ ಮನಸ್ಸಿಗೆ ಒಪ್ಪುವಂತೆ ತಮ್ಮ ಪ್ರೀತಿ ಸಾಧನವಾಗುವಂತೆ ರಚಿಸಿದ ಮನೆಗಳಲ್ಲಿ ಎಲ್ಲರೂ ಸುಖವಾಗಿ ವಾಸಮಾಡುತ್ತಿದ್ದರು. ಮತ್ತು ಆಕಸ್ಮಿಕವಾಗಿ ಅಲ್ಲಲ್ಲಿ ಸಿಕ್ಕುವ ಮಧುವನ್ನು ಪರಿಗ್ರಹಿಸಿ ವೃಕ್ಷ ಪರ್ವತ-ನದೀ ಪ್ರದೇಶಗಳನ್ನು ಆಶ್ರಯಿಸುತ್ತಲಿದ್ದರು.

೯೨. ಮತ್ತು ಮರುಭೂಮಿ-ಪರ್ವತ-ಜಲಮಯವಾದ ದುರ್ಗಭೂಮಿಗಳನ್ನು ಆಶ್ರಯಿಸುತ್ತ ತಮ್ಮ ಮನಸ್ಸು ಒಪ್ಪುವಂತೆ ಮತ್ತು ಆನಂದವಾಗುವಂತೆ ಸಮ-ವಿಷಮ ಭೂಮಿಗಳಲ್ಲಿ ಸಂಚರಿಸುತ್ತಿದ್ದರು.

೯೩. ಶೀತ-ಉಷ್ಣಗಳೆಂಬ ದ್ವಂದ್ವಗಳನ್ನು ನಿವಾರಿಸುವುದಕ್ಕೋಸ್ಕರ ನಿಕೇತನಗಳನ್ನು ಮಾಡಲಾರಂಭಿಸಿ ಕ್ರಮವಾಗಿ ಅನೇಕ ವಿಧವಾದ ಪಾಳ್ಯಗಳನ್ನೂ-ನಗರಗಳನ್ನೂ ರಚಿಸಿದರು.

ಗ್ರಾಮಾಂಶ್ಚೈವ ಯಥಾಭಾಗಂ ತಥೈವ ನಗರಾಣಿ ಚ ।
ತೇಷಾಮಾಯಾಮವಿಷ್ಕಂಭಾಃ ಸನ್ನಿವೇಶಾಂತರಾಣಿ ಚ ॥ ೯೪ ॥

ಚಕ್ರುಸ್ತದಾ ಯಥಾಪ್ರಜ್ಞಂ ಮಾತ್ವಾ ಮಾತ್ವಾऽತ್ಮನೋऽಂಗುಲೈಃ ।
ಮಾನಾರ್ಥಾನಿ ಪ್ರಮಾಣಾನಿ ತದಾ ಪ್ರಭೃತಿ ಚಕ್ರಿರೇ ॥ ೯೫ ॥

ಯವಾಂಗುಲಪ್ರದೇಶಾಂಸ್ತ್ರೀನ್ ಹಸ್ತಕಿಷ್ಕುಧನೂಂಷಿ ಚ ।
ದಶ ತ್ವಂಗುಲಪರ್ವಾಣಿ ಪ್ರಾದೇಶ ಇತಿ ಸಂಜ್ಞಿತಃ ॥ ೯೬ ॥

ಅಂಗುಷ್ಠಸ್ಯ ಪ್ರದೇಶಿನ್ಯಾ ವ್ಯಾಸಃ ಪ್ರಾದೇಶ ಉಚ್ಯತೇ ।
ತಾಲಃ ಸ್ಮೃತೋ ಮಧ್ಯಮಯಾ ಗೋಕರ್ಣಶ್ಚಾಪ್ಯನಾಮಯಾ ॥೯೭॥

---

೯೪. ಹಾಗೂ ಗ್ರಾಮ-ನಗರಗಳನ್ನು ಯಾವವಿಧದ ಬಾಧೆಯೂ ಏರ್ಪಡದಂತೆ ಇರಬೇಕಾದ ನಿಯಮದಂತೆ ನಿರ್ಮಿಸಿ ಆ ಗ್ರಾಮ ನಗರಗಳ ಆಯಾಮ (ದೀರ್ಘತ್ವ) ವಿಷ್ಕಂಭ (ವಿಸ್ತಾರ) ವೆಂಬ ಪರಿಮಾಣಗಳಿಗೆ ತಕ್ಕಂತೆ ಸನ್ನಿವೇಶಗಳನ್ನು ರಚಿಸಿ ಕೊಂಡರು.

೯೫. ಈ ವಾಸ್ತುರಚನಾಪ್ರಸಂಗದಲ್ಲಿ ಪ್ರಜೆಗಳು ತಮ್ಮ ಅಂಗುಲಗಳಿಂದ ತಮ್ಮ ಜ್ಞಾನಶಕ್ತಿಯನ್ನು ಅನುಸರಿಸಿ ವಾಸ್ತುಭೂಮಿಯನ್ನು ಅಳೆದರು. ಆ ಮೊದಲು ಗೊಂಡು ಅಂಗುಲ ಮೊದಲಾದ ಅಳತೆಯನ್ನು ತೋರಿಸುವ ಪ್ರಮಾಣಗಳ ಅನೇಕ ಸಂಪ್ರದಾಯಗಳನ್ನು ತಂದರು.

೯೬. ಈ ಅಳತೆಗಳು ಯವ, ಅಂಗುಲ, ಪ್ರದೇಶ, ಹಸ್ತ, ಕಿಷ್ಕು, ಧನುಃ— ಎಂದು ಮೊದಲಾಗಿ ನಾನಾ ವಿಧವಾದ ಹೆಸರನ್ನು ಹೊಂದಿವೆ. ಹತ್ತು ಅಂಗುಲ ಪರಿಮಾಣಕ್ಕೆ ಪ್ರಾದೇಶವೆಂದು ಹೆಸರು.

೯೭. ಅಂಗುಷ್ಠವನ್ನೂ ಪ್ರದೇಶಿನೀ ಬೆರಳನ್ನೂ ನೆಲದ ಮೇಲೆ ವಿಸ್ತಾರವಾಗಿಟ್ಟರೆ ಆ ಪರಿಮಾಣವು ಪ್ರಾದೇಶವೆಂದೆನಿಸುವುದು. ಹಾಗೆಯೇ ಅಂಗುಷ್ಠ-ಮಧ-ಮಾ ಬೆರಳುಗಳ ವಿಸ್ತಾರ ಪರಿಮಾಣವು ತಾಳ ವೆಂದೂ ಅಂಗುಷ್ಠ ಅನಾಮಿಕಾ ಬೆರಳು ಗಳ ಪರಿಮಾಣವು ಗೋಕರ್ಣವೆಂದೂ ಕರೆಯಲ್ಪಡುವುವು. ಅಂಗುಷ್ಠ=ಹೆಬ್ಬೆರಳು, ಪ್ರದೇಶಿನೀ=ಅದರ ಹತ್ತಿನ ಬೆರಳು, ಮಧ್ಯಮಾ=ಮಧ್ಯದ ಬೆರಳು, ಅನಾಮಿಕಾ=

ಕನಿಷ್ಠಯಾ ವಿತಸ್ತಿಸ್ತು ದ್ವಾದಶಾಂಗುಲ ಉಚ್ಯತೇ ।
ರತ್ನಿರಂಗುಲಪರ್ವಾಣಿ ಸಂಖ್ಯಯಾ ತ್ವೇಕವಿಂಶತಿಃ ॥ ೯೮ ॥

ಚತ್ವಾರಿ ವಿಂಶತಿಶ್ಚೈವ ಹಸ್ತಃ ಸ್ಯಾದಂಗುಲಾನಿ ತು ।
ಕಿಷ್ಕುಃ ಸ್ಮೃತೋ ದ್ವಿರತ್ನಿಸ್ತು ದ್ವಿಚತ್ವಾರಿಂಶದಂಗುಲಃ ॥ ೯೯ ॥

ಚತುರ್ಹಸ್ತೋ ಧನುರ್ದಂಡೋ ನಾಲಿಕಾ ಯುಗಮೇವ ಚ ।
ಧನುಃಸಹಸ್ರೇ ದ್ವೇ ತತ್ರ ಗವ್ಯೂತಿಸ್ತೈಃ ಕೃತಾ ತದಾ ॥ ೧೦೦ ॥

ಅಷ್ಟೌ ಧನುಃಸಹಸ್ರಾಣಿ ಯೋಜನಂ ತೈರ್ವಿಭಾವಿತಮ್ ।
ಏತೇನ ಯೋಜನೇನೇಹ ಸನ್ನಿವೇಶಾಸ್ತತಃ ಕೃತಾಃ ॥ ೧೦೧ ॥

---

ಉಂಗುರದ ಬೆರಳು, ಕನಿಷ್ಠಿಕಾ=ಕಿರಿಬೆರಳು ಹೀಗೆ ಬೆರಳುಗಳನ್ನು ಬೋಧಿಸುವ ಸಂಸ್ಕೃತದ ಪರ್ಯಾಯ ನಾಮಗಳು.

೯೮. ಅಂಗುಷ್ಠ ಮತ್ತು ಕನಿಷ್ಠಿಕಾ ಬೆರಳುಗಳ ವಿಸ್ತಾರ ಪರಿಮಾಣವು ವಿತಸ್ತಿಯೆಂದು ಹೇಳಲ್ಪಡುವುದು. ಅದು ಹನ್ನೆರಡು ಅಂಗುಲ ಪ್ರಮಾಣವುಳ್ಳದ್ದು. ಇಪ್ಪತ್ತೊಂದು ಅಂಗುಲ ಪರಿಮಾಣವನ್ನು ರತ್ನಿಯೆಂದು ಹೇಳುವರು.

೯೯. ಇಪ್ಪತ್ತನಾಲ್ಕು ಅಂಗುಲ ಪರಿಮಾಣವನ್ನು ಹಸ್ತವೆಂದೂ ಹಿಂದೆ ಹೇಳಿದ ಇಪ್ಪತ್ತೊಂದು ಅಂಗುಲ ಪರಿಮಾಣದ ರತ್ನಿ ಎಂಬುದು ದ್ವಿಗುಣಿತವಾದರೆ ಆ ರತ್ನಿದ್ವಯ ಪರಿಮಾಣವನ್ನು ಕಿಷ್ಕುವೆಂದೂ ಕರೆಯುವರು.

೧೦೦. ಹಿಂದೆ ಹೇಳಿದ ಹಸ್ತ ಪರಿಮಾಣವು ಚತುರ್ಗುಣವಾದರೆ ಧನುಃಪರಿಮಾಣವೂ, ಆ ಧನುಃಪರಿಮಾಣವು ದ್ವಿಗುಣಿತವಾದರೆ ನಾಲಿಕಾ ಎಂಬ ಪರಿಮಾಣವೂ ಆಗುವುವು. ಧನುಃ ಪರಿಮಾಣಗಳು ಎರಡುಸಾವಿರ ಸೇರಿ ಅದರಿಂದ ಗವ್ಯೂತಿ ಎಂಬ ಪರಿಮಾಣವು ಏರ್ಪಡುವುದು.

೧೦೧. ಎಂಟುಸಾವಿರ ಧನುಃ ಪರಿಮಾಣಗಳು ಸೇರಿ ಯೋಜನವೆಂದು ಕರೆಯಲ್ಪಡುವ ಮಹಾಪರಿಮಾಣವು ಕ್ಲುಪ್ತವಾಗುವುದು. ಈ ವಿಧವಾಗಿ ಪರಿಮಾಣಗಳ ಸಂಬಂಧದಿಂದ ನಾನಾ ವಿಧದ ಸನ್ನಿವೇಶಗಳು ರಚಿಸಲ್ಪಟ್ಟವು.

ಚತುರ್ಣಾಮಥ ದುರ್ಗಾಣಾಂ ಸ್ವಯಮುತ್ಥಾನಿ ತ್ರೀಣಿ ಚ ।
ಚತುರ್ಥಂ ಕೃತ್ರಿಮಂ ದುರ್ಗಂ ತಸ್ಯ ವಕ್ಷ್ಯಾಮಿ ನಿರ್ಣಯಮ್ ॥೧೦೨॥

ಸೋತ್ಸೇಧರಂಧ್ರಪ್ರಾಕಾರಂ ಸರ್ವತಃ ಖಾತಕಾವೃತಮ್ ।
ರುಚಕಃ ಪ್ರತಿಕದ್ವಾರಂ ಕುಮಾರೀಪುರಮೇವ ಚ ॥ ೧೦೩ ॥

ದ್ವಿಹಸ್ತಃ ಸ್ರೋತಸಾ ಶ್ರೇಷ್ಠಂ ಕುಮಾರೀಪುರಮುಂಚತಾನ್ ।
ಹಸ್ತಸ್ರೋತೋ ದಶಶ್ರೇಷ್ಠೋ ನವಹಸ್ತೋಽಷ್ಟ ಏವ ಚ ॥ ೧೦೪ ॥

ಖೇಟಾನಾಂ ಚ ಪುರಾಣಾಂ ಚ ಗ್ರಾಮಾಣಾಂ ಚೈವ ಸರ್ವಶಃ ।
ತ್ರಿವಿಧಾನಾಂ ಚ ದುರ್ಗಾಣಾಂ ಪರ್ವತೋದಕಧನ್ವಿನಾಮ್ ॥ ೧೦೫ ॥

ಕೃತ್ರಿಮಾಣಾಂ ಚ ದುರ್ಗಾಣಾಂ ವಿಷ್ಕಂಭಾಯಾಮಮೇವ ಚ ।
ಯೋಜನಾದರ್ಧವಿಷ್ಕಂಭಮಷ್ಟಭಾಗಾಧಿಕಾಯತಮ್ ॥ ೧೦೬ ॥

---

೧೦೨. ಈ ವಿಧವಾಗಿ ಕಲ್ಪಿಸಲ್ಪಟ್ಟ ದುರ್ಗಗಳು ನಾಲ್ಕು ಸಂಖ್ಯೆಯಿಂದಿವೆ. ಅವುಗಳಲ್ಲಿ ಮೂರು ದುರ್ಗಗಳು ತನ್ನಷ್ಟಕ್ಕೆ ಉದ್ಭವಿಸಿದವು. ನಾಲ್ಕನೆಯ ದುರ್ಗವು ಕೃತ್ರಿಮವು. ಆ ದುರ್ಗದ ಸನ್ನಿವೇಶವನ್ನು ವಿವರಿಸುವೆನು.

೧೦೩. ಆ ದುರ್ಗವು ಉನ್ನತಿ, ಒಳಗಿನ ವಿಸ್ತಾರವಾದ ಅವಕಾಶ, ಸುತ್ತಲೂ ಪ್ರಾಕಾರಗಳಿಂದ ಕೂಡಿದುದಾಗಿಯೂ ಇರುವುದು. ಅದರಲ್ಲಿ ಕುಮಾರೀಪುರವೆಂಬುದು ಒಂದು ಭಾಗ. ಅದು ಕರ್ಣಾಭರಣದಂತೆ ರಾಜಿಸುವ ದ್ವಾರದಿಂದ ಶೋಭಿತವಾಗಿರುವುದು.

೧೦೪-೧೦೫. ಹಿಂದೆ ಹೇಳಿದ ಕುಮಾರೀ ಪುರವು ಹಸ್ತದ್ವಯಪರಿಮಾಣದ ಪ್ರವಾಹದಿಂದ ಆವೃತವಾಗಿ ಶ್ರೇಷ್ಠವಾಗಿದೆ. ಪಾಳ್ಯ, ಪಟ್ಟಣ, ಗ್ರಾಮಗಳ ಸುತ್ತಲೂ ಇರುವ ಸ್ರೋತಃ ಪರಿಮಾಣವು ಹತ್ತು, ಒಂಭತ್ತು ಮತ್ತು ಎಂಟು ಹಸ್ತಪರಿಮಾಣದಿಂದಿರಬೇಕಾದುದು ಅತ್ಯುತ್ತಮವು. ಮತ್ತು ಪರ್ವತ, ನೀರು, ಮರುಭೂಮಿ ಎಂಬ ವಿವಿಧ ದುರ್ಗಭೂಮಿಗಳ ಪರಿಣಾಮವು ಇದರ ಪರಿಮಾಣವನ್ನು ಹೊಂದಿರುವುದು.

೧೦೬. ಕೃತ್ರಿಮವಾದ ದುರ್ಗಭೂಮಿಗಳ ದೀರ್ಘ ಮತ್ತು ವಿಸ್ತಾರ ಪರಿಮಾಣಗಳು ಯೋಜನಪರಿಮಿತವಾಗಿರಬೇಕು. ವಿಸ್ತಾರಪರಿಮಾಣಕ್ಕಿಂತ ಎಂಟು ಭಾಗಗಳು ಹೆಚ್ಚಾಗಿ ದೀರ್ಘಪರಿಮಾಣವಿರಬೇಕು.

**ಪುರಮರ್ಧಾರ್ಧನಾಯಾಮಾ ಪ್ರಾಗುದಕ್ಪ್ಲವಸಂ ಪುರಮ್ ।**
**ಭಿನ್ನಕರ್ಣವಿಕರ್ಣಂ ಚ ವ್ಯಜನಾಕೃತಿಸಂಸ್ಥಿತಮ್ ॥ ೧೦೭ ॥**

**ವೃತ್ತಂ ವಜ್ರಂ ಚ ದೀರ್ಘಂ ಚ ನಗರಂ ನ ಪ್ರಶಸ್ಯತೇ ।**
**ಚತುರಸ್ರಯುತಂ ದಿವ್ಯಂ ಪ್ರಶಸ್ತಂ ತೈಃ ಪುರಂ ಕೃತಮ್ ॥ ೧೦೮ ॥**

**ಚತುರ್ವಿಂಶತ್ಪರಂ ಹ್ರಸ್ವಂ ವಾಸ್ತು ವಾಷ್ಟಶತಂ ಪರಮ್ ।**
**ಅತ್ರ ಮಧ್ಯಂ ಪ್ರಶಂಸಂತಿ ಹ್ರಸ್ವಂ ಕಾಷ್ಠವಿವರ್ಜಿತಮ್ ॥ ೧೦೯ ॥**

**ಅಥ ಕಿಷ್ಕುಶತಾನ್ಯಷ್ಟೌ ಪ್ರಾಹುರ್ಮುಖ್ಯಂ ನಿವೇಶನಮ್ ।**
**ನಗರಾದರ್ಧವಿಷ್ಕಂಭಃ ಖೇಟಂ ಪಾನಂ ತದೂರ್ಧ್ವತಃ ॥ ೧೧೦ ॥**

---

೧೦೭-೧೦೮. ನಗರವು ಪೂರ್ವ ಮತ್ತು ಉತ್ತರ ದಿಕ್ಕುಗಳಲ್ಲಿ ಹರಿದುಹೋಗುವಂತೆ ಅಭಿವೃದ್ಧಿಯುಳ್ಳದ್ದಾಗಿಯೂ ದುರ್ಗದ ಪರಿಣಾಮಕ್ಕಿಂತ ಅರ್ಧಪ್ರಮಾಣವುಳ್ಳದ್ದಾಗಿಯೂ ಇರುವುದು. ಕತ್ತರಿಸಿದಂತೆ ಬೇರೆಯಾಗಿ ತೋರುವ ಕರ್ಣ-ವಿಕರ್ಣ-(ಕೋಣಭಾಗ) ಗಳಿಂದಲೂ, ಬೀಸಣಿಗೆಯ ಆಕಾರದಿಂದಲೂ, ವೃತ್ತಾಕಾರದಿಂದಲೂ, ಕಾಮನ ಬಿಲ್ಲಿನ ಆಕಾರದಿಂದಲೂ, ದೀರ್ಘಾಕಾರದಿಂದಲೂ ಕೂಡಿರುವ ನಗರವು ವಾಸಕ್ಕೆ ಪಶಸ್ತವಲ್ಲ. ಅಂತಹ ನಗರ ರಚನೆಯನ್ನು ಮಾಡಿಸಕೂಡದು. ಚತುರಸ್ರಾಕಾರದಿಂದ ಕೂಡಿದ ಪುರವು ದಿವ್ಯವೂ ಮಂಗಳಕರವೂ ಆಗಿರುವುದು. ಆ ಪ್ರಜೆಗಳು ಅಂತಹ ದಿವ್ಯವಾದ ನಗರವನ್ನು ಕಲ್ಪಿಸಿಕೊಂಡರು.

೧೦೯. ಈ ಪಟ್ಟಣಗಳಲ್ಲಿ ಅನೇಕ ವಾಸ್ತು (ಗೃಹ) ಗಳು ರಚಿಸಲ್ಪಡಬೇಕು. ಆ ವಾಸ್ತುಗಳ ಪರಿಮಾಣವು ಇಪ್ಪತ್ತನಾಲ್ಕು ಹ್ರಸ್ವ ಪರಿಮಾಣ ಮೊದಲ್ಗೊಂಡು ಒಂದುನೂರ ಎಂಟು ಪರಿಮಾಣದವರೆಗಿರಬಹುದು. ಕಾಷ್ಠ ವರ್ಜಿತವಾದ ಹ್ರಸ್ವವಾದ ವಾಸ್ತುಗಳನ್ನು ಪ್ರಶಸ್ತವಾದುದೆಂದು ಹೇಳುತ್ತಾರೆ.

೧೧೦. ಎಂಟುನೂರು ಕಿಷ್ಕುಪ್ರಮಾಣದಿಂದ ಕೂಡಿರುವ ನಿವೇಶನವನ್ನು ಮುಖ್ಯವೆಂದು ವಾಸ್ತು ಶಾಸ್ತ್ರಜ್ಞರು ಹೇಳುತ್ತಾರೆ. ನಗರದ ವಿಷ್ಕಂಭಕ್ಕಿಂತ ಅರ್ಧಮಾತ್ರ ಖೇಟವಿಷ್ಕಂಭವೂ ಅದಕ್ಕಿಂತ ಅರ್ಧಮಾತ್ರ ಗ್ರಾಮವಿಷ್ಕಂಭವೂ ಇರುವುದು. ನಗರ-ಖೇಟ-ಗ್ರಾಮಗಳ ವಿಷ್ಕಂಭಪರಿಮಾಣಗಳು ಒಂದಕ್ಕಿಂತ ಅರ್ಧ ಪ್ರಮಾಣದಷ್ಟು ನ್ಯೂನವಾಗಿರುವುದು.

**ನಗರಾದ್ಯೋಜನಂ ಖೇಟಂ ಖೇಟಾದ್ಗ್ರಾಮೋಽರ್ಧಯೋಜನಮ್ ।**
**ದ್ವಿಕ್ರೋಶಃ ಪರಮಾ ಸೀಮಾ ಕ್ಷೇತ್ರಸೀಮಾ ಚತುರ್ಧನುಃ ॥ ೧೧೧ ॥**

**ವಿಂಶದ್ಧನೂಂಷಿ ವಿಸ್ತೀರ್ಣೋ ದಿಶಾಂ ಮಾರ್ಗಸ್ತು ತೈಃ ಕೃತಃ ।**
**ವಿಂಶದ್ಧನುರ್ಗ್ರಾಮಮಾರ್ಗಃ ಸೀಮಾಮಾರ್ಗೋ ದಶೈವ ತು ॥೧೧೨॥**

**ಧನೂಂಷಿ ದಶ ವಿಸ್ತೀರ್ಣಃ ಶ್ರೀಮಾನ್ ರಾಜಪಥಃ ಕೃತಃ ।**
**ನೃವಾಜಿರಥನಾಗಾನಾಮಸಂಬಾಧಸ್ತು ಸಂಚರಃ ॥ ೧೧೩ ॥**

**ಧನೂಂಷಿ ಚಾಪಿ ಚತ್ವಾರಿ ಶಾಖಾರಥ್ಯಾಶ್ಚ ತೈರ್ಮಿತಾಃ ।**
**ತ್ರಿಕಾ ರಥ್ಯೋಪರಥ್ಯಾಃ ಸ್ಯುರ್ದ್ವಿಕಾಶ್ಚಾಪ್ಯುಪರಥ್ಯಕಾಃ ॥ ೧೧೪ ॥**

---

೧೧೧. ನಗರಕ್ಕಿಂತ ಒಂದು ಕ್ರೋಶ ದೂರದಲ್ಲಿ ಖೇಟವು ಇರಬೇಕಾದುದು. ಹಾಗೆ ಖೇಟದಿಂದ ಮುಂದೆ ಅರ್ಧ ಯೋಜನ ದೂರದಲ್ಲಿ ಗ್ರಾಮವು ಇರಬೇಕಾದುದು. ನಗರ, ಗ್ರಾಮ, ಅಥವಾ ಖೇಟಗಳ ಪ್ರತಿಯೊಂದು ಎಲ್ಲೆಯೂ ಎರಡು ಕೋಶಗಳ ದೂರದಲ್ಲಿ ಇರಬೇಕು. ಆದರೆ ಕ್ಷೇತ್ರಗಳ ಎಲ್ಲೆಯು ಮಾತ್ರ ನಾಲ್ಕು ಧನುಃ ಪರಿಮಾಣದೂರದಲ್ಲಿ ಇರುವುದು.

೧೧೨. ನಗರಗಳಲ್ಲಿ ಸೇರಿರುವ ನಾಲ್ಕು ದಿಕ್ಕುಗಳಲ್ಲಿ ಪ್ರಧಾನವಾದ ರಸ್ತೆಗಳು ಇಪ್ಪತ್ತು ಧನುಃ ಪರಿಮಾಣ ವಿಸ್ತೀರ್ಣವಾಗಿ ಆ ಪ್ರಜೆಗಳಿಂದ ರಚಿಸಲ್ಪಟ್ಟಿತು. ಗ್ರಾಮದ ಮಾರ್ಗವು ಇಪ್ಪತ್ತು ಧನುಃ ಪರಿಮಾಣದಿಂದ ಕೂಡಿರುವುದೂ ಗಡಿಯ ಮಾರ್ಗವು ಹತ್ತು ಧನುಃ ಪರಿಮಾಣದಿಂದ ಕೂಡಿರುವುದೂ ಆಗಿದೆ.

೧೧೩. ಸೌಂದರ್ಯದಿಂದ ರಾಜಿಸುವ ರಾಜಮಾರ್ಗವು ಅಲ್ಲಿ ಸಂಚರಿಸುವ ಮುಖ್ಯರಾದ ಪೌರ ಜನ, ಕುದುರೆ, ರಥ, ಆನೆ ಇವುಗಳಿಗೆ ಯಾವ ಆತಂಕವೂ ಒದಗದಂತೆ ಹತ್ತು ಧನುಃ ಪ್ರಮಾಣದಲ್ಲಿ ವಿಸ್ತೀರ್ಣವಾಗಿ ರಚಿಸಲ್ಪಟ್ಟಿತು.

೧೧೪. ಮತ್ತು ರಾಜ ಮಾರ್ಗಗಳಿಂದ ಸಂಬಂಧಸಿರುವ ಶಾಖಾರಸ್ತೆಗಳು ನಾಲ್ಕು ಧನುಃ ಪ್ರಮಾಣ ಪರಿಮಿತಗಳಾಗಿಯೂ ಅದನ್ನು ಸಂಬಂಧಿಸಿ ಹೊರಡುವ ರಥ್ಯೋಪರಥ್ಯೆಗಳು ಮೂರು ಧನುಃ ಪ್ರಮಾಣ ಪರಿಮಿತಗಳಾಗಿಯೂ ಉಪರಥ್ಯೆಗಳು ಎರಡು ಧನುಃ ಪ್ರಮಾಣವಲ್ಲಿಯೂ ಇರುವುವು. ಇಲ್ಲಿ ರಾಜ ಮಾರ್ಗವನ್ನು ಬಿಟ್ಟು ಉಳಿದ ಮೈನ್ ರಸ್ತೆಗಳನ್ನೂ ಕ್ರಾಸ್ ರಸ್ತೆಗಳನ್ನೂ ಗಲ್ಲಿಗಳನ್ನೂ ಆಯಾಯ ಸಂಸ್ಕೃತ ಸಂಕೇತ ಶಬ್ದಗಳಿಂದ ವ್ಯವಹರಿಸಿದೆ.

ಜಂಘಾಪಥಶ್ಚ ತುಷ್ಪಾದಸ್ತ್ರಿಪದಂ ಓ ಗೃಹಾಂತರಮ್ ।
ಧೃತಿಮಾರ್ಗಸ್ತ್ವರ್ಧ್ವಷಷ್ಠಂ ಕ್ರಮಶಃ ಪದಿಕಃ ಸ್ಮೃತಃ ॥ ೧೧೫ ॥

ಅವಸ್ಕಾರಪರೀವಾರಃ ಪಾದಮಾತ್ರಂ ಸಮಂತತಃ ।
ಕೃತೇಷು ತೇಷು ಸ್ಥಾನೇಷು ಪುಸರ್ಗೇಽಹಗೃಹಾಣಿ ವೈ ॥ ೧೧೬ ॥

ಯಥಾ ತೇ ಪೂರ್ವಮಾಸಂಶ್ಚ ವೃಕ್ಷಾಸ್ತು ಗೃಹಸಂಸ್ಥಿತಾಃ ।
ತಥಾ ಕರ್ತುಂ ಸಮಾರಬ್ಧಾಶ್ಚಿಂತಯಿತ್ವಾ ಪುನಃ ಪುನಃ ॥ ೧೧೭ ॥

ವೃಕ್ಷಸ್ಯಾರ್ವಾಗ್ಗತಾಃ ಶಾಖಾ ಇತಶ್ಚೈವಾಪರಾ ಗತಾಃ ।
ಅತ ಊರ್ಧ್ವಂ ಗತಾಶ್ಚಾನ್ಯಾ ಏವಂ ತಿರ್ಯಗ್ಗತಾಃ ಪರಾಃ ॥ ೧೧೮ ॥

---

೧೧೫. ಜಂಘೂಪಥ ಅಥವಾ ಓಣಿಗಳು ನಾಲ್ಕು ಹೆಜ್ಜೆಗಳ ಪ್ರಮಾಣವುಳ್ಳವುಗಳಾಗಿಯೂ ಬೀದಿಗಳಿಗೂ ಮನೆಗಳ ಶ್ರೇಣಿಗೂ ಇರುವ ಅಂತರವು ಮೂರು ಹೆಜ್ಜೆಗಳುಳ್ಳದ್ದಾಗಿಯೂ ಧೃತಿಮಾರ್ಗ ಅಥವಾ ಫುಟ್‌ಪಾತ್ ಎಂದು ಕರೆಯಲ್ಪಡುವ ದಾರಿಯು ಸ್ವಲ್ಪ ಎತ್ತರದಲ್ಲಿ ಆರು ಹೆಜ್ಜೆಗಳ ವಿಸ್ತೀರ್ಣವೂ ಮಿಕ್ಕ ಸಮಸ್ತ ಮಾರ್ಗಗಳು ಒಂದು ಹೆಜ್ಜೆಯ ಕಾಲುದಾರಿಯಾಗಿಯೂ ಇದ್ದವು.

೧೧೬. ಸುತ್ತಲೂ ಕಸಕಡ್ಡಿಗಳಿಂದ ತುಂಬಿ ನೀರು ಹರಿಯುವ ಚರಂಡಿಗಳು ಒಂದು ಹೆಜ್ಜೆಯ ಪರಿಮಾಣದಿಂದ ಕೂಡಿರುವುವು. ಈ ರೀತಿಯಾಗಿ ವಾಸ್ತುಶಿಲ್ಪ ಲಕ್ಷಣವನ್ನು ಸಂಗ್ರಹವಾಗಿ ಇಲ್ಲಿ ಸೂಚಿಸಿರುತ್ತದೆ. ಇದರಂತೆ ಪ್ರಜೆಗಳು ಮತ್ತೆ ವಾಸಯೋಗ್ಯವಾದ ಗೃಹಸ್ಥಾನಗಳನ್ನು ನಿರ್ಮಿಸಿಕೊಂಡರು.

೧೧೭. ಹಿಂದೆ ಗೃಹಳಂತಿದ್ದ ಕೇವಲ ವೃಕ್ಷಗಳ ಅಧೋಭಾಗದಲ್ಲಿ ವಾಸ ಮಾಡಿದ್ದರಿಂದ ಹೇಗೆ ವೃಕ್ಷಗಳು ಗೃಹಗಳಾಗಿದ್ದವೋ ಮತ್ತೆ ಮತ್ತೆ ಯೋಚಿಸಿ ಅದರಂತೆ ವೃಕ್ಷಗಳಿಂದಲೇ ಮನೆಗಳನ್ನು ರಚನೆಮಾಡಲು ಉಪಕ್ರಮಿಸಿದರು.

೧೧೮. ಆ ಪ್ರಜೆಗಳ ಚಿಂತೆಗನುಗುಣವಾಗಿ ವೃಕ್ಷಗಳ ಶಾಖೆಗಳು ಕೆಲವು ಕೆಳಕ್ಕೆ ಇಳಿದವುಗಳಾಗಿಯೂ ಮತ್ತೆ ಕೆಲವು ಯಥಾಸ್ಥಿತವಾಗಿ ವಿಸ್ತೀರ್ಣಗಳಾಗಿಯೂ, ಇನ್ನು ಕೆಲವು ಊರ್ಧ್ವಭಾಗಕ್ಕೆ ವ್ಯಾಪಿಸಿದವುಗಳಾಗಿಯೂ, ಉಳಿದ ಮತ್ತೆ ಕೆಲವು ಶಾಖೆಗಳು ಅಡ್ಡವಾಗಿ ಬೆಳೆದವುಗಳಾಗಿಯೂ ಇದ್ದವು.

ಬುದ್ಧ್ಯಾನ್ವಿಷ್ಯ ಯಥಾನ್ಯಾಯಂ ವೃಕ್ಷಶಾಖಾ ಗತಾ ಯಥಾ ।
ಯಥಾ ಕೃತಾಸ್ತು ತೈಃ ಶಾಖಾಸ್ತಸ್ಮಾಚ್ಛಾಲಾಸ್ತು ತಾಃ ಸ್ಮೃತಾಃ ॥೧೧೯॥

ಏವಂ ಪ್ರಸಿದ್ಧಾಃ ಶಾಖಾಭ್ಯಃ ಶಾಲಾಶ್ಚೈವ ಗೃಹಾಣಿ ಚ ।
ತಸ್ಮಾತ್ತಾಶ್ಚ ಸ್ಮೃತಾಃ ಶಾಲಾಃ ಶಾಲಾತ್ವಂ ತಾಸು ತತ್ ಸ್ಮೃತಮ್ ॥ ೧೨೦ ॥

ಪ್ರಸೀದಂತಿ ಯತಸ್ತೇಷು ತತಃ ಪ್ರಾಸಾದಸಂಜ್ಞಿತಃ ।
ತಸ್ಮಾದ್ಗೃಹಾಣಿ ಶಾಲಾಶ್ಚ ಪ್ರಾಸಾದಾಶ್ಚೈವ ಸಂಜ್ಞಿತಾಃ ॥ ೧೨೧ ॥

ಕೃತ್ವಾ ದ್ವಂದ್ವಾಭಿಘಾತಾಂಸ್ತಾನ್ವಾರ್ತೋಪಾಯಮಚಿಂತಯನ್
ನಷ್ಟೇಷು ಮಧುನಾ ಸಾರ್ಧಂ ಕಲ್ಪವೃಕ್ಷೇಷು ವೈ ತದಾ ॥ ೧೨೨ ॥

ವಿಷಾದವ್ಯಾಕುಲಾಸ್ತಾ ವೈ ಪ್ರಜಾಃ ಸೃಷ್ಟಾಸ್ತುದರ್ಶಿತಾಃ ।
ತತಃ ಪ್ರಾದುರ್ಬಭೌ ತಾಸಾಂ ಸಿದ್ಧಿಸ್ತ್ರೇತಾಯುಗೇ ತದಾ ॥ ೧೨೩ ॥

---

೧೧೯. ಆ ಶಾಖೆಗಳನ್ನು ಸರ್ವ ಭಾಗಗಳಲ್ಲಿಯೂ ಪ್ರಸರಿಸಿರುವುದನ್ನು ಕಂಡು ತಮ್ಮ ಸೂಕ್ಷ್ಮಬುದ್ಧಿಯನ್ನು ಉಪಯೋಗಿಸಿ ಅದಕ್ಕೆ ಅನುಗುಣವಾಗಿ ಶಾಲೆಗಳ ಆಕಾರಬರುವಂತೆ ಆ ಶಾಖೆಗಳನ್ನು ಜೋಡಿಸಿಕೊಂಡರು.

೧೨೦. ಹೀಗೆ ವೃಕ್ಷಶಾಖೆಗಳಿಂದ ಪ್ರಜೆಗಳು ಗೃಹರೂಪವಾದ ಶಾಲೆಗಳನ್ನು ನಿರ್ಮಿಸಿಕೊಂಡರು. ಆದುದರಿಂದ ಶಾಲಾ ಎಂಬ ಸಂಕೇತವು ಆ ಗೃಹಗಳಿಗೆ ಉಂಟಾಯಿತು.

೧೨೧. ಆ ಶಾಲೆಗಳಲ್ಲಿ ಪ್ರಜೆಗಳು ಸೌಖ್ಯದಿಂದ ವಾಸಮಾಡುತ್ತ ಮನಸ್ಸಿನಲ್ಲಿ ಪ್ರಸನ್ನರಾಗಿರುವುದರಿಂದ ಮನಸ್ಸಿಗೆ ಪ್ರಸಾದವನ್ನು ಕೊಟ್ಟಿರುವ ಈ ಗೃಹಗಳಿಗೆ ಪ್ರಾಸಾದವೆಂಬ ಪ್ರಸಿದ್ಧಿಯು ಪ್ರಾಪ್ತವಾಯಿತು.

೧೨೨. ಶೀತಾತಪ ಮೊದಲಾದ ದ್ವಂದ್ವಪೀಡೆಯನ್ನು ನಿವಾರಣ ಮಾಡಲು ಈ ಗೃಹರೂಪವಾದ ಆಶ್ರಯವನ್ನು ಏರ್ಪಡಿಸಿಕೊಂಡು ಅಲ್ಲಿ ವಾಸಮಾಡುತ್ತ ಕಲ್ಪ ವೃಕ್ಷಗಳು ಮಧುಸಹಿತವಾಗಿ ನಾಶಹೊಂದಿರಲು ಮುಂದೆ ಜೀವನಾಧಾರ ಸಾಮಗ್ರಿಯನ್ನು ಚಿಂತಿಸಿದರು.

೧೨೩. ಸೃಷ್ಟಿಸಲ್ಪಟ್ಟ ಪ್ರಜೆಗಳು ಚಿಂತಾವ್ಯಾಕುಲರಾಗಿರುವಾಗ ಆ ತ್ರೇತಾ ಯುಗದಲ್ಲಿ ಅವರ ಒಂದು ಸಿದ್ಧಿಯು ಪ್ರಾದುರ್ಭವಿಸಿತು.

ಸರ್ವಾರ್ಥಸಾಧಕಾ ಹ್ಯಾಸ್ಯಾ ವೃಷ್ಟಿಸ್ತಾಸಾಂ ನಿಕಾಮತಃ ।
ತಾಸಾಂ ವೃಷ್ಟ್ಯುದಕಾನೀಹ ಯಾನಿ ಮಿಷ್ಟಗತಾನಿ ಚ ॥ ೧೨೪ ॥

ಏವಂ ನಯಃ ಪ್ರವೃತ್ತಸ್ತು ದ್ವಿತೀಯೇ ವೃಷ್ಟಿಸರ್ಜನೇ ।
ಯೇ ಪರಸ್ತಾದಪಾಂ ಸ್ತೋಕಾಃ ಸಂಪಾತಾಃ ಪೃಥಿವೀತಲೇ ॥ ೧೨೫ ॥

ಅಪಾಂ ಭೂಮೇಸ್ತು ಸಂಯೋಗಾದೋಷಧ್ಯಸ್ತಾಸ್ತದಾಽಭವನ್ ।
ಪುಷ್ಪಮೂಲಫಲಿನ್ಯಸ್ತು ಓಷಧ್ಯಸ್ತಾ ಹಿ ಜಜ್ಞಿರೇ ॥ ೧೨೬ ॥

ಅಫಾಲಕೃಷ್ಟಾಶ್ಚಾನುಪ್ತಾ ಗ್ರಾಮ್ಯಾರಣ್ಯಾಶ್ಚತುರ್ದಶ ।
ಋತುಪುಷ್ಪಫಲಾಶ್ಚೈವ ವೃಕ್ಷಾಗುಲ್ಮಾಶ್ಚ ಜಜ್ಞಿರೇ ॥ ೧೨೭ ॥

ಪ್ರಾದುರ್ಭಾವಾಸ್ತು ತ್ರೇತಾಯಾಮಾದ್ಯಾಯಾಮೌಷಧಸ್ಯ ಚ ।
ತದೌಷಧೇನ ವರ್ತಂತೇ ಪ್ರಜಾಸ್ತ್ರೇತಾಮುಖೇ ತದಾ ॥ ೧೨೮ ॥

---

೧೨೪. ಹೀಗಿರಲು ಅವರ ಸರ್ವ ಇಷ್ಟಾರ್ಥಗಳನ್ನು ಸಾಧಿಸಿಕೊಡಲು ಯಥೇಚ್ಛವಾಗಿ ಮತ್ತೆ ವೃಷ್ಟಿಯು ಸುರಿಯಿತು. ಇವರ ಇಷ್ಟಾರ್ಥಸಾಧನೆಗೆ ಬಂದಿರುವ ವೃಷ್ಟಿಯ ಜಲವು ನಾನಾ ವಿಧವಾದ ಮಿಷ್ಟಾನ್ನತುಲ್ಯವಾದ ಆಹಾರವನ್ನು ಒದಗಿಸಿತು.

೧೨೫-೧೨೬. ಎರಡನೆಯ ವೃಷ್ಟಿ ಪ್ರಾರಂಭದಿಂದ ಪ್ರಜೆಗಳ ಕ್ರಮವು ಈ ರೀತಿಯಾಗಿ ಬದಲಾಯಿಸಿತು. ಅನಂತರದಲ್ಲಿ ಮಳೆಯ ಬಿಂದುಗಳು ಪೃಥಿವಿಯಲ್ಲಿ ಬೀಳಲಾಗಿ ಪೃಥಿವೀ-ಜಲಗಳ ಸಂಯೋಗದಿಂದ ನಾನಾ ವಿಧವಾದ ಔಷಧಿಗಳು ಹುಟ್ಟಿದವು. ಆ ಔಷಧಿಗಳೆಲ್ಲವೂ ಪುಷ್ಪ-ಫಲ-ಮೂಲಗಳಿಂದ ಅಲಂಕೃತವಾದವುಗಳಾಗಿ ಪ್ರಕಾಶಿಸಿದವು.

೧೨೭. ನೇಗಿಲಿನಿಂದ ಕೃಷಿಮಾಡದ ಭೂಮಿಯಲ್ಲಿ ಬೀಜವನ್ನು ಬಿತ್ತದೆ ಹುಟ್ಟಿರುವ ಗ್ರಾಮ್ಯ ಆರಣ್ಯಗಳೆಂಬ ಹದಿನಾಲ್ಕು ಜಾತಿಯ ಔಷಧಿಗಳು ಪ್ರಾದುರ್ಭವಿಸಿದವು. ಗ್ರಾಮ ಅಥವಾ ಅರಣ್ಯಗಳಲ್ಲಿ ಹುಟ್ಟುವುದರಿಂದ ಆ ಔಷಧಿಗಳಿಗೆ ಗ್ರಾಮ್ಯಾರಣ್ಯವೆಂಬುದು ಅನ್ವರ್ಥವಾದ ಹೆಸರು. ಹಾಗೆ ಆಯಾಯ ಋತುಧರ್ಮವನ್ನು ಅನುಸರಿಸಿ ಆಗುವ ಪುಷ್ಪ-ಫಲಗಳಿಂದ ಕೂಡಿದ ವೃಕ್ಷಗಳು ಪೊದೆಗಳು ಮುಂತಾದುವು ಜನಿಸಿದವು.

೧೨೮. ಆದಿಯಾದ ತ್ರೇತಾಯುಗದಲ್ಲಿ ಔಷಧಿಗಳು ಪ್ರಾದುರ್ಭವಿಸಿ ಆ ಆ ಔಷಧಿಗಳಿಂದ ತ್ರೇತಾಯುಗಾರಂಭದಲ್ಲಿದ್ದ ಪ್ರಜೆಗಳು ಜೀವನವನ್ನು ನಡೆಸಿದರು.

ತತಃ ಪುನರಭೂತ್ತಾಸಾಂ ರಾಗೋ ಲೋಭಸ್ತು ಸರ್ವದಾ ।
ಅವಶ್ಯಭಾವಿನಾಽರ್ಥೇನ ತ್ರೇತಾಯುಗವಶೇನ ಚ ॥ ೧೨೯ ॥

ತತಸ್ತೇ ಪರ್ಯಗೃಹ್ಣಂಸ್ತು ನದೀಕ್ಷೇತ್ರಾಣಿ ಪರ್ವತಾನ್ ।
ವೃಕ್ಷಗುಲ್ಮೌಷಧೀಶ್ಚೈವ ಪ್ರಸಹ್ಯ ತು ಯಥಾಬಲಮ್ ॥ ೧೩೦ ॥

ಸಿದ್ಧಾತ್ಮಾನಸ್ತು ಯೇ ಪೂರ್ವಂ ವ್ಯಾಖ್ಯಾತಾ ವಃ ಕೃತೇ ಮಯಾ ।
ಬ್ರಹ್ಮಣೋ ಮಾನಸಾಸ್ತೇ ವೈ ಉತ್ಪನ್ನಾ ಯೇ ಜನಾ ಇಹ ॥ ೧೩೧ ॥

ಶಾಂತಾ ಯೇ ಶುಷ್ಮಿಣಶ್ಚೈವ ಕರ್ಮಿಣೋ ದುಃಖಿತಾಸ್ತಥಾ ।
ತತ ಆವರ್ತಮಾನಾಸ್ತೇ ತ್ರೇತಾಯಾಂ ಜಜ್ಞಿರೇ ಪುನಃ ॥ ೧೩೨ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ದ್ರೋಹಜನಾಸ್ತಥಾ ।
ಭಾವಿತಾಃ ಪೂರ್ವಜಾತೀಷು ಖ್ಯಾತತ್ವೇ ತೇ ಶುಭಪಾಪಯೋಃ ॥೧೩೩॥

---

೧೨೯. ಅನಂತರದಲ್ಲಿ ತ್ರೇತಾಯುಗದ ಕಾಲ ಧರ್ಮವಶದಿಂದಲೂ ಆಯಾಯ ಕಾಲಕ್ಕೆ ತಕ್ಕಂತೆ ತಪ್ಪದೆ ನಡೆಯಬೇಕಾದ ಭವಿತವ್ಯತೆಯಿಂದಲೂ ಪ್ರಜೆಗಳಿಗೆ ರಾಗ. ಲೋಭಗಳೆಂಬ ಮಾನಸ ದೋಷಗಳು ಮತ್ತೆ ಪ್ರಾರಂಭವಾದುವು.

೧೩೦. ರಾಗ-ಲೋಭಗಳಿಂದ ಕಲಂಕವುಳ್ಳವರಾದ ಆ ಪ್ರಜೆಗಳು ನದಿ-ಕ್ಷೇತ್ರಗಳನ್ನೂ ಪರ್ವತಗಳನ್ನೂ ವೃಕ್ಷ-ಗುಲ್ಮ-ಓಷಧಿ ಮುಂತಾದುವುಗಳನ್ನೂ ತಮ್ಮ ಶಕ್ತಿಗೆ ಅನುಸಾರವಾಗಿ ಬಲಾತ್ಕರಿಸಿ-ತಮ್ಮ ವಾಸೋಪಕರಣಗಳನ್ನಾಗಿ ಆಕ್ರಮಿಸಿಕೊಂಡರು. ರಾಗ-ಲೋಭಗಳು ಉಂಟಾದಾಗ ಬಾಹ್ಯೋಪಕರಣಗಳು ಸ್ವೀಯತ್ವಾಭಿಮಾನಕ್ಕೆ ಪಾತ್ರಗಳೂ ಮತ್ತು ರಕ್ಷಿಸಲ್ಪಡಬೇಕಾದುವುಗಳೂ ಆದವು.

೧೩೧. ಕೃತಯುಗದಲ್ಲಿ ಇದ್ದಂತೆ ನಿಮಗೆ ಪೂರ್ವದಲ್ಲಿ ನಿರೂಪಿಸಿರುವ ಆ ಸಿದ್ಧಾತ್ಮರಾದ ಬ್ರಹ್ಮ ಮಾನಸ ಪುತ್ರರು ಮತ್ತೆ ಈ ಸಂದರ್ಭದಲ್ಲಿ ಜನ್ಮವೆತ್ತಿದರು.

೧೩೨. ಉಪಾಸಕರಾದ ಶಾಂತ ಪ್ರಜೆಗಳೂ ದುಃಖದಲ್ಲಿ ಮುಳುಗಿದ ಕರ್ಮಲಂಪಟರೂ ಕೂಡ ಜನ್ಮ ಪ್ರವಾಹದಲ್ಲಿ ಪುನರಾವೃತ್ತಿಯುಳ್ಳವರಾಗಿ ಮತ್ತೆ ತ್ರೇತಾಯುಗದಲ್ಲಿ ಉತ್ಪನ್ನರಾದರು.

೧೩೩. ಮತ್ತು ಹುಟ್ಟಿದ ಆ ಪ್ರಜೆಗಳು ಪುಣ್ಯ ಅಥವ ಪಾಪಗಳ ಆಧಿಕ್ಯದಿಂದ ಉತ್ತಮ ಅಧಮ ಎಂಬ ಭಾವನೆಯಿಂದ ಪೂರ್ವ ಜನ್ಮದಲ್ಲಿ ಭಾವಿಸಲ್ಪಟ್ಟ ಜಾತಿ

**ತತಸ್ತೇ ಪ್ರಬಲಾ ಯೇ ತು ಸತ್ಯಶೀಲಾ ಅಹಿಂಸಕಾಃ ।**
**ವೀತಲೋಭಾ ಜಿತಾತ್ಮಾನೋ ನಿವಸಂತಿ ಸ್ಮ ತೇಷು ವೈ ॥ ೧೩೪ ॥**

**ಪರಿಗ್ರಹಂ ನ ಕುರ್ವೀತ ವದಂತಸ್ತು ಉಪಸ್ಥಿತಾಃ ।**
**ತೇಷಾಂ ಕರ್ಮಾಣಿ ಕುರ್ವಂತಿ ತೇಭ್ಯಶ್ಚೈವಾಬಲಾಶ್ಚ ಯೇ ॥ ೧೩೫ ॥**

**ಪರಿಚರ್ಯಾಸು ವರ್ತಂತೇ ತೇಭ್ಯಶ್ಚಾನ್ಯೇಽಲ್ಪತೇಜಸಃ ।**
**ಏವಂ ವಿಪ್ರತಿಪನ್ನೇಷು ಪ್ರಪನ್ನೇಷು ಪರಸ್ಪರಮ್ ॥ ೧೩೬ ॥**

**ತೇನ ದೋಷೇಣ ತೇಷಾಂ ತಾ ಓಷಧ್ಯೋ ಮಿಷತಾಂ ತದಾ ।**
**ಪ್ರಣಷ್ಟಾ ಗೃಹ್ಯಮಾಣಾಸ್ತು ಮುಷ್ಟಿಭ್ಯಾಂ ಸಿಕತಾ ಯಥಾ ॥ ೧೩೭ ॥**

---

ವಿಶೇಷಗಳನ್ನು ಪರಿಗ್ರಹಿಸಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರೆಂಬ ಚಾತುರ್ವರ್ಣ್ಯದ ಪ್ರಜೆಗಳೂ ಮತ್ತು ಮಾನಸವಾದ ದ್ರೋಹವೆಂಬ ವಿಕಾರದಿಂದ ಪರಸ್ಪರ ಸಂಕೀರ್ಣರಾಗಿ ಸಂಕರದಿಂದ ಕೂಡಿದ ಪ್ರಜೆಗಳೂ ಜನಿಸಿದರು.

೧೩೪. ಹೀಗೆ ಹುಟ್ಟಿರುವ ಪ್ರಜೆಗಳಲ್ಲಿ ಒಂದು ಗುಂಪಿನವರು ಲೋಭವಿಲ್ಲದವರೂ ಮನಸ್ಸನ್ನು ನಿಗ್ರಹಿಸಿದರೂ ಸತ್ಯವಚನವನ್ನು ಆಡುವ ಶೀಲವುಳ್ಳವರೂ ಅಹಿಂಸಕರೂ ಆದ ಪ್ರಬಲ-ಅಥವಾ ಉತ್ತಮರೆನಿಸುವವರಾಗಿ ವಾಸಮಾಡಿದರು.

೧೩೫. ಇಂತಹವರು ಯಾವುದೊಂದು ವಸ್ತುವನ್ನೂ ಸ್ವೀಯವಾಗಿ ಪರಿಗ್ರಹಿಸಲಾಗದೆಂದು ಹೇಳುತ್ತ ಸಂಚರಿಸುವರು. ಅವರಿಗಿಂತಲೂ ಮನೋದೌರ್ಬಲ್ಯವುಳ್ಳವರು ತಮ್ಮ ಕರ್ಮಗಳನ್ನು ಮಾಡುತ್ತಲಿರುವರು.

೧೩೬. ಇವರಿಗಿಂತಲೂ ಅಲ್ಪವಾದ ತೇಜಸ್ಸುಳ್ಳ ಒಂದು ಪ್ರಜೆಗಳ ಗುಂಪು ಇವರ ಶುಶ್ರೂಷಾಪರವಾಗಿದ್ದಿತು. ಹೀಗೆ ಬೇರೆ ಬೇರೆಯಾದ ಆಚಾರವುಳ್ಳವರಾಗಿಯೂ ಒಬ್ಬರನ್ನೊಬ್ಬರು ಹಿಂಸಾ ಅಸೂಯಾ ಮುಂತಾದ ದೋಷಗಳಿಲ್ಲದೇ ಹೊಂದಿಕೊಂಡವರಾಗಿಯೂ ಇದ್ದರು.

೧೩೭. ಆದರೆ ರಾಗ ಲೋಭವೆಂಬ ದೋಷಗಳಿಗೆ ಬದ್ಧರಾಗಿರುವುದರಿಂದ ಅವರು ಪರಿಗ್ರಹಿಸುತ್ತಿರುವ ಓಷಧಿಗಳು ಅವರು ನೋಡುತ್ತಿರುವ ಹಾಗೆಯೇ ಮಳಲನ್ನು ಮುಷ್ಟಿಯಿಂದ ಗ್ರಹಿಸುವಾಗ ಅದು ಕೆಳಗೆ ಜಾರಿ ಬೀಳುವಂತೆ ಎಲ್ಲವೂ ನಾಶಹೊಂದಿದವು.

ಅಥಾಸ್ಯ ತು ಯುಗಬಲಾದ್ಗ್ರಾಮ್ಯಾರಣ್ಯಾಶ್ಚತುರ್ದಶ।
ಫಲೈರ್ಗೃಹ್ಣಂತಿ ಪುಷ್ಪೈಶ್ಚ ತಥಾ ಮೂಲೈಶ್ಚ ತಾಃ ಪುನಃ ॥೧೩೮॥

ತತಸ್ತಾಸು ಪ್ರಣಷ್ಟಾಸು ವಿಭ್ರಾಂತಾಸ್ತಾಃ ಪ್ರಜಾಸ್ತದಾ।
ಕ್ಷುಧಾವಿಷ್ಟಾಸ್ತದಾ ಸರ್ವಾ ಜಗ್ಮುಸ್ತಾ ವೈ ಸ್ವಯಂಭುವಮ್ ॥೧೩೯॥

ವೃತ್ತ್ಯರ್ಥಮಭಿಲಿಪ್ಸಂತ್ಯೋ ಹ್ಯಾದೌ ತ್ರೇತಾಯುಗಸ್ಯ ತಾಃ।
ಬ್ರಹ್ಮಾ ಸ್ವಯಂಭೂರ್ಭಗವಾ‌ನ್ ಜ್ಞಾತ್ವಾ ತಾಸಾಂ ಮನೀಷಿತಮ್ ॥೧೪೦॥

ಪ್ರತ್ಯಕ್ಪ್ರತ್ಯಕ್ಷದೃಷ್ಟೇನ ದರ್ಶನೇನ ವಿಚಾರ್ಯ ಸಃ।
ಗ್ರಸ್ತಾಃ ಪೃಥಿವ್ಯಾಸ್ತ್ವೋಷಧ್ಯೋ ಜ್ಞಾತ್ವಾ ಪ್ರತ್ಯರುಹತ್ಪುನಃ ॥೧೪೧॥

ಕೃತ್ವಾ ವತ್ಸಂ ಸುಮೇರುಂ ತು ದುದೋಹ ಪೃಥಿವೀಮಿಮಾಮ್।
ದುಗ್ಧೇಯಂ ಗೌಸ್ತದಾ ತೇನ ಬೀಜಾನಿ ವಸುಧಾತಲೇ ॥೧೪೨॥

---

೧೩೮. ಹಿಂದೆ ಹೇಳಿದ ಹದಿನಾಲ್ಕು ಗ್ರಾಮ್ಯಾರಣ್ಯ ಓಷಧಿಗಳು ಯುಗಬಲದಿಂದ ಕಾಲ ಧರ್ಮವನ್ನನುಸರಿಸಿ ಹುಟ್ಟಿ, ಬೆಳೆಗಳುಳ್ಳವುಗಳಾಗಿ ಜನಿಸಿ ಫಲ-ಪುಷ್ಪ ಮೂಲಗಳಿಂದ ತುಂಬಿದವುಗಳಾದವು.

೧೩೯. ಯಾವಾಗಲೂ ಯಥೇಚ್ಛವಾಗಿ ಸಿಕ್ಕುತ್ತಲಿರುವ ಓಷಧಿಗಳು ನಷ್ಟವಾದ ಕೂಡಲೆ ಆ ಪ್ರಜೆಗಳು ಭ್ರಾಂತಿಗೊಂಡವರಾಗಿ ವಿಶೇಷವಾಗಿ ಕ್ಷುಧೆಯಿಂದ ಆವಿಷ್ಟರಾಗಿ ಬ್ರಹ್ಮನ ಸಮೀಪಕ್ಕೆ ತೆರಳಿದರು.

೧೪೦. ತ್ರೇತಾಯುಗದ ಆದಿಯಲ್ಲಿ ಆ ಪ್ರಜೆಗಳು ತಮ್ಮ ಜೀವನ ಸಾಮಗ್ರಿಯನ್ನು ಅಪೇಕ್ಷಿಸಿ ಬ್ರಹ್ಮನ ಸಮೀಪಕ್ಕೆ ಹೋಗಲಾಗಿ ಪೂಜ್ಯನೂ ಕಾರಣವಿಲ್ಲದವನೂ ಆದ ಬ್ರಹ್ಮನು ಅವರ ಇಂಗಿತವನ್ನು ತಿಳಿದುಕೊಂಡನು.

೧೪೧. ಅವರಿಗೆ ಒದಗಿರುವ ಜೀವಿಕೆಯ ಲೋಪಕ್ಕೆ ಆಗ ಅವರಲ್ಲಿ ಪ್ರತ್ಯಕ್ಷವಾಗಿ ಕಾಣಿಸುತ್ತಿದ್ದ ರಾಗಲೋಭಗಳ ಅತಿರೇಕಾವಸ್ಥೆಯನ್ನು ಕಾರಣವೆಂದು ವಿಚಾರಮಾಡಿ ತಿಳಿದು ಪೃಥಿವಿಯಲ್ಲಿ ನಾಶವಾಗಿ ಹೋದ ಓಷಧಿಗಳನ್ನು ಮತ್ತೆ ಬೆಳೆಯುವಂತೆ ಮಾಡಿದನು.

೧೪೨. ಪೃಥಿವಿಯನ್ನು ಗೋರೂಪವನ್ನಾಗಿಯೂ ದೊಡ್ಡ ಸುಮೇರುಪರ್ವತವನ್ನು ಕರುವನ್ನಾಗಿಯೂ ಮಾಡಿಕೊಂಡು ಭೂಮಿಯನ್ನು ಕರೆಯುತ್ತಿರಲು ಭೂಮಿಯಲ್ಲಿ ನಾನಾವಿಧವಾದ ಬೀಜಗಳು ಕಾಣಿಸಿಕೊಂಡವು.

ಜಜ್ಞಿರೇ ತಾನಿ ಬೀಜಾನಿ ಗ್ರಾಮ್ಯಾರಣ್ಯಾಸ್ತು ತಾಃ ಪ್ರಭುಃ ।
ಓಷಧ್ಯಃ ಫಲಪಾಕಾಂತಾಃ ಗಣಃ ಸಪ್ತದಶಸ್ತು ತಾಃ ॥ ೧೪೩ ॥

ವ್ರೀಹಯಶ್ಚ ಯವಾಶ್ಚೈವ ಗೋಧೂಮಾಶ್ಚಣಕಾಸ್ತಿಲಾಃ ।
ಪ್ರಿಯಂಗವ ಉದಾರಾಸ್ತೇ ಕೋರದೂಷಾಃ ಸವಾಮಕಾಃ ॥ ೧೪೪ ॥

ಮಾಷಾ ಮುದ್ಗಾ ಮಸೂರಾಸ್ತು ನೀವಾರಾಃ ಸಕುಲುತ್ಥಕಾಃ ।
ಹೀರಕಾಶ್ಚರಕಾಶ್ಚೈವ ಗಣಃ ಸಪ್ತದಶ ಸ್ಮೃತಾಃ ॥ ೧೪೫ ॥

ಇತ್ಯೇತಾ ಓಷಧೀನಾಂ ತು ಗ್ರಾಮ್ಯಾಣಾಂ ಜಾತಯಃ ಸ್ಮೃತಾಃ ।
ಶ್ಯಾಮಾಕಾಶ್ಚೈವ ನೀವಾರಾ ಜರ್ತಿಲಾಃ ಸಗವೇಧುಕಾಃ ॥ ೧೪೬ ॥

ಕುರುವಿಂದೋ ವೇಣುಯವಾಃ ತಾಮಾತೀಕರ್ಾಟಕಾಃ ಸ್ಮೃತಾಃ ।
ಗ್ರಾಮ್ಯಾರಣ್ಯಾಃ ಸ್ಮೃತಾ ಹ್ಯೇತಾ ಓಷಧ್ಯಸ್ತು ಚತುರ್ದಶ ॥ ೧೪೭ ॥

ಉತ್ಪನ್ನಾಃ ಪ್ರಥಮಸ್ಸೃತಾ ಆದೌ ತ್ರೇತಾಯುಗಸ್ಯ ಹ ।
ಅಫಾಲಕೃಷ್ಟಾಸ್ತಾಃ ಸರ್ವಾ ಗ್ರಾಮ್ಯಾರಣ್ಯಾಶ್ಚತುರ್ದಶ ॥ ೧೪೮ ॥

---

೧೪೩. ಪ್ರಭುವಾದ ಬ್ರಹ್ಮದೇವನು ಪುನಃ ನಿರ್ಮಾಣಮಾಡಿ ಹುಟ್ಟಿರುವ ಆ ಓಷಧಿಗಳು ಫಲಪರಿಪಾಕದವರೆಗೆ ಬೆಳೆದವು. ಅವುಗಳು ಹದಿನೇಳು ಜಾತಿಯ ಗುಂಪಾದವು.

೧೪೪-೧೪೫. ವ್ರೀಹಿ ಯವ ಗೋಧೂಮ ಚಣಕ ತಿಲ ಪ್ರಿಯಂಗು ಉದಾರ ಕೋರದೂಷ, ವಾಮಕ ಮಾಷ ಮುದ್ಗ ಮಸೂರ ನೀವಾರ ಕುಳುತ್ಥ ಹೀರಕ ಚರಕ ಖಲ್ವ ಎಂದು ಆ ಹದಿನೇಳು ಗ್ರಾಮ್ಯ ಜಾತಿಯ ಬೀಜಗಳ ಹೆಸರು. ಇವುಗಳಲ್ಲಿ ವಾಮಕ ಮಸೂರ ಮುಂತಾದ ಕೆಲವು ಗ್ರಾಮ್ಯ ಬೀಜಗಳ ಉಪಯೋಗವು ಈಗ ವಾಡಿಕೆಯಲ್ಲಿಲ್ಲದ್ದರಿಂದ ಆ ಹೆಸರು ಅಪೂರ್ವವಾಗಿದೆ.

೧೪೬-೧೪೭. ಶ್ಯಾಮಾಕ–ನೀವಾರ–ಜರ್ತಿಲ–ಗವೇಧುಕ–ಕುರುವಿಂದ–ವೇಣುಯವ-ತಾಮಾತೀಕರ್ಾಟಕ ಈ ಮುಂತಾದ ಹದಿನಾಲ್ಕು ಓಷಧಿಗಳು ಗ್ರಾಮ್ಯಾರಣ್ಯ ಜಾತಿಗೆ ಸೇರಿರುವುವು.

೧೪೮. ಯುಗಶ್ರೇಣಿಯಲ್ಲಿ ಮೊದಲನೆಯ ತ್ರೇತಾಯುಗದಲ್ಲಿ ಈ ಹದಿನಾಲ್ಕು

ವೃಕ್ಷಗುಲ್ಮಲತಾವಲ್ಲ್ಯೋ ವೀರುಧಸ್ತೃಣಜಾತಯಃ ।
ಮೂಲೈಃ ಫಲೈಶ್ಚ ರೋಹೈಶ್ಚಾಗೃಹ್ಣನ್ಪುಷ್ಪಾಶ್ಚ ಯತ್ಫಲಮ್ ॥೧೪೯॥

ಪೃಥ್ವೀ ದುಗ್ಧಾ ತು ಬೀಜಾನಿ ಯಾನಿ ಪೂರ್ವಂ ಸ್ವಯಂಭುವಾ ।
ಋತುಪುಷ್ಪಫಲಾಸ್ತಾ ವೈ ಓಷಧ್ಯೋ ಜಜ್ಞಿರೇ ತ್ವಿಹ ॥೧೫೦॥

ಯದಾ ಪ್ರಸೃಷ್ಟಾ ಓಷಧ್ಯೋ ನ ಪ್ರರೋಹಂತೀಹ ತಾಃ ಪುನಃ ।
ತತಸ್ತಾಸಾಂ ಚ ವೃತ್ತ್ಯರ್ಥೇ ವಾರ್ತೋಪಾಯಂ ಚಕಾರ ಹ ॥ ೧೫೧ ॥

ತಾಸಾಂ ಸ್ವಯಂಭೂರ್ಭಗವಾನ್ ಹಸ್ತಸಿದ್ಧಿಂ ಸ್ವಕರ್ಮಜಾಮ್ ।
ತತಃ ಪ್ರಭೃತಿ ಚೌಷಧ್ಯಃ ಕೃಷ್ಟಪಚ್ಯಾಸ್ತು ಜಜ್ಞಿರೇ ॥ ೧೫೨ ॥

ಸಂಸಿದ್ಧಕಾರ್ಯೋ ವಾರ್ತಾಯಾಂ ತತಸ್ತಾಸಾಂ ಪ್ರಜಾಪತಿಃ ।
ಮರ್ಯಾದಾಂ ಸ್ಥಾಪಯಾಮಾಸ ಯಯಾಽರಕ್ಷತ್ಪರಸ್ಪರಮ್॥ ೧೫೩ ॥

---

ಜಾತಿಯ ಗ್ರಾಮ್ಯಾರಣ್ಯ ಔಷಧಿಗಳು ಕ್ಷೇತ್ರವನ್ನು ನೇಗಿಲದಿಂದ ಕೃಷಿಮಾಡದೇ ಹುಟ್ಟಿದವು.

೧೪೯. ಮತ್ತು ಬಗೆಬಗೆಯ ವೃಕ್ಷಗಳು, ಪೊದೆಗಳು, ಬಳ್ಳಿಗಳು, ಹುಲ್ಲು ಮುಂತಾದ ಜಾತಿಗಳು ತಮ್ಮ ಸ್ವಭಾವಾನುಗುಣವಾಗಿ ಮೂಲ-ಫಲ-ಅಂಕುರ ಮುಂತಾದುವುಗಳಿಂದ ಪುಷ್ಟಿಯಾಗಿ ಫಲಿಸಿದವು.

೧೫೦. ಪೂರ್ವದಲ್ಲಿ ಸ್ವಯಂಭುವಾದ ಬ್ರಹ್ಮನಿಂದ ಗೋರೂಪಧಾರಿಣಿಯಾದ ಪೃಥಿವಿಯನ್ನು ಕಡೆದಾಗ ಉತ್ಪನ್ನವಾದ ಬೀಜಗಳು ಋತುಧರ್ಮಕ್ಕೆ ಅನುಸಾರ ವಾಗಿ ಕ್ರಮವಾಗಿ ಪುಷ್ಪಫಲಗಳನ್ನು ಕೊಡುವ ಔಷಧಿಗಳಾಗಿ ಜನಿಸಿದವು.

೧೫೧. ಬ್ರಹ್ಮನು ಸೃಷ್ಟಿಸಿದ ಔಷಧಿಗಳು ಮತ್ತೆ ಪೂರ್ಣವಾಗಿ ಬೆಳೆದಿರುವುದನ್ನು ಕಂಡು ನಿರಾಹಾರರಾದ ಪ್ರಜೆಗಳಿಗೆ ಆಹಾರಕ್ಕೋಸ್ಕರ ವಾರ್ತಾ ಉಪಾಯವನ್ನು ನಿರ್ಮಿಸಿದನು.

೧೫೨. ಆ ಔಷಧಿಗಳನ್ನು ಪ್ರಜೆಗಳು ಸ್ವಪ್ರಯತ್ನದಿಂದ ಬೆಳೆಸುವಂತೆ ಕರ್ಮ ಮಾಡುವ ಒಂದು ಹಸ್ತ ಸಿದ್ಧಿಯನ್ನು ಅವರಿಗೆ ಅನುಗ್ರಹಿಸಿದನು. ಆ ಮೊದಲುಗೊಂಡು ಎಲ್ಲ ಔಷಧಿಗಳು ಕೃಷಿಯಿಂದ ಬೆಳೆದು ಫಲಕೊಡುವುವಾದವು.

೧೫೩. ಅದರ ವಾರ್ತಾ ಉಪಾಯ ಸಂಗ್ರಹದಲ್ಲಿ ಪ್ರವರ್ತಿಸಿ ಬ್ರಹ್ಮನು ಕಾರ್ಯ

**ಯೇ ವೈ ಪರಿಗ್ರಹೀತಾರಸ್ತಾಸಾಮಾರ್ಸ ಬಲೀಯಸಃ ।**
**ಇತರೇಷಾಂ ಕೃತತ್ರಾಣಾರ್ ಸ್ಥಾಪಯಾಮಾಸ ಕ್ಷತ್ರಿಯಾರ್ || ೧೫೪ ||**

**ಉಪತಿಷ್ಠಂತಿ ತಾವಂತೋ ಯಾವಂತೋ ನಿರ್ಮಿತಾಸ್ತಥಾ ।**
**ಸತ್ಯಂ ಬ್ರೂತ ಯಥಾಭೂತಂ ಧ್ರುವಂ ವೋ ಬ್ರಾಹ್ಮಣಾಸ್ತು ತಾಃ ||**
**|| ೧೫೫ ||**

**ಯೇ ಚಾನ್ಯೇऽಪ್ಯಬಲಾಸ್ತೇಷಾಂ ಸಂರಕ್ಷಾಕರ್ಮಣಿ ಸ್ಥಿತಾಃ ।**
**ಕ್ರೀತಾದಿನಾಽಶಯಂತಿ ಸ್ಮ ಪೃಥಿವ್ಯಾಂ ತೇ ವ್ಯವಸ್ಥಿತಾಃ || ೧೫೬ ||**

**ವೈಶ್ಯಾನಿತ್ಯೇವ ತಾನಾಹುಃ ಕೀನಾಶಾರ್ ವೃತ್ತಿಸಾಧಕಾರ್ ।**
**ಸೇವಂತಶ್ಚ ದ್ರವಂತಶ್ಚ ಪರಿಚರ್ಯಾಸು ಯೇ ರತಾಃ || ೧೫೭ ||**

---

ವನ್ನು ಪೂರ್ತಿಗೊಳಿಸಿದ ತರುವಾಯ ಸೃಷ್ಟಿಸಿದ ಪ್ರಜೆಗಳು ಪರಸ್ಪರಾವಲಂಬನದಿಂದ ಸುರಕ್ಷಿತರಾಗಿರುವಂತೆ ಒಂದು ವ್ಯವಸ್ಥೆಯನ್ನು ನೆಲೆಗೊಳಿಸಿದನು.

೧೫೪. ಯಾವ ಸಂಗಡದವರು ಸ್ವಭುಜ ಬಲದಿಂದ ಎಲ್ಲ ಕ್ಷೇತ್ರ ಔಷಧಿಗಳನ್ನು ಸ್ವಾಧೀನಪಡಿಸಿ ಮಿಕ್ಕ ಸಂಗಡದ ಸಮಸ್ತ ಪ್ರಜೆಗಳನ್ನು ರಕ್ಷಿಸಬಲ್ಲರೋ ಅಂತಹ ಶಕ್ತಿಸಂಪನ್ನರಾದ ಕ್ಷತ್ರಿಯರನ್ನು ಕಲ್ಪಿಸಿದನು.

೧೫೫. ಪ್ರಜೆಗಳಲ್ಲಿ ತತ್ತ್ವಾರ್ಥವನ್ನರಿತು ಅದರಂತೆಯೇ ಸತ್ಯಮಾರ್ಗವನ್ನು ಬಿಡದೇ ನಿಯಮದಿಂದ ಸತ್ಯವಚನವನ್ನು ಪರಿಪಾಲಿಸುತ್ತ ಇರುವ ಪ್ರಜೆಗಳು ಬ್ರಾಹ್ಮಣ ರೆಂದು ಕರೆಯಲ್ಪಡುವರು. ಇವರ ಸತ್ಯಮಾರ್ಗವು ಯಾವಾಗಲೂ ಚ್ಯುತವಾಗದೆ ಶಾಶ್ವತವಾಗಿರಬೇಕಾದುದು.

೧೫೬. ಈ ಬ್ರಾಹ್ಮಣ ಮತ್ತು ಕ್ಷತ್ರಿಯರಿಗಿಂತ ಅಲ್ಪಶಕ್ತಿಯುಳ್ಳವರಾಗಿ ಇವರ ರಕ್ಷಣಾರ್ಥವಾದ ವಾಣಿಜ್ಯಾದಿ ವೃತ್ತಿಯನ್ನು ಅವಲಂಬಿಸಿ ಧಾನ್ಯಾದಿ ಆಹಾರವನ್ನು ಒದಗಿಸುವವರು ಮತ್ತೊಂದು ಸಂಗಡದವರು ಏರ್ಪಡಿಸಲ್ಪಟ್ಟರು.

೧೫೭. ಅಂತಹ ಸಂಗಡವು ವೈಶ್ಯರೆಂದು ಕರೆಯಲ್ಪಡುವುದು. ಮೇಲೆ ಹೇಳಿದ ಮೂರು ವರ್ಣಗಳ ಶುಶ್ರೂಷೆಯನ್ನು ಮಾಡುವ, ಅಪರವರ ವೃತ್ತಿಯನ್ನು ಸಾಗು ವಂತೆ ಮಾಡುವ ಮತ್ತು ಅತಿಯಾಗಿ ಮಂದವಾದ ಬುದ್ಧಿ ಶಕ್ತಿಯಿಂದ ಕೂಡಿದ ಮತ್ತೊಂದು ಸಂಗಡವು ಮೇಲ್ಕಂಡ ಪ್ರಜಾವರ್ಗಕ್ಕೆ ಸೇರಿರುವುದು.

ನಿಸ್ತೇಜಸೋಽಲ್ಪವೀರ್ಯಾಶ್ಚ ಶೂದ್ರಾಂಸ್ತಾನಬ್ರವೀಚ್ಚ ಸಃ ।
ತೇಷಾಂ ಕರ್ಮಾಣಿ ಧರ್ಮಾಂಶ್ಚ ಬ್ರಹ್ಮಾ ತು ವ್ಯದಧಾತ್ಪ್ರಭುಃ ॥೧೫೮॥

ಸಂಸ್ಥಿತ್ಯಾಂ ತು ಕೃತಾಯಾಂ ಹಿ ಚಾತುರ್ವರ್ಣ್ಯಸ್ಯ ತೇನ ವೈ ।
ಪುನಃ ಪ್ರಜಾಸ್ತು ತಾ ಮೋಹಾದ್ಧರ್ಮಂ ತಂ ನಾನ್ವಪಾಲಯನ್ ॥೧೫೯॥

ವರ್ಣಧರ್ಮೈಶ್ಚ ಜೀವಂತ್ಯೋ ವ್ಯರುದ್ಧ್ಯಂತ ಪರಸ್ಪರಮ್ ।
ಬ್ರಹ್ಮಾ ಬುಧ್ವಾ ತು ತತ್ಸರ್ವಂ ಯಾಥಾತಥ್ಯೇನ ಸ ಪ್ರಭುಃ ॥೧೬೦॥

ಕ್ಷತ್ರಿಯಾಣಾಂ ಬಲಂ ದಂಡಂ ಯುದ್ಧಮಾಜೀವ್ಯಮಾದಿಶತ್ ।
ಯಾಜನಾಧ್ಯಾಪನೇ ಬ್ರಹ್ಮಾ ತಥಾ ದಾನಪ್ರತಿಗ್ರಹಮ್ ॥ ೧೬೧ ॥

ಬ್ರಾಹ್ಮಣಾನಾಂ ವಿಭುಸ್ತೇಷಾಂ ಕರ್ಮಾಣ್ಯೇತಾನ್ಯಥಾಽದಿಶತ್ ।
ಪಾಶುಪಾಲ್ಯಂ ಚ ವಾಣಿಜ್ಯಂ ಕೃಷಿಂ ಚೈವ ವಿಶಾಂ ದದೌ ॥ ೧೬೨ ॥

---

೧೫೮. ಅವರು ತೇಜಸ್ಸು ವೀರ್ಯಗಳೆಂಬ ಗುಣ ಹೀನರಾಗಿಯೂ ಶೂದ್ರರೆಂದು ಕರೆಯಲ್ಪಡುವವರೂ ಆಗಿರುವರು. ಬ್ರಹ್ಮನು ಅವರವರ ವರ್ಣಧರ್ಮಗಳನ್ನೂ ಕರ್ಮವಿಶೇಷಗಳನ್ನೂ ವ್ಯವಸ್ಥೆ ಮಾಡಿಟ್ಟನು.

೧೫೯. ಸೃಷ್ಟಿಕರ್ತನಿಂದ ಚಾತುರ್ವರ್ಣ್ಯ ಧರ್ಮದ ವ್ಯವಸ್ಥೆಯು ರಚಿಸಲ್ಪಟ್ಟಿದ್ದರೂ ಆ ಪ್ರಜೆಗಳು ಮತ್ತೆ ಮೋಹಪರವಶರಾಗಿ ಆ ಧರ್ಮವನ್ನು ಪರಿಪಾಲಿಸಲಿಲ್ಲ.

೧೬೦. ಮತ್ತು ಆ ಪ್ರಜೆಗಳು ವರ್ಣಧರ್ಮಗಳನ್ನು ಜೀವಿಕಾವೃತ್ತಿಯನ್ನಾಗಿ ಅವಲಂಬಿಸಿ ಪರಸ್ಪರ ವಿರೋಧವುಳ್ಳವರಾಗಿ ಕಲಹಮಾಡುವುದನ್ನು ಬ್ರಹ್ಮನು ಯಥಾವತ್ತಾಗಿ ಎಲ್ಲವನ್ನೂ ಅರಿತುಕೊಂಡನು.

೧೬೧. ಅದನ್ನು ಸರಿಪಡಿಸಲು ಕ್ಷತ್ರಿಯರಿಗೆ ವಿಕ್ರಮದಿಂದ ಸಾಧಿಸುವ ದಂಡ ಮತ್ತು ಯುದ್ಧ ಎಂಬ ಧರ್ಮವನ್ನ ಆದೇಶಿಸಿದನು. ಇದರಿಂದ ಪ್ರಜೆಗಳ ವಿರೋಧ ಶಮನೋಪಾಯವು ಕಲ್ಪಿಸಲ್ಪಟ್ಟಿತು. ಹಾಗೆ ಯಾಜನ, ಅಧ್ಯಾಪನ, ದಾನ, ಪ್ರತಿಗ್ರಹಗಳನ್ನು ಬ್ರಾಹ್ಮಣ ಧರ್ಮವನ್ನಾಗಿ ಏರ್ಪಡಿಸಿದನು.

೧೬೨. ಸರ್ವ ನಿಯಾಮಕನಾದ ಬ್ರಹ್ಮದೇವನು ವೈಶ್ಯರಿಗೆ ಪಶುಪಾಲನ, ವಾಣಿಜ್ಯ, ಕೃಷಿ ಮುಂತಾದ ಧರ್ಮಗಳನ್ನು ನಿಯಮಿಸಿದನು.

**ಶಿಲ್ಪಾಜೀವಭೃತಾಂ ಚೈವ ಶೂದ್ರಾಣಾಂ ವ್ಯದಧಾತ್ಪ್ರಭುಃ ।**
**ಸಾಮಾನ್ಯಾನಿ ಚ ಕರ್ಮಾಣಿ ಬ್ರಹ್ಮಕ್ಷತ್ರವಿಶಾಂ ಪುನಃ ॥ ೧೬೩ ॥**

**ಯಜನಾಧ್ಯಾಪನೇ ದಾನಂ ಸಾಮಾನ್ಯಾನೀತರೇಷು ಚ ।**
**ಕರ್ಮಾಜೀವಂ ತು ವೈ ದತ್ವಾ ತೇಷಾಮಿಹ ಪರಸ್ಪರಮ್ ॥ ೧೬೪ ॥**

**ತೇಷಾಂ ಲೋಕಾಂತರೇ ಮೂರ್ಧ್ನಿ ಸ್ಥಾನಾನಿ ವಿದಧೇ ಪುನಃ ।**
**ಪ್ರಾಜಾಪತ್ಯಂ ದ್ವಿಜಾತೀನಾಂ ಸ್ಮೃತಂ ಸ್ಥಾನಂ ಕ್ರಿಯಾವತಾಮ್ ॥೧೬೫॥**

**ಸ್ಥಾನಮೈಂದ್ರಂ ಕ್ಷತ್ರಿಯಾಣಾಂ ಸಂಗ್ರಾಮೇಷ್ವಪಲಾಯಿನಾಮ್ ।**
**ವೈಶ್ಯಾನಾಂ ಮಾರುತಂ ಸ್ಥಾನಂ ಸ್ವಸ್ವಕರ್ಮೋಪಜೀವಿನಾಮ್ ॥೧೬೬॥**

---

೧೬೩. ನಾಲ್ಕನೆಯ ವರ್ಣವಾದ ಶೂದ್ರರಿಗೆ ನಾನಾ ವಿಧವಾದ ಶಿಲ್ಪಗಳಿಂದ ಜೀವನವನ್ನು ವಿಧಿಸಿದನು. ನೃತ್ಯ, ವಾದ್ಯ, ಚಿತ್ರ, ಮುಂತಾದ ಕಲೆಗಳು ಆ ಶಿಲ್ಪ ಜೀವನದಲ್ಲಿ ಅಡಗಿರುವುವು. ಹೀಗೆ ಆಯಾಯ ವರ್ಣಗಳಿಗೆ ವಿಶೇಷ ಧರ್ಮಗಳು ವಿಹಿತವಾಗಿರುವುವಲ್ಲದೇ ಬ್ರಹ್ಮ, ಕ್ಷತ್ರ, ವೈಶ್ಯರಿಗೆ ಮುಂದೆ ಹೇಳಲ್ಪಡುವುವು ಸಾಮಾನ್ಯ ಧರ್ಮಗಳಾಗಿ ಪರಿಣಮಿಸಿದುವು.

೧೬೪. ಯಜನ, ಅಧ್ಯಯನ, ದಾನ ಈ ಮೂರು ಧರ್ಮಗಳು ತ್ರೈವರ್ಣಿಕರಿಗೆ ಸಾಮಾನ್ಯವಾಗಿವೆ. ಹೀಗೆ ಅನ್ಯೋನ್ಯವಾಗಿ ಆ ಪ್ರಜೆಗಳಿಗೆ ಕರ್ಮ, ಜೀವನೋಪಾಯಗಳನ್ನು ರಚಿಸಿದನು.

೧೬೫. ತರುವಾಯ ಪ್ರಜಾಪತಿಯು ಮೇಲೆ ಹೇಳಿದ ಧರ್ಮಗಳನ್ನು ನಿಯಮದಿಂದ ಪರಿಪಾಲಿಸಿದ ಧಾರ್ಮಿಕರಿಗೆ ಯೋಗ್ಯವಾದ ಫಲೋಪಭೋಗದ ಸ್ಥಾನಗಳನ್ನು ನಿರ್ಮಿಸಿದನು. ಯಜನಾದಿ ಕರ್ಮಗಳನ್ನು ಆಚರಿಸಿದ ವಿಪ್ರರಿಗೆ ಪ್ರಾಜಾಪತ್ಯ ಸ್ಥಾನವು ಲಭಿಸುವುದು.

೧೬೬. ಯುದ್ಧರಂಗದಿಂದ ಹಿಮ್ಮೆಟ್ಟದಿರುವ ವೀರ ಕ್ಷತ್ರಿಯರಿಗೆ ಐಂದ್ರ ಸ್ಥಾನವೂ, ಕೃಷಿ ವಾಣಿಜ್ಯ ಮುಂತಾದ ಸ್ವಕರ್ಮಗಳಲ್ಲಿ ನಿರತರಾದ ವೈಶ್ಯರಿಗೆ ಮಾರುತ ಸ್ಥಾನವೂ ಫಲಭೋಗಕ್ಕೆ ಸಾಧನವು.

**ಗಾಂಧರ್ವಂ ಶೂದ್ರಜಾತೀನಾಂ ಪಾರಿಚರ್ಯೇ ಚ ತಿಷ್ಠತಾಮ್ ।**
**ಸ್ಥಾನಾನ್ಯೇತಾನಿ ವರ್ಣಾನಾಂ ಯೋಗ್ಯಾಚಾರವತಾಂ ಸತಾಮ್ ॥೧೬೭॥**

**ಸಂಸ್ಥಿತ್ಯಾಂ ಸುಕೃತಾಯಾಂ ವೈ ಚಾತುರ್ವರ್ಣ್ಯಸ್ಯ ತಸ್ಯ ತತ್ ।**
**ವರ್ಣಾಸ್ತು ದಂಡಭಯಯುತಾಃ ಸ್ವೇ ಸ್ವೇ ವರ್ಣ್ಯೇ ವ್ಯವಸ್ಥಿತಾಃ ।**
**ತತಃ ಸ್ಥಿತೇಷು ವರ್ಣೇಷು ಸ್ಥಾಪಯಾಮಾಸ ಹ್ಯಾಶ್ರಮಾ ॥ ೧೬೮ ॥**

**ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋ ಯತಿಸ್ತಥಾ ।**
**ಆಶ್ರಮಾಂಶ್ಚತುರೋ ಹ್ಯೇತಾನ್ ಪೂರ್ವವತ್ ಸ್ಥಾಪಯನ್ ಪ್ರಭುಃ**
**॥ ೧೬೯ ॥**

**ವರ್ಣಕರ್ಮಾಣಿ ಯೇ ಕೇಚಿತ್ತೇಷಾಮಿಹ ಚ ಕುರ್ವತೇ ।**
**ಕೃತಕರ್ಮಕೃತಾವಾಸಾ ಆಶ್ರಮಾದುಪಭುಂಜತೇ ॥ ೧೭೦ ॥**

**ಬ್ರಹ್ಮಾ ತಾನ್ ಸ್ಥಾಪಯಾಮಾಸ ಆಶ್ರಮಾನ್ ನಾಮ ನಾಮತಃ**
**ನಿರ್ದಿದೇಶ ತತಸ್ತೇಷಾಂ ಬ್ರಹ್ಮಾ ಧರ್ಮಾನ್ ಪ್ರಭಾಷತೇ ॥ ೧೭೧ ॥**

---

೧೬೭. ಶೂದ್ರ ಜಾತಿಯ ಜನಗಳು ಉತ್ತಮರಾದ ತ್ರೈವರ್ಣಿಕರ ಶುಶ್ರೂಷೆಯನ್ನಾಚರಿಸುವುದರಿಂದ ಗಾಂಧರ್ವ ಸ್ಥಾನವನ್ನು ಹೊಂದುವರು. ಹೀಗೆ ಧರ್ಮವನ್ನಾಚರಿಸಿ ಆಚಾರವಂತರೂ ಸನ್ಮಾರ್ಗ ಪರರೂ ಆದ ವರ್ಣಗಳಿಗೆ ಪ್ರಾಜಾಪತ್ಯ ಮುಂತಾದ ವಿವಿಧ ಸ್ಥಾನಗಳು ಲೋಕಾಂತರದಲ್ಲಿ ರಚಿಸಲ್ಪಟ್ಟವು.

೧೬೮. ಹೀಗೆ ವರ್ಣಾಶ್ರಮ ಧರ್ಮದ ಮರ್ಯಾದೆಯು ನೆಲೆಗೊಳಿಸಲ್ಪಡಲು ಆಯಾಯ ವರ್ಣದವರು ಕ್ಷತ್ರಿಯನಿಂದಾಗುವ ದಂಡಭೀತಿಯಿಂದ ತಮ್ಮ ತಮ್ಮ ಧರ್ಮಗಳಲ್ಲಿ ನಡೆಯುವವರಾದರು. ಆಗ ಆ ವರ್ಣಗಳಲ್ಲಿ ವಿಶೇಷವಾದ ಆಶ್ರಮ ಧರ್ಮಗಳನ್ನು ಪ್ರತಿಷ್ಠೆಗೊಳಿಸಿದನು.

೧೬೯. ಗೃಹಸ್ಥ, ಬ್ರಹ್ಮಚಾರಿ, ವಾನಪ್ರಸ್ಥ, ಯತಿ ಎಂಬ ನಾಲ್ಕು ಆಶ್ರಮಗಳನ್ನು ಪೂರ್ವಕಲ್ಪದಲ್ಲಿದ್ದಂತೆ ಪ್ರಭುವಾದ ಬ್ರಹ್ಮನು ನಿರ್ಮಿಸಿದನು.

೧೭೦. ಯಾರು ಈ ವರ್ಣಧರ್ಮಗಳನ್ನೂ ಮತ್ತು ಆಶ್ರಮಧರ್ಮಗಳನ್ನೂ ಚತುರ್ಮುಖನ ಆಜ್ಞೆಯೆಂದೆಣಿಸಿ ಅನುಷ್ಠಾನ ಮಾಡುವರೋ ಅವರು ಕರ್ಮಾನುಸಾರವಾದ ಲೋಕಾಂತರ ಸ್ಥಾನವನ್ನು ಗಳಿಸಿ ಕರ್ಮಫಲವನ್ನು ಅನುಭವಿಸುವರು.

೧೭೧. ಬ್ರಹ್ಮನು ಆಶ್ರಮಗಳನ್ನು ಸ್ಥಿರಪಡಿಸಿ ಅವುಗಳಿಗೆ ಒಂದೊಂದು ನಾಮ

**ಪ್ರಸ್ಥಾನಾನಿ ತು ತೇಷಾಂ ಚ ಯಮಾನ್ ಸನಿಯಮಾಂಸ್ತಥಾ ।**
**ಚತುರ್ವರ್ಣಾತ್ಮಕಃ ಪೂರ್ವಂ ಗೃಹಸ್ಥಸ್ಯಾಶ್ರಮಃ ಸ್ಥಿತಃ ॥ ೧೭೨ ॥**

**ತ್ರಯಾಣಾಮಾಶ್ರಮಾಣಾಂ ಚ ಪ್ರತಿಯೋನೀನಿ ಚೈವ ಹಿ ।**
**ಯಥಾಕ್ರಮಂ ಚ ವಕ್ಷ್ಯಾಮಿ ವೃತ್ತೈಶ್ಚ ನಿಯಮೈಸ್ತಥಾ ॥ ೧೭೩ ॥**

**ದಾರಾಗ್ನಯಶ್ಚಾತಿಥಯ ಇಷ್ಟಾಃ ಶ್ರಾದ್ಧಕ್ರಿಯಾಃ ಪ್ರಜಾಃ ।**
**ಇತ್ಯೇಷ ವೈ ಗೃಹಸ್ಥಸ್ಯ ಸಮಾಸಾದ್ಧರ್ಮಸಂಗ್ರಹಃ ॥ ೧೭೪ ॥**

**ದಂಡೀ ಚ ಮೇಖಲೀ ಚೈವ ಅಧಃಶಾಯೀ ತಥಾಜಿನೀ ।**
**ಗುರುಶುಶ್ರೂಷಣಂ ಭೈಕ್ಷ್ಯಂ ವಿದ್ಯಾರ್ಥೀ ಬ್ರಹ್ಮಚಾರಿಣಃ ॥ ೧೭೫ ॥**

**ಚೀರಪತ್ರಾಜಿನಾನಿ ಸ್ಯುರ್ವನ್ಯಮೂಲಫಲೌಷಧೈಃ ।**
**ಉಭೇ ಸಂಧ್ಯೇ ವಗಾಹಶ್ಚ ಹೋಮಶ್ಚಾರಣ್ಯವಾಸಿನಾಮ್ ॥ ೧೭೬ ॥**

---

ವನ್ನು ಕೊಟ್ಟು ಆಶ್ರಮಗಳ ಕೆಲವು ಮುಖ್ಯವಾದ ಧರ್ಮಗಳನ್ನು ನಿರ್ದೇಶಿಸಿ ಭಾಷಣ ಮಾಡಿದನು.

೧೭೨. ಯಮ, ನಿಯಮ ಮುಂತಾದ ಮನೋಜಯವನ್ನು ಉಂಟುಮಾಡುವ ಯೋಗಾಭ್ಯಾಸವು ಈ ಎಲ್ಲ ಕರ್ಮಗಳ ಮುಖ್ಯವಾದ ಗುರಿಯು. ಮುಖ್ಯವಾಗಿ ಗೃಹಸ್ಥಾಶ್ರಮವೆಂಬುದು ಎಲ್ಲಾ ವರ್ಣಗಳಿಗೂ ಆಧಾರವಾದ ಆಶ್ರಮವಾಗಿರುವುದು.

೧೭೩. ಮುಂದೆ ಮೂರು ಆಶ್ರಮಗಳ ವೃತ್ತಿಗಳನ್ನೂ ವ್ರತ, ನಿಯಮಗಳನ್ನೂ, ಕ್ರಮವಾಗಿ ವಿವರಿಸುವುದನ್ನು ಕೇಳಿರಿ. ಅವರವರ ಆಶ್ರಮವನ್ನನುಸರಿಸಿ ನಿಯಮಗಳು ವಿಂಗಡಿಸಲ್ಪಟ್ಟಿವೆ.

೧೭೪. ಪಾಣಿಗ್ರಹಣ, ಔಪಾಸನ ಹೋಮ, ಅತಿಥಿಸತ್ಕಾರ, ಯಜ್ಞ, ಶ್ರಾದ್ಧಾನುಷ್ಠಾನ ಇವು ಗ್ರಹಸ್ಥಾಶ್ರಮಿಗೆ ಸಂಕ್ಷೇಪವಾಗಿ ಹೇಳಲ್ಪಟ್ಟಿರುವ ಮುಖ್ಯ ಧರ್ಮಗಳು.

೧೭೫. ಪಲಾಶ ಮುಂತಾದ ದಂಡಧಾರಣ, ಮೌಂಜೀಬಂಧನ, ಶಯ್ಯೆ ಇಲ್ಲದ ವೇದಿಕೆಯಲ್ಲಿ ಶಯನ, ಕೃಷ್ಣಾಜಿನಧಾರಣ, ಗುರುಶುಶ್ರೂಷೆ, ಭಿಕ್ಷಾಚರಣೆ, ಮತ್ತು ಗುರುಕುಲದಲ್ಲಿ ವಾಸಮಾಡಿ ವಿದ್ಯಾರ್ಜನೆ ಇವು ಬ್ರಹ್ಮಚಾರಿಯ ಧರ್ಮಗಳು.

೧೭೬. ನಾರು, ಎಲೆ, ಚರ್ಮ (ಅಜಿನ) ಇವುಗಳಿಂದ ನಿರ್ಮಿತವಾದ ವಸ್ತ್ರಗಳನ್ನು ಧರಿಸುವುದು, ಅರಣ್ಯದಲ್ಲಿ ಹುಟ್ಟುವ ಗೆಡ್ಡೆ ಗೆಣಸು, ಹಣ್ಣು, ಔಷಧಿ ಇವು

ವಿಪನ್ನಮುಸಲೇ ಭೈಕ್ಷ್ಯಮಸ್ತೇಯಂ ಶೌಚಮೇವ ಚ ।
ಅಪ್ರಮಾದೋ ವ್ಯವಾಯಶ್ಚ ದಯಾ ಭೂತೇಷು ಚ ಕ್ಷಮಾ ॥ ೧೭೭ ॥

ಶ್ರವಣಂ ಗುರುಶುಶ್ರೂಷಾ ಸತ್ಯಂ ಚ ದಶಮಂ ಸ್ಮೃತಮ್ ।
ದಶಲಕ್ಷಣಕೋ ಹ್ಯೇಷ ಧರ್ಮಃ ಪ್ರೋಕ್ತಃ ಸ್ವಯಂಭುವಾ ॥ ೧೭೮ ॥

ಭಿಕ್ಷೋರ್ವ್ರತಾನಿ ಪಂಚಾತ್ರ ಭೈಕ್ಷ್ಯವೇದವ್ರತಾನಿ ಚ ।
ತೇಷಾಂ ಸ್ಥಾನಾನ್ಯಮುಷ್ಮಿಂ ಚ ಸಂಸ್ಥಿತಾನಾ ಮುಪಷ್ಟ ಸಃ ॥ ೧೭೯ ॥

ಅಷ್ಟಾಶೀತಿಸಹಸ್ರಾಣಿ ಋಷೀಣಾಮೂರ್ಧ್ವರೇತಸಾಮ್ ।
ಸ್ಮೃತಂ ತೇಷಾಂ ತು ಯತ್ ಸ್ಥಾನಂ ತದೇವ ಗುರುವಾಸಿನಾಮ್॥೧೮೦॥

---

ಗಳನ್ನು ಸೇವಿಸುವುದು, ಪ್ರಾತಃಕಾಲ ಮತ್ತು ಸಂಧ್ಯಾಕಾಲದ ಎರಡು ಸಂಧ್ಯಾಕಾಲ ಗಳಲ್ಲಿ ಸ್ನಾನಮಾಡುವುದು, ಮತ್ತು ಅಗ್ನಿಯಲ್ಲಿ ಹೋಮಮಾಡುವುದು ಇವೆಲ್ಲವೂ ವನದಲ್ಲಿ ವಾಸಿಸುವ ವಾನಪ್ರಸ್ಥಾಶ್ರಮಿಗಳ ಧರ್ಮವು.

೧೭೭. ೧೭೮. ಮುಸಲಾದಿ ಧ್ವನಿಯು ನಿಂತ ಚಿಹ್ನೆಯಿಂದ ಪಾಕವು ಸಿದ್ಧ ವಾದುದನ್ನರಿತು ಭಿಕ್ಷೆಯನ್ನು ಬೇಡುವುದು, ಚೌರ್ಯವನ್ನು ತ್ಯಜಿಸುವುದು, ಶೌಚಾ ಚಾರ, ಕರ್ತವ್ಯದಲ್ಲಿ ಅನಾಲಸ್ಯ, ಮೈಥುನ ಪರಿತ್ಯಾಗ, ಸರ್ವಪ್ರಾಣಿಗಳಲ್ಲಿಯೂ ಕರುಣೆ, ತಾಳ್ಮೆ, ಶಾಸ್ತ್ರಾರ್ಥಶ್ರವಣ, ಗುರುಶುಶ್ರೂಷೆ, ಮತ್ತು ಹತ್ತನೆಯ ಧರ್ಮ ವಾದ ಸತ್ಯವಚನ ಈ ಹತ್ತು ಧರ್ಮಗಳ ಸಮಷ್ಟಿಯು ಬ್ರಹ್ಮನಿಂದ ಸನ್ಯಾಸಾಶ್ರಮಿ ಗಳಿಗೆ ವಿಹಿತವಾಗಿರುವುದು.

೧೭೯. ಇವುಗಳಲ್ಲಿ ಭಿಕ್ಷಾಟನೆ, ಮತ್ತು ನಾಲ್ಕು ವೇದವ್ರತಗಳು ಎಂಬ ಐದು ನಿಯಮಗಳು ವರ್ಣಿಗೆ ಮುಖ್ಯವಾದವುಗಳು. ಅವರಿಗೆ ದೇಹತ್ಯಾಗಾನಂತರದಲ್ಲಿ ಉಪಾಸಕರಿಗೆ ಲಭಿಸುವ ಉತ್ತಮ ಲೋಕಗಳು ಲಭಿಸುವುವು.

೧೮೦. ಊರ್ಧ್ವರೇತಸ್ಸುಗಳಾದ ಎಂಭತ್ತೆಂಟು ಸಾವಿರ ಮಹರ್ಷಿಗಳಿಗೆ ಏರ್ಪ ಟ್ಟಿರುವ ಉತ್ತಮವಾದ ಸ್ಥಾನವು ಗುರುಕುಲ ವಾಸಮಾಡಿದ ಪ್ರಶಸ್ತ ಬ್ರಹ್ಮಚಾರಿ ಗಳಿಗೆ ಲಭಿಸುವುದು.

**ಸಪ್ತರ್ಷೀಣಾಂ ತು ಯತ್ ಸ್ಥಾನಂ ಸ್ಮೃತಂ ತದ್ವೈ ವನೌಕಸಾಮ್ ।**
**ಪ್ರಾಜಾಪತ್ಯಂ ಗೃಹಸ್ಥಾನಾಂ ನ್ಯಾಸಿನಾಂ ಬ್ರಹ್ಮಣಃ ಕ್ಷಯಃ॥ ೧೮೧ ॥**

**ಯೋಗಿನಾಮಕೃತಂ ಸ್ಥಾನಂ ತಾನಾಜಿತ್ವಾ ನ ವಿದ್ಯತೇ ।**
**ಸ್ಥಾನಾನ್ಯಾಶ್ರಮಿಣಸ್ತಾನಿ ಬ್ರಹ್ಮಸ್ಥಾನಸ್ಥಿತಾನಿ ತು ॥ ೧೮೨ ॥**

**ಚತ್ವಾರ ಏವ ಪಂಥಾನೋ ದೇವಯಾನಾನಿ ನಿರ್ಮಿತಾಃ ।**
**ಪಂಥಾನಃ ಪಿತೃಯಾನಾಸ್ತು ಸ್ಮೃತಾಶ್ಚತ್ವಾರ ಏವ ತೇ ॥ ೧೮೩ ॥**

**ಬ್ರಹ್ಮಣಾ ಲೋಕತಂತ್ರೇಣ ಆದ್ಯೇ ಮನ್ವಂತರೇ ಪುರಾ ।**
**ಪಂಥಾನೋ ದೇವಯಾನಾ ಯೇ ತೇಷಾಂ ದ್ವಾರಂ ರವಿಃ ಸ್ಮೃತಃ ॥ ೧೮೪ ॥**

**ತಥೈವ ಪಿತೃಯಾನಾನಾಂ ಚಂದ್ರಮಾ ದ್ವಾರಮುಚ್ಯತೇ ।**
**ಏವಂ ವರ್ಣಾಶ್ರಮಾಣಾಂ ಚ ಪ್ರವಿಭಾಗೇ ಕೃತೇ ತದಾ ।**
**ಯದಾ ಪ್ರಜಾ ನಾವರ್ಧಂತ ವರ್ಣಧರ್ಮಸಮಾಸಿತಾಃ ॥ ೧೮೫ ॥**

---

೧೮೧. ಕಶ್ಯಪಾದಿಯಾದ ಸಪ್ತರ್ಷಿಗಳಿಗೆ ನಿಯತವಾದ ಪುಣ್ಯಸ್ಥಾನವು ವಾನಪ್ರಸ್ಥಾಶ್ರಮಿಗಳಿಗೂ, ಗೃಹಸ್ಥಧರ್ಮವನ್ನು ಲೋಪವಿಲ್ಲದೇ ಆಚರಿಸಿದವರಿಗೆ ಪ್ರಾಜಾಪತ್ಯಸ್ಥಾನವೂ, ಸನ್ಯಾಸಿಗಳಿಗೆ ಬ್ರಹ್ಮಲೋಕವೂ ಲಭಿಸುವುದು.

೧೮೨. ಜ್ಞಾನಯೋಗ ತತ್ಪರರಿಗೆ ಅಕೃತ್ರಿಮವಾದ ಬ್ರಹ್ಮಪ್ರಾಪ್ತಿಯೆಂಬ ಮುಕ್ತಿಯು ಲಭಿಸುವುದು. ವಿಹಿತಕರ್ಮವನ್ನು ಆಚರಿಸಿ ಅಕೃತ್ರಿಮವಾದ ಮುಕ್ತಿಯನ್ನು ಹೊಂದಲಾಗುವುದಿಲ್ಲ. ಹೀಗೆ ಆಶ್ರಮ ಧರ್ಮವನ್ನು ಆಚರಿಸಿದವರು ಹೊಂದಬಹುದಾದ ಸ್ಥಾನಗಳು ಬ್ರಹ್ಮಲೋಕದಲ್ಲಿ ಸೇರಿರುವುವು.

೧೮೩. ಹೀಗೆ ನಾಲ್ಕು ಸಾಧನಗಳಿಂದ ಹೊಂದಬೇಕಾದ ದೇವಯಾನ ಮಾರ್ಗಗಳು ಮತ್ತು ಪಿತೃಯಾನ ಮಾರ್ಗಗಳು ಪ್ರತ್ಯೇಕ ನಾಲ್ಕಾಗಿ ವಿಂಗಡಿಸಲ್ಪಟ್ಟಿವೆ.

೧೮೪. ಸರ್ವಲೋಕ ನಿಯಾಮಕನಾದ ಬ್ರಹ್ಮನು ಪ್ರಾಚೀನ ಮನ್ವಂತರದಲ್ಲಿ ರಚಿಸಿರುವ ನಾಲ್ಕು ದೇವಯಾನ ಮಾರ್ಗಗಳಿಗೆ ರವಿಯು ಪ್ರವೇಶದಾಯಕನು. ಮತ್ತು ಪಿತೃಯಾನ ಮಾರ್ಗಗಳಿಗೆ ಚಂದ್ರನು ಪ್ರವೇಶದಾಯಕನು. ಆದ್ದರಿಂದ ಸೂರ್ಯಚಂದ್ರರು, ದೇವಯಾನ, ಪಿತೃಯಾನ ಮಾರ್ಗಗಳಿಗೆ ದ್ವಾರಸ್ವರೂಪರು.

೧೮೫. ಈ ರೀತಿಯಲ್ಲಿ ವರ್ಣಾಶ್ರಮಧರ್ಮಗಳ ವಿಭಜನೆಯು ಮಾಡಲ್ಪಟ್ಟ

**ತತೋಽನ್ಯಾಂ ಮಾನಸೀಂ ಸ್ವಾಂ ವೈ ತ್ರೇ ತಾಮಧ್ಯೇಽಸೃಜತ್ಪ್ರಜಾಃ ।**
**ಆತ್ಮನಸ್ತು ಶರೀರೇಭ್ಯಸ್ತುಲ್ಯಾಶ್ಚೈವಾತ್ಮನಾ ತು ತಾಃ ॥೧೮೬॥**

**ತಸ್ಮಿಂಸ್ತ್ರೇತಾಯುಗೇ ತ್ವಾದ್ಯೇ ಮಧ್ಯಂ ಪ್ರಾಪ್ತೇ ಕ್ರಮೇಣ ತು ।**
**ತತೋಽನ್ಯಾಂ ಮಾನಸೀಂ ಸೋಽಥ ಪ್ರಜಾಃ ಸ್ರಷ್ಟುಂ ಪ್ರಚಕ್ರಮೇ ॥೧೮೭॥**

**ತತಃ ಸತ್ತ್ವರಜೋದ್ರಿಕ್ತಾಃ ಪ್ರಜಾಃ ಸ ಹ್ಯಸೃಜತ್ಪ್ರಭುಃ ।**
**ಧರ್ಮಾರ್ಥಕಾಮಮೋಕ್ಷಾಣಾಂ ವಾರ್ತಾನಾಂ ಸಾಧಕಾಶ್ಚ ಯಾಃ ॥೧೮೮॥**

**ದೇವಾಶ್ಚ ಪಿತರಶ್ಚೈವ ಋಷಯೋ ಮನವಸ್ತಥಾ ।**
**ಯುಗಾನುರೂಪಾ ಧರ್ಮೇಣ ಯೈರಿಮಾ ವರ್ಧಿತಾಃ ಪ್ರಜಾಃ ॥೧೮೯॥**

---

ತರುವಾಯ ವರ್ಣಧರ್ಮಗಳ ಸಂಕೋಚನವೆಂಬ ಬಂಧನದಿಂದ ಪ್ರಜೆಗಳು ವಿಶೇಷವಾಗಿ ವೃದ್ಧಿ ಹೊಂದಲಿಲ್ಲ.

೧೮೬. ಆಗ ತ್ರೇತಾಯುಗದ ಮಧ್ಯದಲ್ಲಿ ಬ್ರಹ್ಮನು ತನ್ನ ಶರೀರದಿಂದ ತನ್ನ ರೂಪ, ಆಕೃತಿಗಳಿಗೆ ತುಲ್ಯವಾದ ಮತ್ತೊಂದು ಮಾನಸ ಪ್ರಜೆಗಳ ಸೃಷ್ಟಿಯನ್ನು ರಚಿಸಿದನು.

೧೮೭. ಆ ಮೊದಲನೆಯ ತ್ರೇತಾಯುಗವು ಕೆಲವು ಕಾಲ ಕಳೆದು ಮಧ್ಯಾವಸ್ಥೆಯನ್ನು ಹೊಂದಲಾಗಿ ಪ್ರಜಾಪತಿಯು ಮತ್ತೊಂದು ಮಾನಸವಾದ ಪ್ರಜೆಗಳ ಸೃಷ್ಟಿಯನ್ನು ಮಾಡಲಾರಂಭಿಸಿದನು.

೧೮೮. ಹೀಗೆ ಸೃಷ್ಟಿಕಾರ್ಯೋನ್ಮುಖನಾದ ಸರ್ವ ನಿಯಾಮಕನಾದ ಬ್ರಹ್ಮನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ಸಾಧನಗಳನ್ನೂ ವಾರ್ತಾ (ಜೀವನ) ಉಪಾಯಗಳನ್ನೂ ಸಾಧಿಸಲು ಅರ್ಹರಾದ ಸತ್ತ್ವ, ರಜೋಗುಣಗಳ ಉದ್ರೇಕವುಳ್ಳ ಪ್ರಜೆಗಳನ್ನು ಸೃಷ್ಟಿಸಿದನು.

೧೮೯. ಹೀಗೆ ಸೃಷ್ಟಿಯಾದ ಪ್ರಜೆಗಳಲ್ಲಿ ಮುಖ್ಯರಾದ ದೇವ, ಪಿತೃ, ಋಷಿ, ಮನು ಮುಂತಾದವರನೇಕರು ಯುಗ ಧರ್ಮಕ್ಕೆ ತಕ್ಕಂತೆ ಸ್ವಧರ್ಮದಿಂದ ಕೂಡಿದ ಪ್ರಜೆಗಳನ್ನು ವೃದ್ಧಿ ಮಾಡಿದರು.

**ಉಪಸ್ಥಿತೇ ತದಾ ತಸ್ಮಿನ್ ಸೃಷ್ಟಿವರ್ಗೇ ಸ್ವಯಂಭುವಃ ।**
**ಅಭಿಧ್ಯಾಯ ಪ್ರಜಾ ಬ್ರಹ್ಮಾ ನಾನಾವೀರ್ಯಾಃ ಸ್ವಮಾನಸೀಃ ॥೧೯೦॥**

**ಪೂರ್ವೋಕ್ತಾ ಯಾ ಮಯಾ ತುಭ್ಯಂ ಜನೋಲೋಕಂ ಸಮಾಶ್ರಿತಾಃ।**
**ಕಲ್ಪೇಽತೀತೇ ಪುರಾ ಆಸನ್ ದೇವಾದ್ಯಾಸ್ತು ಪ್ರಜಾ ಇಹ ॥೧೯೧॥**

**ಧ್ಯಾಯತಸ್ತಸ್ಯ ತಾನೀಹ ಸಂಭೂತ್ಯರ್ಥಮುಪಸ್ಥಿತಾಃ ।**
**ಮನ್ವಂತರಕ್ರಮೇಣೇಹ ಕನಿಷ್ಠಾಃ ಪ್ರಥಮೇನ ತಾಃ ॥೧೯೨॥**

**ಖ್ಯಾತಾಸ್ತು ವಂಶೈರೇತೈಸ್ತು ಪೂರ್ವಂ ಯೈರಿಹ ಭಾವಿತಾಃ ।**
**ಕುಶಲಾಕುಶಲೈಃ ಕಂದ್ಯೈರಕ್ಷೀಣೈಸ್ತೈಸ್ತದಾ ಯುತಾಃ ॥೧೯೩॥**

**ತತ್ಕರ್ಮಫಲದೋಷೇಣ ಹ್ಯುಪಬಂಧಾಃ ಪ್ರಜಜ್ಞಿರೇ ।**
**ದೇವಾಸುರಪಿತೄಂಶ್ಚೈವ ಯಕ್ಷೈರ್ಗಂಧರ್ವಮಾನುಷೈಃ ॥೧೯೪॥**

---

೧೯೦. ಆಗ ಬ್ರಹ್ಮನ ಆ ಸೃಷ್ಟಿ ಪ್ರಪಂಚವು ಪ್ರಾಪ್ತವಾಗಲು ಬ್ರಹ್ಮನು ನಾನಾ ವಿಧ ವೀರ್ಯಗಳಿಂದ ಕೂಡಿದ ತನ್ನ ಮಾನಸ ಪ್ರಜಾವರ್ಗವನ್ನು ಚಿಂತಿಸಿದನು.

೧೯೧. ೧೯೨. ನನ್ನಿಂದ ಪೂರ್ವದಲ್ಲಿ ನಿಮಗೆ ಉಪದೇಶಿಸಲ್ಪಟ್ಟಂತೆ ಹಿಂದಿನ ಕಲ್ಪದಲ್ಲಿ ಜನೋಲೋಕವನ್ನು ಆಶ್ರಯಿಸಿದ ದೇವಾದಿಪ್ರಜೆಗಳು ಧ್ಯಾನಬಲದಿಂದ ಪ್ರಜೆಗಳ ಉತ್ಪತ್ತಿಮಾಡಲೋಸ್ಕರ ಧ್ಯಾನಾಸಕ್ತನಾಗಿ ಬ್ರಹ್ಮನು ಇರುವಾಗ ಪ್ರಾಪ್ತರಾಗಿ ಮೊದಲನೆಯ ಮನ್ವಂತರ ಕ್ರಮದಿಂದ ಕನಿಷ್ಠರಾಗಿ ಜನಿಸಿದರು.

೧೯೩. ಆ ದೇವಾದಿಗಳು ಹಿಂದೆ ಯಾವ ಉತ್ತಮ ವಂಶಸಂಬಂಧದಿಂದ ಭಾವಿಸಲ್ಪಟ್ಟವರಾಗಿ ಪ್ರಸಿದ್ಧಿಹೊಂದಿದ್ದರೋ ಆ ಅಕ್ಷಯವಾದ ಕೌಶಲ, ಅಕೌಶಲ ಗಳಲ್ಲಿ ತಾರತಮ್ಯವನ್ನು ಹೊಂದಿದ ವಂಶಾಂಕುರಗಳಿಂದ ಸೇರಿ ಜನಿಸಿದರು.

೧೯೪-೧೯೫. ಅವರು ಆ ಕರ್ಮಫಲದ ಪರಿಣಾಮದಿಂದ ಸಂತತಿ ರೂಪವಾಗಿ ದೇವ, ಅಸುರ, ಪಿತೃ, ಯಕ್ಷ, ಗಂಧರ್ವ, ಮನುಷ್ಯ, ರಾಕ್ಷಸ, ಪಿಶಾಚ, ಪಶು, ಪಕ್ಷಿ, ಸರ್ಪ, ವೃಕ್ಷ, ನರಕಪ್ರಾಣಿ, ಕ್ರಿಮಿ, ಕೀಟ ಮುಂತಾದ ಅನೇಕ ವಿಧದ ಭೋಗ್ಯ,

**ರಾಕ್ಷಸೈಸ್ತು ಪಿಶಾಚೈಸ್ತ್ಯೆಃ ಪಶುಪಕ್ಷಿಸರೀಸೃಪೈಃ ।**
**ವೃಕ್ಷನಾರಕಕೀಟಾದ್ಯೈಸ್ತೈಸ್ತ್ಯೆಃ ಸರ್ವೈರುಪಸ್ಥಿತಾಃ ।**
**ಆಹಾರಾರ್ಥಂ ಪ್ರಜಾನಾಂ ವೈ ವಿದಾತ್ಮಾನೋ ವಿನಿರ್ಮಮೇ ॥೧೯೫॥**

**॥ ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಸಪ್ತಮೋಽಧ್ಯಾಯಃ ॥**

---

ಭೋಕ್ತೃ ಪ್ರಪಂಚರೂಪವಾಗಿ ಜನ್ಮವನ್ನೆತ್ತಿದರು. ಹೀಗೆ ಪ್ರತಿಯೊಂದು ಪ್ರಪಂಚದ ವಸ್ತುಜಾಲವೂ ಭೋಕ್ಯರೂಪವಾಗಿಯೂ, ಭೋಗ ರೂಪವಾಗಿಯೂ, ಎರಡು ಬಗೆಯಾಗಿ ಬ್ರಹ್ಮನಿಂದ ರಚಿಸಲ್ಪಟ್ಟಿದೆ.

ಬ್ರಹ್ಮಾಂಡ ಪುರಾಣದಲ್ಲಿ ಏಳನೆಯ ಅಧ್ಯಾಯವು ಸಮಾಪ್ತವು.

## ಅಷ್ಟಮೋಽಧ್ಯಾಯಃ

**ಸೂತ ಉವಾಚ**

**ತತೋಽಭಿಧ್ಯಾಯತಸ್ತಸ್ಯ ಮಾನಸ್ಯೋ ಜಜ್ಞಿರೇ ಪ್ರಜಾಃ ।**
**ತಚ್ಛರೀರಸಮುತ್ಪನ್ನೈಃ ಕಾರ್ಯೈಸ್ತೈಃ ಕರಣೈಃ ಸಹ ॥೧॥**

**ಕ್ಷೇತ್ರಜ್ಞಾಃ ಸಮವರ್ತಂತ ಕ್ಷೇತ್ರಸ್ಯೈತಸ್ಯ ಧೀಮತಃ ।**
**ತತೋ ದೇವಾಸುರಪಿತ್ರ್‌ನ್ಮನುಷ್ಯಾಂಶ್ಚ ಚತುಷ್ಟಯಮ್ ॥೨॥**

**ಸಿಸೃಕ್ಷುರಯುತಾಂತಾನಿ ಸ ಚಾತ್ಮಾನಮಯೂಯುಜತ್ ।**
**ಯುಕ್ತಾತ್ಮನಸ್ತತಸ್ತಸ್ಯ ತಮೋಮಾತ್ರಾಸಮುದ್ಭವಃ ॥೩॥**

**ತದಾಭಿಧ್ಯಾಯತಃ ಸರ್ಗಂ ಪ್ರಯತ್ನೋಽಭೂತ್ಪ್ರಜಾಪತೇಃ ।**
**ತತೋಽಸ್ಯ ಜಘನಾತ್ಪೂರ್ವಮಸುರಾ ಜಜ್ಞಿರೇ ಸುತಾಃ ॥೪॥**

---

ಸೂತಮಹರ್ಷಿಯು ಹೀಗೆಂದನು :—

೧. ಅನಂತರದಲ್ಲಿ ಧ್ಯಾನಿಸುತ್ತಿದ್ದ ಬ್ರಹ್ಮನ ಶರೀರದಿಂದ ಕಾರ್ಯ ಮತ್ತು ಕರಣಗಳಿಂದ ಕೂಡಿ ಅನೇಕ ಮಾನಸ ಪ್ರಜೆಗಳು ಹುಟ್ಟಿದರು.

೨. ಆ ಪ್ರಜ್ಞೆಯಿಂದ ಕೂಡಿದ ಬ್ರಹ್ಮದೇವನ ಸಮಷ್ಟಿ ದೇಹದ ಅವಯವಗಳಾದ ಕಾರ್ಯಕರಣ ಸಂಘಾತಗಳೆಂಬ ಉಪಾಧಿಯಿಂದ ದೇವ, ಅಸುರ, ಪಿತೃ, ಮನುಷ್ಯರೆಂಬ ನಾಲ್ಕು ಬಗೆಯ ಜೀವಾತ್ಮರು ಮಾನಸಪ್ರಜೆಗಳಾಗಿ ಜನಿಸಿದರು.

೩. ಈ ಸೃಷ್ಟಿಯಿಂದ ತೃಪ್ತಿಯಿಲ್ಲದ ಸೃಷ್ಟಿಕರ್ತನು ಲಕ್ಷಾಧಿಕವಾಗಿ ಸೃಷ್ಟಿ ಮಾಡಬೇಕೆಂಬ ಅಭಿಲಾಷೆಯಿಂದ ಮನಸ್ಸನ್ನು ಸಮಾಧಾನಮಾಡಿ ಧ್ಯಾನಾಸಕ್ತನಾದನು. ಆಗ ಸಮಾಹಿತಚಿತ್ತನಾದ ಆ ಬ್ರಹ್ಮದೇವನಿಗೆ ತಮೋಗುಣದ ಅಂಶವು ಇತರ ಗುಣಗಳನ್ನು ತಿರಸ್ಕರಿಸಿ ಉದ್ರೇಕಗೊಂಡಿತು.

೪. ಆಗ ಸೃಷ್ಟಿಧ್ಯಾನಮಗ್ನನಾದ ಪ್ರಜಾಪತಿಯು ಮಾಡಿದ ಪ್ರಯತ್ನದಿಂದ ಅವನ ಜಘನಭಾಗದಿಂದ ಮೊದಲು ಅಸುರರೆಂಬ ಪ್ರಜೆಗಳು ಮಕ್ಕಳಾಗಿ ಹುಟ್ಟಿದರು.

**ಅಸುಃ ಪ್ರಾಣಃ ಸ್ಮೃತೋ ವಿಜ್ಞೈಸ್ತಜ್ಜನ್ಮಾನಸ್ತತೋಽಸುರಾಃ ।**
**ಸೃಷ್ಟ್ವಾ ಯಯಾ ಸುರಾಸ್ತನ್ವಾ ತಾಂ ತನುಂ ಸ ವ್ಯಪೋಹತ ॥೫॥**

**ಸಾಪವಿದ್ಧಾ ತನುಸ್ತೇನ ಸದ್ಯೋರಾತ್ರಿ ರಜಾಯತ ।**
**ಸಾ ತಮೋಬಹುಲಾ ಯಸ್ಮಾತ್ತತೋ ರಾತ್ರಿ ಸ್ತ್ರಿಯಾಮಿಕಾ ॥೬॥**

**ಆವೃತಾಸ್ತಮಸಾ ರಾತ್ರೌ ಪ್ರಜಾಸ್ತಸ್ಮಾತ್ಸ್ವಯಂ ಪುನಃ ।**
**ಸೃಷ್ಟ್ವಾಸುರಾಂಸ್ತತಃ ಸೋಽಥ ತನುಮನ್ಯಾಮುಪದ್ಯತ ॥೭॥**

**ಅವ್ಯಕ್ತಾಂ ಸತ್ತ್ವಬಹುಲಾಂ ತತಸ್ತಾಂ ಸೋಽಭ್ಯಯುಂಜತ ।**
**ತತಸ್ತಾಂ ಯುಂಜಮಾನಸ್ಯ ಪ್ರಿಯಮಾಸೀತ್ಪ್ರಭೋಃ ಕಿಲ ॥೮॥**

**ತತೋ ಮುಖಾತ್ಸಮುತ್ಪನ್ನಾ ದೀವ್ಯತಸ್ತಸ್ಯ ದೇವತಾಃ ।**
**ಯತೋಽಸ್ಯ ದೀವ್ಯತೋ ಜಾತಾಸ್ತೇನ ದೇವಾಃ ಪ್ರಕೀರ್ತಿತಾಃ ॥೯॥**

---

೫. ಅಸುರ ಎಂಬ ಶಬ್ದದ ಅಸು ಎಂಬ ಭಾಗಕ್ಕೆ ಪ್ರಾಣವೆಂದು ಅರ್ಥ. ಅದರಿಂದ ಹುಟ್ಟಿದವರು ಅಸುರರು ಎಂದು ಬಲ್ಲವರು ವಿವರಿಸುತ್ತಾರೆ. ಇಂತಹ ಅಸುರರನ್ನು ಯಾವ ದೇಹದಿಂದ ಸೃಜಿಸಿದನೋ ಆ ದೇಹವನ್ನು ಪ್ರಜಾಪತಿಯು ತ್ಯಾಗಮಾಡಿದನು.

೬. ಹೀಗೆ ಬ್ರಹ್ಮನಿಂದ ತ್ಯಜಿಸಲ್ಪಟ್ಟ ಅಸುರೋತ್ಪತ್ತಿಗೆ ಕಾರಣವಾದ ದೇಹವು ತತ್‌ಕ್ಷಣದಲ್ಲಿ ರಾತ್ರಿ ರೂಪವಾಗಿ ಪರಿಣಮಿಸಿತು. ಆ ರಾತ್ರಿಯು ಅಂಧಕಾರಮಯವಾಗಿರುವುದರಿಂದ "ತ್ರಿಯಾಮೆ" ಎಂದು ಕರೆಯಲ್ಪಡುವುದು.

೭. ಹೀಗೆ ರಾತ್ರಿವೇಳೆಯಲ್ಲಿ ಕತ್ತಲೆಯಿಂದ ಆವೃತರಾದ ರಾತ್ರಿಂಚರ ಪ್ರಜೆಗಳಾದ ಅಸುರರನ್ನು ಸೃಷ್ಟಿಸಿ ತರುವಾಯ ಮತ್ತೊಂದು ದೇಹವನ್ನು ಧರಿಸಿದನು.

೮. ಸತ್ತ್ವಗುಣದ ಉದ್ರೇಕವುಳ್ಳದ್ದೂ ಸಾಮಾನ್ಯ ಜನರಿಗೆ ಅವೇದ್ಯ (ಅಗಮ್ಯ) ವೂ ಆದ ದೇಹವನ್ನು ಸ್ವೀಕರಿಸಿ ಆ ದೇಹದಲ್ಲಿ ಯೋಗಾಭ್ಯಾಸ ತತ್ಪರನಾದನು. ಹಾಗೆ ಯೋಗಾಭ್ಯಾಸದಿಂದ ಕೂಡಿದ ಪ್ರಭುವಾದ ಬ್ರಹ್ಮನಿಗೆ ಪ್ರೀತಿಯು ಉದಯಿಸಿತು.

೯. ಅನಂತರದಲ್ಲಿ ಪ್ರಕಾಶಿಸುತ್ತಿರುವ ಆ ಬ್ರಹ್ಮದೇವನ ಮುಖದಿಂದ ಅನೇಕ ದೇವತೆಗಳು ಹುಟ್ಟಿದರು. ಪ್ರಕಾಶಿಸುತ್ತಿದ್ದ ಬ್ರಹ್ಮನ ಶರೀರಾವಯವದಿಂದ ಹುಟ್ಟಿದ ಪ್ರಜೆಗಳು ದಿವ್‌ಧಾತುವಿನಿಂದ ರೂಪಗೊಂಡಿರುವ ದೇವ ಎಂಬ ಸಂಜ್ಞೆಯಿಂದ ಕರೆಯಲ್ಪಡುವವರಾದರು.

**ಧಾತುರ್ದಿವಿತಿ ಯಃ ಪ್ರೋಕ್ತಃ ಕ್ರೀಡಾಯಾ ಸ ವಿಭಾವ್ಯತೇ ।**
**ತಸ್ಮಾತ್ತಸ್ಯಾಸ್ತು ದಿವ್ಯಾಯಾ ಜಜ್ಞಿರೇ ತೇನ ದೇವತಾಃ ॥ ೧೦ ॥**

**ದೇವಾನ್ ಸೃಷ್ಟ್ವಾ ತತಃ ಸೋಽಥ ತನುಂ ದಿವ್ಯಾಮುಪೋಹತ ।**
**ಉತ್ಸೃಷ್ಟಾ ಸಾ ತನುಸ್ತೇನ ಅಹಃ ಸಮಭವತ್ತದಾ ॥ ೧೧ ॥**

**ತಸ್ಮಾದಹಃಕರ್ಮಯುಕ್ತಾ ದೇವತಾಃ ಸಮುಪಾಸತೇ ।**
**ದೇವಾನ್ ಸೃಷ್ಟ್ವಾ ತತಃ ಸೋಽಥ ತನುಮನ್ಯಾಮುಪಪ್ಯತ ॥ ೧೨ ॥**

**ಸತ್ತ್ವಮಾತ್ರಾತ್ಮಿಕಾಮೇವ ತತೋಽನ್ಯಾಮಭ್ಯಯುಂಕ್ತ ವೈ ।**
**ಪಿತೇವ ಮನ್ಯಮಾನಸ್ತಾನ್ ಪುತ್ರಾನ್ ಪ್ರಧ್ಯಾಯ ಸ ಪ್ರಭುಃ॥ ೧೩ ॥**

**ಪಿತರೋ ಹ್ಯಭವಂಸ್ತಸ್ಯಾ ಮಧ್ಯೇರಾತ್ರ್ಯಹಯೋಃ ಪೃಥಕ್ ।**
**ತಸ್ಮಾತ್ತೇ ಪಿತರೋ ದೇವಾಃ ಪಿತೃತ್ವಂ ತೇಷು ತತ್ ಸ್ಮೃತಮ್ ॥ ೧೪ ॥**

---

೧೦. ಧಾತುಪಾಠದಲ್ಲಿ ದಿವ್ ಎಂಬ ಧಾತುವು ಕ್ರೀಡಾ ಎಂಬ ಅರ್ಥದಲ್ಲಿ ಪಠಿಸಲ್ಪಟ್ಟಿರುವುದರಿಂದ ಕ್ರೀಡಾವಿನೋದದಿಂದ ಕೂಡಿರುವ ಬ್ರಹ್ಮದೇವನ ಶರೀರದಿಂದ ಹುಟ್ಟಿದ ಪ್ರಜೆಗಳು ದಿವ್‌ಧಾತುವಿನ ಸಂಬಂಧವುಳ್ಳ ದೇವತಾ ಎಂಬ ಸಂಕೇತವನ್ನು ಹೊಂದಿದರು.

೧೧. ಹೀಗೆ ದೇವತೆಗಳನ್ನು ಸೃಷ್ಟಿಸಿದ ತರುವಾಯ ಆ ಬ್ರಹ್ಮನು ದೇವತಾ ಜನ್ಮಕ್ಕೆ ಕಾರಣವಾದ ಆ ದಿವ್ಯ ದೇಹವನ್ನು ತ್ಯಜಿಸಿದನು. ಅವನಿಂದ ಬಿಡಲ್ಪಟ್ಟ ಆ ದೇಹವು ಅಹೋ (ಹಗಲು) ರೂಪದಿಂದ ಪರಿಣಮಿಸಿತು.

೧೨. ಆದ್ದರಿಂದ ದೇವತೆಗಳು ಅಹಸ್ಸಿನಲ್ಲಿ ಮಾಡುವ ಕರ್ಮಗಳಿಂದ ಆರಾಧಿಸಲ್ಪಡುವವರೂ, ಮತ್ತು ಆ ಕರ್ಮಗಳಿಂದ ಪ್ರಸನ್ನರಾಗುವವರೂ ಆಗಿ ಸೇವಿಸಲ್ಪಡುತ್ತಾರೆ. ಇಂತಹ ದೇವತೆಗಳನ್ನು ಸೃಷ್ಟಿಸಿದ ನಂತರ ಆ ದೇಹವನ್ನು ಬಿಟ್ಟು ಬೇರೊಂದು ದೇಹವನ್ನು ಸ್ವೀಕರಿಸಿದನು.

೧೩. ಈಗ ಹೊಸದಾಗಿ ಪರಿಗ್ರಹಿಸಿದ ದೇಹವು ಸತ್ತ್ವಗುಣದ ಅಧಿಕಾಂಶದಿಂದ ಕೂಡಿದುದಾಗಿದ್ದಿತು. ಆ ದೇಹದಲ್ಲಿ ಸೃಷ್ಟಿಧ್ಯಾನೋನ್ಮುಖನಾಗಿ ಆ ಪ್ರಭುವಾದ ಬ್ರಹ್ಮನು ಮುಂದೆ ಹುಟ್ಟಬಹುದಾದ ಪುತ್ರರನ್ನು ತಂದೆಯಂತೆ ಭಾವಿಸಿದನು.

೧೪. ಈ ಅಭಿಮಾನ ವಿಶೇಷದಿಂದ ರಾತ್ರಿ ಅಹಸ್ಸುಗಳ ಮಧ್ಯಕಾಲವಾದ

ಯಯಾ ಸೃಷ್ಟಾಸ್ತು ಪಿತರಸ್ತಾಂ ತನುಂ ಸ ವ್ಯಪೋಹತ ।
ಸಾಪವಿದ್ಧಾ ತನುಸ್ತೇನ ಸದ್ಯಃ ಸಂಧ್ಯಾ ವ್ಯಜಾಯತ ॥ ೧೫ ॥

ತಸ್ಮಾದಹರ್ದೇವತಾನಾಂ ರಾತ್ರಿರ್ಯಾ ಸಾಽಸುರೀ ಸ್ಮೃತಾ ।
ತಯೋರ್ಮಧ್ಯೇ ತು ವೈ ಪೈತ್ರೀ ಯಾ ತನುಃ ಸಾ ಗರೀಯಸೀ ॥ ೧೬ ॥

ತಸ್ಮಾದ್ದೇವಾಸುರಾಶ್ಚೈವ ಋಷಯೋ ಮಾನವಾಸ್ತಥಾ ।
ಯುಕ್ತಾಸ್ತನುಮುಪಾಸಂತೇ ಉಷಾವ್ಯುಷ್ಟ್ಯೋರ್ಯದಂತರಮ್ ॥ ೧೭ ॥

ತಸ್ಮಾದಹ್ರಾತ್ರ್ಯಹಯೋಃ ಸಂಧಿಮುಪಾಸಂತೇ ತಥಾ ದ್ವಿಜಾಃ ।
ತತೋಽನ್ಯಸ್ಯಾಂ ಪುನರ್ಬ್ರಹ್ಮಾ ಸ್ವತನ್ವಾಮುಪಪದ್ಯತ ॥ ೧೮ ॥

ರಜೋಮಾತ್ರಾತ್ಮಿಕಾ ಯಾ ತು ಮನಸಾ ಸೋಽಸೃಜತ್ಪ್ರಭುಃ ।
ಮನಸಾ ತು ಸುತಾಸ್ತಸ್ಯ ಪ್ರಜನಾಜ್ಜಜ್ಞಿರೇ ಪ್ರಜಾಃ ॥ ೧೯ ॥

---

ಸಂಧ್ಯಾಭಿಮಾನಿಗಳಾಗಿರುವ ಪಿತೃಗಳು ಬೇರೆಯಾಗಿ ಹುಟ್ಟಿದರು. ಈ ಪಿತೃದೇವತೆಗಳ ಉತ್ಪತ್ತಿ ಸಮಯದಲ್ಲಿ ಜನಕನಾಗಿರುವ ಬ್ರಹ್ಮನಿಗೆ ಪಿತೃತ್ವಭಾವನೆಯು ಇರುವುದರಿಂದ ಆ ಪುತ್ರರು ಪಿತೃದೇವರೆಂದೆನಿಸಿಕೊಂಡರು.

೧೫. ಪಿತೃದೇವತೆಗಳನ್ನು ನಿರ್ಮಿಸಲು ಉಪಕರಣವಾಗಿದ್ದ ದೇಹವನ್ನು ಮೊದಲಿನಂತೆ ಬ್ರಹ್ಮನು ತ್ಯಜಿಸಿದನು. ಆ ದೇಹವು ಒಡನೆಯೇ ಸಂಧ್ಯಾಕಾಲರೂಪವಾಗಿ ಹುಟ್ಟಿತು.

೧೬. ಆದುದರಿಂದ ದೇವತೆಗಳಿಗೆ ಅಹಃಕಾಲವು ಪ್ರಿಯವೆಂದೂ, ಅಸುರರಿಗೆ ರಾತ್ರಿ ಕಾಲವು ಮುಖ್ಯವೆಂದೂ ಆ ಅಹೋರಾತ್ರಿಗಳನ್ನು ಸಂಧಿಸುವ ಸಂಧ್ಯಾಕಾಲವು ಪಿತೃದೇವತೆಗಳಿಗೆ ಪ್ರಶಸ್ತವಾದುದೆಂದೂ, ಬ್ರಹ್ಮನು ಬಿಟ್ಟ ದೇಹಗಳ ಪರಿಣಾಮಗಳ ನಿಮಿತ್ತದಿಂದ ಪ್ರಸಿದ್ಧಿ ಬಂದಿರುವುದು.

೧೭. ಆದ್ದರಿಂದ ದೇವತೆಗಳೂ, ಅಸುರರೂ, ಋಷಿಗಳೂ ಮತ್ತು ಮಾನವರೂ ಪಿತೃದೇವತೆಗಳ ಅಭಿಮಾನಪಾತ್ರವಾದ ರಾತ್ರಿ, ಪ್ರಭಾತಕಾಲಗಳ ಅಂತರವೆಂಬ ಸಂಧಿಯನ್ನು ಏಕಾಗ್ರಚಿತ್ತರಾಗಿ ಉಪಾಸನೆ ಮಾಡುವರು.

೧೮. ಹಾಗೆ ತ್ರೈವರ್ಣಿಕರು ಅಹೋರಾತ್ರಿಗಳ ಸಂಧಿಕಾಲದಲ್ಲಿ ಸಂಧ್ಯೋಪಾಸನೆ ಮಾಡುವರು. ಅನಂತರದಲ್ಲಿ ಸೃಷ್ಟಿಕರ್ತನು ಮತ್ತೊಂದು ದೇಹವನ್ನು ಸ್ವೀಕರಿಸಿದನು.

೧೯. ಆ ದೇಹವು ರಜೋಗುಣದಿಂದ ಪೂರ್ಣವಾಗಿತ್ತು. ಆ ದೇಹದಲ್ಲಿ

**ಮನನಾಚ್ಚ ಮನುಷ್ಯಾಸ್ತೇ ಪ್ರಜನಾತ್ಪ್ರಥಿತಾಃ ಪ್ರಜಾಃ ।**
**ಸೃಷ್ಟ್ವಾ ಪುನಃ ಪ್ರಜಾಃ ಸೋಽಥ ಸ್ವಾಂ ತನುಂ ಸ ವ್ಯಪೋಹತ ॥೨೦ ॥**

**ಸಾಽಪವಿದ್ಧಾ ತನುಸ್ತೇನ ಜ್ಯೋತ್ಸ್ನಾ ಸದ್ಯಸ್ತ್ವಜಾಯತ ।**
**ತಸ್ಮಾದ್ಭವಂತಿ ಸಂಹೃಷ್ಟಾ ಜ್ಯೋತ್ಸ್ನಾಯಾ ಉದ್ಭವೇ ಪ್ರಜಾಃ॥ ೨೧ ॥**

**ಇತ್ಯೇತಾಸ್ತನವಸ್ತೇನ ಹ್ಯಪವಿದ್ಧಾ ಮಹಾತ್ಮನಾ ।**
**ಸದ್ಯೋ ರಾತ್ರ್ಯಹನೀ ಚೈವ ಸಂಧ್ಯಾ ಜ್ಯೋತ್ಸ್ನಾ ಚ ಜಜ್ಞಿರೇ ॥ ೨೨ ॥**

**ಜ್ಯೋತ್ಸ್ನಾ ಸಂಧ್ಯಾಹನೀ ಚೈವ ಸತ್ತ್ವಮಾತ್ರಾತ್ಮಕಂ ತ್ರಯಮ್ ।**
**ತಮೋಮಾತ್ರಾತ್ಮಿಕಾ ರಾತ್ರಿಃ ಸಾ ವೈ ತಸ್ಮಾನ್ನಿಯಾಮಿಕಾ ॥ ೨೩ ॥**

**ತಸ್ಮಾದ್ದೇವಾ ದಿವ್ಯತನ್ವಾ ತುಷ್ಟ್ಯಾ ಸೃಷ್ಟಾ ಮುಖಾತ್ತು ವೈ ।**
**ಯಸ್ಮಾತ್ತೇಷಾಂ ದಿವಾಜನ್ಮ ಬಲಿನಸ್ತೇನ ತೇ ದಿವಾ ॥ ೨೪ ॥**

---

ಬ್ರಹ್ಮನು ಪ್ರಜಾಸೃಷ್ಟಿಯನ್ನು ನೆರವೇರಿಸಬೇಕೆಂದು ಮನನಮಾಡಲಾಗಿ ಆ ದೇಹದ ಪ್ರಜನೇಂದಿಯದಿಂದ ಮನುಷ್ಯರೆಂದು ಪ್ರಸಿದ್ಧರಾದ ಪ್ರಜೆಗಳು ಹುಟ್ಟಿದರು.

೨೦. ಆ ಪ್ರಜೆಗಳು ಜನ್ಮಕಾಲದಲ್ಲಿ ಬ್ರಹ್ಮನು ಮನನಮಾಡಿದ್ದರಿಂದ ಮನುಷ್ಯರೆಂದೂ, ಪ್ರಜನೇಂದ್ರಿಯದಿಂದ ಹುಟ್ಟಿದ್ದರಿಂದ ಪ್ರಜೆಗಳೆಂದೂ ಪ್ರಸಿದ್ಧಿ ಹೊಂದಿದರು. ಹೀಗೆ ಪ್ರಜಾಸೃಷ್ಟಿಯನ್ನು ಮುಂದುವರಿಸಿ ಮತ್ತೆ ತನ್ನ ಆ ದೇಹ ವನ್ನು ಬಿಟ್ಟನು.

೨೧. ಹೀಗೆ ಬಿಡಲ್ಪಟ್ಟ ಆ ದೇಹವು ಕೂಡಲೇ ಚಂದ್ರಿಕಾರೂಪವನ್ನು ಹೊಂದಿತು. ಆದುದರಿಂದ ಸಮಸ್ತ ಪ್ರಜೆಗಳೂ ಚಂದ್ರಿಕಾ ಪ್ರಕಾಶದಲ್ಲಿ ಹರ್ಷಚಿತ್ತ ರಾಗುವರು.

೨೨. ಈ ರೀತಿಯಲ್ಲಿ ಮಹಾತ್ಮನಾದ ಬ್ರಹ್ಮನು ಸೃಷ್ಟಿಉಪಕರಣಗಳಾದ ಶರೀರಗಳನ್ನು ಬಿಡುತ್ತಿರಲು ಆ ಶರೀರಗಳು ಸದ್ಯದಲ್ಲೇ ರಾತ್ರಿ, ಅಹಸ್ಸು, ಸಂಧ್ಯಾ ಮತ್ತು ಬೆಳದಿಂಗಳುಗಳಾಗಿ ಜನಿಸಿದವು.

೨೩. ಇವುಗಳಲ್ಲಿ ರಾತ್ರಿಯನ್ನು ಬಿಟ್ಟು ಮಿಕ್ಕ ಅಹಸ್ಸು, ಸಂಧ್ಯಾ ಮತ್ತು ಚಂದ್ರಿಕೆಗಳು ಸತ್ತ್ವಗುಣದ ಪರಿಣಾಮಗಳು. ರಾತ್ರಿಯು ಮಾತ್ರ ತಮೋಗುಣ ಪೂರ್ಣವಾಗಿಯೂ ಅದಕ್ಕೆ ನಿಯಾಮಕವಾಗಿಯೂ ಇರುವುದು.

೨೪. ದಿವ್ಯದೇಹದಿಂದ ಹರ್ಷಚಿತ್ತನಾದ ಬ್ರಹ್ಮನು ಮುಖದಿಂದ ದೇವತೆ

ತನ್ವಾ ಯಂದಸುರಾನ್ರಾತ್ರ್ಯಾ ಜಘನಾದಸೃಜತ್ಪ್ರಭುಃ ।
ಪ್ರಾಣೇಭ್ಯೋ ರಾತ್ರಿಜನ್ಮಾನೋ ಹ್ಯಜೇಯಾ ನಿಶಿ ತೇನ ತೇ ॥ ೨೫ ॥

ಏತಾನ್ಯೇವ ಭವಿಷ್ಯಾಣಾಂ ದೇವಾನಾಮಸುರೈಃ ಸಹ ।
ಪಿತೄಣಾಂ ಮಾನುಷಾಣಾಂ ಚ ಅತೀತಾನಾಗತೇಷು ವೈ ॥ ೨೬ ॥

ಮನ್ವಂತರೇಷು ಸರ್ವೇಷು ನಿಮಿತ್ತಾನಿ ಭವಂತಿ ಹಿ ।
ಜ್ಯೋತ್ಸ್ನಾ ರಾತ್ರ್ಯಹನೀ ಸಂಧ್ಯಾ ಚತ್ವಾರ್ಯೇತಾನಿ ತಾನಿ ವಾ ॥ ೨೭ ॥

ಭಾಂತಿ ಯಸ್ಮಾತ್ತತೋ ಭಾತಿ ಭಾಶಬ್ದೋ ವ್ಯಾಪ್ತಿದೀಪ್ತಿಷು ।
ಅಂಭಾಂಸ್ಯೇತಾನಿ ಸೃಷ್ಟ್ವಾ ತು ದೇವದಾನವಮಾನುಷಾನ್ ॥ ೨೮ ॥

ಪಿತೄಂಶ್ಚೈವ ತಥಾ ಚಾನ್ಯಾನ್ವಿವಿಧಾನ್ಯಸೃಜತ್ಪ್ರಜಾಃ ।
ತಾಮುತ್ಸೃಜ್ಯ ತತೋ ಜ್ಯೋತ್ಸ್ನಾಂ ತತೋಽನ್ಯಾಂ ಪ್ರಾಪ್ಯ ಸ ಪ್ರಭುಃ ॥ ೨೯ ॥

---

ಗಳನ್ನು ದಿವಾಕಾಲದಲ್ಲಿ ಸೃಷ್ಟಿಸಿದ್ದರಿಂದ ಆ ದೇವತೆಗಳು ಹಗಲಲ್ಲಿ ಬಲಿಷ್ಠರಾಗಿಯೂ, ಶ್ರೇಷ್ಠರಾಗಿಯೂ, ಪ್ರಸಿದ್ಧರಾದರು.

೨೫. ಪ್ರಭುವು ಅಸುರರನ್ನು ರಾತ್ರಿಯೆಂಬ ದೇಹದಿಂದ ಜಘನಾವಯದಿಂದ ಸೃಷ್ಟಿಸಿದನು. ಆ ಪ್ರಜೆಗಳು ಪ್ರಾಣಗಳಿಂದ ರಾತ್ರಿವೇಳೆಯಲ್ಲಿ ಜನ್ಮವೆತ್ತಿದ್ದರಿಂದ ರಾತ್ರಿಯಲ್ಲಿ ಅಜೇಯರಾದರು.

೨೬-೨೭. ಹಿಂದಿನ ಕಲ್ಪದಲ್ಲಿ ದೇವ, ಅಸುರ ಪಿತೃ, ಮತ್ತು ಮನುಷ್ಯರಿಗೆ ಈ ಬಗೆಯ ಉತ್ಪತ್ತಿಯ ಕಾರಣಗಳಿದ್ದಂತೆ ಭೂತ, ಭವಿಷ್ಯ, ಸರ್ವಮನ್ವಂತರಗಳಲ್ಲಿಯೂ ಚಂದ್ರಿಕಾ, ರಾತ್ರಿ, ಅಹಸ್ಸು ಮತ್ತು ಸಂಧ್ಯಾ ಎಂಬ ನಾಲ್ಕು ಶರೀರಗಳು ನಿಮಿತ್ತಗಳಾಗುವುವು.

೨೮. ಈ ದೇವದಾನವ ಮನುಷ್ಯ ಮತ್ತು ಪಿತೃಗಳು ಬ್ರಹ್ಮನಿಂದ ಜನ್ಮವೆತ್ತಿ ಅನೇಕ ಅಸಾಧಾರಣ ಶಕ್ತಿಗಳಿಂದ ವ್ಯಾಪ್ತಿ ಮತ್ತು ದೀಪ್ತಿ ಉಳ್ಳವರಾದ್ದರಿಂದ ಆ ಅರ್ಥವನ್ನು ಸೂಚಿಸುವ ಭಾತಿ ಎಂಬ ಧಾತುವಿನ ರೂಪಾಂತರವಾದ ಅಂಭಃ ಎಂಬ ಸಂಜ್ಞೆಯನ್ನು ಹೊಂದಿದ್ದಾರೆ.

೨೯. ಮೇಲ್ಕಂಡ ಪ್ರಜೆಗಳನ್ನು ಸೃಷ್ಟಿಸಿದ ತರುವಾಯ ಮತ್ತೆ ಕೆಲವು ನಾನಾ

ಮೂರ್ತಿಂ ರಜಸ್ತಮೋದ್ರಿಕ್ತಾಂ ತತಸ್ತಾಂ ಸೋಽಭ್ಯಯುಂಜತ ।
ತತೋಽನ್ಯಾಃ ಸೋಂಧಕಾರೇ ಚ ಕ್ಷುಧಾಽಽವಿಷ್ಟಾಃ ಪ್ರಜಾಃ ಸೃಜನ್ ॥ ೩೦ ॥

ತಾಃ ಸೃಷ್ಟಾಸ್ತು ಕ್ಷುಧಾವಿಷ್ಟಾ ಅಂಭಾಂಸ್ಯಾದಾತು ಮುದ್ಯತಾಃ ।
ಅಂಭಾಂಸ್ಯೇತಾನಿ ರಕ್ಷಾಮ ಉಕ್ತವಂತಸ್ತು ತೇಷು ಯೇ ॥ ೩೧ ॥

ರಾಕ್ಷಸಾಸ್ತೇ ಸ್ಮೃತಾಸ್ತಸ್ಮಾತ್ಕ್ಷುಧಾತ್ಮಾನೋ ನಿಶಾಚರಾಃ ।
ಯೇಽಬ್ರುವನ್ ಕ್ಷಿಣುಮೋಽಂಭಾಂಸಿ ತೇಷಾಂ ಹೃಷ್ಟಾಃ ಪರಸ್ಪರಮ್ ॥ ೩೨ ॥

ತೇನ ತೇ ಕರ್ಮಣಾ ಯಕ್ಷಾ ಗುಹ್ಯಕಾಃ ಕ್ರೂರಕರ್ಮಿಣಃ ।
ರಕ್ಷೇತಿ ಪಾಲನೇ ಚಾಪಿ ಧಾತುರೇಷ ವಿಭಾವ್ಯತೇ ॥ ೩೩ ॥

ಯ ಏಷ ಕ್ಷೀತಿಧಾತುರ್ವೈ ಕ್ಷಪಣೇ ಸ ನಿರುಚ್ಯತೇ ।
ರಕ್ಷಣಾದ್ರಕ್ಷ ಇತ್ಯುಕ್ತಂ ಕ್ಷಪಣಾದ್ಯಕ್ಷ ಉಚ್ಯತೇ ॥ ೩೪ ॥

---

ವಿಧವಾದ ಪ್ರಜೆಗಳನ್ನು ಸೃಷ್ಟಿಮಾಡಲು ಕುತೂಹಲಿಯಾದ ಬ್ರಹ್ಮನು ಆ ಚಂದ್ರಿಕಾ ರೂಪವಾದ ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಸ್ವೀಕರಿಸಿದನು.

೩೦. ಆ ಮೂರ್ತಿಯು ರಜೋಗುಣ ತಮೋಗುಣಗಳ ಉದ್ರೇಕದಿಂದ ಕೂಡಿತ್ತು. ಆ ದೇಹಾಭಿಮಾನದಿಂದ ಧ್ಯಾನಿಸಿ ಅಂಧಕಾರದಲ್ಲಿ ಹಸಿವಿನಿಂದ ಪೀಡಿತ ರಾದ ಮತ್ತೊಂದು ಜಾತಿಯ ಪ್ರಜೆಗಳನ್ನು ಸೃಜಿಸಿದನು.

೩೧. ಆ ಪ್ರಜೆಗಳು ಸೃಷ್ಟಿಯಾದ ಕೂಡಲೇ ಕ್ಷುಧಾಪೀಡಿತರಾಗಿ ದೇವ, ಪಿತೃ ಮುಂತಾದ ಪ್ರಜೆಗಳನ್ನು ತಿನ್ನಲು ಉದ್ಯುಕ್ತರಾದರು. ಅವರಲ್ಲಿ ಈ ದೇವಾಸುರ ರೂಪವಾದ ಅನ್ನವನ್ನು ನಮ್ಮ ಆಹಾರಕ್ಕಾಗಿ ರಕ್ಷಿಸಬೇಕೆಂದು ಒಂದು ಗುಂಪು ಹೇಳಿತು.

೩೨. ಕ್ಷುಧೆಯಸ್ವಭಾವದಿಂದ ಕೂಡಿದ ರಾತ್ರಿಂಚರರ ಆ ಗುಂಪು ರಾಕ್ಷಸರೆಂದು ಕರೆಯಲ್ಪಟ್ಟಿತು. ಮತ್ತೆ ಕೆಲವರು ಅನ್ಯೋನ್ಯವಾಗಿ ಸೇರಿ ಬಹು ಸಂತೋಷಪಟ್ಟು ಈ ದೇವಾಸುರಾದಿ ಪ್ರಜೆಗಳನ್ನು ನಾಶಮಾಡೋಣವೆಂದು ಹೇಳಿದರು.

೩೩. ಆ ವಚನದಿಂದ ಯಕ್ಷ, ಗುಹ್ಯಕ, ಮುಂತಾದ ಪ್ರಜೆಗಳು ಕ್ರೂರ ಕರ್ಮಿಗಳಾದರು. ರಕ್ಷ ಎಂಬ ಧಾತುವು ಪಾಲಿಸುವುದೆಂಬ ಅರ್ಥದಲ್ಲಿ ಪಠಿಸಲ್ಪಟ್ಟಿದೆ.

೪. ಕ್ಷಿ ಎಂಬ ಧಾತುವು ಕ್ಷಪಣ ಅಥವಾ ನಾಶಮಾಡುವುದು ಎಂಬ ಅರ್ಥದಲ್ಲಿ ಪಠಿಸಲ್ಪಟ್ಟಿದೆ. ರಕ್ಷಣ ಮಾಡಬೇಕೆಂಬ ನುಡಿಯನ್ನು ಆಡುತ್ತಿರುವುದರಿಂದ ರಾಕ್ಷಸ

ತಾನ್ ದೃಷ್ಟ್ವಾsಪ್ರಿಯೇಣಾಸ್ಯ ಕೇಶಾಃ ಶೀರ್ಣಾಶ್ಚ ಧೀಮತಃ ।
ತೇ ಶೀರ್ಣಾ ವ್ಯುತ್ಥಿತಾ ಹ್ಯೂರ್ಧ್ವಮಾರೋಹಂತಃ ಪುನಃ ಪುನಃ ॥೩೫॥

ಹೀನಾ ಯೇ ಶಿರಸೋ ಬಾಲಾಃ ಪನ್ನಾಶ್ಚೈವಾಪಸರ್ಪಿಣಃ
ಬಾಲಾತ್ಮನಾ ಸ್ಮೃತಾ ವ್ಯಾಲಾ ಹೀನತ್ವಾದಹಯಃ ಸ್ಮೃತಾಃ ॥ ೩೬ ॥

ಪನ್ನತ್ವಾತ್ಪನ್ನಗಾಶ್ಚಾಪಿ ವ್ಯಪಸರ್ಪಾಚ್ಚ ಸರ್ಪತಾ ।
ತೇಷಾಂ ಲಯಃ ಪೃಥಿವ್ಯಾಂ ಯಃ ಸೂರ್ಯಾಚಂದ್ರಮಸೌ ಘನಾಃ
॥ ೩೭ ॥

ತಸ್ಯ ಕ್ರೋಧೋದ್ಭವೋ ಯೋsಸೌ ಅಗ್ನಿಗರ್ಭಃ ಸುದಾರುಣಃ ।
ಸ ತಾನ್ ಸರ್ಪಾನ್ ಸಹೋತ್ಪನ್ನಾನಾವಿವೇಶ ವಿಷಾತ್ಮಕಃ ॥ ೩೮ ॥

---

ರೆಂದೂ, ಕ್ಷಪಣಮಾಡೋಣವೆಂಬ ವಚನದಿಂದ "ಯಕ್ಷ" ರೆಂದೂ ಪ್ರಸಿದ್ಧಿಯುಂಟಾಯಿತು.

೩೫. ಮೇಲೆ ಹೇಳಿದ ರಾಕ್ಷಸ ಮತ್ತು ಯಕ್ಷ ಮುಂತಾದ ಹಿಂಸಕ ಪ್ರಾಣಿ ಸೃಷ್ಟಿಯನ್ನು ಕಂಡು ಜ್ಞಾನಿಯಾದ ಬ್ರಹ್ಮನಿಗೆ ಅಪ್ರೀತಿಯು ಉಂಟಾಗಿ ಅದರಿಂದ ತನ್ನ ಕೇಶಗಳೆಲ್ಲವೂ ಕೆಳಗೆ ಬಿದ್ದವು. ಹೀಗೆ ಬಿದ್ದಹಾಗೆಲ್ಲ ಮತ್ತೆ ಆ ಕೇಶಗಳು ಊರ್ಧ್ವಮುಖವಾಗಿ ಬೆಳೆಯಲಾರಂಭಿಸಿದವು.

೩೬. ಬ್ರಹ್ಮನ ಶೀರ್ಷದಿಂದ ಹೀನವಾಗಿರುವ ಬಾಲರೂಪವಾದ ಕೇಶಗಳು ಹರಿಯುವ ಸ್ವಭಾವದಿಂದ ಕೂಡಿದ್ದವು. ಆ ಕೇಶಗಳು ವಾಲರೂಪವಾದ್ದರಿಂದ ಅದ ರಿಂದ ಹುಟ್ಟಿದ ಪ್ರಾಣಿಗಳು ವ್ಯಾಲಗಳೆಂದು ಕರೆಯಲ್ಪಟ್ಟವು.. ಮತ್ತು ಶಿರದಿಂದ ಹೀನವಾದ್ದರಿಂದ ಅಹಿಗಳೆಂದು ನಾಮಾಂಕಿತಗಳಾದವು.

೩೭. ಪಾದ ಹೀನಗಳಾದ್ದರಿಂದ ಪನ್ನಗಗಳೆಂದೂ ಹರಿದು ಹೋಗುವ ಶೀಲ ದಿಂದ ಸರ್ಪಗಳೆಂದೂ ಅನ್ವರ್ಥನಾಮಗಳು ಬಂದವು. ಇವುಗಳಿಗೆ ಪೃಥಿವೀ, ಸೂರ್ಯ, ಚಂದ್ರ, ಮತ್ತು ಮೇಘಸ್ಥಾನಗಳು ವಾಸಭೂಮಿಯಾಯಿತು.

೩೮. ಅನಂತರದಲ್ಲಿ ಸೃಷ್ಟಿಕರ್ತನ ಕ್ರೋಧದಿಂದ ಹುಟ್ಟಿದ ಭಯಂಕರವೂ ಅಗ್ನಿ ಗರ್ಭವೂ ಆದ ವಿಷವು ತನ್ನ ಜೊತೆಯಲ್ಲಿ ಹುಟ್ಟಿದ ಆ ಸರ್ಪಗಳನ್ನು ಪ್ರವೇ ಶಿಸಿತು.

ಸರ್ಪಾನ್ ಸೃಷ್ಟ್ವಾ ತತಃ ಕ್ರೋಧಾತ್ ಕ್ರೋಧಾತ್ಮಾನೋ ವಿನಿರ್ಮಿತಾಃ
ವರ್ಣೇನ ಕಪಿಶೇನೋಗ್ರಾಸ್ತೇ ಭೂತಾಃ ಪಿಶಿತಾಶನಾಃ ॥ ೩೯ ॥

ಭೂತತ್ವಾತ್ತೇ ಸ್ಮೃತಾ ಭೂತಾಃ ಪಿಶಾಚಾಃ ಪಿಶಿತಾಶನಾತ್ ।
ಗಾಯತೋ ಗಾಂ ತತಸ್ತಸ್ಯ ಗಂಧರ್ವಾ ಜಜ್ಞಿರೇ ಸುತಾಃ ॥ ೪೦ ॥

ಧಯೇತಿ ಧಾತುಃ ಕವಿಭಿಃ ಪಾನಾರ್ಥೇ ಪರಿಪಠ್ಯತೇ ।
ಪಿಬತೋ ಜಜ್ಞಿರೇ ವಾಚಂ ಗಂಧರ್ವಾಸ್ತೇನ ತೇ ಸ್ಮೃತಾಃ ॥ ೪೧ ॥

ಅಷ್ಟಾಸ್ವೇತಾಸು ಸೃಷ್ಟಾಸು ದೇವಯೋನಿಷು ಸ ಪ್ರಭುಃ ।
ಛಂದತಶ್ಚೈವ ಛಂದಾಂಸಿ ವಯಾಂಸಿ ವಯಸಾಽಸೃಜತ್ ॥ ೪೨ ॥

ಪಕ್ಷಿಣಸ್ತು ಸ ಸೃಷ್ಟ್ವಾ ವೈ ತತಃ ಪಶುಗಣಾನ್ ಸೃಜನ್ ।
ಮುಖತೋಽಜಾಃ ಸೃಜನ್ ಸೋಽಥ ವಕ್ಷಸಶ್ಚಾಪ್ಯವೀಃ ಸೃಜನ್॥ ೪೩ ॥

---

೩೯. ಈ ಸರ್ಪಗಳನ್ನು ಸೃಷ್ಟಿಮಾಡಿ ತರುವಾಯ ಕ್ರೋಧದಿಂದ ಕ್ರೋಧಶೀಲರಾದ ಪ್ರಜೆಗಳನ್ನು ನಿರ್ಮಿಸಿದನು. ಆ ಪ್ರಜೆಗಳು ಹೊಂಬಣ್ಣದಿಂದ ಉಗ್ರವಾಗಿ ಜ್ವಲಿಸುವವರೂ ಮಾಂಸವನ್ನು ತಿನ್ನುವವರೂ ಆದರು.

೪೦. ಈ ರೀತಿಯಾಗಿ ಭಯಂಕರವೂ ವಿಚಿತ್ರವೂ ಆದ ಆಕಾರವಂತರಾದ್ದರಿಂದ ಭೂತಗಳೆಂದೂ ಪಿಶಿತಂ =ಮಾಂಸವನ್ನು ತಿನ್ನುವರಾದ್ದರಿಂದ ಪಿಶಿತಾಶನರೆಂದೂ ಕರೆಯಲ್ಪಡುವರು. ಗಾನರೂಪವಾದ ವಾಣಿಯನ್ನು ಆಡುವುದರಿಂದ ಗಂಧರ್ವರೆಂದು ಪ್ರಸಿದ್ಧರಾದ ಪ್ರಜೆಗಳು ಮತ್ತೆ ಹುಟ್ಟಿದರು.

೪೧. "ಪಾನ" ಎಂಬ ಅರ್ಥದಲ್ಲಿ "ಧಯ್" ಧಾತುವು ವಿದ್ವಾಂಸರಿಂದ ಪಠಿತವಾಗಿದೆ. ಗಾನವಾಣಿಯನ್ನು ಪಾನಮಾಡುತ್ತ ಜನಿಸಿರುವುದರಿಂದ ಆ ಪ್ರಜೆಗಳು ವಾಣಿಯೆಂಬ ಅರ್ಥದ ಗೋಶಬ್ದದೊಡನೆ ಧಯ್‌ಧಾತುವಿನ ರೂಪವು ಸೇರಿ ಆದ "ಗಂಧರ್ವ" ಶಬ್ದದಿಂದ ಪ್ರಸಿದ್ಧರಾದರು.

೪೨. ಈ ರೀತಿಯಾಗಿ ಮೇಲೆ ವಿವರಿಸಿದ ದೇವಯೋನಿ ವಿಶೇಷರಾದ ಎಂಟು ಜಾತಿಯ ಪ್ರಜೆಗಳನ್ನು ಸೃಷ್ಟಿಮಾಡಿ ಆ ಪ್ರಭುವು ತನ್ನ ಸ್ವಚ್ಛಂದದಿಂದ ಛಂದಸ್ಸುಗಳನ್ನೂ ವಯಸ್ಸಿನಿಂದ ಪಕ್ಷಿಗಳನ್ನೂ ಸೃಜಿಸಿದನು.

೪೩. ಪಕ್ಷಿಗಳ ಸೃಷ್ಟಿಯನ್ನು ಪೂರ್ತಿಗೊಳಿಸಿ ಪಶುಗಣಗಳ ಸೃಷ್ಟಿಯನ್ನು

ಗಾವಶ್ಚೈವೋದರಾದ್ಬ್ರಹ್ಮಾ ಪಾರ್ಶ್ವಾಭ್ಯಾಂ ಚ ವಿನಿರ್ಮಮೇ ।
ಪಾದತೋಽಶ್ವಾನ್ ಸಮಾತಂಗಾನ್ ರಾಸಭಾನ್ ಗವಯಾನ್ ಮೃಗಾನ್
|| ೪೪ ||

ಉಷ್ಟ್ರಾಂಶ್ಚೈವ ವರಾಹಾಂಶ್ಚ ಶುನೋಽನ್ಯಾಂಶ್ಚೈವ ಜಾತಯಃ ।
ಓಷಧ್ಯಃ ಫಲಮೂಲಿನ್ಯೋ ರೋಮಭ್ಯಸ್ತಸ್ಯ ಜಜ್ಞಿರೇ || ೪೫ ||

ಏವಂ ಪಶ್ವೌಷಧೀಃ ಸೃಷ್ಟ್ವಾ ನ್ಯಯುಂಜತ್ಸೋಽಧ್ವರೇಷು ವೈ ।
ಅಸ್ಯ ತ್ವಾದೌ ತು ಕಲ್ಪಸ್ಯ ತ್ರೇತಾಯುಗಮುಖೇ ಪುರಾ || ೪೬ ||

ಗೌರಜಃ ಪುರುಷೋಽಥಾವಿರಶ್ವಾಶ್ವತರಗರ್ದಭಾಃ ।
ಏತೇ ಗ್ರಾಮ್ಯಾಃ ಸ್ಮೃತಾಃ ಸಪ್ತ ಆರಣ್ಯಾಃ ಸಪ್ತ ಚಾಪರೇ || ೪೭ ||

ಶ್ವಾಪದೋ ದ್ವೀಪಿನೋ ಹಸ್ತೀ ವಾನರಃ ಪಕ್ಷಿಪಂಚಮಃ ।
ಔದಕಾಃ ಪಶವಃ ಷಷ್ಠಾಃ ಸಪ್ತಮಾಸ್ತು ಸರೀಸೃಪಾಃ || ೪೮ ||

---

ಪ್ರಾರಂಭಿಸಿ ತನ್ನ ಮುಖದಿಂದ ಮೇಕೆಗಳನ್ನು ಸೃಷ್ಟಿಮಾಡಿ ವಕ್ಷಸ್ಸಿನಿಂದ ಕುರಿಗಳನ್ನು ನಿರ್ಮಿಸಿದನು.

೪೪. ತನ್ನ ಹೊಟ್ಟೆಯಿಂದಲೂ ತನ್ನ ಪಕ್ಕೆಗಳಿಂದಲೂ ಗೋವುಗಳನ್ನು ಸೃಷ್ಟಿಸಿದನು. ಮತ್ತು ಪಾದಗಳಿಂದ ಕುದುರೆ, ಆನೆ, ಕತ್ತೆ, ಗವಯಮೃಗ, ಜಿಂಕೆ ಮುಂತಾದ ಪಶುಗಳನ್ನು ನಿರ್ಮಾಣಮಾಡಿದನು.

೪೫. ಹಾಗೆ ಒಂಟೆ, ವರಾಹ, ನಾಯಿ ಮುಂತಾದ ಸಕಲ ಪಶು ಜಾತಿಗಳನ್ನೂ ರಚಿಸಿದನು. ಫಲ ಮೂಲಗಳಿಂದ ಕೂಡಿರುವ ಓಷಧಿಗಳು ಆ ಬ್ರಹ್ಮನ ಗಾತ್ರದಿಂದ ರೋಮಗಳಿಂದ ಹುಟ್ಟಿದುವು.

೪೬. ಪೂರ್ವದಲ್ಲಿ ಆದಿಕಲ್ಪದ ತ್ರೇತಾಯುಗಾರಂಭ ಸಮಯದಲ್ಲಿ ಈ ರೀತಿಯಾಗಿ ಬ್ರಹ್ಮನು ಪಶು-ಓಷಧಿಗಳನ್ನು ಸೃಷ್ಟಿಮಾಡಿ ಬ್ರಹ್ಮನು ಅವುಗಳಿಗೆ ಯಜ್ಞ ಕರ್ಮಗಳಲ್ಲಿ ಅಂಗವಾಗಿರುವಂತೆ ವಿನಿಯೋಗವನ್ನು ಕಲ್ಪಿಸಿದನು.

೪೭. ಈ ಪಶುಗಳಲ್ಲಿ ಗೋವು, ಮೇಕೆ, ಪುರುಷ, ಕುರಿ, ಕುದುರೆ, ಹೇಸರುಗತ್ತೆ, ಕತ್ತೆ ಎಂಬು ಏಳು ಜಾತಿಗಳು ಗ್ರಾಮ್ಯ ಪಶುಗಳೆಂದು ಕರೆಯಲ್ಪಡುವುವು.

೪೮. ಶ್ವಾಪದ, ದ್ವೀಪಿ, ಹಸ್ತಿ, ವಾನರ, ಪಕ್ಷಿ, ಜಲಚರಪ್ರಾಣಿ, ಸರ್ಪ ಈ ಏಳು ಜಾತಿಗಳು ಆರಣ್ಯ ಪಶುಗಳೆಂದು ಕರೆಯಲ್ಪಡುವುವು.

**ಮಹಿಷಾ ಗವಯೋಽಷ್ಟ್ರಾಶ್ಚ ದ್ವಿಖುರಾಃ ಶರಭೋ ದ್ವಿಪಃ ।**
**ಮರ್ಕಟಃ ಸಪ್ತಮೋ ಹ್ಯೇಷಾಂ ಚಾರಣ್ಯಾಃ ಪಶವಸ್ತು ತೇ ॥ ೪೯ ॥**

**ಗಾಯತ್ರೀಂ ಚ ಋಚಂ ಚೈವ ತ್ರಿವೃತ್ಸ್ತೋಮಂ ರಥಂತರೀ ।**
**ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್ ॥ ೫೦ ॥**

**ಯಜೂಂಷಿ ತ್ರೈಷ್ಟುಭಂ ಛಂದಃ ಸ್ತೋಮಂ ಪಂಚದಶಂ ತಥಾ ।**
**ಬೃಹತ್ಸಾಮ ತಥೋಕ್ತಂ ಚ ದಕ್ಷಿಣಾತ್ಸೋಽಸೃಜನ್ಮುಖಾತ್ ॥ ೫೧ ॥**

**ಸಾಮಾನಿ ಜಗತೀಂ ಚೈವ ಸ್ತೋಮಂ ಸಪ್ತದಶಂ ತಥಾ ।**
**ವೈರೂಪ್ಯಮತಿರಾತ್ರಂ ಚ ಪಶ್ಚಿಮಾತ್ಸೋಽಸೃಜನ್ಮುಖಾತ್ ॥ ೫೨ ॥**

---

೪೯. ಮತ್ತು ಮಹಿಷ, ಗವಯ, ಉಷ್ಟ್ರ, ದ್ವಿಖುರ, ಶರಭ, ದ್ವಿಪ, ಮರ್ಕಟ ಈ ಏಳು ಗಣಗಳೂ ಆರಣ್ಯ ಪಶು ಜಾತಿಗೆ ಸೇರಿದವು.

೫೦. ಪರಮಾತ್ಮನಾದ ಬ್ರಹ್ಮನು ತನ್ನ ಮೊದಲನೆಯ (ಪೂರ್ವ ದಿಕ್ಕಿನ) ಮುಖದಿಂದ ಋಗ್ವೇದ, ಗಾಯತ್ರೀ ಛಂದಸ್ಸು, ತ್ರಿವೃತ್‌ಸ್ತೋಮ, ರಥಂತರಸಾಮ, ಅಗ್ನಿಷ್ಟೋಮ ಸ್ತೋತ್ರಗಳೆಂಬ ಯಜ್ಞಾಂಗಗಳನ್ನು ನಿರ್ಮಿಸಿದನು. ವೇದದಲ್ಲಿ ಬರುವ ಇಪ್ಪತ್ತನಾಲ್ಕು ವರ್ಣಗಳಿಂದಲೂ ಮೂರು ಪಾದಗಳಿಂದಲೂ ಕೂಡಿದ ಋಙ್ಮಂತ್ರವು ಗಾಯತ್ರೀ ಛಂದಸ್ಸು. ಯಜ್ಞದಲ್ಲಿ ಆಯಾಯ ದೇವತೆಗಳನ್ನು ಒಂಭತ್ತು, ಹದಿನೈದು, ಹದಿನೇಳು ಅಥವಾ ಇಪ್ಪತ್ತೊಂದು ಮಂತ್ರಗಳ ಗಣಗಳನ್ನು ಆರಿಸಿಕೊಂಡು ಸ್ತುತಿಸುವುದುಂಟು. ಆಯಾಯ ಸಂಖ್ಯೆಯ ಮಂತ್ರಗಣಕ್ಕೆ ತ್ರಿವೃತ್ ಮುಂತಾದ ಹೆಸರು. ಹಾಗೆ ಋಙ್ಮಂತ್ರಗಳನ್ನು ಗಾನಮಾಡಲು ರಥಂತರ ಮುಂತಾದ ಅನೇಕ ಹೆಸರಿನ ಸಾಮಗಳಿವೆ. ಆ ಸ್ತೋತ್ರಪಾಠಗಳಿಗೆ ಅಗ್ನಿಷ್ಟೋಮ ಮುಂತಾದದ್ದು ಹೆಸರು. ಈ ಯಜ್ಞಾಂಗಗಳು ಪ್ರಥಮ ಮುಖದಿಂದ ಜನಿಸಿದವು.

೫೧. ಇದೇ ರೀತಿಯಲ್ಲಿ ಯಜುರ್ವೇದ, ತ್ರಿಷ್ಟುಪ್ ಛಂದಸ್ಸು, ಪಂಚದಶ ಸ್ತೋಮ, ಬೃಹತ್‌ಸಾಮ ಇವುಗಳನ್ನು ದಕ್ಷಿಣ ಮುಖದಿಂದ ಸೃಜಿಸಿದನು.

೫೨. ಸಾಮವೇದ, ಜಗತೀಛಂದಸ್ಸು, ಸಪ್ತದಶಸ್ತೋಮ, ವೈರೂಪ್ಯಸಾಮ, ಅತಿರಾತ್ರ ಸಂಸ್ಥೆಗಳನ್ನು ಪಶ್ಚಿಮ ಮುಖದಿಂದ ಸೃಷ್ಟಿಮಾಡಿದನು.

ಏಕವಿಂಶಮಥರ್ವಾಣಮಪ್ತೋರ್ಯಾಮಂ ತಥೈವ ಚ ।
ಅನುಷ್ಟುಭಂ ಸವೈರಾಜಂ ಚತುರ್ಥಾದಸೃಜನ್ಮುಖಾತ್ ॥ ೫೩ ॥

ವಿದ್ಯುತೋಽಶನಿಮೇಘಾಂಶ್ಚ ರೋಹಿತೇಂದ್ರಧನೂಂಷಿ ಚ ।
ಸೃಷ್ಟ್ವಾಽಸೌ ಭಗವಾನ್ ದೇವಃ ಪರ್ಜನ್ಯಮಿತಿ ವಿಶ್ರುತಮ್ ॥ ೫೪ ॥

ಋಚೋ ಯಜೂಂಷಿ ಸಾಮಾನಿ ನಿರ್ಮಮೇ ಯಜ್ಞಸಿದ್ಧಯೇ ।
ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ ॥ ೫೫ ॥

ಬ್ರಹ್ಮಣಸ್ತು ಪ್ರಜಾಸರ್ಗಂ ಸೃಜತೋ ಹಿ ಪ್ರಜಾಪತೇಃ ।
ಸೃಷ್ಟ್ವಾ ಚತುಷ್ಟಯಂ ಪೂರ್ವಂ ದೇವರ್ಷಿಪಿತೃಮಾನವಾನ್ ॥ ೫೬ ॥

---

೫೩. ಏಕವಿಂಶಸ್ತೋತ್ರ, ಅಥರ್ವವೇದ, ಅಪ್ತೋರ್ಯಾಮ ಸಂಸ್ಥೆ, ಅನುಷ್ಟುಪ್ ಛಂದಸ್ಸು, ಮತ್ತು ವೈರಾಜ ಸಾಮಗಳನ್ನು ನಾಲ್ಕನೆಯ ಮುಖದಿಂದ ಸೃಜಿಸಿದನು ನಾಲ್ಕು ಮುಖಗಳಿಂದ ಅಪೂರ್ವವಾದ ಯಜ್ಞಾಂಗಗಳ ಸೃಷ್ಟಿಯು ಇಲ್ಲಿ ಹೇಳಲ್ಪಟ್ಟಿದೆ. ಅವುಗಳಲ್ಲಿ ವೇದಗಳು ನಾಲ್ಕು ಪ್ರಸಿದ್ಧವಾಗಿವೆ. ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್ ಎಂಬುವು ಮಂತ್ರಗಳ ವರ್ಣಗಳಲ್ಲಿ ಇಪ್ಪತ್ತನಾಲ್ಕು ನಲವತ್ತನಾಲ್ಕು ನಲವತ್ತೆಂಟು, ಅಥವಾ ಮೂವತ್ತೆರಡು ಸಂಖ್ಯೆಯುಳ್ಳ ಪಾದ ಬದ್ಧವಾದ ಛಂದಸ್ಸುಗಳು. ದೇವತೆಗಳ ಸ್ತುತಿಗೆ ಉಪಯೋಗಿಸುವ ಮಂತ್ರವಾಕ್ಯಗಳಲ್ಲಿರಬೇಕಾದ ಒಂಭತ್ತು, ಹದಿನೈದು, ಹದಿನೇಳು, ಮತ್ತು ಇಪ್ಪತ್ತೊಂದು ಸಂಖ್ಯೆಗಳಿಗೆ ಕ್ರಮವಾಗಿ ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ ಸ್ತೋಮಗಳೆಂದು ಹೆಸರು. ಮಂತ್ರಗಳನ್ನು ಗಾನರೂಪವಾಗಿ ಪಠಿಸುವ ಪ್ರಸಂಗದಲ್ಲಿ ಬರುವ ಗಾನ ವಿಶೇಷಗಳು ರಥಂತರ, ಬೃಹತ್, ವೈರೂಪ್ಯ, ವೈರಾಜ ಸಾಮಗಳೆಂದು ಪ್ರಸಿದ್ಧವಾಗಿವೆ. ಯಜ್ಞ ಪ್ರಯೋಗಗಳನ್ನು ಒಂದೊಂದು ಸ್ತೋತ್ರ ಪಾಠಾಂತ್ಯದಲ್ಲಿ ಸಮಾಪ್ತಿಗೊಳಿಸುವುದನ್ನು ಆಯಾಯ ಸ್ತೋತ್ರಸಾಮಗಳಿಂದ ಅಗ್ನಿಷ್ಟೋಮ, ಉಕ್ಥ್ಯ, ಅತಿರಾತ್ರ, ಅಪ್ತೋರ್ಯಾಮ ಸಂಸ್ಥೆಗಳೆಂದು ಕರೆಯುವರು.

೫೪. ಪೂಜ್ಯನಾದ ಸೃಷ್ಟಿಕರ್ತನು ಮಿಂಚು, ಸಿಡಿಲು, ಮೋಡ, ಕಾಮನಬಿಲ್ಲು ಮತ್ತು ಪರ್ಜನ್ಯಗಳನ್ನು ಸೃಷ್ಟಿಮಾಡಿದನು.

೫೫. ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಯಜ್ಞಾನುಷ್ಠಾನಗಳು ಸಾಂಗವಾಗಿ ನಡೆಯಲು ಸಾಧನವಾಗಿ ರಚಿಸಿದನು. ಮತ್ತು ಬ್ರಹ್ಮನ ದೇಹದ ಅವ

**ತತೋಽಸೃಜತ ಭೂತಾನಿ ಚರಾಣಿ ಸ್ಥಾವರಾಣಿ ಚ ।**
**ಸೃಷ್ಟ್ವಾ ಯಕ್ಷಪಿಶಾಚಾಂಶ್ಚ ಗಂಧರ್ವಾಪ್ಸರಸಸ್ತದಾ ॥ ೫೭ ॥**

**ನರಕಿನ್ನರರಕ್ಷಾಂಸಿ ವಯಃಪಶುಮೃಗೋರಗಾನ್ ।**
**ಅವ್ಯಯಂ ಚ ವ್ಯಯಂ ಚೈವ ದ್ವಯಂ ಸ್ಥಾವರಜಂಗಮಮ್ ॥ ೫೮ ॥**

**ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ ಸೃಷ್ಟಾನಿ ಪ್ರಪೇದಿರೇ ।**
**ತಾನ್ಯೇವ ಪ್ರತಿಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ॥ ೫೯ ॥**

**ಹಿಂಸ್ರಾಹಿಂಸ್ರೇ ಸೃಜನ್ ಕ್ರೂರೇ ಧರ್ಮಾಧರ್ಮಾವೃತಾನೃತೇ ।**
**ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ೬೦ ॥**

---

ಯವಗಳಿಂದ ಉತ್ತಮಾಧಮ ಭಾವದಿಂದ ಕೂಡಿದ ನಾನಾವಿಧದ ಭೂತಗಳು ಉತ್ಪನ್ನವಾದವು.

೫೬. ಪ್ರಜೆಗಳ ಸೃಷ್ಟಿಯನ್ನು ರಚಿಸುವ ಪ್ರಜಾಪತಿಯಾದ ಬ್ರಹ್ಮನು ಮೊದಲು ದೇವ, ಋಷಿ, ಪಿತೃ ಮಾನವರೆಂಬ ನಾಲ್ಕು ಜಾತಿಗಳನ್ನು ಸೃಜಿಸಿದನು.

೫೭. ಅನಂತರದಲ್ಲಿ ಸ್ಥಾವರ-ಜಂಗಮ ಪ್ರಾಣಿಗಳನ್ನೂ ಯಕ್ಷ, ಪಿಶಾಚ, ಗಂಧರ್ವ ಮತ್ತು ಅಪ್ಸರಃಸ್ತ್ರೀ ಮುಂತಾದವರನ್ನೂ ಸೃಷ್ಟಿಮಾಡಿದನು

೫೮. ನರ, ಕಿನ್ನರ, ರಕ್ಷಸ್ಸು, ಪಕ್ಷಿ, ಪಶು, ಮೃಗ, ಸರ್ಪ ಮುಂತಾದ ಗಣನಾತೀತವೂ ಉಚ್ಚಾವಚವೂ ಆದ ಭೂತಸೃಷ್ಟಿಯನ್ನು ರಚಿಸಿದನು. ಸೃಷ್ಟಿಸಿದ ಸ್ಥಾವರ ಜಂಗಮಗಳಲ್ಲಿ ಕೆಲವು ಅಲ್ಪಕಾಲದಲ್ಲಿ ನಾಶವಾಗುವುವೂ ಕೆಲವು ದೀರ್ಘಕಾಲ ಬದುಕಿರುವುವೂ ಆದ್ದರಿಂದ ವ್ಯಯ-ಅವ್ಯಯ ಶೀಲಗಳಾಗಿ ವಿಂಗಡಿಸಲ್ಪಟ್ಟಿವೆ.

೫೯. ಸೃಷ್ಟಿಸಲ್ಪಟ್ಟ ಪ್ರತಿಯೊಂದು ಪ್ರಾಣಿಯೂ ಹಿಂದಿನ ಸೃಷ್ಟಿಯಲ್ಲಿ ಹೊಂದಿರುವ ಕರ್ಮಗಳನ್ನು ಪುನಃ ಸೃಷ್ಟಿಯಲ್ಲಿಯೂ ಹೊಂದುತ್ತವೆ.

೬೦. ಹಿಂಸೆ-ಅಹಿಂಸೆ, ಮೃದು-ಕ್ರೂರ, ಧರ್ಮ-ಅಧರ್ಮ, ಸತ್ಯ-ಅನೃತ ಮುಂತಾದ ವಿರುದ್ಧ ಸ್ವಭಾವದ ಕರ್ಮಗಳಲ್ಲಿ ಯಾವುದಾದರೊಂದು ಜನ್ಮಾಂತರ ವಾಸನೆಗೆ ತಕ್ಕಂತೆ ಪ್ರತಿಯೊಂದು ಪ್ರಾಣಿಗೂ ಆಯಾಯ ಭಾವನೆಯಿಂದ ಭಾವಿಸಲ್ಪಟ್ಟು ರುಚಿಸುವುದು.

ಮಹಾಭೂತೇಷು ನಾನಾತ್ವಮಿಂದ್ರಿಯಾರ್ಥೇಷು ಮೂರ್ತಿಷು ।
ವಿನಿಯೋಗಂ ಚ ಭೂತಾನಾಂ ಧಾತ್ರೈವ ವ್ಯದಧಾತ್ಸ್ವಯಮ್ ॥ ೬೧ ॥

ಕೇಚಿತ್ಪುರುಷಕಾರಂ ತು ಪ್ರಾಹುಃ ಕರ್ಮ ಚ ಮಾನವಾಃ ।
ದೈವಮಿತ್ಯಪರೇ ವಿಪ್ರಾಃ ಸ್ವಭಾವಂ ಭೂತಚಿಂತಕಾಃ ॥ ೬೨ ॥

ಪೌರುಷಂ ಕರ್ಮ ದೈವಂ ಚ ಫಲವೃತ್ತಿಸ್ವಭಾವತಃ ।
ನ ಚೈವ ತು ಪೃಥಗ್ಭಾವಮಧಿಕೇನ ತತೋ ವಿದುಃ ॥ ೬೩ ॥

ಏತದೇವಂ ಚ ನೈವಂ ಚ ನ ಚೋಭೇ ನಾನುಭೇ ನ ಚ ।
ಸ್ವಕರ್ಮವಿಷಯಂ ಬ್ರೂಯುಃ ಸತ್ತ್ವಸ್ಥಾಃ ಸಮದರ್ಶಿನಃ ॥ ೬೪ ॥

ನಾನಾರೂಪಂ ಚ ಭೂತಾನಾಂ ಕೃತ್ಯಾನಾಂ ಚ ಪ್ರಪಂಚನಮ್
ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ॥ ೬೫ ॥

---

೬೧. ನಾನಾ ವಿಧವಾದ ಮಹಾಭೂತಭೌತಿಕ ಪ್ರಪಂಚದ ಇಂದ್ರಿಯಗೋಚರವಾಗುವ ಶಬ್ದ, ಸ್ಪರ್ಶ, ಚಂದನಾದಿ ಭೋಗ್ಯವಸ್ತುಗಳಲ್ಲಿ ಮತ್ತು ಭೂತಗಳ ವಿಚಿತ್ರ ರಚನೆಯಲ್ಲಿ ಬ್ರಹ್ಮನು ಸ್ವತಂತ್ರನಾಗಿ ಸೃಷ್ಟಿಮಾಡಿದನು.

೬೨. ಈ ಪ್ರಪಂಚ ಸೃಷ್ಟಿಯ ಕಾರಣವನ್ನು ಪೌರುಷಸಾಧ್ಯವಾದ ಕರ್ಮವೆಂದು ಮಾನವಸಾಮಾನ್ಯರು ಆಡಿಕೊಳ್ಳುವರು. ವಿಪ್ರರು ದೈವವೆಂದು ಕರೆಯುವರು. ಭೂತಚಿಂತಕರು ಸ್ವಭಾವವೆಂದು ಹೇಳುವರು.

೬೩. ಆಯಾಯ ಪ್ರಾಚೀನ ಕರ್ಮಗಳಿಗೆ ಆಯಾಯ ಫಲಗಳು ತಪ್ಪದೆ, ಆಗುವುದರಿಂದ ಕರ್ಮಗಳಿಂದ ಫಲವು ತಪ್ಪದೇ ಆಗುವುದೆಂಬ ಸ್ವಭಾವದಿಂದ ಪೌರುಷಕರ್ಮ, ದೈವ, ಸ್ವಭಾವವೆಂದು ಯಾವ ಹೆಸರಿನಿಂದ ಕರೆದರೂ ಒಂದೇ ತತ್ತ್ವವೇ ವಿನಹ ತತ್ತ್ವದಲ್ಲಿ ಪೃಥಗ್ಭಾವ ಇಲ್ಲವೆಂದು ಪ್ರಾಜ್ಞರು ತಿಳಿದಿರುವರು.

೬೪. ಸಾತ್ತ್ವಿಕರಾದ ಮತ್ತು ಸಾಮ್ಯ ಬುದ್ಧಿಯಿಂದ ಕೂಡಿದ ಜ್ಞಾನಿಗಳು ಸ್ವಕರ್ಮ ವಿಷಯದಲ್ಲಿ ಈ ತತ್ತ್ವವು ಈ ವಿಧವೆಂದಾಗಲಿ, ಹೀಗಲ್ಲವೆಂದಾಗಲಿ, ಭಾವ-ಅಭಾವ ಎರಡು ವಿರುದ್ಧ ಧರ್ಮಗಳಿಂದ ಕೂಡಿರುವುದೆಂದಾಗಲಿ ಧರ್ಮಶೂನ್ಯವೆಂದಾಗಲಿ ಹೇಳಲಾಗದ ಅನಿರ್ವಚನೀಯತತ್ತ್ವವೆಂದು ಅಂಗೀಕರಿಸುವರು.

೬೫. ಆ ಮಹೇಶ್ವರನಾದ ಬ್ರಹ್ಮನು ಭೂತಗಳ ನಾನಾವಿಧದ ಆಕಾರಗಳನ್ನೂ

**ಆರ್ಷಾಣಿ ಚೈವ ನಾಮಾನಿ ಯಾಶ್ಚ ದೇವೇಷು ದೃಷ್ಟಯಃ ।**
**ಶರ್ವರ್ಯನ್ತೇ ಪ್ರಸೂತಾನಾಂ ಪುನಸ್ತೇಭ್ಯೋ ದಧಾತ್ಯಜಃ ॥ ೬೬ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಅಷ್ಟಮೋಽಧ್ಯಾಯಃ ಸಮಾಪ್ತಃ.**

---

ಮತ್ತು ಕರ್ತವ್ಯ ಕ್ರಿಯೆಗಳ ವಿಭಜನೆಯುಳ್ಳ ವಿಸ್ತಾರವನ್ನೂ ವೇದಶಬ್ದಗಳಿಂಬ ಕಾರಣದಿಂದ ರಚಿಸಿದನು.

೬೬. ಹಿಂದಿನ ಕಲ್ಪದಲ್ಲಿದ್ದ ಋಷಿ (ವೇದ) ಮೂಲಕವಾದ ನಾಮಗಳೂ ದೇವತೆಗಳಲ್ಲಿದ್ದ ವಿವಿಧ ಸೃಷ್ಟಿಯೂ ಪ್ರಲಯಕಾಲದಲ್ಲಿ ನಶಿಸಿ ಮತ್ತೆ ಸೃಷ್ಟಿಯಾಗುವಾಗ ಜನ್ಮರಹಿತವಾದ ಪರಮಾತ್ಮನು ವೇದ ಶಬ್ದಗಳಿಂದ ನಿರ್ಮಿಸಿದನು.

ಬ್ರಹ್ಮಾಂಡಪುರಾಣದಲ್ಲಿ ಎಂಟನೆಯ ಅಧ್ಯಾಯವು ಸಮಾಪ್ತವು.

# ನವಮೋಽಧ್ಯಾಯಃ

**ಸೂತ ಉವಾಚ**

**ರುದ್ರಂ ಧರ್ಮಂ ಮನಶ್ಚೈವ ರುಚಿಂ ಚೈವಾಕೃತಿಂ ತಥಾ।**
**ಪಂಚ ಕರ್ತ್ನ್ ಹಿ ಸ ತದಾ ಮನಸಾ ವ್ಯಸೃಜತ್ಪ್ರಭುಃ ॥ ೧ ॥**

**ಏತೇ ಮಹಾಭುಜಾಃ ಸರ್ವೇ ಪ್ರಜಾನಾಂ ಸ್ಥಿತಿಹೇತವಃ।**
**ಔಷಧೀಃ ಪ್ರತಿಸಂಧತ್ತೇ ರುದ್ರಃ ಕ್ಷೀಣಾಯುಷಃ ಪುನಃ ॥ ೨ ॥**

**ಪ್ರಾಪ್ತೌಷಧಿಫಲೈರ್ದೇವಃ ಸಮ್ಯಗಿಷ್ಟಃ ಫಲಾರ್ಥಿಭಿಃ।**
**ತ್ರಿಭಿರೇವಂ ಕಪಾಲೈಸ್ತು ತ್ರ್ಯಂಬಕೈರೋಷಧೀಕ್ಷಯೇ ॥ ೩ ॥**

---

ಸೂತಮುನಿಯು ಈ ರೀತಿಯಾಗಿ ಹೇಳಿದನು.

೧. ಸೃಷ್ಟಿಕರ್ತನು ತಾನು ಮಾಡಿರುವ ಸೃಷ್ಟಿಯು ಅವಿಚ್ಛಿನ್ನವಾಗಿ ನಡೆದು ಕೊಂಡುಬರಲು ಮತ್ತು ಅಭಿವೃದ್ಧಿಯಾಗಲು ಸ್ಥಿತಿಪರಿಪಾಲಕರು ಬೇಕೆಂದು ಧ್ಯಾನಿಸಿ ರುದ್ರ, ಧರ್ಮ, ಮನಸ್ಸು, ರುಚಿ, ಮತ್ತು ಆಕೃತಿ ಎಂಬ ಐದು ಜನ ಕರ್ತೃಗಳನ್ನು ನಿರ್ಮಿಸಿದನು.

೨. ಈ ಐದು ಜನ ಕರ್ತೃ ಪುರುಷರು ಅತ್ಯಧಿಕಬಲ ಸಂಪನ್ನರೂ ಮಹಾ ಭುಜರೂ ಆಗಿ ಪ್ರಜೆಗಳ ಸ್ಥಿತಿಯನ್ನು ಮಾಡುವವರಾದರು. ಇವರಲ್ಲಿ ರುದ್ರನು ಕ್ಷಯಿಸಿಹೋಗುತ್ತಲಿದ್ದ ಔಷಧಿಗಳನ್ನು ಪುನಃ ದೊರಕುವಂತೆ ಮಾಡಿ ತನ್ಮೂಲಕ ಪ್ರಜಾಸ್ಥಿತಿಯನ್ನು ಉತ್ತಮಗೊಳಿಸುತ್ತಲಿದ್ದನು.

೩. ಔಷಧಿಗಳು ಕ್ಷಯಿಸಿಹೋಗುವ ಸಮಯದಲ್ಲಿ ಔಷಧಿ ಫಲಗಳನ್ನು ಹೊಂದಬೇಕೆಂಬ ಆಶಾಬದ್ಧರಾಗಿ ಕರ್ಮಿಗಳು ಕಪಾಲತ್ರಯಗಳಿಂದ ಪುರೋಡಾಶ ವೆಂಬ ಹವಿಸ್ಸನ್ನು ಕಲ್ಪಿಸಿ ಆ ಹವಿಸ್ಸಿನಿಂದ ರುದ್ರದೇವತೆಯ ತೃಪ್ತಿಗೆ ಯಥಾವಿಧಿಯಾ ಹೋಮಮಾಡಿದರು.

ಇಜ್ಯತೇ ಮುನಿಭಿರ್ಯಸ್ಮಾತ್ತಸ್ಮಾತ್ತ್ರ್ಯಂಬಕ ಉಚ್ಯತೇ ।
ಗಾಯತ್ರೀ ಚೈವ ತ್ರಿಷ್ಟುಪ್ ಚ ಜಗತೀ ಚೈವ ತಾಃ ಸ್ಮೃತಾಃ ॥ ೪ ॥

ಅಂಬಿಕಾ ನಾಮ ಯಾಃ ಪ್ರೋಕ್ತಾ ಯೋನಯಃ ಸವನಸ್ಪತೇಃ ।
ತಾಭಿರೇಕತ್ವಭೂತಾಭಿಸ್ತ್ರಿವಿಧಾಭಿಃ ಸ್ವವೀರ್ಯತಃ ॥ ೫ ॥

ತ್ರಿಸಾಧನಃ ಪುರೋಡಾಶಸ್ತ್ರಿಕಪಾಲಸ್ತತಃ ಸ್ಮೃತಃ ।
ತ್ರ್ಯಂಬಕಃ ಸ ಪುರೋಡಾಶಸ್ತೇನೇಹ ತ್ರ್ಯಂಬಕಃ ಸ್ಮೃತಃ ॥ ೬ ॥

ಧತ್ತೇ ಧರ್ಮಃ ಪ್ರಜಾಃ ಸರ್ವಾ ಮನೋ ಜ್ಞಾನಕರಂ ಸ್ಮೃತಮ್ ।
ಆಕೃತಿಃ ಪರಮಂ ರೂಪಂ ರುಚಿಃ ಶ್ರದ್ಧಾಕರಃ ಸ್ಮೃತಃ ॥ ೭ ॥

---

೪. ಕಪಾಲತ್ರಯದಲ್ಲಿ ಸಂಸ್ಕಾರಮಾಡಿದ ಪುರೋಡಾಶಹವಿಸ್ಸಿನಿಂದ ಮುನಿಗಳು ರುದ್ರದೇವತೆಯನ್ನು ಆರಾಧಿಸಿರುವ ಕಾರಣದಿಂದ ಆ ದೇವತೆಯು ತ್ರ್ಯಂಬಕನೆಂದು ಕರೆಯಲ್ಪಡುತ್ತದೆ. ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರುಬಗೆಯ ಮಂತ್ರಗಳ ಅಪರರೂಪಗಳಾದ ಕಪಾಲತ್ರಯವು ಅಂಬಿಕವೆಂದು ಸಂಜ್ಞಾಂಕಿತವಾಗಿದೆ.

೫. ಈ ಮೂರು ಅಂಬಿಕಾ ಪದಾರ್ಥಗಳು ಔಷಧಿ ವನಸ್ಪತಿಗಳಿಗೆ ಮೂಲ ಕಾರಣಗಳು. ರುದ್ರದೇವತೆಗೆ ಅರ್ಪಿಸಬೇಕಾದ ಹವಿಸ್ಸು ಈ ಮೂರು ಔಷಧಿ ನಿಮಿತ್ತಗಳ ಸಮಷ್ಟಿ ವೀರ್ಯದಿಂದ ಕೂಡಿರುವುದು.

೬. ಪುರೋಡಾಶವೆಂಬ ಹವಿಸ್ಸು ಕೂಡ ಮೂರು ಬಗೆಯ ಸಾಧನಗಳಿಂದ ನಿರ್ಮಿತವಾಗಿರುವುದರಿಂದ ತ್ರ್ಯಂಬಕವೆಂದೂ ತ್ರಿಕಪಾಲವೆಂದೂ ಕರೆಯಲ್ಪಡುತ್ತದೆ.

೭. ಧರ್ಮವು ನಿಖಿಲ ಪ್ರಜೆಗಳನ್ನೂ ಅಸಂಕರವಾಗುವಂತೆ ಧರಿಸುತ್ತದೆ. ಮನಸ್ಸು ಜ್ಞಾನವನ್ನುಂಟುಮಾಡುವ ಶಕ್ತಿಯುಳ್ಳದ್ದಾಗಿದೆ. ಆಕೃತಿಯು ದರ್ಶನೀಯವಾದ ರೂಪಕ್ಕೆ ನಿಮಿತ್ತವು. ರುಚಿಯು ಕರ್ತವ್ಯಕರ್ಮಗಳಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದು.

ಏವಮೇತೇ ಪ್ರಜಾಪಾಲಾಃ ಪ್ರಜಾನಾಂ ಸ್ಥಿತಿಹೇತವಃ।
ಅಥಾಸ್ಯ ಸೃಜತಃ ಸರ್ಗಂ ಪ್ರಜಾನಾಂ ಪರಿವೃದ್ಧಯೇ ॥ ೮ ॥

ನ ವ್ಯವರ್ಧಂತತಾಃಸೃಷ್ಟಾಃ ಪ್ರಜಾಃ ಕೇನಾಪಿ ಹೇತುನಾ।
ತತಃ ಸ ವಿದಧೇ ಬುದ್ಧಿಮರ್ಥನಿಶ್ಚಯಗಾಮಿನೀಮ್ ॥ ೯ ॥

ಅಥಾತ್ಮನಿ ಸಮುದ್ರಾಕ್ಷೀತ್ತಮೋಮಾತ್ರಾಂ ತು ಚಾರಿಣೀಮ್।
ರಜಃ ಸತ್ತ್ವಂ ಪರಿತ್ಯಜ್ಯ ವರ್ತಮಾನಾಂ ಸ್ವಕರ್ಮತಃ ॥ ೧೦ ॥

ತತಃ ಸ ತೇನ ದುಃಖೇನ ಶುಚಂ ಚಕ್ರೇ ಜಗತ್ಪತಿಃ।
ತಮಶ್ಚ ವ್ಯನುದತ್ಪಶ್ಚಾತ್ ರಜಸಾ ತು ಸಮಾವೃಣೋತ್ ॥ ೧೧ ॥

ತತ್ತಮಃ ಪ್ರತಿನುತ್ತಂ ವೈ ಮಿಥುನಂ ಸಂಪ್ರಸೂಯತ।
ಅಧರ್ಮಾಚರಣಾತ್ತಸ್ಯ ಹಿಂಸಾ ಶೋಕೋ ವ್ಯಜಾಯತ ॥ ೧೨ ॥

---

೮-೯. ಮೇಲೆ ಹೇಳಿದ ಧರ್ಮಾದಿಗಳು ತಮ್ಮ ತಮ್ಮ ಕಾರ್ಯವನ್ನು ನೆರವೇರಿಸುತ್ತ ಪ್ರಜೆಗಳ ಶಾಶ್ವತ ಸ್ಥಿತಿಯನ್ನು ಏರ್ಪಡಿಸಿ ಪ್ರಜಾಪಾಲಕರಾಗಿರುವರು. ತರುವಾಯ ಪ್ರಜಾಪತಿಯು ತನ್ನ ಸೃಷ್ಟಿಕ್ರಿಯೆಯನ್ನು ವೃದ್ಧಿಪಡಿಸಲು ವೇಗದಿಂದ ಮುಂದುವರಿಸಿದರೂ ಸೃಷ್ಟಿಯಾದ ಪ್ರಜೆಗಳು ಯಾವುದೋ ಕಾರಣವಿಶೇಷದಿಂದ ಅಭಿವೃದ್ಧಿಯನ್ನು ಹೊಂದದಿರಲು ಕರ್ತವ್ಯಾರ್ಥವನ್ನು ಸಾಧಿಸುವ ಒಂದು ಬಗೆಯ ನಿಶ್ಚಯವನ್ನು ತನ್ನ ಬುದ್ಧಿಯಲ್ಲಿ ಮಾಡಿಕೊಂಡನು.

೧೦. ಅನಂತರದಲ್ಲಿ ರಜೋಗುಣ, ಸತ್ತ್ವಗುಣಗಳನ್ನು ದೂರಮಾಡಿ ತನ್ನ ವ್ಯಾಪಾರವನ್ನು ಪ್ರಧಾನವಾಗಿ ನಡೆಸುತ್ತಿದ್ದ ತಮೋಗುಣದ ಅಂಶವು ತನ್ನ ಆತ್ಮನಲ್ಲಿ ಚರಿಸುತ್ತಿದ್ದುದನ್ನು ಕಂಡನು.

೧೧. ಅನಂತರದಲ್ಲಿ ಜಗನ್ನಿಯಾಮಕನಾದ ಬ್ರಹ್ಮನು ಆ ದುಃಖರೂಪವಾದ ತಮೋಗುಣಾಂಶದಿಂದ ಶೋಕವನ್ನು ಸೃಜಿಸಿ ಆ ತಮೋಗುಣವನ್ನು ದೂರತಳ್ಳಿ ರಜೋಗುಣದಿಂದ ಅದನ್ನು ಆವರಿಸಿದನು.

೧೨. ಆವರಿಸಿ ದೂರ ಬಿಡಲ್ಪಟ್ಟ ಆತಮೋಗಣಮಯವಾದ ದೇಹವು ಅಧರ್ಮಾಚರಣದಿಂದ ಹುಟ್ಟುವ ಹಿಂಸಾ-ಮತ್ತು ಶೋಕಗಳೆಂಬ ದ್ವಂದ್ವವನ್ನು ಹುಟ್ಟಿಸಿತು.

**ತತಸ್ತಸ್ಮಿನ್ ಸಮುದ್ಭೂತೇ ವಿಥುನೇ ವರಣಾತ್ಮಕೇ।**
**ತತಃ ಸ ಭಗವಾನಾಸೀತ್ ಪ್ರೀತಿಶ್ಚೈತಂ ಹಿ ಶಿಶ್ರಿಯೇ ।। ೧೩ ।।**

**ಏವಂ ಪ್ರೀತಾತ್ಮನಸ್ತಸ್ಯ ಸ್ವದೇಹಾರ್ಧಾದ್ವಿನಿಃಸೃತಾ।**
**ನಾರೀ ಪರಮಕಲ್ಯಾಣೀ ಸರ್ವಭೂತಮನೋಹರಾ ।। ೧೪ ।।**

**ಸಾ ಹಿ ಕಾಮಾತ್ಮನಾ ಸೃಷ್ಟಾ ಪ್ರಕೃತೇಃ ಸಾ ಸುರೂಪಿಣೀ।**
**ಶತರೂಪೇತಿ ಸಾ ಪ್ರೋಕ್ತಾ ಸಾ ಪ್ರೋಕ್ತೈವ ಪುನಃ ಪುನಃ ।। ೧೫ ।।**

**ತತಃ ಪ್ರಜಾಃ ಸಮುದ್ಭೂತಾ ಯಥಾ ಪ್ರೋಕ್ತಾ ಮಯಾ ಪುರಾ।**
**ಪ್ರಕ್ರಿಯಾಯಾಂ ಯಥಾ ತುಭ್ಯಂ ತ್ರೇತಾಮಧ್ಯೇ ಮಹಾತ್ಮನಃ।।೧೬।।**

**ಯದಾ ಪ್ರಜಾಸ್ತು ತಾಃ ಸೃಷ್ಟಾ ನ ವ್ಯವರ್ಧಂತ ಧೀಮತಃ।**
**ತತೋಽನ್ಯಾನ್ಮಾನಸಾನ್ ಪುತ್ರಾನಾತ್ಮನಃ ಸದೃಶೋಽಸೃಜತ್ ।। ೧೭ ।।**

---

೧೩. ಹಿಂಸಾ ಶೋಕಗಳ ಯುಗ್ಮವು ಆವರಣ ರೂಪವಾಗಿ ಜನಿಸಿದ ಮೇಲೆ ಆ ಭಗವಂತನು ಪ್ರೀತಿವೃತ್ತಿಯಿಂದ ಕೂಡಿದವನಾದನು. ಆಗ ಅವನ ಆತ್ಮವನ್ನು ಪ್ರೀತಿಯೆಂಬ ಉತ್ತಮಗುಣವು ಆಶ್ರಯಿಸಿತು.

೧೪. ಹೀಗೆ ಸುಪ್ರೀತನಾಗಿರುವ ಅವಸ್ಥೆಯಲ್ಲಿ ಅವನ ದೇಹಾರ್ಧದಿಂದ ಪರಮ ಮಂಗಳ ಸ್ವರೂಪಳೂ ಸರ್ವಪ್ರಾಣಿಗಳಿಗೂ ದರ್ಶನೀಯಳೂ ಆದ ನಾರಿಯು ಆವಿರ್ಭವಿಸಿದಳು.

೧೫. ಆ ನಾರಿಯು ಕಾಮಾಸಕ್ತನಾಗಿರುವ ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟಿರುವಳು. ಜಗನ್ಮೂಲ ತತ್ತ್ವವಾದ ಪ್ರಕೃತಿಗೆ ಸಮಾನವಾದ ರೂಪವುಳ್ಳ ಆ ನಾರಿಯು ಮತ್ತೆ ಮತ್ತೆ ಶತರೂಪಾ ಎಂದು ವ್ಯವಹರಿಸಲ್ಪಡುವವಳಾದಳು.

೧೬. ಪೂರ್ವದಲ್ಲಿ ಪ್ರಕ್ರಿಯಾಪಾದದಲ್ಲಿ ನಿಮ್ಮೆಲ್ಲರಿಗೆ ನಾನು ವಿವರಿಸಿದಂತೆ ತ್ರೇತಾಯುಗದ ಮಧ್ಯಭಾಗದಲ್ಲಿ ಆ ಮಹಾತ್ಮನಾದ ಬ್ರಹ್ಮನಿಂದ ಅನೇಕ ಪ್ರಜೆಗಳು ಹುಟ್ಟಿದರು.

೧೭. ಸರ್ವಜ್ಞನಿಂದ ಸೃಜಿಸಲ್ಪಟ್ಟ ಆ ಪ್ರಜೆಗಳು ವೃದ್ಧಿಯನ್ನು ಹೊಂದದಿರಲು ತನಗೆ ಸದೃಶರಾದ ಮತ್ತೆ ಕೆಲವು ಮಾನಸ ಪುತ್ರರನ್ನು ಸೃಷ್ಟಿಮಾಡಿದನು.

ಭೃಗ್ವಂಗಿರೋಮರೀಚೀಂಶ್ಚ ಪುಲಸ್ತ್ಯಂ ಪುಲಹಂ ಕ್ರತುಮ್ ।
ದಕ್ಷಮತ್ರಿಂ ವಸಿಷ್ಠಂ ಚ ನಿರ್ಮಮೇ ಮಾನಸಾನ್ ಸುತಾನ್ ॥ ೧೮ ॥

ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂ ಗತಾಃ ।
ಬ್ರಹ್ಮಾ ಯತಾತ್ಮಕಾನಾಂ ತು ಸರ್ವೇಷಾಮಾತ್ಮಯೋನಿನಾಮ್ ॥ ೧೯ ॥

ತತೋಽಸೃಜತ್ಪುನರ್ಬ್ರಹ್ಮಾ ಧರ್ಮಂ ಭೂತಸುಖಾವಹಮ್ ।
ಪ್ರಜಾಪತಿಂ ರುಚಿಂ ಚೈವ ಪೂರ್ವೇಷಾಮೇವ ಪೂರ್ವಜೌ ॥ ೨೦ ॥

ಬುದ್ಧಿತಃ ಸಸೃಜೇ ಧರ್ಮಂ ಸರ್ವಭೂತಸುಖಾವಹಮ್ ।
ಮನಸಸ್ತು ರುಚಿರ್ನಾಮ ಜಜ್ಞೇ ಯೋಽವ್ಯಕ್ತಜನ್ಮನಃ ॥ ೨೧ ॥

ಭೃಗುಸ್ತು ಹೃದಯಾಜ್ಜಜ್ಞೇ ಋಷಿಃ ಸಲಿಲಯೋನಿನಃ ।
ಪ್ರಾಣಾದ್ದಕ್ಷಂ ಸೃಜನ್ ಬ್ರಹ್ಮಾ ಚಕ್ಷುರ್ಭ್ಯಾಂ ತು ಮರೀಚಿನಮ್ ॥೨೨॥

---

೧೮. ಭೃಗು, ಅಂಗಿರ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠರೆಂಬ ಒಂಭತ್ತು ಮಂದಿ ಮುನಿಗಳಾದ ಮಾನಸ ಪುತ್ರರನ್ನು ಸೃಷ್ಟಿಮಾಡಿದನು.

೧೯. ಈ ಒಂಭತ್ತು ಮಂದಿಯನ್ನು ಪುರಾಣಜ್ಞರು ಏಕಕಂಠದಿಂದ ನವಬ್ರಹ್ಮರೆಂದು ಕರೆಯುವರು. ಜಿತೇಂದ್ರಿಯರೂ ಆತ್ಮನಿಂದಲೇ ಸ್ವತಂತ್ರವಾದ ಸಂಭವವುಳ್ಳವರೂ ಆದ ಈ ನವಬ್ರಹ್ಮರಿಗೆ ಬ್ರಹ್ಮನು ಪೂಜ್ಯನಾದನು.

೨೦. ಅನಂತರದಲ್ಲಿ ಬ್ರಹ್ಮನು ಸರ್ವಪ್ರಾಣಿಗಳಿಗೆ ಸುಖವನ್ನು ಸಂಪಾದಿಸಲು ಸಾಧನವಾದ ಧರ್ಮ ಪ್ರಜಾಪತಿಯನ್ನೂ ರುಚಿಯನ್ನೂ ಸೃಷ್ಟಿಮಾಡಿದನು. ಆ ಧರ್ಮ ಮತ್ತು ರುಚಿಪ್ರಜಾಪತಿಗಳು ಸಮಸ್ತರಿಗೂ ಪೂರ್ವಜರು.

೨೧. ಈ ಮಾನಸ ಪುತ್ರರನ್ನು ಮುಂದೆ ಹೇಳುವಂತೆ ಒಂದೊಂದು ಅವಯವದಿಂದ ಸೃಷ್ಟಿಮಾಡಿದನು. ಸರ್ವ ಪ್ರಾಣಿಗಳಿಗೆ ಸುಖವನ್ನು ಕೊಡುವ ಧರ್ಮವನ್ನು ಬುದ್ಧಿಯಿಂದ ಸೃಜಿಸಿದನು. ಅವ್ಯಕ್ತ ತತ್ತ್ವದಿಂದ ಹುಟ್ಟಿದ ಮನಸ್ಸಿನಿಂದ ರುಚಿಯೆಂಬ ಪ್ರಜಾಪತಿಯು ಜನಿಸಿದನು.

೨೨. ಬ್ರಹ್ಮನ ಹೃದಯದಿಂದ ಭೃಗುಮುನಿಯು ಜನಿಸಿದನು. ಜಲಾಂಶದಿಂದ ಸ್ಥಿತಿಯನ್ನು ಹೊಂದಿರುವ ಪ್ರಾಣದಿಂದ ದಕ್ಷನನ್ನೂ ಚಕ್ಷುಸ್ಸಿನಿಂದ ಮರೀಚಿಯನ್ನೂ ಬ್ರಹ್ಮನು ಸೃಜಿಸಿದನು.

ಅಭಿಮಾನಾತ್ಮಕಂ ರುದ್ರಂ ನಿರ್ಮಮೇ ನೀಲಲೋಹಿತಮ್ ।
ಶಿರಸೋಽಂಗಿರಸಂ ಚೈವ ಶ್ರೋತ್ರಾದತ್ರಿಂ ತಥೈವ ಚ ॥ ೨೩ ॥

ಪುಲಸ್ತ್ಯಂ ಚ ತಥೋದಾನಾದ್ವ್ಯಾನಾಚ್ಚ ಪುಲಹಂ ಪುನಃ ।
ಸಮಾನತೋ ವಸಿಷ್ಠಂಚ ಹ್ಯಪಾನಾನ್ನಿರ್ಮಮೇ ಕ್ರತುಮ್ ॥ ೨೪ ॥

ಇತ್ಯೇತೇ ಬ್ರಹ್ಮಣಃ ಪುತ್ರಾಃ ಪ್ರಜಾದೌ ದ್ವಾದಶ ಸ್ಮೃತಾಃ ।
ಧರ್ಮಸ್ತೇಷಾಂ ಪ್ರಥಮಜೋ ದೇವತಾನಾಂ ಸ್ಮೃತಸ್ತು ವೈ ॥ ೨೫ ॥

ಭೃಗ್ವಾದಯಸ್ತು ಯೇ ಸೃಷ್ಟಾಸ್ತೇ ವೈ ಬ್ರಹ್ಮರ್ಷಯಃ ಸ್ಮೃತಾಃ ।
ಗೃಹಮೇಧಿಪುರಾಣಾಸ್ತೇ ಧರ್ಮಸ್ತೈಃ ಪ್ರಾಕ್ ಪ್ರವರ್ತಿತಃ ॥ ೨೬ ॥

ದ್ವಾದಶೈತೇ ಪ್ರಸೂಯಂತೇ ಪ್ರಜಾಃ ಕಲ್ಪೇ ಪುನಃ ಪುನಃ ।
ತೇಷಾಂ ದ್ವಾದಶ ತೇ ವಂಶಾ ದಿವ್ಯಾ ದೇವಗುಣಾನ್ವಿತಾಃ ॥ ೨೭ ॥

---

೨೩. ಬ್ರಹ್ಮನು ಅಭಿಮಾನಸ್ವರೂಪನಾದ ನೀಲಲೋಹಿತನೆಂಬ ರುದ್ರನನ್ನು ನಿರ್ಮಿಸಿದನು. ಶಿರಸ್ಸಿನಿಂದ ಅಂಗಿರ ಋಷಿಯನ್ನೂ ಶ್ರೋತ್ರೇಂದ್ರಿಯದಿಂದ ಅತ್ರಿ ಮುನಿಯನ್ನೂ ಸೃಷ್ಟಿಮಾಡಿದನು.

೨೪. ಬ್ರಹ್ಮನ ಉದಾನ ವಾಯುವಿನಿಂದ ಪುಲಸ್ತ್ಯ ಮುನಿಯೂ ವ್ಯಾನ ವಾಯುವಿನಿಂದ ಪುಲಹಮುನಿಯೂ ಸಮಾನವಾಯುವಿನಿಂದ ವಸಿಷ್ಠ ಮುನಿಯೂ ಅಪಾನವಾಯುವಿನಿಂದ ಕ್ರತುಪ್ರಜಾಪತಿಯೂ ಜನಿಸಿದರು.

೨೫. ಈ ಹನ್ನೆರಡು ಮಂದಿಯು ಸರ್ಗಾದಿಯಲ್ಲಿ ಹುಟ್ಟಿದ ಬ್ರಹ್ಮಮಾನಸ ಪುತ್ರರು. ಇವರಲ್ಲೆಲ್ಲ ಪೂರ್ವಜನಾದ ಧರ್ಮಪ್ರಜಾಪತಿಯು ದೇವತೆಗಳ ಗುಂಪಿಗೆ ಸೇರಿದವನು.

೨೬- ಹಾಗೂ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಭೃಗು ಮುಂತಾದವರು ಬ್ರಹ್ಮರ್ಷಿಗಳೆಂದು ಸ್ಮರಿಸಲ್ಪಟ್ಟಿರುವರು. ಈ ಬ್ರಹ್ಮರ್ಷಿಗಳು ಉತ್ತಮರಾದ ಧಾರ್ಮಿಕರಾಗಿಯೂ ಪುರಾಣರಾದ ಗೃಹಸ್ಥಾಶ್ರಮಿಗಳಾಗಿಯೂ ಧರ್ಮವನ್ನು ಪ್ರಚಾರಮಾಡಿದರು.

೨೭. ಈ ಹನ್ನೆರಡು ಪ್ರಜಾಪತಿಗಳೆಂಬ ಪ್ರಜೆಗಳು ಪ್ರತಿಯೊಂದು ಕಲ್ಪದಲ್ಲಿಯೂ ಮತ್ತೆ ಮತ್ತೆ ಜನಿಸುತ್ತಾರೆ. ಅವರಿಂದ ದೇವತೆಗಳ ಗುಣಗಳಿಂದ ಅಲಂಕರಿಸಲ್ಪಟ್ಟು ದಿವ್ಯವಾದ ಹನ್ನೆರಡು ವಂಶಗಳು ಸಂತತವಾಗಿ ನಡೆಯುತ್ತಿವೆ.

ಕ್ರಿಯಾವಂತಃ ಪ್ರಜಾವಂತೋ ಮಹರ್ಷಿಭಿರಲಂಕೃತಾಃ ।
ಯದಾ ತೈರಿಹ ಸೃಷ್ಟೈಸ್ತು ಧರ್ಮಾದ್ಯೈಶ್ಚ ಮಹರ್ಷಿಭಿಃ ॥ ೨೮ ॥

ಸೃಜ್ಯಮಾನಾಃ ಪ್ರಜಾಶ್ಚೈವ ನ ವ್ಯವರ್ಧಂತ ಧೀಮತಃ ।
ತಮೋಮಾತ್ರಾವೃತಃ ಸೋಽಭೂಚ್ಛೋಕಪ್ರತಿಹತಶ್ಚ ವೈ ॥ ೨೯ ॥

ಯಥಾವೃತಃ ಸ ವೈ ಬ್ರಹ್ಮಾ ತಮೋಮಾತ್ರಾ ತು ಸಾ ಪುನಃ ।
ಪುತ್ರಾಣಾಂ ಚ ತಮೋಮಾತ್ರಾ ಅಪರಾ ನಿಃಸೃತಾಽಭವತ್ ॥ ೩೦ ॥

ಪ್ರತಿಸ್ರೋತಾತ್ಮಕೋಽಧರ್ಮೋ ಹಿಂಸಾ ಚೈವಾಶುಭಾತ್ಮಿಕಾ ।
ತತಃ ಪ್ರತಿಹತೇ ತಸ್ಯ ಪ್ರತೀಪೇ ವರಣಾತ್ಮಕೇ ॥ ೩೧ ॥

ಸ್ವಾಂ ತನುಂ ಸ ತದಾ ಬ್ರಹ್ಮಾ ಸಮಪೋಹತ ಭಾಸ್ವರಾಮ್
ದ್ವಿಧಾಕೃತ್ವಾ ಸ್ವಕಂ ದೇಹಮರ್ಧೇನ ಪುರುಷೋಽಭವತ್ ॥ ೩೨ ॥

---

೨೮–೨೯. ಮತ್ತು ಆ ವಂಶಗಳು ಸತ್ಕರ್ಮಾಚರಣೆ, ಪ್ರಜೋತ್ಪತ್ತಿ, ಮುಂತಾದ ಸಕಲ ಸಂಪತ್ತುಗಳುಳ್ಳ ಮಹರ್ಷಿಗಳಿಂದ ಶೋಭಿಸಲ್ಪಡುತ್ತವೆ. ಹೀಗಿರಲು ಸಂತಾನಾಭಿವೃದ್ಧಿಗೋಸ್ಕರ ಈ ಧರ್ಮಾದಿ ಮಹರ್ಷಿಗಳಿಂದ ಸೃಜಿಸಲ್ಪಟ್ಟ ಪ್ರಜೆಗಳು ಯಥೇಚ್ಛವಾಗಿ ವೃದ್ಧಿಹೊಂದದಿರುವುದನ್ನು ಧ್ಯಾನಿಸಿದ ಸರ್ವಜ್ಞನಾದ ಬ್ರಹ್ಮನು ತಮೋಗುಣೋದ್ರೇಕದಿಂದ ಕೂಡಿ ಶೋಕದಿಂದ ಆವಿಷ್ಟನಾದನು.

೩೦. ಬ್ರಹ್ಮನು ಹೇಗೆ ತನ್ನ ತಮೋಗುಣಾಂಶದಿಂದ ಆವೃತನಾದನೋ ಹಾಗೆಯೇ ಅವನ ಮಾನಸ ಪುತ್ರರಾದ ಧರ್ಮಾದಿಗಳಿಗೂ ತಮೋಗುಣವು ಉದ್ರೇಕಗೊಂಡು ಅದರಿಂದ ಆವೃತರಾದರು.

೩೧–೩೨. ಪುತ್ರರ ತಮೋಗುಣಮಯವಾದ ಆಕೃತಿಯಿಂದ ಸತ್ಪ್ರಜೆಗಳ ಪ್ರವಾಹವನ್ನು ತಡೆಗಟ್ಟಿ ನಿಲ್ಲಿಸುವ ಶೀಲವುಳ್ಳ ಪ್ರತಿ ಸ್ರೋತ ರೂಪವಾದ ಅಧರ್ಮವೂ ಅಶುಭರೂಪವಾದ ಹಿಂಸೆಯೂ ಜನಿಸಿದವು. ಅನಂತರದಲ್ಲಿ ಆವರಣ ರೂಪವೂ ಪ್ರತಿಕೂಲವೂ ಆದ ಆ ಮಿಥುನದ ಪ್ರತಿಘಾತವು ಜನಿಸಲು ಬ್ರಹ್ಮನು ತನ್ನ ದೀಪ್ಯಮಾನವಾದ ದೇಹವನ್ನು ಎರಡಾಗಿ ವಿಂಗಡಿಸಿ ತನ್ನ ಒಂದು ದೇಹಾರ್ಧದಿಂದ ಪುರುಷರೂಪನಾದನು.

ಅರ್ಧೇನ ನಾರೀ ಸಾ ತಸ್ಯ ಶತರೂಪಾ ವ್ಯಜಾಯತ ।
ಪ್ರಕೃತಿರ್ಭೂತಧಾತ್ರೀ ಸಾ ಕಾಮಾದ್ವೈ ಸೃಜತಃ ಪ್ರಭೋ ॥ ೩೩ ॥

ಸಾ ದಿವಂ ಪೃಥಿವೀಂ ಚೈವ ಮಹಿಮ್ನಾ ವ್ಯಾಪ್ಯ ಸುಸ್ಥಿತಾ ।
ಬ್ರಹ್ಮಣಃ ಸಾ ತನುಃ ಪೂರ್ವಾ ದಿವಮಾವೃತ್ಯ ತಿಷ್ಠತಃ ॥ ೩೪ ॥

ಯಾ ತ್ವರ್ಧಾ ಸೃಜ್ಯತೇ ನಾರೀ ಶತರೂಪಾ ವ್ಯಜಾಯತ ।
ಸಾ ದೇವೀ ನಿಯುತಂ ತಪ್ತ್ವಾ ತಪಃ ಪರಮದುಶ್ಚರಮ್ ॥ ೩೫ ॥

ಭರ್ತಾರಂ ದೀಪ್ತಯಶಸಂ ಪುರುಷಂ ಪ್ರತ್ಯಪದ್ಯತ ।
ಸ ವೈ ಸ್ವಾಯಂಭುವಃ ಪೂರ್ವಂ ಪುರುಷೋ ಮನುರುಚ್ಯತೇ ॥ ೩೬ ॥

ತಸ್ಯೈಕಸಪ್ತತಿಯುಗಂ ಮನ್ವಂತರಮಿಹೋಚ್ಯತೇ ।
ಲಬ್ಧ್ವಾ ತು ಪುರುಷಃ ಪತ್ನೀಂ ಶತರೂಪಾಮಯೋನಿಜಾಮ್ ॥ ೩೭ ॥

---

೩೩. ಇನ್ನೊಂದು ಅರ್ಧಭಾಗದಿಂದ ಶತರೂಪೆಯೆಂಬ ಹೆಸರುಳ್ಳ ನಾರೀ ರೂಪವು ಜನಿಸಿತು. ಆ ನಾರಿಯು ಸೃಷ್ಟಿಕಾರ್ಯೋನ್ಮುಖನಾದ ಬ್ರಹ್ಮನಿಗೆ ಪ್ರಕೃತಿ ರೂಪಳೂ ಮತ್ತು ಸಮಸ್ತ ಭೂತಗಳನ್ನು ಧರಿಸುವುದರಿಂದ ಧಾತ್ರೀರೂಪಳೂ ಆಗಿರುವಳು.

೩೪. ದ್ಯುಲೋಕವನ್ನು ವ್ಯಾಪಿಸಿರುವ ಬ್ರಹ್ಮನ ಆ ನಾರೀರೂಪವಾದ ದೇಹವು ದ್ಯಾವಾಪೃಥಿವಿಗಳನ್ನು ತನ್ನ ಮಹಿಮೆಯಿಂದ ವ್ಯಾಪಿಸಿ ಪ್ರತಿಷ್ಠೆಯನ್ನು ಹೊಂದಿತು.

೩೫. ಬ್ರಹ್ಮನ ದೇಹಾರ್ಧದಿಂದ ಜನ್ಮವೆತ್ತಿರುವ ಶತರೂಪಾದೇವಿಯು ನಿಯುತ ವರ್ಷಗಳ ಕಾಲದವರೆಗೆ ಸಾಮಾನ್ಯ ಜನರಿಂದ ಮಾಡಲಾಗದ ಕಷ್ಟತಮವಾದ ತಪಸ್ಸನ್ನು ಆಚರಿಸಿದಳು.

೩೬. ಆ ತಪೋಽನುಷ್ಠಾನದ ಫಲವಾಗಿ ಶತರೂಪಾದೇವಿಯು ಉಜ್ವಲವಾದ ಕೀರ್ತಿಯಿಂದ ಕೂಡಿದ ಪುರುಷನನ್ನು ಪತಿಯನ್ನಾಗಿ ಹೊಂದಿದಳು. ಆ ಸ್ವಯಂಭು ಪುತ್ರನೂ ಪುರುಷಾಕಾರನೂ ಆದ ಪತಿಯು ಪೂರ್ವದಲ್ಲಿ ಮನುವೆಂದು ಕರೆಯಲ್ಪಟ್ಟಿರುತ್ತಾನೆ.

೩೭. ಆ ಮನುವು ರಾಜ್ಯವಾಳಿದ ಕಾಲದ ಎಪ್ಪತ್ತೊಂದು ಯುಗಪರಿಮಾಣವು ಮನ್ವಂತರವೆಂದು ಈಗ ಹೇಳಲ್ಪಡುತ್ತದೆ. ಅಂತಹ ಪುರುಷನು ಅಯೋನಿಜೆಯಾದ ಆ ಶತರೂಪೆಯೆಂಬ ಭಾರ್ಯೆಯನ್ನು ಪರಿಣಯ ಮಾಡಿಕೊಂಡನು.

**ತಯಾ ಸ ರಮತೇ ಸಾರ್ಧಂ ತಸ್ಮಾತ್ಸಾ ರತಿರುಚ್ಯತೇ |**
**ಪ್ರಥಮಃ ಸಂಪ್ರಯೋಗಃ ಸ ಕಲ್ಪಾದೌ ಸಮವರ್ತತ || ೩೮ ||**

**ವಿರಾಜಮಸೃಜದ್ಬ್ರಹ್ಮಾ ಸೋಽಭವತ್ಪುರುಷೋ ವಿರಾಟ್ |**
**ಸಮ್ರಾಟ್ ಸ ಶತರೂಪಸ್ತು ವೈರಾಜಸ್ತು ಮನುಃ ಸ್ಮೃತಃ || ೩೯ ||**

**ಸ ವೈರಾಜಃ ಪ್ರಜಾಸರ್ಗಂ ಸಸರ್ಜ ಪುರುಷೋ ಮನುಃ |**
**ವೈರಾಜಾತ್ಪುರುಷಾದ್ವೀರೌ ಶತರೂಪಾ ವ್ಯಜಾಯತ || ೪೦ ||**

**ಪ್ರಿಯವ್ರತೋತ್ತಾನಪಾದೌ ಪುತ್ರೌ ಪುತ್ರವತಾಂ ವರೌ |**
**ಕನ್ಯೇ ದ್ವೇ ಸುಮಹಾಭಾಗೇ ಯಾಭ್ಯಾಂ ಜಾತಾ ಇಮಾಃ ಪ್ರಜಾಃ**
**|| ೪೧ ||**

---

೩೮. ಆ ಪತ್ನಿಯೊಡನೆ ಆ ಪುರುಷನು ರತಿ ವಿಹಾರ ಸುಖವನ್ನು ಅನುಭವಿಸಿದನು. ಹೀಗೆ ಪುರುಷನ ರತಿ ವಿಹಾರಕ್ಕೆ ಸಾಧನಳಾದ್ದರಿಂದ ಆ ಪತ್ನಿಯು ರತಿಯೆಂದು ಕರೆಯಲ್ಪಡುತ್ತಾಳೆ. ಕಲ್ಪಾದಿಯಲ್ಲಿ ಸ್ತ್ರೀ ಪುರುಷರ ಸಮಾಗಮವು ಆ ಮೊದಲುಗೊಂಡು ಪ್ರಾರಂಭವಾಗಿ ಬಂದಿತು.

೩೯. ಬ್ರಹ್ಮನು ವಿರಾಟ್ ಎಂಬ ಪುರುಷನನ್ನು ಸೃಜಿಸ ಬೇಕೆಂದು ಧ್ಯಾನಿಸಿ ತಾನು ವಿರಾಟ್‌ಪುರುಷಾಕಾರವನ್ನು ಧರಿಸಿದನು. ಆ ವಿರಾಟ್ಪುರುಷನ ಪುತ್ರನಾದ ಮತ್ತು ಶತರೂಪಾದೇವಿಯ ಪತಿಯಾದ ಆ ಮನುವು ಚಕ್ರವರ್ತಿಯಾದನು.

೪೦. ಆ ವಿರಾಟ್ಪುತ್ರನೂ ಪುರುಷಾಕಾರಿಯೂ ಆದ ಮನುವು ಪ್ರಜಾಸೃಷ್ಟಿಯನ್ನು ಮಾಡಲುಪಕ್ರಮಿಸಿದನು. ಆಗ ಶತರೂಪಾ ಎಂಬುವಳು ಆ ವಿರಾಟ್ಪುರುಷನಿಂದ ಇಬ್ಬರು ವೀರರನ್ನು ಪ್ರಸವಿಸಿದಳು.

೪೧. ಶತರೂಪೆಯು ಪ್ರಸವಿಸಿದ ಆ ಇಬ್ಬರು ಪುತ್ರರು ಪ್ರಿಯವ್ರತ ಮತ್ತು ಉತ್ತಾನಪಾದ ಎಂಬ ನಾಮಾಂಕಿತರೂ ಪುತ್ರವಂತರಾಗುವ ಸಮಸ್ತ ಪ್ರಜೆಗಳಿಗೂ ಶ್ರೇಷ್ಠರೂ ಆಗಿದ್ದರು. ಮತ್ತು ಈಗಿನ ಪ್ರಜಾವೃಂದದ ಉತ್ಪತ್ತಿಗೆ ಕಾರಣರಾದ ಇಬ್ಬರು ಹೆಣ್ಣುಮಕ್ಕಳು ಶತರೂಪೆಯಲ್ಲಿ ಹುಟ್ಟಿದರು.

ದೇವೀ ನಾಮ್ನಾ ತಥಾಽಽಕೂತಿಃ ಪ್ರಸೂತಿಶ್ಚೈವ ತೇ ಶುಭೇ ।
ಸ್ವಾಯಂಭುವಃ ಪ್ರಸೂತಿಂ ತು ದಕ್ಷಾಯ ವ್ಯಸೃಜತ್ಪ್ರಭುಃ ॥ ೪೨ ॥

ರುಚೇಃ ಪ್ರಜಾಪತೇಶ್ಚೈವ ಆಕೂತಿಂ ಪ್ರತ್ಯಪಾದಯತ್ ।
ಆಕೂತ್ಯಾಂ ಮಿಥುನಂ ಜಜ್ಞೇ ಮಾನಸಸ್ಯ ರುಚೇಃ ಶುಭಮ್ ॥ ೪೩ ॥

ಯಜ್ಞಶ್ಚ ದಕ್ಷಿಣಾ ಚೈವ ಯಮಲೌ ತೌ ಬಭೂವತುಃ ।
ಯಜ್ಞಸ್ಯ ದೀಕ್ಷಾ ಭಾರ್ಯಾ ಸಾ ಪುತ್ರಾ ದ್ವಾದಶ ಜಜ್ಞಿರೇ ॥ ೪೪ ॥

ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇಽಂತರೇ ।
ಯಮಸ್ಯ ಪುತ್ರಾ ಯಜ್ಞಸ್ಯ ತಸ್ಮಾದ್ಯಾಮಾಸ್ತು ತೇ ಸ್ಮೃತಾಃ ॥ ೪೫ ॥

ಅಜಿತಾಶ್ಚೈವ ಶುಕ್ರಾಶ್ಚ ದ್ವೌ ಗಣೌ ಬ್ರಹ್ಮಣಃ ಸ್ಮೃತೌ ।
ಯಾಮಾಃ ಪೂರ್ವಂ ಪರಿಕ್ರಾಂತಾ ಯೇಷಾಂ ಸಂಜ್ಞಾ ದಿವೌಕಸಃ
॥ ೪೬ ॥

---

೪೨. ಆ ಕನ್ಯೆಯರ ಹೆಸರು ಆಕೂತಿ ಮತ್ತು ಪ್ರಸೂತಿದೇವಿಯೆಂದು ಪ್ರಸಿದ್ಧವಾಗಿದ್ದವು. ಆ ಸ್ವಯಂಭು ಪುತ್ರನಾದ ಮನು ಚಕ್ರವರ್ತಿಯು ಪ್ರಸೂತಿಯೆಂಬ ಕನ್ಯೆಯನ್ನು ದಕ್ಷಬ್ರಹ್ಮನಿಗೆ ಕೊಟ್ಟನು.

೪೩. ರುಚಿ ಪ್ರಜಾಪತಿಗೆ ಆ ಆಕೂತಿಯೆಂಬ ಮತ್ತೊಬ್ಬಳು ಕನ್ಯೆಯನ್ನು ಕೊಟ್ಟನು. ಆ ಮಾನಸಪುತ್ರನಾದ ರುಚಿಪ್ರಜಾಪತಿಗೆ ಆ ತನ್ನ ಸತಿಯಾದ ಆಕೂತಿಯಲ್ಲಿ ಮಂಗಲಕರವಾದ ಎರಡು ಸಂತಾನಗಳಾದವು.

೪೪. ಯಜ್ಞ ಮತ್ತು ದಕ್ಷಿಣಾ ಎಂದು ಆ ಇಬ್ಬರು ಮಕ್ಕಳು ಯಮಳರಾಗಿ ಜನಿಸಿದರು. ಯಜ್ಞದೇವನಿಗೆ ದೀಕ್ಷಾ ಎಂಬ ತನ್ನ ಸತಿಯಲ್ಲಿ ಹನ್ನೆರಡು ಮಂದಿ ಪುತ್ರರು ಜನಿಸಿದರು.

೪೫. ಸ್ವಾಯಂಭುವ ಮನ್ವಂತರದಲ್ಲಿ ಜನಿಸಿದ ಆ ಮಕ್ಕಳಿಗೆ ಸಾಮಾನ್ಯವಾಗಿ ಯಾಮ ಎಂಬ ಸಂಜ್ಞೆಯಿಂದ ಪ್ರಸಿದ್ಧಿಯುಂಟಾಯಿತು. ಪಿತೃವಾದ ಯಜ್ಞದೇವನಿಗೆ ಯಮನೆಂದು ಸಂಜ್ಞಾಪ್ರಸಿದ್ಧಿಯಿದ್ದುದರಿಂದ ಅವನ ಪುತ್ರರಿಗೆ ಯಾಮವೆಂಬುದು ಅನ್ವರ್ಥನಾಮವಾಯಿತು.

೪೬. ಬ್ರಹ್ಮನಿಗೆ ಈ ಮೇಲೆ ಹೇಳಿದ ಪರಂಪರೆ ಮಾತ್ರವಲ್ಲದೇ ಅಜಿತ ಮತ್ತು ಶುಕ್ರ ಎಂದು ಎರಡು ಗಣಗಳು ಪುತ್ರರಾಗಿ ಜನಿಸಿದರು. ಯಾಮರ ಉತ್ಪ

12

ಸ್ವಾಯಂಭುವಸುತಾಯಾಂ ತು ಪ್ರಸೂತ್ಯಾಂ ಲೋಕಮಾತರಃ ।
ತಸ್ಯಾಂ ಕನ್ಯಾಶ್ಚತುರ್ವಿಂಶದ್ದಕ್ಷಸ್ತ್ವಜನಯತ್ಪ್ರಭುಃ ॥ ೪೭ ॥

ಸರ್ವಾಸ್ತಾಶ್ಚ ಮಹಾಭಾಗಾಃ ಸರ್ವಾಃ ಕಮಲಲೋಚನಾಃ ।
ಯೋಗಪತ್ನ್ಯಶ್ಚ ತಾಃ ಸರ್ವಾಃ ಸರ್ವಾಸ್ತಾ ಯೋಗಮಾತರಃ ॥ ೪೮ ॥

ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾ ವಿಶ್ವಸ್ಯ ಮಾತರಃ ।
ಶ್ರದ್ಧಾ ಲಕ್ಷ್ಮೀರ್ಧೃತಿಸ್ತುಷ್ಟಿಃ ಪುಷ್ಟಿರ್ಮೇಧಾ ತಥಾ ಕ್ರಿಯಾ ॥ ೪೯ ॥

ಬುದ್ಧಿರ್ಲಜ್ಜಾ ವಸುಃ ಶಾಂತಿಃ ಸಿದ್ಧಿಃ ಕೀರ್ತಿಸ್ತ್ರಯೋದಶ ।
ಪತ್ನ್ಯರ್ಥಂ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಃ ಪ್ರಭುಃ ॥ ೫೦ ॥

ದ್ವಾರಾಣ್ಯೇತಾನಿ ಚೈವಾಸ್ಯ ವಿಹಿತಾನಿ ಸ್ವಯಂಭುವಾ ।
ಯಾಸ್ತ್ವನ್ಯಾಃ ಶಿಷ್ಟಾ ಯವೀಯಸ್ಯ ಏಕಾದಶ ಸುಲೋಚನಾಃ ॥ ೫೧ ॥

---

ತ್ತಿಯು ಹಿಂದೆಯೇ ಹೇಳಲ್ಪಟ್ಟಿರುತ್ತದೆ. ಅವರಿಗೆ "ದಿವೌಕಸ" ಎಂದು ಒಂದು ಹೆಸರುಂಟು.

೪೭. ಸ್ವಾಯಂಭುವ ಪುತ್ರಿಯಾದ ಪ್ರಸೂತಿಯನ್ನು ಸಕಲ ಪ್ರಭುವಾದ ದಕ್ಷನು ಪರಿಗ್ರಹಿಸಿ ಲೋಕಕ್ಕೆಲ್ಲ ಜನನಿಯರಾದ ಇಪ್ಪತ್ತನಾಲ್ಕು ಜನ ಕನ್ಯೆಯರನ್ನು ಹುಟ್ಟಿಸಿದನು.

೪೮. ಆ ಎಲ್ಲ ಕನ್ಯೆಯರೂ ಮಹಾಭಾಗರೂ ಕಮಲದಂತೆ ಸುಂದರವಾದ ನೇತ್ರವುಳ್ಳವರೂ ಯೋಗಿಪತ್ನಿಯರೂ ಮತ್ತು ಯೋಗಿಗಳ ಮಾತೃಸ್ವರೂಪರೂ ಆಗಿರುವರು.

೪೯-೫೦. ಮತ್ತು ಎಲ್ಲರೂ ಬ್ರಹ್ಮವಾದಿನಿಯರೂ ವಿಶ್ವಕ್ಕೆಲ್ಲ ಜನನಿಯರೂ ಆಗಿ ಮಹಾಮಹಿಮೆಯಿಂದ ಕೂಡಿದ್ದರು. ಅವರಲ್ಲಿ ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಸು, ಶಾಂತಿ, ಸಿದ್ಧಿ, ಕೀರ್ತಿ ಎಂಬ ಹದಿಮೂರು ಜನ ದಕ್ಷಕನ್ಯೆಯರನ್ನು ಪ್ರಭುವಾದ ಧರ್ಮ ಪ್ರಜಾಪತಿಯು ಪತ್ನಿಯರನ್ನಾಗಿ ಪರಿಗ್ರಹಿಸಿದನು.

೫೧-೫೨. ಸ್ವಯಂಭುವಿನಿಂದ ಧರ್ಮ ಪ್ರಜಾಪತಿಯು ಪರಿಗ್ರಹಿಸಿದ ದಕ್ಷ ಬ್ರಹ್ಮನ ಹದಿಮೂರು ಕನ್ಯೆಯರನ್ನು ಧರ್ಮದ್ವಾರವನ್ನಾಗಿ ಕಲ್ಪಿಸಿರುವನು. ಮಿಕ್ಕ

**ಸತೀ ಖ್ಯಾತಿಶ್ಚ ಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ।**
**ಸನ್ನತಿಶ್ಚಾನಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ॥ ೫೨ ॥**

**ತಾಸ್ತದಾ ಪ್ರತ್ಯಗೃಹ್ಣನ್ತ ಪುನರನ್ಯೇ ಮಹರ್ಷಯಃ ।**
**ರುದ್ರೋ ಭೃಗುರ್ಮರೀಚಿಶ್ಚ ಅಂಗೀರಾಃ ಪುಲಹಃ ಕ್ರತುಃ ॥ ೫೩ ॥**

**ಪುಲಸ್ತ್ಯೋಽತ್ರಿರ್ವಸಿಷ್ಠಶ್ಚ ಪಿತರೋಽಗ್ನಿಸ್ತಥೈವ ಚ ।**
**ಸತೀಂ ಭವಾಯ ಪ್ರಾಯಚ್ಛತ್ ಖ್ಯಾತಿಂ ಚ ಭೃಗವೇ ತಥಾ ॥ ೫೪ ॥**

**ಮರೀಚಯೇ ತು ಸಂಭೂತಿಂ ಸ್ಮೃತಿಮಂಗಿರಸೇ ದದೌ ।**
**ಪ್ರೀತಿಂ ಚೈವ ಪುಲಸ್ತ್ಯಾಯ ಕ್ಷಮಾಂ ವೈ ಪುಲಹಾಯ ಚ ॥ ೫೫ ॥**

**ಕ್ರತವೇ ಸಂತತಿಂ ನಾಮ ಅನಸೂಯಾಂ ತಥಾಽತ್ರಯೇ ।**
**ಊರ್ಜಾಂ ದದೌ ವಸಿಷ್ಠಾಯ ಸ್ವಾಹಾಂ ಚೈವಾಗ್ನಯೇ ದದೌ ॥ ೫೬ ॥**

**ಸ್ವಧಾಂ ಚೈವ ಪಿತೃಭ್ಯಸ್ತು ತಾಸ್ವಪತ್ಯಾನಿ ಮೇ ಶೃಣು ।**
**ಏತಾಃ ಸರ್ವಾ ಮಹಾಭಾಗಾಃ ಪ್ರಜಾಸ್ತ್ವನುಸೃತಾಃ ಸ್ಥಿತಾಃ ॥ ೫೭ ॥**

---

ಕಿರಿಯ ಹೆಣ್ಣುಮಕ್ಕಳಿಗೆ ಕ್ರಮವಾಗಿ ಸತೀ, ಖ್ಯಾತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸನ್ನತಿ. ಅನಸೂಯಾ, ಊರ್ಜಾ, ಸ್ವಾಹಾ, ಸ್ವಧಾ, ಎಂದು ಪ್ರಸಿದ್ಧ ವಾದ ಹೆಸರುಗಳಿದ್ದವು.

೫೩-೫೪. ಈ ಕನ್ಯೆಯರನ್ನು ರುದ್ರ, ಭೃಗು, ಮರೀಚಿ, ಅಂಗಿರಾ, ಪುಲಹ, ಕ್ರತು, ಪುಲಸ್ತ್ಯ, ಅತ್ರಿ, ವಸಿಷ್ಠ, ಪಿತೃ, ಅಗ್ನಿಯೆಂಬ ಮಹಾಮುನಿಗಳು ಪರಿಗ್ರಹಿಸಿ ದರು. ಅವರಲ್ಲಿ ರುದ್ರನಿಗೆ ಸತಿಯನ್ನು ಕೊಟ್ಟನು. ಭೃಗುಮುನಿಗೆ ಖ್ಯಾತಿಯೆಂಬು ವಳನ್ನು ಕೊಟ್ಟನು.

೫೫-೫೬-೫೭. ಮಿಕ್ಕ ಕನ್ಯೆಯರಲ್ಲಿ ಸಂಭೂತಿಯನ್ನು ಮರೀಚಿ ಮುನಿಗೆ, ಸ್ಮೃತಿ ಎಂಬುವಳನ್ನು ಅಂಗಿರಋಷಿಗೆ, ಪ್ರೀತಿಯನ್ನು ಪುಲಸ್ತ್ಯ ಬ್ರಹ್ಮನಿಗೆ, ಕ್ಷಮೆ ಎಂಬುವಳನ್ನು ಪುಲಹನಿಗೆ, ಸಂನತಿಯನ್ನು ಕ್ರತು ಪ್ರಜಾಪತಿಗೆ, ಅನಸೂಯಾದೇವಿ ಯನ್ನು ಅತ್ರಿಮಹರ್ಷಿಗೆ, ಊರ್ಜಾದೇವಿಯನ್ನು ವಸಿಷ್ಠ ಮಹಾಮುನಿಗೆ, ಸ್ವಾಹಾ ದೇವಿಯನ್ನು ಅಗ್ನಿದೇವನಿಗೆ, ಮತ್ತು ಸ್ವಧಾದೇವಿಯನ್ನು ಪಿತೃದೇವತೆಗಳಿಗೆ ಕೊಟ್ಟು

ಮನ್ವಂತರೇಷು ಸರ್ವೇಷು ಯಾವದಾಭೂತಸಂಪ್ಲವಮ್ ।
ಶ್ರದ್ಧಾ ಕಾಮಂ ಪ್ರಜಜ್ಞೇಽಥ ದರ್ಪೋ ಲಕ್ಷ್ಮೀಸುತಃ ಸ್ಮೃತಃ ॥ ೫೮ ॥

ಧೃತ್ಯಾಸ್ತು ನಿಯಮಃ ಪುತ್ರಃ ತುಷ್ಟ್ಯಾಃ ಸಂತೋಷ ಉಚ್ಯತೇ ।
ಪುಷ್ಟ್ಯಾ ಲಾಭಃ ಸುತಶ್ಚಾಪಿ ಮೇಧಾಪುತ್ರಃ ಶ್ರುತಸ್ತಥಾ ॥ ೫೯ ॥

ಕ್ರಿಯಾಯಾಸ್ತ್ವನಯೌ ಪ್ರೋಕ್ತೌ ದಮಶ್ಚ ಶಮ ಏವ ಚ ।
ಬುದ್ಧೇರ್ಬೋಧಃ ಸುತಶ್ಚಾಪಿ ಅಪ್ರಮಾದಶ್ಚ ತಾವುಭೌ ॥ ೬೦ ॥

ಲಜ್ಜಾಯಾ ವಿನಯಃ ಪುತ್ರೋ ವ್ಯವಸಾಯೋ ವಸೋಃ ಸುತಃ ।
ಕ್ಷೇಮಃ ಶಾಂತೇಃ ಸುತಶ್ಚಾಪಿ ಸುಖಂ ಸಿದ್ಧೇರ್ವ್ಯಜಾಯತ ॥ ೬೧ ॥

ಯಶಃ ಕೀರ್ತೇಃ ಸುತಶ್ಚಾಪಿ ಇತ್ಯೇತೇ ಧರ್ಮಸೂನವಃ ।
ಕಾಮಸ್ಯ ತು ಸುತೋ ಹರ್ಷೋ ದೇವ್ಯಾಂ ಸಿದ್ಧ್ಯಾಂ ವ್ಯಜಾಯತ ॥ ೬೨ ॥

---

ವಿವಾಹವಿಧಿಯನ್ನು ನೆರವೇರಿಸಿದನು. ಈ ಎಲ್ಲ ಕನ್ಯೆಯರೂ ಅವರವರ ಉತ್ತಮ ಪತಿಗಳಿಂದ ಕೂಡಿ ಮಹಾಭಾಗರಾಗಿಯೂ ಅನೇಕ ಸಂತತಿರೂಪವಾದ ಪ್ರಜೆಗಳಿಗೆ ಕಾರಣರೂ ಆದರು. ಅವರಿಂದ ಅಭಿವೃದ್ಧಿಯಾದ ಪ್ರಜೆಗಳ ವಿಷಯದಲ್ಲಿ ಮುಂದೆ ವಿವರಿಸುವ ನನ್ನ ವಚನವನ್ನು ಕೇಳಿರಿ.

೫೮. ಸೃಷ್ಟಿ ಮೊದಲ್ಗೊಂಡು ಸಕಲ ಭೂತಭೌತಿಕಗಳನ್ನು ಲಯಮಾಡುವ ಪ್ರಲಯಕಾಲದವರೆಗೆ ಪ್ರತಿಯೊಂದು ಮನ್ವಂತರಗಳಲ್ಲಿಯೂ ಶ್ರದ್ಧಾದೇವಿಯು ಕಾಮನೆಂಬ ಪುತ್ರನನ್ನು ಪ್ರಸವಿಸಿದಳು. ಹಾಗೆ ಲಕ್ಷ್ಮಿಯು ದರ್ಪನೆಂಬ ಪುತ್ರನನ್ನು ಹಡೆದಳು.

೫೯. ಹಾಗೆ ನಿಯಮ, ಸಂತೋಷ, ಲಾಭ, ಶ್ರುತ ಎಂಬ ನಾಲ್ವರು ಮಕ್ಕಳು ಕ್ರಮವಾಗಿ ಧೃತಿ, ತುಷ್ಟಿ, ಪುಷ್ಟಿ, ಮೇಧಾ ಎಂಬ ನಾಲ್ಕು ಮಂದಿ ಜನನಿಯರಿಂದ ಜನ್ಮವನ್ನು ತಾಳಿದರು.

೬೦. ಕ್ರಿಯಾ ಎಂಬಾಕೆಗೆ ದಮ ಶಮವೆಂಬ ಇಬ್ಬರು ಮಕ್ಕಳೂ ಬುದ್ಧಿ ಎಂಬುವಳಿಗೆ ಬೋಧ ಅಪ್ರಮಾದವೆಂಬ ಇಬ್ಬರು ಮಕ್ಕಳೂ ಹುಟ್ಟಿದರು.

೬೧-೬೨. ಅದರಂತೆ ವಿನಯ ವ್ಯವಸಾಯ, ಕ್ಷೇಮ, ಸುಖ, ಯಶಸ್ಸು, ಎಂಬ ಐದುಮಂದಿ ಪುತ್ರರು ಲಜ್ಜಾ, ವಸು, ಶಾಂತಿ, ಸಿದ್ಧಿ, ಕೀರ್ತಿಗಳೆಂಬ ಧರ್ಮಪ್ರಜಾಪತಿಯ ಧರ್ಮಪತ್ನಿಯರಾದ ಜನನಿಯರಲ್ಲಿ ಹುಟ್ಟಿದರು. ಈ ಪುತ್ರರೆಲ್ಲರೂ ಧರ್ಮ

**ಇತ್ಯೇಷ ವೈ ಸುಖೋದರ್ಕಃ ಸರ್ಗೋ ಧರ್ಮಸ್ಯ ಸಾತ್ತ್ವಿಕಃ ।**
**ಜಜ್ಞೇ ಹಿಂಸಾ ತ್ವಧರ್ಮಾದ್ವೈ ನಿಕೃತಿಂ ಚಾನೃತಂ ಚ ತೇ ॥ ೬೩ ॥**

**ನಿಕೃತ್ಯನೃತಯೋರ್ಜಜ್ಞೇ ಭಯಂ ನರಕ ಏವ ಚ ।**
**ಮಾಯಾ ಚ ವೇದನಾ ಚಾಪಿ ಮಿಥುನದ್ವಯಮೇತಯೋಃ ॥ ೬೪ ॥**

**ಮಯಾಜ್ಜಜ್ಞೇಽಥ ವೈ ಮಾಯಾ ಮೃತ್ಯುಂ ಭೂತಾಪಹಾರಿಣಮ್ ।**
**ವೇದನಾಯಾಂ ತತಶ್ಚಾಪಿ ಜಜ್ಞೇ ದುಃಖಂ ತು ರೌರವಾತ್ ॥ ೬೫ ॥**

**ಮೃತ್ಯೋರ್ವ್ಯಾಧಿರ್ಜರಾಶೋಕಕ್ರೋಧಾಸೂಯಾ ವಿಜಜ್ಞಿರೇ ।**
**ದುಃಖೋತ್ತರಾಃ ಸ್ಮೃತಾ ಹ್ಯೇತೇ ಸರ್ವೇ ಚಾಧರ್ಮಲಕ್ಷಣಾಃ ॥ ೬೬ ॥**

---

ಪ್ರಜಾಪತಿಯ ಭಾರ್ಯೆಯರಲ್ಲಿ ಹುಟ್ಟಿದ ಸತ್ಪ್ರಜೆಗಳು. ಮೊದಲು ಹೇಳಿದ ಶ್ರದ್ಧಾದೇವಿಯ ಪುತ್ರನಾದ ಕಾಮನಿಗೆ ಸಿದ್ಧಿದೇವಿಯೆಂಬ ಸತಿಯಲ್ಲಿ ಹರ್ಷನೆಂಬ ಪುತ್ರನು ಉತ್ಪತ್ತಿ ಹೊಂದಿದನು.

೬೩. ಈ ಮೇಲೆ ಹೇಳಿರುವ ಸೃಷ್ಟಿಪ್ರಪಂಚವು ಧರ್ಮಪ್ರಜಾಪತಿಯಿಂದ ಪವಿತ್ರ ಜನ್ಮವನ್ನೆತ್ತಿರುವುದೂ ಸತ್ತ್ವಗುಣದಿಂದ ಕೂಡಿರುವುದೂ ಆಗಿದೆ. ಈ ಸಂತತಿಯು ಕೇವಲ ಲೋಕಕಲ್ಯಾಣಾರ್ಥವಾಗಿ ಹುಟ್ಟಿರುವುದು. ಅಧರ್ಮದಿಂದ ಹಿಂಸಾ ಎಂಬ ನಾರಿಯಲ್ಲಿ ನಿಕೃತಿ ಮತ್ತು ಅನೃತಗಳೆಂಬ ಪುತ್ರರ ಜನ್ಮಲಾಭವಾಯಿತು.

೬೪. ಅನಂತರದಲ್ಲಿ ಆ ನಿಕೃತಿಯಲ್ಲಿ ಭಯ ನರಕಗಳೆಂಬ ಒಂದು ಪುತ್ರ ದ್ವಂದ್ವವೂ ಅನೃತದಲ್ಲಿ ಮಾಯಾ, ವೇದನಾ ಎಂಬ ಪುತ್ರೀಯುಗ್ಮವೂ ಜನಿಸಿದರು.

೬೫. ಆ ಮಾಯೆ ಎಂಬುವಳು ಮಯನೆಂಬ ಪತಿ ಸಂಸರ್ಗದಿಂದ ನಿಖಿಲ ಭೂತಗಳನ್ನು ಸಂಹಾರಮಾಡುವ ಮೃತ್ಯು ಎಂಬ ಮಗನನ್ನು ಪಡೆದಳು, ವೇದನಾ ಎಂಬಾಕೆಯು ರೌರವನೆಂಬ ಪತಿಸಮಾಗಮದಿಂದ ದುಃಖ ಎಂಬ ಮಗನನ್ನು ಪಡೆದಳು.

೬೬. ಮೃತ್ಯುದೇವನಿಂದ ವ್ಯಾಧಿ-ಜರಾ-ಶೋಕ-ಕ್ರೋಧ-ಅಸೂಯಾ ಎಂಬ ಪುತ್ರರು ಜನಿಸಿದರು. ಈ ಸಂತತಿಗೆ ಸೇರಿದ ಪ್ರತಿಯೊಬ್ಬ ಪುತ್ರನೂ ಅಧರ್ಮ ಸ್ವರೂಪನೂ ಲೋಕಕ್ಕೆ ಪೀಡೆಯನ್ನುಂಟುಮಾಡುವ ಅಂಶವಾದ ದುಃಖ ಬೀಜಭೂತನೂ ಆಗಿರುವನು.

ತೇಷಾಂ ಭಾರ್ಯಾಸ್ತಿ ಪುತ್ರೋ ವಾ ಸರ್ವೇ ಹ್ಯನಿಧನಾಃ ಸ್ಮೃತಾಃ।
ಇತ್ಯೇಷ ತಾಮಸಃ ಸರ್ಗೋ ಜಜ್ಞೇ ಧರ್ಮನಿಯಾಮಕಃ ॥ ೬೭ ॥

ಪ್ರಜಾಃ ಸೃಜೇತಿ ವ್ಯಾದಿಷ್ಟೋ ಬ್ರಹ್ಮಣಾ ನೀಲಲೋಹಿತಃ ।
ಸೋಽಭಿಧ್ಯಾಯ ಸತೀಂ ಭಾರ್ಯಾಂ ನಿರ್ಮಮೇ ಚಾತ್ಮಸಂಭವಾನ್ ॥ ೬೮ ॥

ನಾಧಿಕಾನ್ನ ಚ ಹೀನಾಂಸ್ತಾನ್ಮಾನಸಾನಾತ್ಮನಾ ಸಮಾನ್ ।
ಸಹಸ್ರಂ ಚ ಸಹಸ್ರಾಣಾಮಸೃಜತ್ಕೃತ್ತಿವಾಸಸಃ ॥ ೬೯ ॥

ತುಲ್ಯಾನೇವಾತ್ಮನಾ ಸರ್ವಾನ್ ರೂಪತೇಜೋಬಲಶ್ರುತೈಃ ।
ಪಿಂಗಲಾನ್ ಸನಿಷಂಗಾಂಶ್ಚ ಕಪರ್ದೀ ನೀಲಲೋಹಿತಾನ್ ॥ ೭೦ ॥

---

೬೭. ಅವರ ಪತ್ನಿಯರು, ಮತ್ತು ಪುತ್ರರು ಅವರಿಗೆ ಎಂದೆಂದಿಗೂ ನಾಶವೇ ಇಲ್ಲವು. ಲೋಕಕಂಟಕರಾದ ಈ ಪ್ರಜಾವರ್ಗವು ಶಾಶ್ವತವಾದುದು. ಇದು ತಮೋ ಗುಣಮಯವಾಗಿ ಹುಟ್ಟಿ ತನ್ನ ಶಕ್ತಿ ಮೀರಿ ಧರ್ಮಪಥವನ್ನು ತಡೆಗಟ್ಟುವ ಶೀಲವುಳ್ಳದ್ದಾಗಿದೆ.

೬೮, ಅನಂತರದಲ್ಲಿ ತನ್ನ ಪುತ್ರನಾದ ನೀಲಲೋಹಿತ ಅಥವಾ ರುದ್ರನನ್ನು ಸಂಬೋಧಿಸಿ ಬ್ರಹ್ಮನು "ನೀನು ಬಹುಮಂದಿ ಪ್ರಜೆಗಳನ್ನು ಸೃಷ್ಟಿಮಾಡು" ಎಂದು ಆದೇಶಿಸಲಾಗಿ ರುದ್ರನು ತನ್ನ ಭಾರ್ಯೆಯಾದ ಸತೀದೇವಿಯನ್ನು ಮಿಥುನರೂಪ ವಾಗಿ ಚಿಂತಿಸಿ ಬಹುಮಂದಿ ಪ್ರಜೆಗಳನ್ನು ಸೃಜಿಸಿದನು.

೬೯. ಆ ಸಮಸ್ತ ಪುತ್ರರೂ ನ್ಯೂನ ಅಥವಾ ಅಧಿಕರೆಂಬ ಭಾವನೆಯಿಲ್ಲದಂತೆ ಸಮಾನ ಭಾವದಿಂದ ಕೂಡಿದ, ಸಹಸ್ರಾದಿ ಅಧಿಕ ಸಂಖ್ಯೆಗಿಂತಲೂ ಅತ್ಯಧಿಕ ಸಂಖ್ಯೆ ಯುಳ್ಳ, ಮತ್ತು ಕೃತ್ತಿವಾಸ=ಚರ್ಮವನ್ನು ವಸ್ತ್ರವಾಗಿ ಧರಿಸಿದ ವರೂ ಆಗಿದ್ದರು. ಇಂತಹ ಮಾನಸ ಪುತ್ರರನ್ನು ರುದ್ರನು ಉತ್ಪಾದನ ಮಾಡಿದನು.

೭೦. ರುದ್ರದೇವನಿಂದ ಜನಿಸಿದ ಆ ಪುತ್ರರು ರುದ್ರರಿಗೆ ಸಮಾನವಾದ ರೂಪ ತೇಜಸ್ಸು, ವೀರ್ಯ, ಜ್ಞಾನಗಳನ್ನು ಹೊಂದಿದ್ದರಿಂದ ಮುಂದೆ ಹೇಳುವಂತೆ ನಾನಾ ವಿಧವಾದ ವಿಶೇಷಗಳಿಂದ ಕೂಡಿದ್ದರು. ಪಿಂಗಲವರ್ಣ, ಬತ್ತಳಿಕೆ, ಕಪರ್ದವೆಂಬ ಜಟಾಜೂಟ, ನೀಲ ಮತ್ತು ಲೋಹಿತ (ಕಪ್ಪು, ಕೆಂಪು) ವರ್ಣಗಳ ಆಕಾರ ಇವು ಗಳಿಂದ ಉಗ್ರರಾಗಿದ್ದರು.

ವಿಶಿಖಾನ್ ಹೀನಕೇಶಾಂಶ್ಚ ದೃಷ್ಟಿಘ್ನಾಂಸ್ತಾನ್ ಕಪಾಲಿನಃ ।
ಮಹಾರೂಪಾನ್ ವಿರೂಪಾಂಶ್ಚ ವಿಶ್ವರೂಪಾಂಶ್ಚ ರೂಪಿಣಃ ॥ ೭೧ ॥

ರಥಿನೋ ವರ್ಮಿಣಶ್ಚೈವ ಧನ್ವಿನೋಽಥ ವರೂಥಿನಃ ।
ಸಹಸ್ರಶತಬಾಹೂಂಶ್ಚ ದಿವ್ಯಭೌಮಾಂತರಿಕ್ಷಗಾನ್ ॥ ೭೨ ॥

ಸ್ಥೂಲಶೀರ್ಷಾನಷ್ಟದಂಷ್ಟ್ರಾನ್ ದ್ವಿಜಿಹ್ವಾಂಶ್ಚ ತ್ರಿಲೋಚನಾನ್ ।
ಅನ್ನಾದಾನ್ ಪಿಶಿತಾದಾಂಶ್ಚ ಆಜ್ಯಪಾನ್ ಸೋಮಪಾಂಸ್ತಥಾ ॥ ೭೩ ॥

ಅತಿಮೇಢ್ರೋಗ್ರಕಾಯಾಂಶ್ಚ ಶಿತಿಕಂಠೋಗ್ರಮನ್ಯುಕಾನ್ ।
ಸನಿಷಂಗತನುತ್ರಾಂಶ್ಚ ಧನ್ವಿನೋ ಹ್ಯಸಿಚರ್ಮಿಣಃ ॥ ೭೪ ॥

ಆಸೀನಾನ್ ಧಾವತಶ್ಚಾಪಿ ಜೃಂಭತಶ್ಚಾಪ್ಯಧಿಷ್ಠಿತಾನ್ ।
ಅಧೀಯಾನಾಂಶ್ಚ ಜಪತೋ ಯುಂಜತೋ ಧ್ಯಾಯತಸ್ತಥಾ ॥ ೭೫ ॥

---

೭೧. ಮತ್ತು ಶಿಖಾ-ಕೇಶಗಳನ್ನು ಬಿಚ್ಚಿಕೊಂಡಿರುವವರೂ ದೃಷ್ಟಿದೋಷವನ್ನು ಕಳೆಯುವವರೂ ಶಿರಃ ಕಪಾಲವನ್ನು ಹಸ್ತದಲ್ಲಿ ಧರಿಸಿದವರೂ, ಅತಿ ದೊಡ್ಡದಾದ ವಿರೂಪವಾದ ಆಕಾರವುಳ್ಳವರೂ ವಿಶ್ವರೂಪವುಳ್ಳವರೂ ಆಗಿದ್ದರು.

೭೨. ರಥ, ಕವಚ, ಬಿಲ್ಲು, ರಥಮಧ್ಯದಲ್ಲಿರುವ ರಥಿಕನ ಪೀಠ ಮುಂತಾದ ಜಯಸಾಮಗ್ರಿಗಳಿಂದ ಕೂಡಿದವರೂ ಅನೇಕಾನೇಕ ಬಾಹುಗಳನ್ನು ಧರಿಸಿದವರೂ ದ್ಯುಲೋಕ, ಭೂಮಿ, ಮತ್ತು ಅಂತರಿಕ್ಷ ಲೋಕಗಳನ್ನು ವ್ಯಾಪಿಸಿದವರೂ ಆಗಿದ್ದರು.

೭೩. ದಪ್ಪವಾದ ತಲೆ, ಎಂಟು ದೀರ್ಘವಾದ ದಂಷ್ಟ್ರ, ಎರಡು ನಾಲಿಗೆ, ಮೂರು ಕಣ್ಣು ಎಂಬ ಭಯಂಕರ ರೂಪದಿಂದ ಕೂಡಿದವರಾಗಿ ಅನ್ನ, ಮಾಂಸ, ಆಜ್ಯ, ಸೋಮ ಮುಂತಾದ ಸಕಲ ವಿಧ ಆಹಾರವನ್ನು ಭಕ್ಷಿಸುತ್ತಲಿದ್ದರು.

೭೪. ಅತಿ ಪ್ರಮಾಣದ ವೃಷಣ, ಉಗ್ರವಾದ ದೇಹ, ನೀಲವರ್ಣದ ಕಂಠ, ಉಗ್ರವಾದ ಕೋಪಗಳಿಂದಲೂ ಮತ್ತು ಬತ್ತಳಿಕೆ, ಕವಚ, ಬಿಲ್ಲು, ಖಡ್ಗ, ಚರ್ಮ ಮುಂತಾದ ಜಯೋಪಕರಣಗಳಿಂದಲೂ ಕೂಡಿದ್ದರು.

೭೫. ಕುಳಿತುಕೊಳ್ಳುವುದು, ಓಡುವುದು, ಜೃಂಭಿಸುವುದು, ಅಧಿಕಾರ ಮಾಡುವುದು, ಅಧ್ಯಯನ, ಜಪ, ಯೋಗಾಭ್ಯಾಸ, ಧ್ಯಾನ ಮುಂತಾದ ವಿಲಕ್ಷಣ ವ್ಯಾಪಾರಗಳು ರುದ್ರಪುತ್ರರಿಗೆ ಇದ್ದುವು.

ಜ್ವಲತೋ ವರ್ಷತಶ್ಚೈವ ದ್ಯೋತಮಾನಾನ್ ಪ್ರಧೂಪಿತಾನ್ ।
ಬುದ್ಧಾನ್ ಬುದ್ಧತಮಾಂಶ್ಚೈವ ಬ್ರಹ್ಮಿಷ್ಠಾನ್ ಬ್ರಹ್ಮದರ್ಶಿನಃ ॥ ೭೬ ॥

ನೀಲಗ್ರೀವಾನ್ ಸಹಸ್ರಾಕ್ಷಾನ್ ಸರ್ವಾಂಶ್ಚೈವ ಕ್ಷಮಾಚರಾನ್ ।
ಅದೃಶ್ಯಾನ್ ಸರ್ವಭೂತಾನಾಂ ಮಹಾಯೋಗಾನ್ ಮಹೌಜಸಃ॥ ೭೭ ॥

ರುದತೋ ದ್ರವತಶ್ಚೈವ ಏವಂ ಯುಕ್ತಾನ್ ಸಹಸ್ರಶಃ ।
ಅಯಾತಯಾಮಾನ್ ಸೃಜತಂ ರುದ್ರಮೇತಾನ್ ಸುರೋತ್ತಮಾನ್
॥ ೭೮ ॥

ದೃಷ್ಟ್ವಾ ಬ್ರಹ್ಮಾಽಬ್ರವೀದೇನಂ ಮಾ ಸ್ರಾಕ್ಷೀರೀದೃಶೀಃ ಪ್ರಜಾಃ ।
ನ ಸ್ರಷ್ಟವ್ಯಾತ್ಮನಸ್ತುಲ್ಯಾ ಪ್ರಜಾ ನೈವಾಧಿಕಾ ತಥಾ ॥ ೭೯ ॥

ಅನ್ಯಾಃ ಸೃಜಸ್ವ ಭದ್ರಂ ತೇ ಪ್ರಜಾಸ್ತ್ವಂ ಮೃತ್ಯುಸಂಯುತಾಃ ।
ನಾರಭಂ ತೇ ಹಿ ಕರ್ಮಾಣಿ ಪ್ರಜಾ ವಿಗತಮೃತ್ಯವಃ ॥ ೮೦ ॥

---

೭೬. ಜ್ವಲಿಸುತ್ತಿರುವವರೂ, ವೃಷ್ಟಿಯನ್ನು ಸುರಿಸುತ್ತಿರುವವರೂ, ದೀಪ್ತರೂ, ಹೊಗೆಯಾಡುವವರೂ, ಜ್ಞಾನಿಗಳೂ, ಅತಿಶಯದ ಜ್ಞಾನಸಂಪನ್ನರೂ, ಬ್ರಹ್ಮಸ್ವರೂಪರೂ, ಬ್ರಹ್ಮಜ್ಞಾನಿಗಳೂ ಆಗಿದ್ದರು.

೭೭. ಕಪ್ಪಾದ ಕಂಠ ಮತ್ತು ಸಾವಿರಾರು ನೇತ್ರಗಳಿಂದ ಕೂಡಿದವರೂ ಭೂಮಿಯನ್ನೆಲ್ಲ ಸಂಚರಿಸುವವರೂ ಸರ್ವಪ್ರಾಣಿಗಳಿಗೆ ಅದೃಶ್ಯಸ್ವರೂಪರೂ ಮಹಾಯೋಗಿಗಳೂ ಹೆಚ್ಚಾದ ವಿಕ್ರಮವುಳ್ಳವರೂ ಆಗಿದ್ದರು.

೭೮. ರೋದನ ಮತ್ತು ಧಾವನ ಮುಂತಾದ ಅವ್ಯವಸ್ಥಿತವಾದ ಅದ್ಭುತವ್ಯಾಪಾರಗಳಿಂದ ಕೂಡಿರುವ, ನವನವ ರೂಪದಿಂದ ಕೂಡಿರುವ ದೇವೋತ್ತಮರಾದ ಇಂತಹ ಪ್ರಜೆಗಳನ್ನು ರುದ್ರನು ಸೃಜಿಸಿದನು.

೭೯. ಹೀಗೆ ಅಸಂಖ್ಯೆಯಾಗಿ ಪ್ರಜೆಗಳನ್ನು ಸೃಜಿಸುತ್ತಿರುವ ರುದ್ರನನ್ನು ಕಂಡು ಬ್ರಹ್ಮದೇವನು "ನಿನಗೆ ಸಮಾನರಾದ ಅಥವಾ ನಿನ್ನನ್ನು ಮೀರಿಸುವ ಅತಿಶಯಗುಣಗಳಿಂದ ಕೂಡಿದ ಈ ವಿಧದ ಪ್ರಜೆಗಳನ್ನು ಸೃಷ್ಟಿಸಬೇಡ" ಎಂದು ಹೇಳಿದನು.

೮೦. ಇಂತಹ ಪ್ರಜೆಗಳ ಸೃಷ್ಟಿಯನ್ನು ನಿಲ್ಲಿಸಿ ಮೃತ್ಯುಗ್ರಸ್ತರಾದ ಬೇರೆ ಪ್ರಜೆಗಳನ್ನು ನಿರ್ಮಿಸು, ನಿನಗೆ ಮಂಗಳವಾಗಲಿ, ಜರಾಮರಣವಿಲ್ಲದ ಪ್ರಜೆಗಳು ಸ್ವಸ್ವ

**ಏವಮುಕ್ತೋಽಬ್ರವೀದೇನಂ ನಾಹಂ ಮೃತ್ಯುಜರಾನ್ವಿತಾಃ ।**
**ಪ್ರಜಾಃ ಸ್ರಕ್ಷ್ಯಾಮಿ ಭದ್ರಂ ತೇ ಸ್ಥಿತೋಽಹಂ ತ್ವಂ ಸೃಜ ಪ್ರಭೋ**
**॥ ೮೧ ॥**

**ಏತೇ ಯೇ ವೈ ಮಯಾ ಸೃಷ್ಟಾ ವಿರೂಪಾ ನೀಲಲೋಹಿತಾಃ ।**
**ಸಹಸ್ರಂ ಹಿ ಸಹಸ್ರಾಣಾಮಾತ್ಮನೋ ಮಮ ನಿಃಸೃತಾಃ ॥ ೮೨ ॥**

**ಏತೇ ದೇವಾ ಭವಿಷ್ಯಂತಿ ರುದ್ರಾ ನಾಮ ಮಹಾಬಲಾಃ ।**
**ಪೃಥಿವ್ಯಾಮಂತರಿಕ್ಷೇ ಚ ರುದ್ರಾಣ್ಯಸ್ತಾಃ ಪರಿಶ್ರುತಾಃ ॥ ೮೩ ॥**

**ಶತರುದ್ರೇ ಸಮಾಮ್ನಾತಾ ಭವಿಷ್ಯಂತೀಹ ಯಜ್ಞಿಯಾಃ ।**
**ಯಜ್ಞಭಾಜೋ ಭವಿಷ್ಯಂತಿ ಸರ್ವೇ ದೇವಗಣೈಃ ಸಹ ॥ ೮೪ ॥**

---

ಕರ್ಮಗಳನ್ನು ಆಚರಿಸುವುದಿಲ್ಲ, ಜರಾ ಮರಣಗಳ ಭಯವೂ ಇಲ್ಲದ ಪ್ರಜೆಗಳು ಸ್ವತಂತ್ರವೃತ್ತಿಯನ್ನವಲಂಬಿಸುವರು.

೮೧. ಬ್ರಹ್ಮನು ರುದ್ರನಿಗೆ ಈ ರೀತಿಯಾಗಿ ಉಪದೇಶ ಮಾಡಲಾಗಿ ಪ್ರಭುವೆ! ಜರಾಮೃತ್ಯುಗಳಿಗೆ ವಶರಾಗುವ ಪ್ರಜೆಗಳನ್ನು ನಾನು ಸೃಷ್ಟಿಮಾಡಲಾರೆ. ನಾನು ಈ ಸೃಷ್ಟಿವ್ಯಾಪಾರವನ್ನು ನಿಲ್ಲಿಸಿರುವೆನು. ಇದನ್ನು ನೀನು ನೆರವೇರಿಸು. ನಿನಗೆ ಮಂಗಳವಾಗಲಿ, ಎಂದು ರುದ್ರನು ಪ್ರತ್ಯುತ್ತರವಿತ್ತನು.

೮೨. ಆದರೆ ಸೃಷ್ಟಿವ್ಯಾಪಾರೋನ್ಮುಖನಾದ ನನ್ನಿಂದ ಸ್ವಚ್ಛಂದವಾಗಿ ಅವಿರ್ಭವಿಸಿ ಬಂದಿರುವ, ಅನೇಕ ಸಹಸ್ರ ಸಂಖ್ಯೆಗಳಿಂದ ಕೂಡಿದ, ವಿರೂಪರೂ ನೀಲಲೋಹಿತರೂ ಆದ ಪುತ್ರರು ಜನಿಸಿರುವರಷ್ಟೆ.

೮೩. ಮಹಾ ಬಲಿಷ್ಠರಾದ ಆ ಸಮಸ್ತ ಪುತ್ರರೂ ರುದ್ರ ಎಂಬ ಹೆಸರಿನ ದೇವಗಣರಾಗುವರು. ಅವರ ಅಸಾಧಾರಣವಾದ ಶಕ್ತಿಗಳು ರುದ್ರಾಣೀ ಎಂಬ ಪ್ರಸಿದ್ಧಿಯನ್ನು ಹೊಂದಿ ಪೃಥಿವೀ ಮತ್ತು ಅಂತರಿಕ್ಷಗಳಲ್ಲಿ ವ್ಯಾಪಿಸಿರುವರು.

೮೪. ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಬರುವ ರುದ್ರಸೂಕ್ತದಿಂದ ಮಾಡುವ ಶತರುದ್ರೀಯವೆಂಬ ಯಜ್ಞಕರ್ಮ ಸಮಾರಂಭದಲ್ಲಿ ಸಕಲ ದೇವತೆಗಳೊಡನೆ ಇವರು ಯಜ್ಞದ ಹವಿರ್ಭಾಗವನ್ನು ಸ್ವೀಕರಿಸುವ ಯಜ್ಞದೇವತೆಗಳಾಗುವರು.

ಮನ್ವಂತರೇಷು ಯೇ ದೇವಾ ಭವಿಷ್ಯಂತೀಹ ಛಂದಜಾಃ ।
ತೈಃ ಸಾರ್ಧಮಿಜ್ಯಮಾನಾಸ್ತೇ ಸ್ಥಾಸ್ಯಂತೀಹಾಯುಗಕ್ಷಯಾತ್ ॥ ೮೫ ॥

ಏವಮುಕ್ತಸ್ತತೋ ಬ್ರಹ್ಮಾ ಮಹಾದೇವೇನ ಸ ಪ್ರಭುಃ ।
ಪ್ರತ್ಯುವಾಚ ತತೋ ಭೀಮಂ ಹೃಷ್ಯಮಾಣಃ ಪ್ರಜಾಪತಿಃ ॥ ೮೬ ॥

ಏವಂ ಭವತು ಭದ್ರಂ ತೇ ಯಥಾ ತೇ ವ್ಯಾಹೃತಂ ಪ್ರಭೋ ।
ಬ್ರಹ್ಮಣಾ ಸಮನುಜ್ಞಾತೇ ತತಃ ಸರ್ವಮಭೂತ್ಕಿಲ ॥ ೮೭ ॥

ತತಃ ಪ್ರಭೃತಿ ದೇವಃ ಸ ನ ಪ್ರಾಸೂಯತ ವೈ ಪ್ರಜಾಃ ।
ಊರ್ಧ್ವರೇತಾಃ ಸ್ಥಿತಃ ಸ್ಥಾಣುರ್ಯಾವದಾಭೂತಸಂಪ್ಲವಮ್ ॥ ೮೮ ॥

---

೮೫. ಮನ್ವಂತರಗಳಲ್ಲಿ ಸ್ವತಂತ್ರರಾಗಿ ಹುಟ್ಟಿ ದೇವರೆಂದೆನಿಸುವವರ ಜೊತೆಯಲ್ಲಿ ಈ ರುದ್ರರು ಸೇರಿ ಯಜ್ಞದ ಹವಿರ್ಭಾಗವನ್ನು ಸ್ವೀಕರಿಸುವ ಉದ್ದೇಶ್ಯ ದೇವತೆಗಳಾಗಿ ಪ್ರಲಯದ ವರೆಗೂ ಪ್ರಕಾಶಮಾನರಾಗಿರುವರು. ಈ ಮಹಿಮೆಯನ್ನು ಈ ಪುತ್ರರಿಗೆ ಕರುಣಿಸಬೇಕೆಂದು ರುದ್ರನು ಕೇಳಿಕೊಂಡನು.

೮೬. ಮಹಾದೇವನು ಈ ರೀತಿಯಾಗಿ ಹೇಳಲು ಸಮಸ್ತ ಪ್ರಜೆಗಳಿಗೆ ಅಧಿಪತಿಯಾದ ಬ್ರಹ್ಮದೇವನು ಬಹುಸಂತೋಷಗೊಂಡವನಾಗಿ ಭೀಮ ಅಥವಾ ರುದ್ರದೇವನನ್ನು ಕುರಿತು ಈ ರೀತಿಯಾಗಿ ಹೇಳಿದನು.

೮೭. ನಿನ್ನ ಪುತ್ರರ ವಿಷಯದಲ್ಲಿ ನೀನು ಯಾವ ಮಹಿಮೆಯನ್ನು ಕೊಡಬೇಕೆಂದು ಕೇಳಿಕೊಂಡಿರುವೆಯೋ ಅದೆಲ್ಲವೂ ಹಾಗೆಯೇ ನೆರವೇರಲಿ, ನಿನಗೆ ಮಂಗಳವಾಗಲಿ, ಎಂಬುದಾಗಿ ಬ್ರಹ್ಮನ ಅನುಮತಿಯು ದೊರೆಯಲು ಆ ಸಮಸ್ತ ಮಹಿಮೆಯೂ ರುದ್ರಪುತ್ರರಿಗೆ ಆವಿರ್ಭಾವವಾಯಿತು.

೮೮. ಆ ಮೊದಲುಗೊಂಡು ಆ ರುದ್ರದೇವನು ಪ್ರಜೆಗಳನ್ನು ಸೃಷ್ಟಿಮಾಡದೆ ನಿರ್ವ್ಯಾಪಾರಾದನು, ಮತ್ತು ಸೃಷ್ಟಿವ್ಯಾಪಾರವನ್ನು ನಿಲ್ಲಿಸಿದ್ದರಿಂದ ತನ್ನ ಮಾನಸ ವೀರ್ಯವು ಸ್ತಂಭಿತವಾಗಿ ಅಧಃಸ್ಖಲನವಿಲ್ಲದ್ದರಿಂದ ಊರ್ಧ್ವರೇತಸ್ಸು ಮತ್ತು ಸ್ಥಾಣು ಎಂಬ ನಾಮಗಳಿಂದ ಪ್ರಲಯ ಕಾಲದವರೆಗೂ ಪ್ರಸಿದ್ಧನಾಗಿ ಇದ್ದನು.

**ಯಸ್ಮಾತ್ಪ್ರೋಕ್ತೋ ಸ್ಥಿತೋಽಸ್ಮೀತಿ ತಸ್ಮಾತ್ಸ್ಥಾಣುರ್ಬುಧೈಃ ಸ್ಮೃತಃ ।**
**ಜ್ಞಾನಂ ತಪಶ್ಚ ಸತ್ಯಂ ಚ ಹ್ಯೈಶ್ವರ್ಯಂ ಧರ್ಮ ಏವ ಚ ॥ ೮೯ ॥**

**ವೈರಾಗ್ಯ ಮಾತ್ಮಸಂಬೋಧಃ ಕೃತ್ಸ್ನಾನ್ಯೇತಾನಿ ಶಂಕರೇ ।**
**ಸರ್ವಾನ್ ದೇವಾನೃಷೀಂಶ್ಚೈವ ಸಮೇತಾನಸುರೈಃ ಸಹ ॥ ೯೦ ॥**

**ಅತ್ಯೇತಿ ತೇಜಸಾ ದೇವೋ ಮಹಾದೇವಸ್ತತಃ ಸ್ಮೃತಃ ।**
**ಅತ್ಯೇತಿ ದೇವಾನೈಶ್ವರ್ಯಾದ್ಬಲೇನ ಚ ಮಹಾಽಸುರಾನ್ ॥ ೯೧ ॥**

**ಜ್ಞಾನೇನ ಚ ಮುನೀನ್ ಸರ್ವಾನ್ ಯೋಗಾದ್ಭೂತಾನಿ ಸರ್ವಶಃ ।**
**ಏವಮೇವ ಮಹಾದೇವಃ ಸರ್ವದೇವನಮಸ್ಕೃತಃ**
**ಪ್ರಜಾಮನುದ್ಯಮಾಂ ಸೃಷ್ಟ್ವಾ ಸರ್ಗಾದುಪರರಾಮ ಹ ॥ ೯೨ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ನವಮೋಽಧ್ಯಾಯಃ ಸಮಾಪ್ತಃ**

---

೮೯. ರುದ್ರನು ಸೃಷ್ಟಿವ್ಯಾಪಾರವನ್ನು ನಿಲ್ಲಿಸುವಾಗ "ಸ್ಥಿತೋಽಸ್ಮಿ" ಎಂದು ಹೇಳಿ ಸುಮ್ಮನಾದುದರಿಂದ ಸ್ಥಾಣು ಎಂಬ ಹೆಸರಿನಿಂದ ಬುಧರು ಕರೆಯುತ್ತ ಬಂದರು. ಈ ಮಹಾದೇವ ಅಥವಾ ಶಂಕರನಲ್ಲಿ ಜ್ಞಾನ, ತಪಸ್ಸು, ಸತ್ಯ, ಐಶ್ವರ್ಯ, ಧರ್ಮ, ವೈರಾಗ್ಯ, ಆತ್ಮಾನುಭವ, ಮುಂತಾದ ನಿಖಿಲಗುಣಗಳೂ ಶಾಶ್ವತವಾಗಿ ನೆಲೆಸಿರುವುವು.

೯೦. ನಿಖಿಲಗುಣಗಳಿಂದ ಕೂಡಿದ ರುದ್ರನು ಸರ್ವ ದೇವತೆಗಳನ್ನೂ ಋಷಿಗಳನ್ನೂ, ಮತ್ತು ಅಸುರರನ್ನೂ ತನ್ನ ತೇಜೋವಿಶೇಷದಿಂದ ಮೀರಿಸಿರುವುದರಿಂದ ಅಂತಹ ಮಹತ್ತ್ವವನ್ನು ಬೋಧಿಸುವ "ಮಹಾದೇವ" ಎಂಬ ಸಂಜ್ಞೆಯನ್ನು ಹೊಂದಿದನು.

೯೧. ತನ್ನ ಐಶ್ವರ್ಯಬಲದಿಂದ ದೇವತೆಗಳನ್ನೂ ಶಕ್ತಿವಿಕ್ರಮಗಳಿಂದ ಮಹಾ ಅಸುರರನ್ನೂ ಜ್ಞಾನವಿಜ್ಞಾನಗಳಿಂದ ಸಕಲ ಮುನಿಗಳನ್ನೂ ಮತ್ತು ತನ್ನ ಯೋಗ ಬಲದಿಂದ ಸಮಸ್ತ ಭೂತಗಳನ್ನೂ ಮೀರಿರುವನು.

೯೨. ಈ ರೀತಿಯಾಗಿ ಸಕಲ ದೇವತಾಗಣಕ್ಕೆ ವಂದ್ಯನಾದ ಮಹಾದೇವನು ಯಾವ ಉದ್ಯಮವೂ ಇಲ್ಲದ ಉದಾಸೀನವಾದ ತನ್ನ ಪ್ರಜಾವರ್ಗವನ್ನು ನೋಡಿ ಸೃಷ್ಟಿ ವ್ಯಾಪಾರವನ್ನು ನಿಲ್ಲಿಸಿದನು.

ಬ್ರಹ್ಮಾಂಡ ಪುರಾಣದಲ್ಲಿ ಒಂಭತ್ತನೆಯ ಅಧ್ಯಾಯವು ಸಮಾಪ್ತವು.

## ದಶಮೋಽಧ್ಯಾಯಃ

**ಋಷಿರುವಾಚ**

**ಅಸ್ಮಿನ್ಕಲ್ಪೇ ತ್ವಯಾ ನೋಕ್ತಃ ಪ್ರಾದುರ್ಭಾವೋ ಮಹಾತ್ಮನಃ ।**
**ಮಹಾದೇವಸ್ಯ ರುದ್ರಸ್ಯ ಸಾಧಕೈರ್ಋಷಿಭಿಃ ಸಹ ॥ ೧ ॥**

**ಸೂತ ಉವಾಚ**

**ಉತ್ಪತ್ತಿರಾದಿಸರ್ಗಸ್ಯ ಮಯಾ ಪ್ರೋಕ್ತಾ ಸಮಾಸತಃ ।**
**ವಿಸ್ತರೇಣ ಪ್ರವಕ್ಷ್ಯಾಮಿ ನಾಮಾನಿ ತನುಭಿಃ ಸಹ ॥ ೨ ॥**

**ಪತ್ನೀಷು ಜನಯಾಮಾಸ ಮಹಾದೇವಃ ಸುತಾನ್ ಬಹೂನ್ ।**
**ಕಲ್ಪೇಷ್ವನ್ಯೇಷ್ವತೀತೇಷು ಹ್ಯಸ್ಮಿನ್ಕಲ್ಪೇ ತು ತಾನ್ ಶೃಣು ॥ ೩ ॥**

---

೧. ಸೂತಮುನಿಯು ಹಿಂದಿನ ಕಲ್ಪದ ರುದ್ರನ ವಿಭೂತಿಯನ್ನು ವರ್ಣಿಸಿರುವುದನ್ನು ಕೇಳಿದ ತರುವಾಯ ಶ್ರೋತೃವರ್ಗದಲ್ಲಿ ಸೇರಿದ ಒಬ್ಬ ಮುನಿಯು ಮತ್ತೆ ಪ್ರಶ್ನಿಸುವನು. ಗುರುವೆ! ಅನೇಕ ಸೃಷ್ಟಿ ಪ್ರಪಂಚವನ್ನು ವಿಸ್ತಾರಮಾಡುವ, ಅನೇಕ ಸಿದ್ಧಿಗಳಿಂದ ಕೂಡಿದ ಮಹರ್ಷಿಗಳೊಡನೆ ಮಹಾತ್ಮನೂ ಮಹಾದೇವನೂ ಆದ ರುದ್ರನಿಂದ ಈ ಕಲ್ಪದಲ್ಲಿ ಆವಿರ್ಭಾವವಾದ ವಿಭೂತಿ ವಿಸ್ತಾರವನ್ನು ಇದುವರೆಗೆ ತಾವು ಉಪದೇಶಿಸಿಲ್ಲ.

೨. ಈ ಕಲ್ಪದ ರುದ್ರ ವಿಭೂತಿಯನ್ನು ಕೇಳಬೇಕೆಂಬ ಕುತೂಹಲದಿಂದ ಕೂಡಿದ ಮುನಿಯ ಪ್ರಶ್ನವನ್ನು ಕೇಳಿ ಸೂತಮುನಿಯು ಪ್ರತ್ಯುತ್ತರವಿತ್ತನು. ಈ ಹಿಂದೆ ಆದಿ ಸೃಷ್ಟಿಯ ಉತ್ಪತ್ತಿಯನ್ನು ಸಂಗ್ರಹವಾಗಿ ಹೇಳಿರುವೆನು. ಮುಂದೆ ಆಯಾಯ ನಾಮಗಳನ್ನೂ ಶರೀರ ವಿಶೇಷಗಳನ್ನೂ ವಿಸ್ತಾರವಾಗಿ ಹೇಳುವೆನು. ಕೇಳಿರಿ.

೩. ಮಹಾದೇವನು ತನ್ನ ಪತ್ನಿಯರಲ್ಲಿ ಅನೇಕ ಮಂದಿ ಪುತ್ರರನ್ನು ಹಿಂದೆ ಅನೇಕ ಕಲ್ಪಗಳಲ್ಲಿ ಸೃಷ್ಟಿಮಾಡಿದನು. ಈ ಕಲ್ಪದಲ್ಲಿ ಅವನಿಂದ ಆಗಿರುವ ಪುತ್ರ ಸೃಷ್ಟಿಯನ್ನು ಕೇಳು.

ಕಲ್ಪಾದಾವಾತ್ಮನಸ್ತುಲ್ಯಂ ಸುತಮಧ್ಯಾಪಯತ್ಪ್ರಭುಃ ।
ಪ್ರಾದುರಾಸೀತ್ತತೋಽಂಕೇಽಸ್ಯ ಕುಮಾರೋ ನೀಲಲೋಹಿತಃ ॥ ೪ ॥

ರುರೋದ ಸುಸ್ವರಂ ಘೋರಂ ನಿರ್ದಹನ್ನಿವ ತೇಜಸಾ ।
ದೃಷ್ಟ್ವಾ ರುದಂತಂ ಸಹಸಾ ಕುಮಾರಂ ನೀಲಲೋಹಿತಮ್ ॥ ೫ ॥

ಕಿಂ ರೋದಿಷಿ ಕುಮಾರೇತಿ ಬ್ರಹ್ಮಾ ತಂ ಪ್ರತ್ಯಭಾಷತ ।
ಸೋಽಬ್ರವೀದ್ದೇಹಿ ಮೇ ನಾಮ ಪ್ರಥಮಂ ತ್ವಂ ಪಿತಾಮಹ ॥ ೬ ॥

ರುದ್ರಸ್ತ್ವಂ ದೇವ ನಾಮ್ನಾಽಸಿ ಸ ಇತ್ಯುಕ್ತೋಽರುದತ್ಪುನಃ ।
ಕಿಂ ರೋದಿಷಿ ಕುಮಾರೇತಿ ಬ್ರಹ್ಮಾ ತಂ ಪ್ರತ್ಯಭಾಷತ ॥ ೭ ॥

ನಾಮ ದೇಹಿ ದ್ವಿತೀಯಂ ಮೇ ಇತ್ಯುವಾಚ ಸ್ವಯಂಭುವಮ್ ।
ಭವಸ್ತ್ವಂ ದೇವ ನಾಮ್ನಾಽಸಿ ಇತ್ಯುಕ್ತಃ ಸೋಽರುದತ್ಪುನಃ ॥ ೮ ॥

---

೪. ಜಗನ್ನಿಯಾಮಕನಾದ ಬ್ರಹ್ಮನು ಕಲ್ಪದ ಆದಿಯಲ್ಲಿ ತನಗೆ ಅನುರೂಪನಾದ ಪುತ್ರನನ್ನು ಧ್ಯಾನಿಸಿದನು. ಆ ಈಕ್ಷಣ ರೂಪವಾದ ಧ್ಯಾನಬಲದಿಂದ ಆ ಕ್ಷಣದಲ್ಲಿ ಅವನ ತೊಡೆಯಲ್ಲಿ ನೀಲಲೋಹಿತನೆಂಬ ಕುಮಾರನು ಉತ್ಪನ್ನನಾದನು.

೫. ಆ ಕುಮಾರನು ತನ್ನ ದಿವ್ಯ ತೇಜಃಪುಂಜದಿಂದ ಜಗತ್ತನ್ನು ಸುಡುವವನಂತೆ ಜ್ವಲಿಸುತ್ತ ಸುಸ್ವರದಿಂದ ಘೋರವಾಗಿ ರೋದನಮಾಡಲಾರಂಭಿಸಿದನು. ಕುಮಾರನು ಹುಟ್ಟಿದ ಒಡನೆಯೇ ಅಳುತ್ತಿರುವುದನ್ನು ಜನಕನು ಕಂಡನು.

೬. ಆಗ ಬ್ರಹ್ಮನು ಕುಮಾರನನ್ನು ಸಂಬೋಧಿಸಿ ಪುತ್ರನೇ! ನೀನೇತಕ್ಕೆ ಅಳುತ್ತಿರುವಿ ಎಂದು ಪ್ರಶ್ನ ಮಾಡಿದನು. ಅದಕ್ಕೆ ಕುಮಾರನು ಪಿತಾಮಹನೆ! ನನಗೆ ಮೊದಲನೆಯದಾಗಿ ಒಂದು ಹೆಸರನ್ನು ಅನುಗ್ರಹಿಸು ಎಂದು ಕೇಳಿಕೊಂಡನು.

೭. ಆಗ ಬ್ರಹ್ಮನು ದೇವನೆ! ನೀನು ರುದ್ರನೆಂಬ ಸಂಜ್ಞೆಯಿಂದ ಪ್ರಸಿದ್ಧನಾಗುವೆ ಎಂದು ಹೇಳಿದನು. ಆದರೆ ಮತ್ತೆ ಮೊದಲಿನಂತೆ ಕುಮಾರನು ರೋದನಮಾಡಿದನು. ಆಗ ಮತ್ತೆ ನೀನು ಅಳಲು ಕಾರಣವೇನೆಂದು ಬ್ರಹ್ಮನು ಪ್ರಶ್ನಮಾಡಿದನು.

೮. ನನಗೆ ಎರಡನೆಯ ನಾಮವನ್ನು ಕೊಡಬೇಕೆಂದು ನೀಲಲೋಹಿತ ಕುಮಾರನು ಪ್ರಾರ್ಥಿಸಿಕೊಂಡಂತೆ ಬ್ರಹ್ಮನು ನೀನು ಭವದೇವನೆಂಬ ಸಂಜ್ಞೆಯನ್ನು ಹೊಂದಿರುವೆ ಎಂದು ದ್ವಿತೀಯನಾಮವನ್ನು ಕೊಟ್ಟಾಗಲೂ ಮತ್ತೆ ಕುಮಾರನು ಅತ್ತನು.

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪ್ರತ್ಯುವಾಚ ಹ ।
ತೃತೀಯಂ ದೇಹಿ ಮೇ ನಾಮ ಇತ್ಯುಕ್ತಃ ಸೋಽಬ್ರವೀತ್ಪುನಃ ॥ ೯ ॥

ಶರ್ವಸ್ತ್ವಂ ದೇವ ನಾಮ್ನಾಽಸಿ ಇತ್ಯುಕ್ತಃ ಸೋಽರುದತ್ಪುನಃ ।
ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ॥ ೧೦ ॥

ಚತುರ್ಥಂ ದೇಹಿ ಮೇ ನಾಮ ಇತ್ಯುಕ್ತಃ ಸೋಽಬ್ರವೀತ್ಪುನಃ ।
ಈಶಾನೋ ದೇವ ನಾಮ್ನಾಽಸಿ ಇತ್ಯುಕ್ತಃ ಸೋಽರುದತ್ಪುನಃ ॥ ೧೧ ॥

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ।
ಪಂಚಮಂ ನಾಮ ದೇಹೀತಿ ಪ್ರತ್ಯುವಾಚ ಸ್ವಯಂಭುವಮ್ ॥ ೧೨ ॥

ಪಶೂನಾಂ ತ್ವಂ ಪತಿರ್ದೇವ ಇತ್ಯುಕ್ತಃ ಸೋಽರುದತ್ಪುನಃ ।
ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ॥ ೧೩ ॥

---

೯. ಮತ್ತೆ ಹೀಗೆ ಅಳಲು ಕಾರಣವನ್ನು ಬ್ರಹ್ಮನು ಪ್ರಶ್ನೆಮಾಡಿದಾಗ ಕುಮಾರನು ಮೂರನೆಯ ಹೆಸರನ್ನು ಪ್ರಾರ್ಥಿಸಿದನು.

೧೦. ಬ್ರಹ್ಮನು ಶರ್ವ ಎಂಬ ಮೂರನೆಯ ಹೆಸರನ್ನು ಕೊಟ್ಟರೂ ಮತ್ತೆ ಕುಮಾರನು ಅಳುವುದನ್ನು ಕಂಡು ರೋದನ ಕಾರಣವನ್ನು ಪ್ರಶ್ನಿಸಿದನು.

೧೧. ನಾಲ್ಕನೆಯ ಹೆಸರನ್ನು ಕುಮಾರನು ಪ್ರಾರ್ಥಿಸಿರುವುದನ್ನು ಮನ್ನಿಸಿ ಈಶಾನ ಎಂದು ಹೆಸರನ್ನು ಕರುಣಿಸಿದರೂ ಪುನಃ ಏಕರೀತಿಯಿಂದ ಅಳಲಾರಂಭಿಸಿದನು.

೧೨. ಎಂದಿನಂತೆಯೇ ರೋದನ ಕಾರಣವೇನೆಂಬ ಬ್ರಹ್ಮನ ಪ್ರಶ್ನೆಗೆ ಐದನೆಯ ಹೆಸರನ್ನು ಪ್ರಾರ್ಥಿಸಿ ಕುಮಾರನು ಸ್ವಯಂಭುವಾದ ಬ್ರಹ್ಮನಿಗೆ ಪ್ರತ್ಯುತ್ತರ ನುಡಿದನು.

೧೩. ನೀನು ಪಶುಪತಿಯಾಗಿರುವಿ ಎಂದು ಬ್ರಹ್ಮನು ಐದನೆಯ ಸಂಜ್ಞೆಯನ್ನು ಪ್ರಕಾಶಪಡಿಸಿದಾಗಲೂ ಕುಮಾರನ ರೋದನವನ್ನು ಕಂಡು ರೋದನ ಕಾರಣವನ್ನು ಪ್ರಶ್ನಿಸಿದನು.

ಷಷ್ಠಂ ವೈ ದೇಹಿ ಮೇ ನಾಮ ಇತ್ಯುಕ್ತಃ ಪ್ರತ್ಯುವಾಚ ತಮ್ ।
ಭೀಮಸ್ತ್ವಂ ದೇವ ನಾಮ್ನಾಽಸಿ ಇತ್ಯುಕ್ತಃ ಸೋಽರುದತ್ಪುನಃ ॥ ೧೪ ॥

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್
ಸಪ್ತಮಂ ದೇಹಿ ಮೇ ನಾಮ ಇತ್ಯುಕ್ತಃ ಪ್ರತ್ಯುವಾಚ ಹ ॥ ೧೫ ॥

ಉಗ್ರಸ್ತ್ವಂ ದೇವ ನಾಮ್ನಾಽಸಿ ಇತ್ಯುಕ್ತಃ ಸೋಽರುದತ್ಪುನಃ ।
ತಂ ರುದಂತಂ ಕುಮಾರಂ ತು ಮಾರೋದೀರಿತಿ ಸೋಽಬ್ರವೀತ್ ॥೧೬॥

ಸೋಽಬ್ರವೀದಷ್ಟಮಂ ನಾಮ ದೇಹಿ ಮೇ ತ್ವಂ ವಿಭೋ ಪುನಃ ।
ತ್ವಂ ಮಹಾದೇವನಾಮಾಽಸಿ ಇತ್ಯುಕ್ತ್ವಾ ವಿರರಾಮ ಹ ॥ ೧೭ ॥

ಲಬ್ಧ್ವಾ ನಾಮಾನಿ ಚೈತಾನಿ ಬ್ರಹ್ಮಾಣಂ ನೀಲಲೋಹಿತಃ ।
ಪ್ರೋವಾಚ ನಾಮ್ನಾಮೇತೇಷಾಂ ಸ್ಥಾನಾನಿ ಪ್ರದಿಶೇತಿ ಹ ॥ ೧೮ ॥

---

೧೪. ಆಗ ಆರನೆಯ ಹೆಸರನ್ನು ಕೊಡಬೇಕೆಂದು ಕೇಳಿಕೊಂಡಂತೆ ಭೀಮ ಎಂಬ ಸಂಜ್ಞಾಪ್ರದಾನವನ್ನು ತಿಳಿದು ಪುನಃ ಕುಮಾರನು ರೋದನವನ್ನು ಅನುಸರಿಸಿದನು.

೧೫. ಹೀಗೆ ಅಳುತ್ತಿರುವಾಗ ಮತ್ತೆ ಏತಕ್ಕೆ ಅಳುತ್ತೀಯೆಂದು ಬ್ರಹ್ಮನು ಕೇಳಲು ಕುಮಾರನು ಏಳನೆಯ ಹೆಸರನ್ನು ಕೊಡಬೇಕೆಂದು ಪ್ರಾರ್ಥಿಸಿದನು.

೧೬. ಆಗ ಉಗ್ರ ಎಂಬ ಏಳನೆಯ ಹೆಸರನ್ನು ಬ್ರಹ್ಮನು ಅನುಗ್ರಹಿಸಿರುವುದನ್ನು ಸ್ವೀಕರಿಸಿ ಮತ್ತೆ ಯಥಾಪೂರ್ವವಾಗಿ ಅಳಲು ಆರಂಭಮಾಡಿದದು. ಆಗ ಬ್ರಹ್ಮದೇವನು ಅಳಬೇಡವೆಂದು ಸಂತೈಸಿದನು.

೧೭. ಅನಂತರ ಆ ಕುಮಾರನು ಬ್ರಹ್ಮದೇವನನ್ನು ಕುರಿತು ವಿಭುವೆ! ನನಗೆ ಕಡೆಯದಾಗಿ ಎಂಟನೆಯ ಒಂದು ಹೆಸರನ್ನು ಕೊಡಬೇಕೆಂದು ಹೇಳಿದನು. ಬ್ರಹ್ಮದೇವನು ಅದನ್ನು ಮನ್ನಿಸಿ ಮತ್ತೆ ಮಹಾದೇವನೆಂಬ ನಾಮವನ್ನು ನೀನು ಹೊಂದಿರುವಿಯೆಂದು ಕುಮಾರನಿಗೆ ಹೇಳಿ ಸುಮ್ಮನಾದನು.

೧೮. ನೀಲಲೋಹಿತನೆಂಬ ಕುಮಾರನು ಬ್ರಹ್ಮನಿಂದ ಹಿಂದೆ ಹೇಳಿದಂತೆ ಎಂಟು ವಿಭೂತಿ ನಾಮಗಳನ್ನು ಹೊಂದಿ ಮತ್ತೆ ಬ್ರಹ್ಮದೇವನಲ್ಲಿ ಈ ಪ್ರತಿಯೊಂದು

ತತೋ ವಿಸ್ಸೃಷ್ಟಾಸ್ತನವ ಏಷಾಂ ನಾಮ್ನಾಂ ಸ್ವಯಂಭುವಾ ।
ಸೂರ್ಯೋ ಜಲಂ ಮಹೀ ವಾಯುರ್ವಹ್ನಿರಾಕಾಶಮೇವ ಚ ॥ ೧೯ ॥

ದೀಕ್ಷಿತೋ ಬ್ರಾಹ್ಮಣಶ್ಚಂದ್ರ ಇತ್ಯೇವಂ ತೇಽಷ್ಟಧಾ ತನುಃ ।
ತೇಷು ಪೂಜ್ಯಶ್ಚ ವಂದ್ಯಶ್ಚ ನಮಸ್ಕಾರ್ಯಶ್ಚ ಯತ್ನತಃ ॥ ೨೦ ॥

ಪ್ರೋವಾಚ ತಂ ಪುನರ್ಬ್ರಹ್ಮಾ ಕುಮಾರಂ ನೀಲಲೋಹಿತಮ್ ।
ಯದುಕ್ತಂ ತೇ ಮಯಾ ಪೂರ್ವಂ ನಾಮ ರುದ್ರೇತಿ ವೈ ವಿಭೋ ॥ ೨೧ ॥

ತಸ್ಯಾದಿತ್ಯತನುರ್ನಾಮ್ನಃ ಪ್ರಥಮಾ ಪ್ರಥಮಸ್ಯ ತೇ ।
ಇತ್ಯುಕ್ತೇ ತಸ್ಯ ಯತ್ತೇಜಶ್ಚಕ್ಷುಸ್ತ್ವಾಸೀತ್ಪ್ರಕಾಶಕಮ್ ॥ ೨೨ ॥

---

ನಾಮುಗಳಿಗೆ ತಕ್ಕಂತೆ ಪ್ರತಿಯೊಂದು ವಿಭೂತಿರೂಪವಾದ ದೇವತೆಗೂ ಸ್ಥಾನಗಳನ್ನು ಕಲ್ಪಿಸಿಕೊಡಬೇಕೆಂದು ಬೇಡಿಕೊಂಡನು.

೧೯-೨೦. ಕುಮಾರನ ಈ ಪ್ರಾರ್ಥನೆಯಂತೆ ಬ್ರಹ್ಮನು ಹಿಂದೆ ಕೊಟ್ಟಿದ್ದ ಎಂಟು ನಾಮುಗಳಿಗೆ ಸ್ಥಾನವಾದ ವಿಗ್ರಹಗಳನ್ನು ಕೊಟ್ಟನು. ಸೂರ್ಯ, ಜಲ, ಪೃಥಿವೀ, ವಾಯು, ಅಗ್ನಿ, ಆಕಾಶ, ದೀಕ್ಷಿತ ಬ್ರಾಹ್ಮಣ, ಚಂದ್ರ ಎಂಬುವು ಕುಮಾರನ ಅಭಿಮಾನಾಸ್ಪದಗಳಾದ ಅಷ್ಟಮೂರ್ತಿಗಳು ಬ್ರಹ್ಮನಿಂದ ಕೊಡಲ್ಪಟ್ಟವು, ಮತ್ತು ಆ ಮೂರ್ತಿಗಳಲ್ಲಿ ನೀನು ವಾಸಿಸುತ್ತ ಪೂಜಾ ಮತ್ತು ವಂದನೆಗಳಿಗೆ ಅರ್ಹನಾಗಿರುವೆ ಎಂದು ಬ್ರಹ್ಮನಿಂದ ಹೇಳಲ್ಪಟ್ಟನು.

೨೧. ಹೀಗೆ ಸ್ಥಾನವಿಶೇಷಗಳಿಂದ ಕುಮಾರನಿಗೆ ಪೂಜ್ಯತೆಯನ್ನುಂಟುಮಾಡಿ ಬ್ರಹ್ಮನು ಮತ್ತೆ ತಾನು ಹಿಂದೆ ಕೊಟ್ಟಿರುವ ನಾಮಸ್ಥಾನಗಳ ಮಹಿಮೆಯನ್ನು ವಿವರಿಸುತ್ತ ಹೀಗೆ ಹೇಳಿದನು. ಪ್ರಭುವೆ! ನಾನು ಹಿಂದೆ ಹೇಳಿದ ನಾಮುಗಳಲ್ಲಿ ಪ್ರಥಮವಾದ ರುದ್ರ ಎಂಬ ನಾಮಕ್ಕೆ ಪ್ರಥಮವಾದ ಆದಿತ್ಯಮಂಡಲವು ಪ್ರಥಮವಾದ ಮೂರ್ತಿಯು.

೨೨. ಹೀಗೆ ಹೇಳುತ್ತಿರುವಲ್ಲಿ ರುದ್ರನ ಪ್ರಕಾಶಕವಾದ ಚಕ್ಷುರಿಂದ್ರಿಯವು ಆದಿತ್ಯ ಬಿಂಬವನ್ನು ಪ್ರವೇಶಿಸಿ ಜಗತ್ತನ್ನು ಬೆಳಗಲಾರಂಭಿಸಿತು. ರುದ್ರಾಂಶದ ಪ್ರವೇಶವು ಆದಿತ್ಯನಲ್ಲಿರುವುದರಿಂದ ಆದಿತ್ಯನು ರೌದ್ರರೂಪದಿಂದಿರುವನು.

ವಿವೇಶ ತತ್ತ್ರದಾಽಽದಿತ್ಯಂ ತಸ್ಮಾದ್ರುದ್ರೋ ಹ್ಯಸೌ ಸ್ಮೃತಃ ।
ಉದ್ಯಂತಮಸ್ತಂ ಯಂತಂ ಚ ವರ್ಜಯೇದ್ದರ್ಶನೇ ರವಿಮ್ ॥ ೨೩ ॥

ಶಶ್ವಚ್ಚ ಜಾಯತೇ ಯಸ್ಮಾಚ್ಛಶ್ವತ್ಸಂತಿಷ್ಠತೇ ತು ಯತ್ ।
ತಸ್ಮಾತ್ಸೂರ್ಯಂ ನ ವೀಕ್ಷೇತ ಆಯುಷ್ಕಾಮಃ ಶುಚಿಃ ಸದಾ ॥ ೨೪ ॥

ಅತೀತಾನಾಗತಂ ರುದ್ರಂ ವಿಪ್ರಾ ಹ್ಯಾಪ್ಯಾಯಯಂತಿ ಯತ್ ।
ಉಭೇ ಸಂಧ್ಯೇ ಹ್ಯುಪಾಸೀನಾ ಗೃಣಂತಃ ಸಾಮ ಯಗ್ಯಜುಃ ॥ ೨೫ ॥

ಉದ್ಯನ್ ಸ ತಿಷ್ಠತೇ ಋಕ್ಷು ಮಧ್ಯಾಹ್ನೇ ಚ ಯಜುಃಷ್ವಥ ।
ಸಾಮಸ್ವಥಾಪರಾಹ್ಣೇ ತು ರುದ್ರಃ ಸಂವಿಶತಿ ಕ್ರಮಾತ್ ॥ ೨೬ ॥

ತಸ್ಮಾದ್ಭವೇನ್ನಾಭ್ಯುದಿತೋ ವಾಹ್ಯಸ್ತಮಿತ ಏವ ಚ ।
ನ ರುದ್ರಂ ಪ್ರತಿ ಮೇಹೇತ ಸರ್ವಾವಸ್ಥಂ ಕಥಂ ಚನ ॥ ೨೭ ॥

---

೨೩-೨೪. ಅಂತಹ ಆದಿತ್ಯನನ್ನು ಉದಯಿಸುವಾಗಲೂ ಅಸ್ತಮಯವಾಗುವಾಗಲೂ ದರ್ಶನಮಾಡಲಾಗದು. ಸೂರ್ಯನು ಪ್ರತಿನಿತ್ಯವೂ ನಮ್ಮ ದೃಷ್ಟಿ ಮತ್ತು ಭಾವನೆಯಿಂದ ಉದಯಾಸ್ತಮಯಗಳೆಂಬ ಜನ್ಮಮರಣಗಳಿದ್ದಂತೆ ತೋರುವುದರಿಂದ ಆಯುಷ್ಕಾಮನಾದ ಮಾನವನು ಶುಚಿಯಾಗಿರುವಾಗ ವಿಧಿರಹಿತವಾದ ಸೂರ್ಯ ದರ್ಶನವನ್ನು ಮಾಡಲಾಗದು.

೨೫. ರುದ್ರರೂಪಿಯಾದ ಆದಿತ್ಯನು ಅಸ್ತಮಯ ಹೊಂದಿದಾಗಲೂ ಉದಯಿಸುವ ಮೊದಲೂ ಆ ದೇವತೆಯನ್ನು ಪ್ರೀತಿಗೊಳಿಸುವುದಕ್ಕೋಸ್ಕರ ವಿಪ್ರರು ಎರಡು ಸಂಧ್ಯಾಕಾಲಗಳಲ್ಲಿ ಋಕ್, ಯಜುಸ್ಸು, ಸಾಮಮಂತ್ರಗಳಿಂದ ಸ್ತುತಿಮಾಡುವರು.

೨೬. ಹೀಗೆ ವಿಪ್ರರಿಂದ ಋಗ್ವೇದ, ಯಜುರ್ವೇದ, ಸಾಮವೇದಗಳಿಂದ ಸ್ತುತಿಸಲ್ಪಡುವುದರಿಂದ ಆ ರುದ್ರಮೂರ್ತಿಯು ಉದಯಕಾಲದಲ್ಲಿ ಋಗ್ವೇದದಲ್ಲಿಯೂ ಮಧ್ಯಾಹ್ನ ಕಾಲದಲ್ಲಿ ಯಜುರ್ವೇದದಲ್ಲಿಯೂ ಸಾಯಂಕಾಲದಲ್ಲಿ ಸಾಮವೇದದಲ್ಲಿಯೂ ವಿಶೇಷಾಭಿಮಾನದಿಂದ ಇದ್ದು ತ್ರಯೀಮಯನಾಗಿ ಕ್ರಮವಾಗಿ ಸೌಖ್ಯವನ್ನು ಭುಂಜಿಸುವನು.

೨೭. ಕ್ರಮವಾಗಿ ವೇದತ್ರಯಾಭಿಮಾನದಿಂದ ಒಂದು ಸ್ಥಾನದಿಂದ ಮತ್ತೊಂದುಸ್ಥಾನಕ್ಕೆ ಸಂಕ್ರಮಿಸುವನಾದಕಾರಣದಿಂದ ಆ ಆದಿತ್ಯನು ವಾಸ್ತವವಾಗಿ ಉದಯ

13

ಏವಂ ಯುಕ್ತಾನ್ ದ್ವಿಜಾನ್ ದೇವೋ ರುದ್ರಸ್ತಾನ್ನ ಹಿನಸ್ತಿ ವೈ ।
ತತೋಽಬ್ರವೀತ್ಪುನರ್ಬ್ರಹ್ಮಾ ತಂ ದೇವಂ ನೀಲಲೋಹಿತಮ್॥ ೨೮ ॥

ದ್ವಿತೀಯಂ ನಾಮಧೇಯಂ ತೇ ಮಯಾ ಪ್ರೋಕ್ತಂ ಭವೇತಿ ಯತ್।
ಏತಸ್ಯಾಽಪೋ ದ್ವಿತೀಯಾ ತೇ ತನುರ್ನಾಮ್ನಾ ಭವತ್ವಿತಿ ॥ ೨೯ ॥

ಇತ್ಯುಕ್ತೇ ತ್ವಥ ತಸ್ಯಾಸೀಚ್ಛರೀರಸ್ಥಂ ರಸಾತ್ಮಕಮ್ ।
ವಿವೇಶ ತತ್ತದಾ ಯಸ್ಮಾತ್ ತಸ್ಮಾದಾಪೋ ಭವಃ ಸ್ಮೃತಃ ॥ ೩೦ ॥

ಯಸ್ಮಾದ್ಭವಂತಿ ಭೂತಾನಿ ತಾಭ್ಯಸ್ತಾ ಭಾವಯಂತಿ ಚ ।
ಭವನಾದ್ಭಾವನಾಚ್ಚೈವ ಭೂತಾನಾಮುಚ್ಯತೇ ಭವಃ ॥ ೩೧ ॥

ತಸ್ಮಾನ್ಮೂತ್ರಂ ಪುರೀಷಂ ಚ ನಾಪ್ಸು ಕುರ್ವೀತ ಕರ್ಹಿಚಿತ್ ।
ನ ನಿಷ್ಠೀವೇನ್ನಾವಗಾಹೇನ್ನೈವ ಗಚ್ಛೇಚ್ಚ ಮೈಥುನಮ್ ॥ ೩೨ ॥

---

ಅಸ್ತಮಯ ವರ್ಜಿತನು. ಆ ಆದಿತ್ಯನಿಗೆದುರಾಗಿ ಎಂತಹ ತೀವ್ರಾವಸ್ಥೆಯಲ್ಲಿಯೂ ರೇತೋವಿಸರ್ಜನಾದಿ ಕರ್ಮವನ್ನು ಆಚರಿಸಕೂಡದು.

೨೮. ಈ ವಿಧವಾದ ಕರ್ಮಯೋಗವುಳ್ಳ ದ್ವಿಜರನ್ನು ರುದ್ರದೇವನು ಯಾವ ವಿಧದಿಂದಲೂ ಹಿಂಸಿಸುವುದಿಲ್ಲ.

೨೯. ಬ್ರಹ್ಮನು ದ್ವಿತೀಯನಾಮದ ವಿಷಯದಲ್ಲಿ ನೀಲಲೋಹಿತನನ್ನು ಕುರಿತು ಮತ್ತೆ ಹೇಳಿದನು. ನಿನಗೆ ಎರಡನೆಯದಾಗಿ ನನ್ನಿಂದ ಕೊಡಲ್ಪಟ್ಟಿರುವ ಭವ ಎಂಬ ಹೆಸರಿಗೆ ಜಲವೆಂಬುದು ಎರಡನೆಯ ತನುವು.

೩೦. ಹೀಗೆ ಹೇಳುತ್ತಿರುವಷ್ಟರಲ್ಲಿ ರುದ್ರದೇವನ ಶರೀರದಲ್ಲಿರುವ ರಸಭಾಗವಾದ ವಸ್ತುವು ಜಲ ತತ್ತ್ವವನ್ನು ಪ್ರವೇಶಿಸಿತು. ಆದ್ದರಿಂದ ಭವನು ಜಲಾಭಿಮಾನಿಯಾದ ದೇವನೆಂದು ಕರೆಯಲ್ಪಡುವನು.

೩೧. ರುದ್ರನ ಅಭಿಮಾನ ವಿಶೇಷಾಸ್ಪದವಾದ ಜಲದಿಂದ ಸಮಸ್ತ ಭೂತಗಳು ಹುಟ್ಟುವುದರಿಂದಲೂ ಮತ್ತು ಜಲಾವಲಂಬನದಿಂದ ಜೀವನಾಧಾರವನ್ನು ಹೊಂದಿರುವುದರಿಂದಲೂ "ಭವಂತಿ ಅಥವಾ ಭಾವಯಂತಿ" ಎಂಬ ವ್ಯುತ್ಪತ್ತಿಯಿಂದ ಜಲವು ಭವಸಂಜ್ಞೆಯನ್ನು ಹೊಂದಿರುವುದು ಯುಕ್ತವು.

೩೨. ಹೀಗೆ ದೇವತಾಸ್ವರೂಪವಾದುದರಿಂದ ನೀರಿನಲ್ಲಿ ಮೂತ್ರ ಪುರೀಷಗಳ

**ನ ಚೈತಾಃ ಪರಿಚಕ್ಷೀತ ವಹಂತ್ಯೋ ವಾ ಸ್ಥಿತಾ ಅಪಿ ।**
**ಮೇಧ್ಯಾಮೇಧ್ಯಾಸ್ತ್ವಸಾವೇತಾಸ್ತನವೋ ಮುನಿಭಿಃ ಸ್ಮೃತಾಃ॥ ೩೩ ॥**

**ವಿವರ್ಣರಸಗಂಧಾಶ್ಚ ವರ್ಜ್ಯಾ ಅಲ್ಪಾಶ್ಚ ಸರ್ವಶಃ ।**
**ಅಪಾಂ ಯೋನಿಃ ಸಮುದ್ರಸ್ತು ತಸ್ಮಾತ್ತಂ ಕಾಮಯಂತಿ ತಾಃ ॥ ೩೪ ॥**

**ಮೇಧ್ಯಾಶ್ಚೈವಾಮೃತಾ ಹ್ಯಾಪೋ ಭವಂತಿ ಪ್ರಾಪ್ಯ ಸಾಗರಮ್ ।**
**ತಸ್ಮಾದಪೋ ನ ರುಂಧೀತ ಸಮುದ್ರಂ ಕಾಮಯಂತಿ ತಾಃ ॥ ೩೫ ॥**

**ನ ಹಿನಸ್ತಿ ಭವೋ ದೇವೋ ಯ ಏವಂ ಹ್ಯಪ್ಸು ವರ್ತತೇ ।**
**ತತೋಽಬ್ರವೀತ್ಪುನರ್ಬ್ರಹ್ಮಾ ಕುಮಾರಂ ನೀಲಲೋಹಿತಮ್॥ ೩೬ ॥**

---

ಉತ್ಸರ್ಜನೆಯನ್ನು ಮಾಡಬಾರದು. ಮತ್ತು ನೀರಿನಲ್ಲಿ ಎಲ್ಲಿಯೂ ಉಗುಳುವುದು, ನಿರರ್ಥಕವಾಗಿ ಮುಳುಗುವುದು, ಸ್ತ್ರೀ ಸಂಗದಿಂದ ಮಿಥುನಭಾವ ಹೊಂದುವುದು ಮುಂತಾದ ಕರ್ಮಗಳು ನಿಂದಿತವಾದುವು.

೩೩. ಮತ್ತು ಇಂತಹ ಪವಿತ್ರವಾದ ನೀರನ್ನು ಹರಿಯುತ್ತಿರುವಾಗಲೂ ನಿಂತಿರುವಾಗಲೂ ದೋಷಗಳನ್ನು ಉಲ್ಲೇಖಿಸಿ ತಿರಸ್ಕರಿಸಬಾರದು. ಮೇಧ್ಯ ಅಥವಾ ಅಮೇಧ್ಯವಾದ ಯಾವ ಜಲವಾದರೂ ರುದ್ರನ ದ್ವಿತೀಯ ತನುರೂಪವಾಗಿ ಮುನಿಗಳಿಂದ ಸ್ಮರಿಸಲ್ಪಟ್ಟಿರುವುದು.

೩೪. ಆ ನೀರು, ರೂಪ-ರಸ-ಗಂಧಗಳ ಪರಿವೃತ್ತಿಯನ್ನು ಹೊಂದಿ ಜುಗುಪ್ಸಿತವಾದರೆ ಅಂತಹ ಹಳೆಯ ಮತ್ತು ಅಲ್ಪವಾದ ನೀರನ್ನು ಉಪಯೋಗಿಸಬಾರದು. ಸ್ವಚ್ಛವೂ ಸಮೃದ್ಧಿಯೂ ಆದ ನೀರು ಉಪಯೋಗಕ್ಕೆ ಅರ್ಹವಾದುದು. ನೀರಿಗೆಲ್ಲ ಸಮುದ್ರವು ಯೋನಿಯಾದುದರಿಂದ ಜಲವು ಸಮುದ್ರವನ್ನು ಕಾಮಿಸುವುದು ಸ್ವಭಾವವು.

೩೫. ಜಲವು ಸಮುದ್ರವನ್ನು ಹೊಂದಿ ಮೇಧ್ಯವೂ ಅಮೃತಸಮಾನವೂ ಆಗುವುದಾದ್ದರಿಂದ ಸಮುದ್ರ ಸಮೀಪಕ್ಕೆ ಕಾಮಪೂರ್ವಕವಾಗಿ ಹೋಗುವ ಜಲವನ್ನು ತಡೆಯಲಾಗದು.

೩೬. ಈ ನಿಯಮಗಳನ್ನು ಪರಿಪಾಲಿಸಿದವರನ್ನು ಭವದೇವನು ಹಿಂಸಿಸುವುದಿಲ್ಲ. ಹೀಗೆಂದು ದ್ವಿತೀಯ ವಿಭೂತಿ ಮಹಿಮೆಯನ್ನು ಮುಗಿಸಿ ಮುಂದೆ ತೃತೀಯ ನಾಮ ವಿಭೂತಿಯನ್ನು ಹೇಳಲಾರಂಭಿಸಿದನು.

ಶರ್ವೇತಿ ಯತ್ತೃತೀಯಂ ತೇ ನಾಮ ಪ್ರೋಕ್ತಂ ಮಯಾ ವಿಭೋ ।
ತಸ್ಯ ಭೂಮಿಸ್ತೃತೀಯಸ್ಯ ತನುರ್ನಾಮ್ನಾ ಭವತ್ವಿಯಮ್ ॥ ೩೭ ॥

ಇತ್ಯುಕ್ತೇ ಯತ್ಸ್ಥಿರಂ ತಸ್ಯ ಶರೀರೇ ಹ್ಯಸ್ಥಿಸಂಜ್ಞಿತಮ್ ।
ವಿವೇಶ ತತ್ತದಾ ಭೂಮಿಂ ಯಸ್ಮಾತ್ಸ ಶರ್ವ ಉಚ್ಯತೇ ॥ ೩೮ ॥

ತಸ್ಮಾತ್ಕೃಷ್ಟೇ ನ ಕುರ್ವೀತ ಪುರೀಷಂ ಮೂತ್ರಮೇವ ಚ ।
ನ ಚ್ಛಾಯಾಯಾಂ ತಥಾ ಮಾರ್ಗೇ ಸ್ವಚ್ಛಾಯಾಯಾಂ ನ ಮೇಹತೇ ॥ ೩೯ ॥

ಶಿರಃ ಪ್ರಾವೃತ್ಯ ಕುರ್ವೀತ ಅಂತರ್ಧಾಯ ತೃಣೈರ್ಮಹೀಮ್ ।
ಏವಂ ಯೋ ವರ್ತತೇ ಭೂಮೌ ಶರ್ವಸ್ತಂ ನ ಹಿನಸ್ತಿ ವೈ ॥ ೪೦ ॥

ತತೋಽಬ್ರವೀತ್ಪುನರ್ಬ್ರಹ್ಮಾ ಕುಮಾರಂ ನೀಲಲೋಹಿತಮ್ ।
ಈಶಾನೇತಿ ಚತುರ್ಥಂ ತೇ ನಾಮ ಪ್ರೋಕ್ತಂ ಮಯೇಹ ಯತ್ ॥೪೧॥

---

೩೭. ವಿಭುವೆ! ನನ್ನಿಂದ ನಾಮ ಅಷ್ಟಕದಲ್ಲಿ ಶರ್ವ ಎಂಬುದು ಮೂರನೆಯ ನಾಮವಾಗಿ ಹೇಳಲ್ಪಟ್ಟಿದೆಯಷ್ಟೆ. ಅದಕ್ಕೆ ಭೂಮಿಯು ಆಧಾರವಾದ ತನುವಾಗಿರಲಿ.

೩೮. ಈ ರೀತಿಯಾಗಿ ಬ್ರಹ್ಮನಿಂದ ಹೇಳಲ್ಪಡುತ್ತಿರಲು ಕುಮಾರನ ಶರೀರದಲ್ಲಿದ್ದ ಅಸ್ಥಿಯೆಂಬ ಸಂಜ್ಞೆಯ ಸ್ಥಿರಭಾಗವು ಭೂಮಿಯನ್ನು ಪ್ರವೇಶಿಸಿತು. ಅದು ಮೊದಲಾಗಿ ಭೂಮಿಯು ಶರ್ವದೇವನ ಮೂರ್ತಿಯೆಂದು ಹೇಳಲ್ಪಡುತ್ತಿತ್ತು.

೩೯. ಆದುದರಿಂದ ಪವಿತ್ರವಾದ ಭೂಮಿಯ ಕೃಷಿಮಾಡಿದ ಪ್ರದೇಶದಲ್ಲಿಯೂ ವೃಕ್ಷಾದಿ ಛಾಯೆಗಳಲ್ಲಿಯೂ ತನ್ನ ನೆಳಲಿನಲ್ಲಿಯೂ, ಮತ್ತು ಸಾಧಾರಣವಾಗಿ ದಾರಿಯಲ್ಲಿಯೂ ಮೂತ್ರ ಪುರೀಷಾದಿ ವಿಸರ್ಜನವನ್ನು ಮಾಡಬಾರದು.

೪೦. ಹುಲ್ಲು ಎಲೆಗಳಿಂದ ಭೂಮಿಯನ್ನು ಮರೆಮಾಡಿ ತನ್ನ ಶಿರವನ್ನು ವಸ್ತ್ರದಿಂದ ಮುಚ್ಚಿಕೊಂಡು ಮೂತ್ರಾದಿ ವಿಸರ್ಜನೆಯನ್ನು ಮಾಡಬೇಕು, ಭೂಮಿಯಲ್ಲಿ ಇರಬೇಕಾದ ಈ ಆಚಾರವನ್ನು ಪಾಲಿಸಿದವನನ್ನು ಶರ್ವ ದೇವನು ಹಿಂಸೆ ಮಾಡುವುದಿಲ್ಲ.

೪೧-೪೨-೪೩. ತರುವಾಯ ಬ್ರಹ್ಮನು ನೀಲಲೋಹಿತ ಕುಮಾರನನ್ನು ಕುರಿತು ಮತ್ತೆ ಇಂತೆಂದನು. ನಾನು ನಿನಗೆ ಕೊಟ್ಟಿರುವ ನಾಲ್ಕನೆಯ ಈಶಾನ ಎಂಬ ನಿನ್ನ

**ಚತುರ್ಥಸ್ಯ ಚತುರ್ಥೀ ತು ವಾಯುರ್ನಾಮ್ನಾ ತನುಸ್ತ್ವವ ।**
**ಇತ್ಯುಕ್ತೇ ಯಚ್ಛರೀರಸ್ಥಂ ಪಂಚಧಾ ಪ್ರಾಣಸಂಜ್ಞಿತಮ್ ॥ ೪೨ ॥**

**ವಿವೇಶ ತಸ್ಯ ತದ್ವಾಯುಮೀಶಾನಸ್ತೇನ ಮಾರುತಃ ।**
**ತಸ್ಮಾನ್ನೈನಂ ಪರಿವದೇತ್ ಪ್ರವಾಂತಂ ವಾಯುಮೀಶ್ವರಮ್ ॥ ೪೩ ॥**

**ಯಜ್ಞೈರ್ವ್ಯವಹರಂತ್ಯೇನಂ ಯೇ ವೈ ಪರಿಚರಂತಿ ಚ ।**
**ಏವಂ ಯುಕ್ತಂ ಮಹೇಶಾನೋ ನೈವ ದೇವೋ ಹಿನಸ್ತಿ ತಮ್॥ ೪೪ ॥**

**ತತೋ ಬ್ರವೀತ್ಪುನರ್ಬ್ರಹ್ಮಾ ತಂ ದೇವಂ ಧೂಮ್ರಮೀಶ್ವರಮ್ ।**
**ನಾಮ ಯಚ್ಚೈ ಪಶುಪತಿರಿತ್ಯುಕ್ತಂ ಪಂಚಮಂ ಮಯಾ ॥ ೪೫ ॥**

**ಪಂಚಮೀ ಪಂಚಮಸ್ಯೈಷಾ ತನುರ್ನಾಮ್ನಾಽಗ್ನಿರಸ್ತು ತೇ ।**
**ಇತ್ಯುಕ್ತೇ ಯಚ್ಛರೀರಸ್ಥಂ ತೇಜಸ್ತಸ್ಯೋಷ್ಣಸಂಜ್ಞಿತಮ್ ॥ ೪೬ ॥**

---

ಹೆಸರಿಗೆ ನಾಲ್ಕನೆಯದಾದ ವಾಯುವು ತನು (ಮೂರ್ತಿ) ಯಾಗಿರಲಿ, ಎಂದು ಹೇಳುತ್ತಿರುವಾಗ ಆ ಕುಮಾರನ ಶರೀರದಲ್ಲಿರುವ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನವೆಂದು ಐದು ಬಗೆಯ ಪ್ರಾಣವಾಯುವು ಬಾಹ್ಯವಾಯುವನ್ನು ಪ್ರವೇಶಮಾಡಿತು. ಆದುದರಿಂದ ವಾಯುವು ಈಶಾನರೂಪವೆಂದು ಅರಿಯಬೇಕು. ಇಂತಹ ಈಶ್ವರಾಂಶನಾದ ವಾಯುವು ಬೀಸುತ್ತಿರುವಾಗ ನಿಂದೆ ಮಾಡಬಾರದು.

೪೪. ಈ ವಾಯುದೇವನನ್ನು ಯಜ್ಞಾದಿ ಕರ್ಮಗಳಿಂದ ಆರಾಧಿಸುತ್ತಲೂ ಸೇವಿಸುತ್ತಲೂ ಇರುವ ಭಕ್ತರನ್ನು ಮಹೇಶಾನದೇವನು ಯಾವ ವಿಧದಿಂದಲೂ ಹಿಂಸಿಸುವುದಿಲ್ಲ.

೪೫. ಅನಂತರ ಬ್ರಹ್ಮನು ಧೂಮ್ರವರ್ಣನಾದ ಮತ್ತು ದೇವನಾದ ಈಶ್ವರನನ್ನು ಕುರಿತು ಮುಂದಿನ ನಾಮದ ಮಹಿಮೆಯ ವಿಷಯದಲ್ಲಿ ಹೇಳತೊಡಗಿದನು. ನನ್ನಿಂದ ಪಶುಪತಿಯೆಂದು ಐದನೆಯ ಹೆಸರು ನಿನಗೆ ಕೊಡಲ್ಪಟ್ಟಿರುವುದಷ್ಟೆ.

೪೬. ಐದನೆಯ ಆ ಹೆಸರಿಗೆ ಅಗ್ನಿಯೆಂಬುದು ಐದನೆಯ ಮೂರ್ತಿಯಾಗಿರಲಿ. ಹೀಗೆ ಹೇಳುತ್ತಿರಲು ಆ ಈಶ್ವರನ ಶರೀರಾಂತರ್ಗತವಾದ ಉಷ್ಣಗುಣದಿಂದ ಕೂಡಿದ ತೇಜಸ್ಸು ಅಗ್ನಿಯಲ್ಲಿ ಐಕ್ಯವನ್ನು ಹೊಂದಿತು. ಆಗ ಅಗ್ನಿಯು ಪಶುಪತಿಯೆಂದು ಕರೆಯಲ್ಪಟ್ಟಿತು.

ವಿವೇಶ ತತ್ತದಾ ಹ್ಯಗ್ನಿಂ ತಸ್ಮಾತ್ಪಶುಪತಿಸ್ತು ಸಃ ।
ಯಸ್ಮಾದಗ್ನಿಃ ಪಶುಶ್ಚಾಸೀದ್ಯಸ್ಮಾತ್ಪಾತಿ ಪಶೂಂಶ್ಚ ಸಃ ॥ ೪೭ ॥

ತಸ್ಮಾತ್ಪಶುಪತೇಸ್ತಸ್ಯ ತನುರಗ್ನಿರ್ನಿರುಚ್ಯತೇ ।
ತಸ್ಮಾದಮೇಧ್ಯಂ ನ ದಹೇನ್ನಃ ಪಾದೌ ಪ್ರತಾಪಯೇತ್ ॥ ೪೮ ॥

ಅಧಸ್ತಾನ್ನೋಪದಧ್ಯಾಚ್ಚ ನ ಚೈನಮತಿಲಂಘಯೇತ್ ।
ನೈನಂ ಪಶುಪತಿರ್ದೇವ ಏವಂ ಯುಕ್ತಂ ಹಿನಸ್ತಿ ವೈ ॥ ೪೯ ॥

ತತೋಽಬ್ರವೀತ್ಪುನರ್ಬ್ರಹ್ಮಾ ತಂ ದೇವಂ ಶ್ವೇತಪಿಂಗಲಮ್ ।
ಷಷ್ಠಂ ನಾಮ ಮಯಾ ಪ್ರೋಕ್ತಂ ತವ ಭೀಮೇತಿ ಯತ್ಪ್ರಭೋ ॥೫೦॥

ಆಕಾಶಂ ತಸ್ಯ ನಾಮ್ನಸ್ತು ತನುಃ ಷಷ್ಠೀ ಭವತ್ವಿತಿ ।
ಇತ್ಯುಕ್ತೇ ಸುಷಿರಂ ತಸ್ಯ ಶರೀರಸ್ಥಮಭೂಚ್ಚ ಯತ್ ॥ ೫೧ ॥

---

೪೭. ಈಶ್ವರನಿಗೆ ಯಾವ ಕಾರಣದಿಂದ ಅಗ್ನಿಯು ಪಶುವಿನಂತೆ ಭೋಗ ಸಾಧನವಾಯಿತೋ ಮತ್ತು ಆಸ್ಥಾನದಲ್ಲಿದ್ದು ಇತರ ಸರ್ವ ಪಶುಗಳನ್ನು ರಕ್ಷಿಸಿದನೋ ಆ ಕಾರಣದಿಂದ ಅಗ್ನಿಯು ಪಶು+ಪತಿ ಶಬ್ದಗಳು ಸೇರಿ ಆದ ಪಶುಪತಿ ಸಂಜ್ಞೆಯನ್ನು ಹೊಂದಿದನು.

೪೮. ಆದ್ದರಿಂದ ಅಗ್ನಿಯಲ್ಲಿ ಅಮೇಧ್ಯವನ್ನು ಸುಡಬಾರದು. ಮತ್ತು ಅಗ್ನಿಗೆ ಎದುರಾಗಿ ಕಾಲುಗಳನ್ನು ಚಾಚಿ ಕಾಯಿಸಬಾರದು.

೪೯. ಮತ್ತು ಅಗ್ನಿಯನ್ನು ಸ್ಥಂಡಿಲಾದಿಗಳಿಲ್ಲದ ಕೇವಲವಾದ ಭೂಮಿಯಲ್ಲಿ ಉಪಧಾನ ಮಾಡಬಾರದು. ಅಗ್ನಿಯನ್ನು ಲಂಘಿಸಲೂಬಾರದು. ಈ ಆಚಾರವನ್ನು ರಕ್ಷಿಸಿದವನನ್ನು ಪಶುಪತಿದೇವನು ಹಿಂಸೆಗೆ ಭಾಗಿಯನ್ನಾಗಿ ಮಾಡುವುದಿಲ್ಲ.

೫೦. ಆ ಮೇಲೆ ಬ್ರಹ್ಮನು ಶ್ವೇತ ಮತ್ತು ಪಿಂಗಳ (ಧೂಮ್ರ) ವರ್ಣದ ಆಕಾರದಿಂದ ಕೂಡಿದ ಕುಮಾರನನ್ನು ಕುರಿತು ತಾನು ಹಿಂದೆ ಕೊಟ್ಟಿರುವ ಆರನೆಯ ನಾಮದ ಮಹಿಮೆಯನ್ನು ಪ್ರಸ್ತಾಪಿಸಿದನು.

೫೧. ಪ್ರಭುವೆ! ಆ ಷಷ್ಠವಾದ ಭೀಮ ಎಂಬ ನಾಮಕ್ಕೆ ಮೂರ್ತಿಗಳಲ್ಲಿ ಆರನೆಯದಾದ ಆಕಾಶವು ಸ್ಥಾನವು, ಎಂದು ಹೇಳುತ್ತಿರುವಾಗ ಆ ಕುಮಾರನ

**ವಿವೇಶ ತತ್ತದಾಕಾಶಂ ತಸ್ಮಾದ್ಭೀಮಸ್ಯ ಸಾ ತನುಃ ।**
**ಯದಾಽಕಾಶೇ ಸ್ಮೃತೋ ದೇವಸ್ತಸ್ಮಾನ್ನಾಸಂವೃತಃ ಕ್ವಚಿತ್ ॥ ೫೨ ॥**

**ಕುರ್ಯಾನ್ನಮೂತ್ರಂ ಪುರೀಷಂ ವಾ ನ ಭುಂಜೀತ ಪಿಬೇನ್ನ ವಾ ।**
**ಮೈಥುನಂ ವಾಽಪಿ ನ ಚರೇದುಚ್ಛಿಷ್ಟಾನಿ ಚ ನೋತ್ಕ್ಷಿಪೇತ್ ॥ ೫೩ ॥**

**ನ ಹಿನಸ್ತಿ ಚ ತಂ ದೇವೋ ಯೋ ಭೀಮೋ ಹ್ಯೇವಮಾಚರೇತ್ ।**
**ತತೋಽಬ್ರವೀತ್ಪುನರ್ಬ್ರಹ್ಮಾ ತಂ ದೇವಂ ಸಬಲಂ ಪ್ರಭುಮ್॥ ೫೪ ॥**

**ಸಪ್ತಮಂ ಯನ್ಮಯಾ ಪ್ರೋಕ್ತಂ ನಾಮೋಗ್ರೇತಿ ತವ ಪ್ರಭೋ ।**
**ತಸ್ಯ ನಾಮ್ನಸ್ತನುಸ್ತುಭ್ಯಂ ದ್ವಿಜೋ ಭವತಿ ದೀಕ್ಷಿತಃ ॥ ೫೫ ॥**

---

ಶರೀರದಲ್ಲಿ ರಂಧ್ರಾತ್ಮಕವಾಗಿದ್ದ ಆಕಾಶಾಂಶವು ಈ ಶರೀರವನ್ನು ಬಿಟ್ಟು ಆಕಾಶ ವನ್ನು ಪ್ರವೇಶಮಾಡಿತು. ಆದ್ದರಿಂದ ಭೀಮದೇವನಿಗೆ ಆಕಾಶವು ಮೂರ್ತಿಯು.

೫೨. ಭೀಮದೇವನು ಆಕಾಶವೆಂಬ ಅಧಿಷ್ಠಾನದಲ್ಲಿರುವನೆಂದು ಹೇಳಲ್ಪಟ್ಟಿರು ವುದರಿಂದ ಆ ದೇವನಿಗೆ ಎಲ್ಲಿಯೂ ಆವರಣವಿಲ್ಲ.

೫೩. ಮೂತ್ರ ಪುರೀಷಗಳನ್ನು ಆಕಾಶದ ಕಡೆಗೆ ಎಸೆಯುವುದಾಗಲಿ, ಅನಾ ವೃತವಾದ ಸ್ಥಳದಲ್ಲಿ ಕುಳಿತು ಪಾನ-ಭೋಜನಗಳನ್ನು ಮಾಡುವುದಾಗಲಿ, ಅಥವಾ ಮೈಥುನಾಚರಣೆಯಾಗಲಿ ನಿಷಿದ್ಧವಾದುವು. ಮತ್ತು ಉಚ್ಛಿಷ್ಟವನ್ನು ಆಕಾಶದ ಕಡೆ ಎಸೆಯಬಾರದು.

೫೪. ಭೀಮದೇವನ ವಿಷಯದಲ್ಲಿ ಈ ನಿಷಿದ್ಧ ಕರ್ಮಗಳನ್ನು ಬಿಟ್ಟು ವಿಧಿ ಯನ್ನು ಪಾಲಿಸಿದ ಮಾನವನನ್ನು ಭೀಮದೇವನು ಹಿಂಸಿಸುವುದಿಲ್ಲ. ಇಷ್ಟನ್ನು ಬ್ರಹ್ಮನು ಹೇಳಿ ಮುಂದೆ ಬಲಿಷ್ಠನೂ ಪ್ರಭುವೂ ಆದ ರುದ್ರನಿಗೆ ಮುಂದಿನ ನಾಮ ವಿಷಯವನ್ನು ಹೇಳಲಾರಂಭಮಾಡಿದನು.

೫೫. ಪ್ರಭುವೆ! ಉಗ್ರನೆಂದು ನನ್ನಿಂದ ನಿನಗೆ ಕೊಡಲ್ಪಟ್ಟ ಸಪ್ತಮವಾದ ಹೆಸರಿಗೆ ದೀಕ್ಷಿತನಾದ ವಿಪ್ರನು ಸಪ್ತಮತನು ರೂಪನಾಗಿ ಅಧಿಷ್ಠಾನವಾಗುವನು.

ಏವಮುಕ್ತೇ ತು ಯತ್ತಸ್ಯ ಚೈತನ್ಯಂ ವೈ ಶರೀರಗಮ್ ।
ವಿವೇಶ ದೀಕ್ಷಿತಂ ತದ್ವೈ ಬ್ರಾಹ್ಮಣಂ ಸೋಮಯಾಜಿನಮ್ ॥ ೫೬ ॥

ತಾವತ್ಕಾಲಂ ಸ್ಮೃತೋ ವಿಪ್ರ ಉಗ್ರೋ ದೇವಸ್ತು ದೀಕ್ಷಿತಃ ।
ತಸ್ಮಾನ್ನೇವಂ ಪರಿವದೇನ್ನಾಶ್ಲೀಲಂ ಚಾಸ್ಯ ಕೀರ್ತಯೇತ್ ॥ ೫೭ ॥

ತೇ ಹರಂತ್ಯಸ್ಯ ಪಾಪ್ಮಾನಂ ಯೇ ವೈ ಪರಿವದಂತಿ ತಮ್ ।
ಏವಂ ಯುಕ್ತಾನ್ ದ್ವಿಜಾನುಗ್ರೋ ದೇವಸ್ತಾನ್ನ ಹಿನಸ್ತಿ ವೈ ॥ ೫೮ ॥

ತತೋಽಬ್ರವೀತ್ಪುನರ್ಬ್ರಹ್ಮಾ ತಂ ದೇವಂ ಭಾಸ್ಕರದ್ಯುತಿಮ್ ।
ಅಷ್ಟಮಂ ನಾಮ ಯತ್ಪ್ರೋಕ್ತಂ ಮಹಾದೇವೇತಿ ತೇ ಮಯಾ ॥ ೫೯ ॥

ತಸ್ಯ ನಾಮ್ನೋಽಷ್ಟಮಸ್ಯಾಸ್ತು ತನುಸ್ತುಭ್ಯಂ ತು ಚಂದ್ರಮಾಃ ।
ಇತ್ಯುಕ್ತೇ ಯನ್ಮನಸ್ತಸ್ಯ ಸಂಕಲ್ಪಕಮಭೂತ್ಪ್ರಭೋಃ ॥ ೬೦ ॥

---

೫೬. ಹೀಗೆ ಹೇಳಿದ ಕ್ಷಣದಲ್ಲಿಯೇ ಆ ಕುಮಾರನ ಶರೀರಾಂತರದಲ್ಲಿದ್ದ ಚೈತನ್ಯಾಂಶವು ಸೋಮಯಾಗಮಾಡಿದ ದೀಕ್ಷಿತ ಬ್ರಾಹ್ಮಣನಲ್ಲಿ ಸೇರಿಕೊಂಡಿತು.

೫೭, ಆ ಮೊದಲುಗೊಂಡು ದೀಕ್ಷಿತನಾದ ವಿಪ್ರನು ಉಗ್ರದೇವನೆಂಬ ರುದ್ರ ಮೂರ್ತಿಯಾದನು. ಆದ್ದರಿಂದ ಅಂತಹ ದೀಕ್ಷಿತ ವಿಪ್ರನನ್ನು ನಿಂದಿಸಬಾರದು ಮತ್ತು ಅವನ ವಿಷಯದಲ್ಲಿ ಶೀಲವನ್ನು ಉಲ್ಲಂಘಿಸುವ ಜುಗುಪ್ಸಾವಚನಗಳನ್ನು ಕೀರ್ತನ ಮಾಡಲಾಗದು.

೫೮. ಇಂತಹ ಪವಿತ್ರನಾದ ದೀಕ್ಷಿತನನ್ನು ನಿಂದಿಸಿದ ಮಾನವರು ಅವನಲ್ಲಿದ್ದ ಪಾಪಗಳನ್ನು ಆರ್ಜಿಸಿ ತಾವು ಅವನ ಪಾಪಭಾಗಿಗಳಾಗುತ್ತಾರೆ. ಈ ನಿಷಿದ್ಧ ಕರ್ಮ ತ್ಯಾಗಮಾಡಿದ ಕರ್ಮಯೋಗಿಗಳಿಗೆ ಉಗ್ರದೇವನು ಹಿಂಸೆ ಕೊಡುವುದಿಲ್ಲ.

೫೯. ಸೂರ್ಯನಂತೆ ಪ್ರಕಾಶಿಸುತ್ತಲಿದ್ದ ಕುಮಾರನನ್ನು ನೋಡಿ ಬ್ರಹ್ಮನು ಪುನಃ ಎಂಟನೆಯ ನಾಮವಿಭೂತಿಯ ವರ್ಣನೆಯನ್ನು ಮುಂದುವರಿಸಿದನು. ಕುಮಾರನೆ! ನಿನಗೆ ಮಹಾದೇವನೆಂದು ಎಂಟನೆಯ ಹೆಸರು ನನ್ನಿಂದ ಕೊಡಲ್ಪಟ್ಟಿರುವುದಲ್ಲವೆ.

೬೦. ಆ ಮಹಾದೇವ ಎಂಬ ಅಷ್ಟಮನಾಮಕ್ಕೆ ಚಂದ್ರನು ಅಷ್ಟಮಮೂರ್ತಿಯಾಗಿರಲಿ. ಎಂದು ಹೇಳುತ್ತಿರುವಷ್ಟರಲ್ಲಿ ಆ ಪ್ರಭುವಾದ ಈಶ್ವರನಿಗೆ ಸಂಕಲ್ಪವೃತ್ತಿ

**ವಿವೇಶ ತಚ್ಚಂದ್ರಮಸಂ ಮಹಾದೇವಸ್ತತಃ ಶಶೀ ।**
**ತಸ್ಮಾದ್ವಿಭಾವ್ಯತೇ ಹ್ಯೇಷ ಮಹಾದೇವಸ್ತು ಚಂದ್ರಮಾಃ ॥ ೬೧ ॥**

**ಅಮಾವಾಸ್ಯಾಂ ನ ವೈ ಛಿಂದ್ಯಾದ್ವೃಕ್ಷಗುಲ್ಮೌಷಧೀರ್ದ್ವಿಜಃ ।**
**ಮಹಾದೇವಃ ಸ್ಮೃತಃ ಸೋಮಸ್ತಸ್ಮಾತ್ಮಾ ಹ್ಯೌಷಧೀಗಣಃ ॥ ೬೨ ॥**

**ಏವಂ ಯೋ ವರ್ತತೇ ಚೇಹ ಸದಾ ಪರ್ವಣಿ ಪರ್ವಣಿ ।**
**ನ ಹಂತಿ ತಂ ಮಹಾದೇವೋ ಯ ಏವಂ ವೇದ ತಂ ಪ್ರಭುಮ್॥ ೬೩ ॥**

**ಗೋಪಾಯತಿ ದಿವಾಽಽದಿತ್ಯಃ ಪ್ರಜಾ ನಕ್ತಂ ತು ಚಂದ್ರಮಾಃ ।**
**ಏಕರಾತ್ರೌ ಸಮೇಯಾತಾಂ ಸೂರ್ಯಾಚಂದ್ರಮಸಾವುಭೌ ॥ ೬೪ ॥**

---

ಗಳನ್ನುಂಟುಮಾಡುತ್ತಲಿದ್ದ ಮನಸ್ಸು ಅದನ್ನು ಬಿಟ್ಟು ಚಂದ್ರನನ್ನು ಪ್ರವೇಶ ಮಾಡಿತು.

೬೧. ಆಗ ಚಂದ್ರನಿಗೆ ಮಹಾದೇವನ ಮನಸ್ಸೆಂಬ ಅಂಶ ಸಂಬಂಧವುಂಟಾಗಲು ಚಂದ್ರನು ಮಹಾದೇವರೂಪನಾದನು. ಪ್ರಾಜ್ಞರು ಚಂದ್ರನನ್ನು ಮಹಾದೇವ ರೂಪದಿಂದ ವಿಶೇಷವಾಗಿ ಭಾವಿಸುತ್ತಾರೆ.

೬೨. ಅಮಾವಾಸ್ಯಾ ತಿಥಿಯಲ್ಲಿ ದ್ವಿಜನು ವೃಕ್ಷ, ಪೊದೆ, ಓಷಧಿಗಳನ್ನು ಛೇದನ ಮಾಡಬಾರದು. ಏಕೆಂದರೆ ಹಿಂದೆ ಹೇಳಿದಂತೆ ಚಂದ್ರನು ಮಹಾದೇವನ ವಿಭೂತಿ ರೂಪನಾಗಿರುವನಷ್ಟೆ. ಅಂತಹ ಚಂದ್ರನು "ಓಷಧೀಶ" ನೆಂಬ ಹೆಸರಿನಿಂದ ವೃಕ್ಷ ಮುಂತಾದುವುಗಳಿಗೆ ನಿಯಾಮಕನಾದ್ದರಿಂದ ಓಷಧಿಗಳೆಲ್ಲವೂ ಅವನ ರೂಪವು.

೬೩. ಪ್ರತಿಯೊಂದು ಪರ್ವಕಾಲದಲ್ಲಿ ಮಹಾದೇವಾಂಶದ ಮಹಿಮೆಯಿಂದ ಚಂದ್ರನು ಇರುವನೆಂದು ಯಾವ ಮನುಷ್ಯನು ಆ ಪ್ರಭುವನ್ನು ತಿಳಿದಿರುವನೋ ಅಂತಹ ಮನುಷ್ಯನನ್ನು ಮಹಾದೇವನು ಹಿಂಸೆಮಾಡುವುದಿಲ್ಲ.

೬೪. ಪ್ರತಿಯೊಂದು ಮಾಸ ದಿನಗಳಲ್ಲಿ ಸೂರ್ಯನು ಹಗಲಿನಲ್ಲಿ ಪ್ರಾಣಿವರ್ಗವನ್ನು ರಕ್ಷಿಸುತ್ತಾನೆ. ರಾತ್ರಿಯಲ್ಲಿ ಚಂದ್ರನು ಪಾಲಿಸುತ್ತಾನೆ. ಈ ರಕ್ಷಕರಾದ ಸೂರ್ಯಚಂದ್ರರು ಅಮಾವಾಸ್ಯಾ ಎಂಬ ಒಂದು ರಾತ್ರಿಯಲ್ಲಿ ಇಬ್ಬರೂ ಒಟ್ಟುಗೂಡುವರು.

ಅಮಾವಾಸ್ಯಾನಿಶಾಯಾಂ ತು ತಸ್ಯಾಂ ಯುಕ್ತಃ ಸದಾ ಭವೇತ್ ।
ರುದ್ರಾವಿಷ್ಟಂ ಸರ್ವಮಿದಂ ತನುಭಿರ್ನಾಮಭಿಶ್ಚ ಹ ॥ ೬೫॥

ಏಕಾಕೀ ಯಶ್ಚರತ್ಯೇಷ ಸೂರ್ಯೋಽಸೌ ರುದ್ರ ಉಚ್ಯತೇ ।
ಸೂರ್ಯಸ್ಯ ಯತ್ಪ್ರಕಾಶೇನ ವೀಕ್ಷಂತೇ ಚಕ್ಷುಷಾ ಪ್ರಜಾಃ ॥ ೬೬ ॥

ಮುಕ್ತಾತ್ಮಾ ಸುಸ್ಥಿತೋ ರುದ್ರಃ ಪಿಬತ್ಯಂಭೋ ಗಭಸ್ತಿಭಿಃ ।
ಅದ್ಯತೇ ಪೀಯತೇ ಚೈವ ಹ್ಯನ್ನಪಾನಾದಿಕಾಮ್ಯಯಾ ॥ ೬೭ ॥

ತನುರಂಬೂದ್ಭವಾ ಸಾ ವೈ ದೇಹೇಷ್ವೇವೋಪಚೀಯತೇ ।
ಯಯಾ ಧತ್ತೇ ಪ್ರಜಾಃ ಸರ್ವಾಃ ಸ್ಥಿರೀಭೂತೇನ ತೇಜಸಾ ॥ ೬೮ ॥

ಪಾರ್ಥಿವೀ ಸಾ ತನುಸ್ತಸ್ಯ ಸಾಧ್ವೀ ಧಾರಯತೇ ಪ್ರಜಾಃ ।
ಯಾ ಚ ಸ್ಥಿತಾ ಶರೀರೇಷು ಭೂತಾನಾಂ ಪ್ರಾಣವೃತ್ತಿಭಿಃ ॥ ೬೯ ॥

---

೬೫. ಆ ಅಮಾವಾಸ್ಯಾ ರಾತ್ರಿಯಲ್ಲಿ ಮಾನವನು ಜಿತೇಂದ್ರಿಯನಾಗಿ ರುದ್ರ ಮಹಿಮೆಯ ವಿಷಯದಲ್ಲಿ ಮನಸ್ಸನ್ನು ಸಮಾಧಾನಮಾಡಿಕೊಂಡಿರಬೇಕು. ಆಗ ಸಕಲ ಪ್ರಪಂಚವೂ ಮೇಲೆ ಹೇಳಿದ ರುದ್ರನ ನಾಮಗಳಿಂದಲೂ ತನುಗಳಿಂವಲೂ ವ್ಯಾಪ್ತವಾಗಿರುವುದು.

೬೬. ವಿಶಾಲವಾದ ಗಗನಾಂಗಣದಲ್ಲಿ ಏಕಾಕಿಯಾಗಿ ಸಂಚರಿಸುವ ಸೂರ್ಯನು ರುದ್ರನೆಂದು ಕರೆಯಲ್ಪಡುವನು, ಆ ಸೂರ್ಯನ ಪ್ರಕಾಶ ಬಲದಿಂದ ಸಮಸ್ತ ಪ್ರಜೆಗಳು ಚಕ್ಷುರಿಂದ್ರಿಯದಿಂದ ವಸ್ತುವನ್ನು ಸಾಕ್ಷಾತ್ಕರಿಸುವರು.

೬೭. ಅವಿದ್ಯಾ ಮುಂತಾದ ನಿಖಿಲಕ್ಲೇಶ ನಿರ್ಮುಕ್ತನಾದ ರುದ್ರನು ತನ್ನ ಕಿರಣಗಳಿಂದ ನೀರನ್ನು ಕುಡಿಯುತ್ತಾನೆ. ಪ್ರಪಂಚಕ್ಕೆ ಅನ್ನಪಾನಗಳನ್ನು ಒದಗಿಸಬೇಕೆಂಬ ಕಾಮನೆಯಿಂದ ಜಲವು ಸೂರ್ಯಕಿರಣಗಳಿಂದ ಆಹಾರವಾಗಿ ತಿನ್ನಲ್ಪಡುತ್ತದೆ. ಮತ್ತು ಕುಡಿಯಲ್ಪಡುತ್ತದೆ.

೬೮. ಜಲದಿಂದ ಹುಟ್ಟಿದ ಆ ರುದ್ರತನುವು ತನ್ನಿಂದ ಹುಟ್ಟಿದ ಅನ್ನಪಾನಾದಿ ರೂಪದಿಂದ ಪ್ರತಿ ಪ್ರಾಣಿಯ ದೇಹಗಳಲ್ಲಿ ಬೆಳೆಯುತ್ತದೆ.

೬೯. ಮತ್ತು ರುದ್ರನು ತನ್ನ ಸ್ಥಿರವಾದ ಮತ್ತು ತೇಜೋರೂಪವಾದ ಯಾವ

**ವಾತಾತ್ಮಿಕಾ ತು ಚೈಶಾನೀ ಸಾ ಪ್ರಾಣಃ ಪ್ರಾಣಿನಾಮಿಹ ।**
**ಪೀತಾಶಿತಾನಿ ಪಚತಿ ಭೂತಾನಾಂ ಜಠರೇಷ್ವಿಹ || ೭೦ ||**

**ತನುಃ ಪಾಶುಪತೀ ತಸ್ಯ ಪಾಚಕಃ ಸೋಽಗ್ನಿರುಚ್ಯತೇ ।**
**ಯಾನೀಹ ಸುಷಿರಾಣಿ ಸ್ಯುರ್ದೇಹೇಷ್ವಂತರ್ಗತಾನಿ ವೈ || ೭೧ ||**

**ವಾಯೋಃ ಸಂಚರಣಾರ್ಥಾನಿ ಭೀಮಾ ಸಾ ಪ್ರೋಚ್ಯತೇ ತನುಃ ।**
**ವೈತಾನ್ಯಾ ದೀಕ್ಷಿತಾನಾಂ ತು ಯಾ ಸ್ಥಿತಿರ್ಬ್ರಹ್ಮವಾದಿನಾಮ್ || ೭೨ ||**

**ತನುರುಗ್ರಾತ್ಮಿಕಾ ಸಾ ತು ತೇನೋಗ್ರೋ ದೀಕ್ಷಿತಃ ಸ್ಮೃತಃ ।**
**ಯತ್ತು ಸಂಕಲ್ಪಕಂ ತಸ್ಯ ಪ್ರಜಾಸ್ವಿಹ ಸಮಾಸ್ಥಿತಮ್ || ೭೩ ||**

**ಸಾ ತನುರ್ಮಾನಸೀ ತಸ್ಯ ಚಂದ್ರಮಾಃ ಪ್ರಾಣಿಷು ಸ್ಥಿತಃ ।**
**ನವೋ ನವೋ ಯೋಽಭವತಿ ಜಾಯಮಾನಃ ಪುನಃ ಪುನಃ || ೭೪ ||**

---

ಮೂರ್ತಿಯಿಂದ ಪ್ರಜೆಗಳನ್ನು ಧರಿಸಿರುವನೋ ಅದು ಪ್ರಜೆಗಳನ್ನು ಧರಿಸುವ ಶಕ್ತಿಯಿಂದ ಕೂಡಿದ ಉತ್ತಮವಾದ ಪೃಥಿವಿಯ ತನುವು

೭೦. ಪ್ರಾಣಿಗಳ ದೇಹಗಳಲ್ಲಿ ಪ್ರಾಣ ಅಪಾನ ಮುಂತಾದ ವೃತ್ತಿ ವಿಶೇಷಗಳಿಂದ ಸ್ಥಿತಿಯನ್ನು ಹೊಂದಿರುವುದು ರುದ್ರನ ಪ್ರಾಣವಾಯುವು ಪ್ರವೇಶಿಸಿದ ಈಶಾನ ಮೂರ್ತಿಯು. ಅದು ಸಕಲ ಪ್ರಾಣಿಗಳಿಗೂ ಪ್ರಾಣಸ್ವರೂಪವಾದುದು.

೭೧. ಪ್ರಾಣಿಗಳ ಜಠರದಲ್ಲಿ ಜಠರಾಗ್ನಿ ರೂಪದಿಂದ ವಾಸಮಾಡುತ್ತ ಅನ್ನ ಪಾನಾರ್ಥವಾಗಿ ಉಪಯೋಗಿಸಿದ ಆಹಾರ, ಪಾನ ವಸ್ತುಗಳನ್ನು ಪಾಕಮಾಡುವದು ಪಶುಪತಿಯೆಂದು ಕರೆಯಲ್ಪಡುವ ಪಾಚಕಶಕ್ತಿಯಿಂದ ಕೂಡಿದ ಅಗ್ನಿಯೆಂಬ ತನುವು.

೭೨. ಪ್ರಾಣಿ ದೇಹಗಳಲ್ಲಿ ಅಂತರ್ಗತವಾದ, ವಾಯುಸಂಚಾರಾರ್ಥವಾಗಿ ಕಲ್ಪಿಸಲ್ಪಟ್ಟ ಸುಷಿರ (ರಂಧ್ರ) ಗಳೆಂಬ ಆಕಾಶವು ರುದ್ರನ ವಿಭೂತಿಯೂ ಭೀಮನೆಂದು ಕರೆಯಲ್ಪಡುವ ತನುವೂ ಆಗಿದೆ.

೭೩. ಯಜ್ಞದೀಕ್ಷೆಯನ್ನು ಕೈಗೊಂಡಿರುವ ಬ್ರಹ್ಮವಾದಿಗಳಾದ ದೀಕ್ಷಿತರ ಶರೀರವು ರುದ್ರನ ಉಗ್ರನೆಂಬ ಸಂಜ್ಞೆಯಿಂದ ಕರೆಯಲ್ಪಡುವ ಮೂರ್ತಿಯು ಆದ್ದರಿಂದ ದೀಕ್ಷಿತನು ಉಗ್ರರೂಪನಾಗಿರುವನು.

೭೪. ಸಕಲ ಪ್ರಜಾವರ್ಗದಲ್ಲಿ ಸಂಕಲ್ಪಾದಿ ವೃತ್ತಿಗಳಿಂದ ಇದ್ದ ಮನಸ್ಸು

**ಪೀಯುತೇಽಸೌ ಯಥಾಕಾಲಂ ವಿಬುಧೈಃ ಪಿತೃಭಿಃ ಸಹ ।**
**ಮಹಾದೇವೋಽಮೃತಾತ್ಮಾ ಸ ಚಂದ್ರಮಾ ಅಮ್ಮಯಃ ಸ್ಮೃತಃ ॥೭೫॥**

**ತಸ್ಯ ಯಾ ಪ್ರಥಮಾ ನಾಮ್ನಾ ತನೂ ರೌದ್ರೀ ಪ್ರಕೀರ್ತಿತಾ ।**
**ಪತ್ನೀ ಸುವರ್ಚಲಾ ತಸ್ಯಾಃ ಪುತ್ರಶ್ಚಾಸ್ಯ ಶನೈಶ್ಚರಃ ॥ ೭೬ ॥**

**ಭವಸ್ಯ ಯಾ ದ್ವಿತೀಯಾ ತು ಆಪೋ ನಾಮ್ನಾ ತನುಃ ಸ್ಮೃತಾ ।**
**ತಸ್ಯಾ ಧಾತ್ರೀ ಸ್ಮೃತಾ ಪತ್ನೀ ಪುತ್ರಶ್ಚ ಉಶನಾ ಸ್ಮೃತಃ ॥ ೭೭ ॥**

**ಶರ್ವಸ್ಯ ಯಾ ತೃತೀಯಸ್ಯ ನಾಮ್ನೋ ಭೂಮಿಸ್ತನುಃ ಸ್ಮೃತಾ ।**
**ತಸ್ಯಾಃ ಪತ್ನೀ ವಿಕೇಶೀ ತು ಪುತ್ರೋಽಸ್ಯಾಂಗಾರಕಃ ಸ್ಮೃತಃ ॥ ೭೮ ॥**

---

ರುದ್ರನ ಮಾನಸಾಂಶ ಸಂಭೂತವಾದ ಚಂದ್ರನೆಂಬ ಮೂರ್ತಿಯು ಆ ಚಂದ್ರನು ಪುನಃ ಪುನಃ ಉದಯಿಸುತ್ತ ನವನವರೂಪಗಳನ್ನು ಧರಿಸಿ ಪ್ರಾಣಿಗಳಲ್ಲಿ ವ್ಯಷ್ಟಿ ಮನೋರೂಪದಿಂದ ಸ್ಥಿತಿಯನ್ನು ಹೊಂದಿರುವನು.

೭೫. ದೇವತೆಗಳೂ ಪಿತೃಗಳೂ ತಮ್ಮ ತಮ್ಮ ವಿಹಿತಕಾಲಗಳಲ್ಲಿ ಮಹಾದೇವಾಂಶರೂಪನೂ ಅಮೃತಸ್ವರೂಪನೂ ಜಲಮಯ ಕಿರಣಗಳುಳ್ಳವನೂ ಆದ ಚಂದ್ರನನ್ನು ಪಾನಮಾಡುತ್ತಾರೆ.

೭೬. ನೀಲಲೋಹಿತ ಕುಮಾರನಿಗೆ ರುದ್ರನೆಂಬ ಹೆಸರಿನಿಂದ ಕೀರ್ತಿಸಲ್ಪಟ್ಟಿರುವ ಪ್ರಥಮತನುವಿಗೆ ಸುವರ್ಚಲಾ ಎಂಬ ಪತ್ನಿಯೂ ಶನೈಶ್ಚರನೆಂಬ ಪುತ್ರನೂ ಇರುವರು.

೭೭. ಭವದೇವನಿಗೆ ಜಲವೆಂಬ ಯಾವ ದ್ವಿತೀಯ ತನುವು ಹಿಂದೆ ಹೇಳಲ್ಪಟ್ಟಿರುವುದೋ ಆ ತನುವಿಗೆ ಧಾತ್ರಿಯೆಂಬ ಪತ್ನಿಯೂ ಉಶನಾ ಎಂಬ ಪುತ್ರನೂ ಇರುವರೆಂದು ಮುನಿಗಳಿಂದ ಸ್ಮರಿಸಲ್ಪಟ್ಟಿರುವರು.

೭೮. ತೃತೀಯವಾದ ಶರ್ವ ಎಂಬ ಹೆಸರಿಗೆ ಭೂಮಿಯೆಂಬ ತನುವು ಹಿಂದೆ ಹೇಳಲ್ಪಟ್ಟಿರುವುದು. ಆ ತನುವಿಗೆ ವಿಕೇಶಿಯು ಭಾರ್ಯೆಯು ಮತ್ತು ಅಂಗಾರಕನು ಪುತ್ರನೆಂದು ಹೇಳಲ್ಪಟ್ಟಿರುವರು.

**ಈಶಾನಸ್ಯ ಚತುರ್ಥಸ್ಯ ನಾಮ್ನಾ ವಾತಸ್ತನುಸ್ತು ಯಾ ।**
**ತಸ್ಯಾಃ ಪತ್ನೀ ಶಿವಾ ನಾಮ ಪುತ್ರಶ್ಚಾಸ್ಯಾ ಮನೋಜವಃ ॥ ೭೯ ॥**

**ಅವಿಜ್ಞಾತಗತಿಶ್ಚೈವ ದ್ವೌ ಪುತ್ರೌ ಚಾನಿಲಸ್ಯ ತು ।**
**ನಾಮ್ನಾ ಪಶುಪತೇರ್ಯಾ ತು ತನುರಗ್ನಿರ್ದ್ವಿಜೈಃ ಸ್ಮೃತಾ ॥ ೮೦ ॥**

**ತಸ್ಯಾಃ ಪತ್ನೀ ಸ್ಮೃತಾ ಸ್ವಾಹಾ ಸ್ಕಂದಸ್ತಸ್ಯಾಃ ಸುತಃ ಸ್ಮೃತಃ ।**
**ನಾಮ್ನಾ ಷಷ್ಠಸ್ಯ ಯಾ ಭೀಮಾ ತನುರಾಕಾಶಮುಚ್ಯತೇ ॥ ೮೧ ॥**

**ದಿಶಃ ಪತ್ನ್ಯಃ ಸ್ಮೃತಾಸ್ತಸ್ಯ ಸ್ವರ್ಗಶ್ಚಾಪಿ ಸುತಃ ಸ್ಮೃತಃ ।**
**ಉಗ್ರಾ ತನುಃ ಸಪ್ತಮಿಾ ಯಾ ದೀಕ್ಷಿತೋ ಬ್ರಾಹ್ಮಣಃ ಸ್ಮೃತಃ ॥೮೨॥**

**ದೀಕ್ಷಾ ಪತ್ನೀ ಸ್ಮೃತಾ ತಸ್ಯಾಃ ಸಂತಾನಃ ಪುತ್ರ ಉಚ್ಯತೇ ।**
**ನಾಮ್ನಾಽಷ್ಟಮಸ್ಯ ಮಹತಃ ತನುರ್ಯಾ ಚಂದ್ರಮಾಃ ಸ್ಮೃತಃ ॥ ೮೩ ॥**

---

೭೯. ನಾಲ್ಕನೆಯ ಈಶಾನ ದೇವನಿಗೆ ಅನುಗ್ರಹಿಸಲ್ಪಟ್ಟ ವಾಯುರೂಪವಾದ ಮೂರ್ತಿಗೆ ಶಿವಾ ಎಂಬ ಪತ್ನಿಯು ಇರುವಳು. ಮನೋಜವ, ಅವಿಜ್ಞಾತಗತಿಯೆಂಬ ಇಬ್ಬರು ಮಕ್ಕಳು ಆ ಶಿವಾ ಎಂಬ ಪತ್ನಿಯಲ್ಲಿ ವಾಯುದೇವನಿಗೆ ಜನಿಸಿದವರು.

೮೦. ದ್ವಿಜರಿಂದ ಪಶುಪತಿ ಎಂಬ ನಾಮಾಂಕಿತವಾಗಿ ಕೀರ್ತಿಸಲ್ಪಟ್ಟ ಅಗ್ನಿ ರೂಪವಾದ ಐದನೆಯ ಮೂರ್ತಿಗೆ ಸ್ವಾಹಾ ಎಂಬ ಪತ್ನಿ, ಸ್ಕಂದ ಎಂಬ ಪುತ್ರನೂ ಇರುವರು.

೮೧. ಭೀಮ ಎಂಬ ಷಷ್ಠನಾಮಾಂಕಿತವಾದ, ಆಕಾಶಸ್ವರೂಪವಾದ ರುದ್ರ ಮೂರ್ತಿಯು ದಿಕ್ಕುಗಳೆಂಬ ಪತ್ನಿಯರನ್ನೂ ಸ್ವರ್ಗವೆಂಬ ಪುತ್ರನನ್ನೂ ಹೊಂದಿರುವು ದೆಂದು ಮುನಿಗಳು ಹೇಳುತ್ತಾರೆ.

೮೨. ದೀಕ್ಷಿತ ಬ್ರಾಹ್ಮಣ ರೂಪದಿಂದ ಇರುವ ಉಗ್ರ ಎಂಬ ಹೆಸರಿನಿಂದ ಕರೆಯಲ್ಪಡುವ ಸಪ್ತಮ ಮೂರ್ತಿಗೆ ದೀಕ್ಷಾ ಮತ್ತು ಸಂತಾನ ಎಂಬ ಪತ್ನೀ ಮತ್ತು ಪುತ್ರರು ಇರುವರು.

೮೩. ಮಹಾದೇವನೆಂಬ ಹೆಸರುಳ್ಳ ಚಂದ್ರರೂಪವಾದ ಅಷ್ಟಮ ಮೂರ್ತಿಗೆ ರೋಹಿಣೀ ಎಂಬ ಪತ್ನಿಯಿರುವಳು. ಮತ್ತು ಆ ಪತ್ನಿಯಲ್ಲಿ ಬುಧನೆಂಬ ಪುತ್ರನು ಜನಿಸಿದನು.

ತಸ್ಯ ವೈ ರೋಹಿಣೀ ಪತ್ನೀ ಪುತ್ರಸ್ತಸ್ಯಾ ಬುಧಃ ಸ್ಮೃತಃ ।
ಇತ್ಯೇತಾಸ್ತನವಸ್ತಸ್ಯ ನಾಮಭಿಃ ಸಹ ಕೀರ್ತಿತಾಃ ॥ ೮೪ ॥

ತಾಸು ವಂದ್ಯೋ ನಮಸ್ಯಶ್ಚ ಪ್ರತಿನಾಮತನೂಷು ವೈ ।
ಸೂರ್ಯೇಽಪ್ಸ್ವುರ್ವ್ಯಾಂ ತಥಾ ವಾಯಾವಗ್ನೌ ವ್ಯೋಮ್ನ್ಯಥ ದೀಕ್ಷಿತೇ ॥ ೮೫ ॥

ಭಕ್ತ್ಯೈಸ್ತಥಾ ಚಂದ್ರಮಸಿ ಭಕ್ತ್ಯಾ ವಂದ್ಯಸ್ತು ನಾಮಭಿಃ ।
ಏವಂ ಯೋ ವೇತ್ತಿ ತಂ ದೇವಂ ತನುಭಿರ್ನಾಮಭಿಶ್ಚ ಹ ॥ ೮೬ ॥

ಪ್ರಜಾವಾನೇತಿ ಸಾಯುಜ್ಯಮೀಶ್ವರಸ್ಯ ಭವಸ್ಯ ಸಃ ।
ಇತ್ಯೇತದ್ವೋ ಮಯಾಪ್ರೋಕ್ತಂ ಗುಹ್ಯಂ ಭೀಮಸ್ಯ ಯಶಸಃ ॥ ೮೭ ॥

---

೮೪. ಈ ರೀತಿಯಾಗಿ ನಾಮ, ಪತ್ನೀ, ಮತ್ತು ಪುತ್ರರೆಂಬ ಸಕಲ ಪರಿವಾರ ಸಮೇತವಾಗಿ ರುದ್ರನ ಅಷ್ಟಮೂರ್ತಿಗಳು ಕೀರ್ತಿಸಲ್ಪಟ್ಟಿವೆ.

೮೫. ಆಯಾಯ ಪ್ರತಿಯೊಂದು ನಾಮ ಮತ್ತು ತನುಗಳಲ್ಲಿ ರುದ್ರನು ವಂದ್ಯನೂ ಪೂಜ್ಯನೂ ಆಗಿರುವನು. ಹಿಂದೆ ಹೇಳಿರುವ ಕ್ರಮದಿಂದ ಸೂರ್ಯ, ಜಲ, ಪೃಥಿವೀ, ವಾಯು, ಅಗ್ನಿ, ಆಕಾಶ, ದೀಕ್ಷಿತ, ಮತ್ತು ಚಂದ್ರ ಎಂಬ ಅಷ್ಟ ಮೂರ್ತಿಗಳಲ್ಲಿ ಆಯಾಯ ನಾಮಗಳನ್ನು ಉಚ್ಚರಿಸಿ ಭಕ್ತಿಯಿಂದ ನಮಸ್ಕಾರ ಮಾಡಲು ಅರ್ಹನಾಗಿರುವನು.

೮೬. ತನು ಮತ್ತು ನಾಮಗಳಿಂದ ಹಿಂದೆ ಹೇಳಿರುವಂತೆ ಯಾವ ಮನುಷ್ಯನು ಆ ಸಕಲ ನಿಯಾಮಕನಾದ ಈಶ್ವರನನ್ನು ತಿಳಿದು ಧ್ಯಾನಿಸುವನೋ ಅಂತಹ ಉಪಾಸಕನು ಪ್ರಜಾದಿ ಫಲಗಳನ್ನು ಅನುಭವಿಸಿ ಈಶ್ವರ ಅಥವಾ ಭವದೇವನ ಸಾಯುಜ್ಯ ಮುಕ್ತಿಯನ್ನು ಹೊಂದುವನು.

೮೭. ಭೀಮದೇವನ ಯಶಸ್ಸಿನ ಪ್ರಖ್ಯಾಪಕವಾದ ರಹಸ್ಯಾಂಶವು ನಿಮಗೆ ನನ್ನಿಂದ ಉಪದೇಶಿಸಲ್ಪಟ್ಟಿತು.

**ಶನ್ನೋಽಸ್ತು ದ್ವಿಪದೇ ವಿಪ್ರಾಃ ಶನ್ನೋಽಸ್ತು ಚ ಚತುಷ್ಪದೇ ।**
**ಏತತ್ಪ್ರೋಕ್ತಮಿದಾನೀಂ ಚ ತನೂನಾಂ ನಾಮಭಿಃ ಸಹ ।**
**ಮಹಾದೇವಸ್ಯ ದೇವಸ್ಯ ಭೃಗೋಸ್ತು ಶೃಣುತ ಪ್ರಜಾಃ ॥ ೮೮ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ದಶಮೋಽಧ್ಯಾಯಃ**

---

೮೮. ದ್ವಿಜರೆ ! ಈ ನಾಮ ಮೂರ್ತಿಗಳ ಕೀರ್ತನವು ಪಾದದ್ವಯಗಳಿಂದ ಕೂಡಿದ ನಮ್ಮ ಪರಿವಾರದಲ್ಲಿ ಸುಖಕರವಾಗಲಿ, ಹಾಗೆ ಚತುಷ್ಪಾದಗಳಿಂದ ಕೂಡಿದ ಪರಿವಾರದಲ್ಲಿಯೂ ಸುಖಕರವಾಗಲಿ. ಮುನಿಗಳೇ ಈ ರೀತಿಯಾಗಿ ರುದ್ರನ ವಂಶದ ನಾಮಮೂರ್ತಿಗಳನ್ನು ಹೇಳಿದಂತೆ ಭೃಗುಮುನಿಯ ವಂಶವನ್ನು ಕೇಳಿರಿ.

ಬ್ರಹ್ಮಾಂಡ ಪುರಾಣದಲ್ಲಿ ದಶಮಾಧ್ಯಾಯವು ಸಮಾಪ್ತವು.

# ಏಕಾದಶೋಽಧ್ಯಾಯಃ

ಸೂತ ಉವಾಚ

ಭೃಗೋಃ ಖ್ಯಾತಿರ್ವಿಜಜ್ಞೇ ವೈ ಈಶ್ವರೌ ಸುಖದುಃಖಯೋಃ ।
ಶುಭಾಶುಭಪ್ರದಾತಾರೌ ಸರ್ವಪ್ರಾಣಿಭೃತಾಮಿಹ ॥ ೧ ॥

ದೇವೌ ಧಾತೃವಿಧಾತಾರೌ ಮನ್ವನ್ತರವಿಚಾರಿಣೌ ।
ತಯೋರ್ಜ್ಯೇಷ್ಠಾ ತು ಭಗಿನೀ ದೇವೀ ಶ್ರೀರ್ಲೋಕಭಾವಿನೀ ॥ ೨ ॥

ಸಾ ತು ನಾರಾಯಣಂ ದೇವಂ ಪತಿಮಾಸಾದ್ಯ ಶೋಭನಾ ।
ನಾರಾಯಣಾತ್ಮಜೌ ತಸ್ಯಾಂ ಬಲೋನ್ಮಾದೌ ವ್ಯಜಾಯತಾಮ್ ॥ ೩ ॥

ಬಲಸ್ಯ ತೇಜಃ ಪುತ್ರಸ್ತು ಉನ್ಮಾದಸ್ಯ ತು ಸಂಶಯಃ ।
ತಸ್ಯಾನ್ಯೇ ಮಾನಸಾಃ ಪುತ್ರಾ ಆಸನ್ ವ್ಯೋಮವಿಚಾರಿಣಃ ॥ ೪ ॥

ಯೇ ವಹನ್ತಿ ವಿಮಾನಾನಿ ದೇವಾನಾಂ ಪುಣ್ಯಕರ್ಮಣಾಮ್ ।
ಮೇರುಕನ್ಯೇ ಸ್ಮೃತೇ ಭಾರ್ಯೇ ವಿಧಾತುರ್ಧಾತುರೇವ ಚ ॥ ೫ ॥

---

ಸೂತಮಹರ್ಷಿಯು ಹೇಳಿದನು.

೧-೨. ಭೃಗು ಮಹರ್ಷಿಯ ಪತ್ನಿಯಾದ ಖ್ಯಾತಿ ದೇವಿಯು ಸುಖ ದುಃಖ ಗಳಿಗೆ ನಿಯಾಮಕರೂ ಎಲ್ಲ ಜೀವ ವರ್ಗಕ್ಕೆ ಶುಭಾಶುಭ ಫಲಗಳನ್ನು ಕೊಡುವ ವರೂ ಮನ್ವಂತರದಲ್ಲಿರುವವರೂ ಆದ "ಧಾತ" "ವಿಧಾತ" ಎಂಬ ಇಬ್ಬರು ದೇವರನ್ನು ಜನಿಸಿದಳು.

ಲೋಕ ಸ್ಥಿತಿಗೆ ಕಾರಣಳಾದ "ಶ್ರೀದೇವಿ" ಯೆಂಬುವಳು ಆ ಧಾತ-ವಿಧಾತ ಎಂಬ ಈರ್ವರಿಗೆ ಹಿರಿಯವಳಾಗಿ ಹುಟ್ಟಿದಳು.

೩. ಆಕೆಯು ಶ್ರೀಮನ್ನಾರಾಯಣನನ್ನು ಪತಿಯನ್ನಾಗಿ ವರಿಸಿ ಸೌಮಂಗಲ್ಯ ವನ್ನು ಹೊಂದಿ "ಬಲ-ಉನ್ಮಾದ" ಎಂಬ ಇಬ್ಬರು ಮಕ್ಕಳನ್ನು ಪಡೆದಳು.

೪-೫. ಬಲ ನೆಂಬುವನಿಗೆ "ತೇಜ" ಎಂಬ ಮಗನೂ ಉನ್ಮಾದ ನೆಂಬುವನಿಗೆ "ಸಂಶಯ" ಎಂಬ ಮಗನೂ ಹುಟ್ಟಿದರು.

ಆಯತಿರ್ನಿಯತಿಶ್ಚೈವ ತಯೋಃ ಪುತ್ರೌ ದೃಢವ್ರತೌ ।
ಪ್ರಾಣಶ್ಚೈವ ಮೃಕಣ್ಡುಶ್ಚ ಬ್ರಹ್ಮಕೋಶೌ ಸನಾತನೌ ॥ ೬ ॥

ಮನಸ್ವಿನ್ಯಾಂ ಮೃಕಣ್ಡುಸ್ಯ ಮಾರ್ಕಣ್ಡೇಯೋ ಬಭೂವ ಹ ।
ಸುತೋ ವೇದಶಿರಾಸ್ತಸ್ಯ ಧೂಮ್ರಪತ್ನ್ಯಾಮಜಾಯತ ॥ ೭ ॥

ಪೀವರ್ಯಾಂ ವೇದಶಿರಸಃ ಪುತ್ರಾ ವಂಶಕರಾಃ ಸ್ಮೃತಾಃ ।
ಮಾರ್ಕಣ್ಡೇಯಾಃ ಸಮಾಖ್ಯಾತಾ ಋಷಯೋ ವೇದಪಾರಗಾಃ ॥ ೮ ॥

ಪ್ರಾಣಸ್ಯ ಪುಣ್ಡರೀಕಾಯಾಂ ದ್ಯುತಿಮಾನಾತ್ಮಜೋಽಭವತ್ ।
ಉನ್ನತಶ್ಚ ದ್ಯುತಿಮತಃ ಸ್ವನವಾತಶ್ಚ ತಾವುಭೌ ॥ ೯ ॥

---

ಕೂಟ ಪುರುಷನಾದ ಭೃಗುಮಹರ್ಷಿಗೆ ಇನ್ನೂ ಅನೇಕರಾದ ಪುಣ್ಯಕರ್ಮಗಳನ್ನಾಚರಿಸಿ ದೇವಲೋಕದಲ್ಲಿ ದೇವ ಜನ್ಮವನ್ನು ಹೊಂದಿದವರ ವಿಮಾನಗಳನ್ನು ವಹಿಸಿ ಗಗನದಲ್ಲಿ ಸಂಚರಿಸುವ ಮಾನಸ ಪುತ್ರರೂ ಸಹ ಇದ್ದರು.

ಧಾತ-ವಿಧಾತ ಎಂಬವರಿಗೆ ಆಯತಿ ನಿಯತಿ ಎಂಬ ಇಬ್ಬರು ಪತ್ನಿಯರು ಮೇರು ಪರ್ವತದಂತೇ ಸ್ಥಿರ ಸ್ವಭಾವವುಳ್ಳವರಾಗಿದ್ದರು.

೬. ಆ. ಆಯತಿ ನಿಯತಿ ಎಂಬ ಈರ್ವರಿಗೆ ಬಹು ಪ್ರಾಚೀನರೂ ಬ್ರಹ್ಮಜ್ಞಾನವಂತರೂ ದೃಢವಾದ ಸತ್ಕರ್ಮಾಚರಣೆಯುಳ್ಳವರೂ ಆದ ಪ್ರಾಣ ಮೃಕಂಡ ಎಂಬ ಇಬ್ಬರು ಮಕ್ಕಳು ಜನಿಸಿದರು.

೭. ಇವರಲ್ಲಿ ಮೃಕಣ್ಡು ಎಂಬುವನಿಗೆ ತನ್ನ ಪತ್ನಿ ಮನಸ್ವಿನೀ ಎಂಬಾಕೆಯಲ್ಲಿ ಮಾರ್ಕಣ್ಡೇಯ ನೆಂಬ ಪುತ್ರನು ಜನಿಸಿದನು. ಮಾರ್ಕಣ್ಡೇಯನಿಗೆ ಧೂಮ್ರಾ ಎಂಬ ತನ್ನ ಸತಿಯಲ್ಲಿ ವೇದಶಿರಾ ಎಂಬ ಪುತ್ರನು ಹುಟ್ಟಿದನು.

೮. ವೇದಶಿರನಿಗೆ ಪೀವರೀ ಎಂಬ ಧರ್ಮ ಪತ್ನಿಯಲ್ಲಿ ವೇದಪಾರಂಗತರೂ ಮಾರ್ಕಣ್ಡೇಯ ಎಂಬ ಪ್ರಸಿದ್ಧಿಯನ್ನು ಹೊಂದಿದವರೂ ಶಾಶ್ವತವಾಗಿ ವಂಶವನ್ನು ಪ್ರತಿಷ್ಠಿಸುವವರೂ ಆದ ಮಕ್ಕಳು ಹುಟ್ಟಿದರು.

೯. ಪ್ರಾಣನೆಂಬುವನಿಗೆ ಪುಂಡರಿಕಾ ಎಂಬ ಸತಿಯಲ್ಲಿ ದ್ಯುತಿಮಂತ ಎಂಬ ಮಗನು ಹುಟ್ಟಿದನು.

ದ್ಯುತಿಮಂತನಿಗೆ ಉನ್ನತ, ಸ್ವನವಾತ ಎಂಬ ಇಬ್ಬರು ಮಕ್ಕಳು ಜನಿಸಿದರು.

ತಯೋಃ ಪುತ್ರಾಶ್ಚ ಪೌತ್ರಾಶ್ಚ ಭಾರ್ಗವಾಣಾಂ ಪರಸ್ಪರಾತ್ ।
ಸ್ವಾಯಂಭುವೇಽನ್ತರೇಽತೀತಾ ಮರೀಚೇಃ ಶೃಣುತ ಪ್ರಜಾಃ ॥ ೧೦ ॥

ಪತ್ನೀ ಮರೀಚೇಃ ಸಂಭೂತಿರ್ವಿಜಜ್ಞೇ ಹ್ಯಾತ್ಮಸಂಭವಮ್ ।
ಪ್ರಜಾಪತೇಃ ಪೂರ್ಣಮಾಸಂ ಕನ್ಯಾಶ್ಚೇಮಾ ನಿಬೋಧತ ॥ ೧೧ ॥

ಕೃಷ್ಟಿರ್ವೃಷ್ಟಿಸ್ತ್ವಿಷಾ ಚೈವ ತಥಾ ಚೋಪಚಿತಿಃ ಶುಭಾ ।
ಪೂರ್ಣಮಾಸಃ ಸರಸ್ವತ್ಯಾಂ ಪುತ್ರೌ ದ್ವಾವುದಪಾದಯತ್ ॥ ೧೨ ॥

ವಿರಜಂ ಚೈವ ಧರ್ಮಿಷ್ಠಂ ಪರ್ವಶಂ ಚೈವ ತಾವುಭೌ ।
ವಿರಜಸ್ಯಾತ್ಮಜೋ ವಿದ್ವಾನ್ ಸುಧಾಮಾ ನಾಮ ವಿಶ್ರುತಃ ॥ ೧೩ ॥

ಸುಧಾಮಾ ಸ ತು ವೈರಾಜಃ ಪ್ರಾಚೀಂ ದಿಶಮುಪಾಶ್ರಿತಃ ।
ಲೋಕಪಾಲಃ ಸ ಧರ್ಮಾತ್ಮಾ ಗೌರೀಪುತ್ರಃ ಪ್ರತಾಪವಾನ್ ॥ ೧೪ ॥

ಪರ್ವಶಃ ಪರ್ವಗಣನಾಂ ಪ್ರವಿಷ್ಟಃ ಸ ಮಹಾಯಶಾಃ ।
ಪರ್ವಶಃ ಪರ್ವಶಾಯಾಂ ತು ಜನಯಾಮಾಸ ವೈ ಸುತೌ ॥ ೧೫ ॥

---

೧೦. ಅವರಿಬ್ಬರಿಗೆ ಅನೇಕ ಮಕ್ಕಳೂ ಮೊಮ್ಮಕ್ಕಳೂ ಹುಟ್ಟಿ ಕ್ರಮವಾಗಿ ಭಾರ್ಗವ ವಂಶದವರನೇಕರು ಸ್ವಾಯಂಭುವ ಎಂಬ ಮನ್ವಂತರದಲ್ಲಿ ಇದ್ದರು. ಮುಂದೆ ಮರೀಚಿ ಋಷಿಯ ಪ್ರಜೆಗಳನ್ನು ನಿರೂಪಿಸುವೆನು, ಕೇಳಿರಿ.

೧೧. ಮರೀಚಿ ಪ್ರಜಾಪತಿಯು ಪತ್ನಿಯಾದ "ಸಂಭೂತಿ" ಎಂಬುವಳು ಪೂರ್ಣಮಾಸ ಎಂಬ ಒಬ್ಬ ಪುತ್ರನನ್ನೂ ಕೃಷ್ಟಿ, ವೃಷ್ಟಿ, ತ್ವಿಷಾ, ಉಪಚಿತಿ ಎಂಬ ಸುಲಕ್ಷಣೋಪೇತರಾದ ನಾಲ್ಕು ಕನ್ಯೆಯರನ್ನೂ ಪ್ರಸವಿಸಿದಳು.

೧೨-೧೩. ಪೂರ್ಣಮಾಸನಿಗೆ ತನ್ನ ಪತ್ನಿ ಸರಸ್ವತಿ ಎಂಬುವಳಲ್ಲಿ ಧರ್ಮಿಷ್ಠನಾದ ವಿರಜ ಮತ್ತು ಪರ್ವಶ ಎಂಬ ಇಬ್ಬರು ಮಕ್ಕಳು ಜನಿಸಿದರು. ವಿರಜನೆಂಬುವನಿಗೆ ಸುಧಾಮನೆಂದು ಲೋಕಪ್ರಸಿದ್ಧನಾದ ಮತ್ತು ಜ್ಞಾನಿಯಾದ ಮಗನು ಹುಟ್ಟಿದನು.

೧೪. ಆ ವಿರಜ ಪುತ್ರನೂ ಗೌರೀ ಎಂಬಾಕೆಯ ಮಗನೂ ಆದ ಸುಧಾಮನು ಪೂರ್ವ ದಿಗನ್ತವನ್ನು ಹೊಂದಿ ಪ್ರತಾಪವಂತನೂ ಧರ್ಮಿಷ್ಠನೂ ಎನಿಸಿದ ಲೋಕಪಾಲಾಧಿಕಾರಕ್ಕೆ ಬಂದನು.

೧೫. ಪರ್ವಶನೆಂಬ ಮತ್ತೊಬ್ಬನು ಪರ್ವದೇವತೆಗಳ ಗುಂಪನ್ನು ಸೇರಿ ಮಹಾ

ಯಜುರ್ಧಾಮಂ ಚ ಧೀಮನ್ತಂ ಸ್ತಂಭಕಾಶ್ಯಪಮೇವ ಚ।
ತಯೋರ್ಗೋತ್ರಕರೌ ಪುತ್ರೌ ಜಾತೌ ಸನ್ನ್ಯಾಸನಿಶ್ಚಿತೌ ॥ ೧೬ ॥

ಸ್ಮೃತಿಸ್ತ್ವಂಗಿರಸಃ ಪತ್ನೀ ಜಜ್ಞೇ ಸಾ ಹ್ಯಾತ್ಮಸಂಭವಾನ್।
ಪುತ್ರೌ ಕನ್ಯಾಶ್ಚತಸ್ರಶ್ಚ ಪುಣ್ಯಾಸ್ತಾ ಲೋಕವಿಶ್ರುತಾಃ ॥ ೧೭ ॥

ಸಿನೀವಾಲೀ ಕುಹೂಶ್ಚೈವ ರಾಕಾ ಚಾನುಮತಿಸ್ತಥಾ।
ತಥೈವ ಭರತಾಗ್ನಿಂ ಚ ಕೀರ್ತಿಮನ್ತಂ ಚ ತಾವುಭೌ ॥ ೧೮ ॥

ಅಗ್ನೇಃ ಪುತ್ರಂ ಚ ಪರ್ಜನ್ಯಂ ಸದ್ವತೀ ಸುಷುವೇ ತಥಾ।
ಹಿರಣ್ಯರೋಮಾ ಪರ್ಜನ್ಯೋ ಮಾರೀಚ್ಯಾಮುದಪದ್ಯತ ॥ ೧೯ ॥

ಆಭೂತಸಂಪ್ಲವಸ್ಥಾಯೀ ಲೋಕಪಾಲಃ ಸ ವೈ ಸ್ಮೃತಃ।
ಜಜ್ಞೇ ಕೀರ್ತಿಮತಶ್ಚಾಪಿ ಧೇನುಕಾವೀತಕಲ್ಮಷೌ ॥ ೨೦ ॥

---

ಕೀರ್ತಿವಂತನಾದನು. ಮತ್ತು ಪರ್ವಶಿ ಎಂಬ ಪತ್ನಿಯಲ್ಲಿ ಅತಿ ಬುದ್ಧಿಶಾಲಿಯಾದ ಯಜುರ್ಧಾಮ, ಸ್ತಂಭಕಾಶ್ಯಪ ಎಂಬ ಈರ್ವರು ಮಕ್ಕಳನ್ನು ಹೊಂದಿದನು.

೧೬. ಯಜುರ್ಧಾಮ–ಸ್ತಂಭಕಾಶ್ಯಪ ಎಂಬ ಇಬ್ಬರಿಗೆ ಕ್ರಮವಾಗಿ ಸನ್ನ್ಯಾಸ ನಿಶ್ಚಿತ ಎಂಬ ಇಬ್ಬರು ಮಕ್ಕಳು ವಂಶಾಭಿವೃಧಿಯನ್ನು ಮಾಡಲು ದಕ್ಷರಾಗಿ ಜನಿಸಿದರು.

೧೭-೧೮. ಅಂಗಿರ ಋಷಿಯ ಧರ್ಮಪತ್ನಿ ಸ್ಮೃತಿ ಎಂಬುವಳು ಅಗ್ನಿ-ಕೀರ್ತಿಮಂತ ಎಂಬ ಇಬ್ಬರು ಪುತ್ರರನ್ನೂ ಸಿನೀವಾಲೀ, ಕುಹೂ, ರಾಕಾ, ಅನುಮತಿ ಎಂಬ ನಾಲ್ಕು ಜನ ಲೋಕ ಪ್ರಸಿದ್ಧರೂ ಪವಿತ್ರರೂ ಆದ ಹೆಣ್ಣುಮಕ್ಕಳನ್ನೂ ಪ್ರಸವಿಸಿದಳು.

೧೯. ಅಗ್ನಿಯ ಪತ್ನಿ ಸದ್ವತಿ ಎಂಬಾಕೆಯು ಪರ್ಜನ್ಯ ಎಂಬ ಪುತ್ರನನ್ನು ಪ್ರಸವಿಸಿದಳು.

ಪರ್ಜನ್ಯನಿಗೆ ಮಾರೀಚಿ ಎಂಬ ಪತ್ನಿಯಲ್ಲಿ ಹಿರಣ್ಯರೋಮಾ ಎಂಬ ಮಗನು ಹುಟ್ಟಿದನು. ಅವನು ಆಕಲ್ಪಾನ್ತಸ್ಥಾಯಿಯಾಗಿ ಲೋಕಪಾಲಾಧಿಕಾರದಲ್ಲಿರುವವ ನೆಂದು ಋಷಿಗಳಿಂದ ಸ್ಮರಿಸಲ್ಪಟ್ಟಿರುತ್ತಾನೆ.

೨೦. ಕೀರ್ತಿಮಂತನ ಸತಿ ಧೇನುಕೆ ಎಂಬುವಳು ಪಾಪವೆಂಬ ಕಲ್ಮಷಸಂಗವಿ ಲ್ಲದ ಅಂಗಿರ ವಂಶದವರಲ್ಲಿ ಶ್ರೇಷ್ಠರಾದ ಚರಿಷ್ಣು-ಧೃತಿಮಂತನೆಂಬ ಇಬ್ಬರು ಮಕ್ಕ ಳನ್ನು ಹಡೆದಳು.

ಚರಿಷ್ಣುಂ ಧೃತಿಮನ್ತಂ ಚ ಉಭಾವಂಗಿರಸಾಂ ವರೌ।
ತಯೋಃ ಪುತ್ರಾಶ್ಚ ಪೌತ್ರಾಶ್ಚ ಅತೀತಾ ವೈ ಸಹಸ್ರಶಃ ॥ ೨೧ ॥

ಅನಸೂಯಾ ವಿಜಜ್ಞೇ ವೈ ಪಂಚಾತ್ರೇಯಾನಕಲ್ಮಷಾನ್।
ಕನ್ಯಾಂ ಚೈವ ಶ್ರುತಿಂ ನಾಮ ಮಾತಾ ಶಂಖಪದಸ್ಯ ಸಾ ॥ ೨೨ ॥

ಕರ್ದಮಸ್ಯ ತು ಪತ್ನೀ ಸಾ ಪೌಲಹಸ್ಯ ಪ್ರಜಾಪತೇಃ।
ಸತ್ಯನೇತ್ರಶ್ಚ ಹವ್ಯಶ್ಚ ಆಪೋ ಮೂರ್ತಿಶ್ಶನೈಶ್ಚರಃ ॥ ೨೩ ॥

ಸೋಮಶ್ಚ ಪಂಚಮಸ್ತೇಷಾಮಾಸೀತ್ಸ್ವಾಯಂಭುವೇನ್ತರೇ।
ಯಾಮದೇವೈಃ ಸಹಾತೀತಾಃ ಪಂಚಾತ್ರೇಯಾಃ ಪ್ರಕೀರ್ತಿತಾಃ ॥೨೪॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಆತ್ರೇಯಾಣಾಂ ಮಹಾತ್ಮನಾಮ್।
ಸ್ವಾಯಂಭುವೇನ್ತರೇಽತೀತಾಃ ಶತಶೋಽಥ ಸಹಸ್ರಶಃ ॥ ೨೫ ॥

ಪ್ರೀತ್ಯಾಂ ಪುಲಸ್ತ್ಯಭಾರ್ಯಾಯಾಂ ದಾನಾಗ್ನಿ ಸ್ತತ್ಸುತೋಽಭವತ್।
ಪೂರ್ವಜನ್ಮನಿ ಸೋಽಗಸ್ತ್ಯಃ ಸ್ಮೃತಃ ಸ್ವಾಯಂಭುವೇಽನ್ತರೇ ॥ ೨೬ ॥

---

೨೧. ಚರಿಷ್ಣು, ಧೃತಿಮಂತ, ಎಂಬೀರ್ವರಿಗೂ ಸಾವಿರಾರು ಮಂದಿ ಮಕ್ಕಳೂ ಮೊಮ್ಮಕ್ಕಳೂ ಹಿಂದಿನ ಕಲ್ಪದಲ್ಲಿ ಕಳೆದುಹೋಗಿರುತ್ತಾರೆ.

೨೨-೨೩. ಅತ್ರಿ ಮಹರ್ಷಿಯ ಪತ್ನಿಯಾದ ಅನಸೂಯಾದೇವಿಯು ಪುಲಹ ಪ್ರಜಾಪತಿಯ ವಂಶದಲ್ಲಿ ಹುಟ್ಟುವ ಕರ್ದಮ ಋಷಿಯ ಪತ್ನಿಯಾಗಿದ್ದು ಶಂಖಪದ ನೆಂಬ ಪುತ್ರನನ್ನು ಪ್ರಸವಿಸುವ ಶ್ರುತಿ ಎಂಬ ಕನ್ಯೆಯೊಬ್ಬಳನ್ನೂ ಸತ್ಯನೇತ್ರ ಹವ್ಯ, ಅಪೋಮೂರ್ತಿ, ಶನೈಶ್ಚರ, ಸೋಮ ಎಂಬ ಐದು ಜನ ಪುತ್ರರನ್ನೂ ಪ್ರಸವಿಸಿದಳು.

೨೪. ಈ ಐದು ಜನ ಆತ್ರೇಯರೂ ಸ್ವಾಯಂಭುವ ಮನ್ವನ್ತರದಲ್ಲಿ ಯಾಮಾಭಿಮಾನಿ ದೇವತೆಗಳ ಕೂಡ ಇದ್ದು ಗತಿಸಿರುತ್ತಾರೆ.

೨೫. ಮಹಾತ್ಮರಾದ ಆ ಆತ್ರೇಯರಿಗೆ ಸ್ವಾಯಂಭುವ ಮನ್ವನ್ತರದಲ್ಲಿ ಸಾವಿರಾರು ಮಂದಿ ಮಕ್ಕಳೂ ಮೊಮ್ಮಕ್ಕಳೂ ಹುಟ್ಟಿ ಕಳೆದುಹೋಗಿರುತ್ತಾರೆ.

೨೬. ಪುಲಸ್ತ್ಯ ಬ್ರಹ್ಮನಿಗೆ ತಮ್ಮ "ಪ್ರೀತಿ" ಎಂಬ ಪತ್ನಿಯಲ್ಲಿ ದಾನಾಗ್ನಿ

ಮಧ್ಯಮೋ ದೇವಬಾಹುಶ್ಚ ಅತ್ರಿನಾಮಾ ಚ ತೇ ತ್ರಯಃ।
ಸ್ವಸಾ ಯವೀಯಸೀ ತೇಷಾಂ ಸದ್ವತೀ ನಾಮ ವಿಶ್ರುತಾ ॥ ೨೭ ॥

ಪರ್ಜನ್ಯಜನನೀ ಶುಭ್ರಾ ಪತ್ನೀ ಚಾಗ್ನೇಃ ಸ್ಮೃತಾ ಶುಭಾ।
ಪೌಲಸ್ತ್ಯಸ್ಯ ಚ ಬ್ರಹ್ಮರ್ಷೇಃ ಪ್ರೀತಿಪುತ್ರಸ್ಯ ಧೀಮತಃ ॥ ೨೮ ॥

ದಾನಾಚ್ಚ ಸುಷುವೇ ಪತ್ನೀ ಸುಜಂಘೀ ಚ ಬಹೂನ್ ಸುತಾನ್।
ಪೌಲಸ್ತ್ಯಾ ಇತಿ ವಿಖ್ಯಾತಾಃ ಸ್ಮೃತಾಃ ಸ್ವಾಯಂಭುವೇಽನ್ತರೇ ॥ ೨೯ ॥

ಕ್ಷಮಾ ತು ಸುಷುವೇ ಪುತ್ರಾನ್ ಪುಲಸ್ತ್ಯಸ್ಯ ಪ್ರಜಾಪತೇಃ।
ತ್ರೇತಾಗ್ನಿವರ್ಚಸಃ ಸರ್ವೇ ಯೇಷಾಂ ಕೀರ್ತಿಃ ಪ್ರತಿಷ್ಠಿತಾ ॥ ೩೦ ॥

ಕರ್ದಮಶ್ಚೋರ್ವರೀವಾಂಶ್ಚ ಸಹಿಷ್ಣುಶ್ಚೇತಿ ತೇ ತ್ರಯಃ।
ಋಷಿಃ ಕನಕಪೀಠಶ್ಚ ಶುಭಾ ಕನ್ಯಾ ಚ ಪೀವರೀ ॥ ೩೧ ॥

---

ಎಂಬ ಮಗನು ಹುಟ್ಟಿದನು. ಆತನು ಸ್ವಾಯಂಭುವ ಮನ್ವನ್ತರದಲ್ಲಿ ಅಗಸ್ತ್ಯನೆಂದೆನಿಸಿರುವ ಪೂರ್ವಜನ್ಮವನ್ನು ಹೊಂದಿದ್ದವನಾಗಿದ್ದನು.

೨೭. ಅಂತಹ ದಾನಾಗ್ನಿಯ ಅನಂತರ ದೇವಬಾಹುವೆಂಬ ಮಧ್ಯಮ ಪುತ್ರನೂ ಅತ್ರಿ ಎಂಬ ಕನಿಷ್ಠಪುತ್ರನೂ ಇವರೆಲ್ಲರಿಗೂ ಕಿರಿಯ ತಂಗಿಯಾಗಿ ಸದ್ವತೀ ಎಂದು ಪ್ರಸಿದ್ಧಳಾದ ಕನ್ಯೆಯೂ ಜನಿಸಿದರು.

೨೮-೨೯. ಈ ಸದ್ವತೀ ಎಂಬುವಳು ಹಿಂದೆ ಹೇಳಿದ ಅಂಗಿರ ಋಷಿಯ ವಂಶದ ಅಗ್ನಿ ಎಂಬುವನ ಪತ್ನಿಯಾಗಿ ಪರ್ಜನ್ಯನೆಂಬ ಪುತ್ರನನ್ನು ಹಡೆದಿರುತ್ತಾಳೆ. ಪುಲಸ್ತ್ಯ ಬ್ರಹ್ಮರ್ಷಿಯ ಪುತ್ರನಾದ ಪ್ರೀತಿ ಎಂಬುವಳ ಕುಮಾರನಾದ ಬುದ್ಧಿಶಾಲಿಯಾದ ದಾನ ಎಂಬುವನಿಗೆ ಆತನ ಪತ್ನಿ ಸುಜಂಘೀ ಎಂಬುವಳಲ್ಲಿ ಅನೇಕ ಪುತ್ರರು ಹುಟ್ಟಿ ಎಲ್ಲರೂ ಸ್ವಾಯಂಭುವ ಮನ್ವಂತರದಲ್ಲಿ ಪೌಲಸ್ತ್ಯರು ಎಂದು ವಂಶನಾಮದಿಂದ ಪ್ರಸಿದ್ಧರಾಗಿ ಕಳೆದುಹೋದವರಾಗಿದ್ದಾರೆ.

೩೦-೩೧. ಪುಲಸ್ತ್ಯ ಪ್ರಜಾಪತಿಯ ಕ್ಷಮಾ ಎಂಬ ಪತ್ನಿಯು ತ್ರೇತಾಗ್ನಿಯಂತೆ ಬ್ರಹ್ಮವರ್ಚಸ್ಸಿನಿಂದ ಕೂಡಿದ ಶಾಶ್ವತ ಕೀರ್ತಿಯನ್ನು ಗಳಿಸಿದ ಕರ್ದಮ, ಉರ್ವರೀವಾನ್, ಸಹಿಷ್ಣು, ಕನಕಪೀಠ ಋಷಿ ಎಂಬ ನಾಲ್ಕು ಜನ ಪುತ್ರರನ್ನೂ ಸುಲಕ್ಷಣೋಪೇತಳಾದ ಪೀವರೀ ಎಂಬ ಕನ್ಯೆಯನ್ನೂ ಹೆತ್ತಳು.

ಕರ್ದಮಸ್ಯ ಶ್ರುತಿಃ ಪತ್ನೀ ಆತ್ರೇಯ್ಯಜನಯತ್ಸ್ವಯಮ್ ।
ಪುತ್ರಂ ಶಂಖಪದಂ ನಾಮ ಕನ್ಯಾಂ ಕಾಮ್ಯಾಂ ತಥೈವ ಚ ॥ ೩೨ ॥

ಸ ವೈ ಶಂಖಪದಃ ಶ್ರೀಮಾನ್ ಲೋಕಪಾಲಃ ಪ್ರಜಾಪತಿಃ ।
ದಕ್ಷಿಣಸ್ಯಾಂ ದಿಶಿ ರತಃ ಕಾಮ್ಯಾ ದತ್ತಾ ಪ್ರಿಯವ್ರತೇ ॥ ೩೩ ॥

ಕಾಮ್ಯಾ ಪ್ರಿಯವ್ರತಾಲ್ಲೇಭೇ ಸ್ವಾಯಂಭುವಸಮಾನ್ ಸುತಾನ್ ।
ದಶ ಕನ್ಯಾದ್ವಯಂ ಚೈವ ಯೈಃ ಕ್ಷತ್ರಂ ಸಂಪ್ರವರ್ತಿತಮ್ ॥ ೩೪ ॥

ಪುತ್ರಂ ಕನಕಪೀಠಸ್ಯ ಸಹಿಷ್ಣುಂ ನಾಮ ವಿಶ್ರುತಮ್ ।
ಯಶೋಧರಾ ವಿಜಜ್ಞೇ ವೈ ಕಾಮದೇವಂ ಸುಮಧ್ಯಮಾ ॥ ೩೫ ॥

ಕ್ರತೋಃ ಕ್ರತುಸಮಾನ್ ಪುತ್ರಾನ್ ವಿಜಜ್ಞೇ ಸಂನತಿಃ ಶುಭಾನ್ ।
ತೇಷಾಂ ಸ ಭಾರ್ಯಾ ಪುತ್ರೋ ವಾ ಸರ್ವೇ ತೇ ಊರ್ಧ್ವರೇತಸಃ॥೩೬॥

ತಾನಿ ಷಷ್ಟಿಸಹಸ್ರಾಣಿ ವಾಲಖಿಲ್ಯಾ ಇತಿ ಶ್ರುತಾಃ ।
ಅರುಣಸ್ಯಾಗ್ರತೋ ಯಾಂತಿ ಪರಿವಾರ್ಯ ದಿವಾಕರಮ್ ॥ ೩೭ ॥

---

೩೨. ಅತ್ರಿ ಮಹರ್ಷಿಯ ಪುತ್ರಿಯಾಗಿ ಜನಿಸಿ ಕರ್ದಮ ಮಹರ್ಷಿಗೆ ಧರ್ಮಪತ್ನಿಯಾದ ಶ್ರುತಿ ದೇವಿಯು ಶಂಖಪದ ನೆಂಬ ಪುತ್ರನನ್ನೂ ಕಾಮ್ಯಾ ಎಂಬ ಕನ್ಯೆಯನ್ನೂ ಹಡೆದಳು.

೩೩. ಆ ಶ್ರೀಮಂತನಾದ ಶಂಖಪದನು ಲೋಕಪಾಲಾಧಿಕಾರವುಳ್ಳ ಪ್ರಜಾಪತಿಗಳಲ್ಲಿ ಒಬ್ಬನಾಗಿದ್ದು ದಕ್ಷಿಣ ದಿಕ್ಕನ್ನು ಆಶ್ರಯಿಸಿದನು. ಕಾಮ್ಯಾ ಎಂಬ ಕನ್ನಿಕೆಯು ಪ್ರಿಯ ವ್ರತನಿಗೆ ಕನ್ಯಾದಾನ ವಿಧಿಯಿಂದ ಕೊಡಲ್ಪಟ್ಟಳು.

೩೪. ಹೀಗೆ ಪ್ರಿಯವ್ರತನಿಗೆ ಗೃಹಿಣಿಯಾಗಿ ಸೇರಿದ ಕಾಮ್ಯಾದೇವಿಯು ಸ್ವಾಯಂಭುವ ಮನುವಿಗೆ ಸಮಾನರಾದ ಕ್ಷತ್ರಿಯ ವಂಶ ಪ್ರವರ್ತಕರಾದ ಹತ್ತು ಜನ ಪುತ್ರರನ್ನೂ ಇಬ್ಬರು ಕನ್ಯೆಯರನ್ನೂ ಹಡೆದಳು.

೩೫. ಕನಕ ಪೀಠನ ಪತ್ನಿಯೂ ಸುಂದರಿಯೂ ಆದ ಯಶೋಧರಾದೇವಿಯು ಸಹಿಷ್ಣು ಎಂಬ ಪ್ರಖ್ಯಾತ ನಾಮವುಳ್ಳ ಕಾಮದೇವನಂತಿರುವ ಪುತ್ರನನ್ನು ಪಡೆದಳು.

೩೬-೩೭. ಸನ್ನತಿ ಎಂಬ ಕ್ರತು ಋಷಿಯ ಸತಿಯು ತಂದೆಗೆ ಸಮಾನರಾದ ಮಂಗಳಕರರಾದ ಅನೇಕ ಪುತ್ರರನ್ನು ಪಡೆದಳು. ಆ ಪುತ್ರರೆಲ್ಲರೂ ಪತ್ನೀ-ಪುತ್ರ

ಆಭೂತಸಂಪ್ಲವಾತ್ಸರ್ವೇ ಪತಂಗಸಹಚಾರಿಣಃ ।
ಸ್ವಸಾರೌ ತದ್ಯವೀಯಸ್ಯೌ ಪುಣ್ಯಾ ಸತ್ಯವತೀ ಚ ತೇ ॥ ೩೮ ॥

ಪರ್ವಶಸ್ಯ ಸ್ನುಷೇ ತೇ ವೈ ಪೂರ್ಣಮಾಸಸುತಸ್ಯ ತು ।
ಊರ್ಜಾಯಾಂ ತು ವಸಿಷ್ಠಸ್ಯ ವಾಸಿಷ್ಠಾಃ ಸಪ್ತ ಜಜ್ಞಿರೇ ॥ ೩೯ ॥

ಜ್ಯಾಯಸೀ ಚ ಸುತಾ ತೇಷಾಂ ಪುಂಡರೀಕಾ ಸುಮಧ್ಯಮಾ ।
ಜನನೀ ಸಾ ದ್ಯುತಿಮತಃ ಪ್ರಾಣಸ್ಯ ಮಹಿಷೀ ಪ್ರಿಯಾ ॥ ೪೦ ॥

ತಸ್ಯಾಸ್ತು ಯೇ ಯವೀಯಾಂಸೋ ವಾಸಿಷ್ಠಾಃ ಸಪ್ತ ವಿಶ್ರುತಾಃ ।
ರಕ್ಷೋಗತೋರ್ಧ್ವಬಾಹುಶ್ಚ ಸವನಃ ಪವನಶ್ಚ ಯಃ ॥ ೪೧ ॥

ಸುತಪಾಃ ಶಂಕುರಿತ್ಯೇತೇ ಸರ್ವೇ ಸಪ್ತರ್ಷಯಃ ಸ್ಮೃತಾಃ ।
ರಕ್ಷೋ ವರಾಂಗ್ಯಜನಯನ್ಮಾರ್ಕಂಡೇಯೀ ಯಶಸ್ವಿನೀ ॥ ೪೨ ॥

---

ಮುಂತಾದ ಸಂಸಾರ ಬಂಧನಕ್ಕೆ ಒಳಗಾಗದೇ ಊರ್ಧ್ವರೇತಸ್ಸ (ಸನ್ಯಾಸಿ) ಗಳಾಗಿ ಅರವತ್ತು ಸಾವಿರ ವಾಲಖಿಲ್ಯ ಋಷಿಗಳೆಂದು ಈಗಲೂ ಪ್ರಸಿದ್ಧರಾದ ಮಹರ್ಷಿಗಳಾಗಿ ಸೂರ್ಯನ ಸುತ್ತಲೂ ಇದ್ದುಕೊಂಡು ಅರುಣನೆಂಬ ಸೂರ್ಯ ಸಾರಥಿಯ ಮುಂದುಗಡೆಯಲ್ಲಿ ನಡೆಯುತ್ತಿರುತ್ತಾರೆ. ಅವರು ಕಲ್ಪಾವಸಾನವಾಗುವವರೆಗೂ ಸೂರ್ಯನಿಗೆ ಸಹಚರರಾಗಿರುವರು. ಅವರ ತಂಗಿಯರಾದ ಪುಣ್ಯಾ, ಸತ್ಯವತೀ ಎಂಬ ಇಬ್ಬರು ಮರೀಚಿ ವಂಶದ ಪೂರ್ಣಮಾಸನೆಂಬುವನ ಮಗನಾದ ಪರ್ವಶನಿಗೆ ಸೊಸೆಯರಾದರು. ಅಂದರೆ ಪರ್ವಶನಿಗೆ ಮಕ್ಕಳಾಗಿದ್ದ ಯಜುರ್ಧಾಮ, ಸ್ತಂಭಕಾಶ್ಯಪ ಎಂಬುವರನ್ನು ಮದುವೆಯಾದರು.

೩೯. ವಸಿಷ್ಠ ಋಷಿಗೆ ಊರ್ಜಾದೇವಿಯಲ್ಲಿ ಪುಂಡರಿಕಾ ಎಂಬ ಸುಂದರಿಯಾದ ಕನ್ಯೆಯು ಹಿರಿಯವಳಾಗಿಯೂ ಇತರ ಏಳುಮಂದಿ ಪುತ್ರರೂ ವಾಸಿಷ್ಠ ಎಂಬ ವಂಶದ ನಾಮಾಂಕನದಿಂದ ಪ್ರಸಿದ್ಧರಾಗಿ ಜನಿಸಿದರು.

೪೦. ಈ ಪುಂಡರೀಕಾ ಎಂಬುವಳು ಹಿಂದೆ ಹೇಳಿದ ಭೃಗು ವಂಶಕ್ಕೆ ಸೇರಿದ ಪ್ರಾಣನೆಂಬುವನ ಪಟ್ಟದ ರಾಣಿಯಾಗಿ ದ್ಯುತಿಮಂತನೆಂಬ ಮಗನನ್ನು ಹಡದವಳು ಆಗಿರುತ್ತಾಳೆ.

೪೧-೪೨. ಪುಂಡರೀಕೆಯೆಂಬುವಳ ತಮ್ಮಂದಿರು ಏಳುಮಂದಿ ವಸಿಷ್ಠ ಪುತ್ರರು

**ಪ್ರತೀಚ್ಯಾಂ ದಿಶಿ ರಾಜಾನಂ ಕೇತುಮನ್ತಂ ಪ್ರಜಾಪತಿಮ್ ।**
**ಗೋತ್ರಾಣಿ ನಾಮಭಿಸ್ತೇಷಾಂ ವಾಸಿಷ್ಠಾನಾಂ ಮಹಾತ್ಮನಾಮ್॥ ೪೩ ॥**

**ಸ್ವಾಯಂಭುವೇನ್ತರೇಽತೀತಾನ್ಯಗ್ನೇಸ್ತು ಶೃಣತ ಪ್ರಜಾಃ ।**
**ಇತ್ಯೇಷ ಋಷಿಸರ್ಗಸ್ತು ಸಾನುಬನ್ಧಃ ಪ್ರಕೀರ್ತಿತಃ ॥ ೪೪ ॥**

**ವಿಸ್ತರೇಣಾನುಪೂರ್ವ್ಯಾಚ್ಚ ಅಗ್ನೇರ್ವಕ್ಷ್ಯಾಮ್ಯತಃ ಪರಮ್ ।**
**ಇತಿ ಶ್ರೀ ಬ್ರಹ್ಮಾಣ್ಡ ಪುರಾಣೇ ಏಕಾದಶೋಽಧ್ಯಾಯಃ.**

---

ರಕ್ತ್ಯ, ಗರ್ಗ, ಊರ್ಧ್ವಬಾಹು, ಸವನ, ಪವನ, ಸುತಪ, ಶಂಕು ಎಂಬ ಹೆಸರಿನಿಂದ ಸಪ್ತರ್ಷಿಗಳಾಗಿ ಗಣಿಸಲ್ಪಟ್ಟವರಾಗಿರುತ್ತಾರೆ.

ಇವರಲ್ಲಿ ರಕ್ಷ ಎಂಬುವನ ಕೀರ್ತಿ ಸಂಪನ್ನೆಯೂ ಮಾರ್ಕಂಡೇಯಿ ಎಂದು ಪ್ರಖ್ಯಾತಳೂ ಆದ ಸತಿಯು ಪಶ್ಚಿಮ ದಿಕ್ಕಿನ ಅಧಿಪತಿಯಾದ ಕೇತುಮಂತನೆಂಬ ಪ್ರಜಾಪತಿಯನ್ನು ಪ್ರಸವಿಸಿದಳು.

೪೩. ಆ ಮಹಾತ್ಮರಾದ ವಸಿಷ್ಠಪುತ್ರರ ಹೆಸರುಗಳ ಸಹಿತ ಅವರ ವಂಶಗಳು ಸ್ವಾಯಂಭುವ ಮನ್ವಂತರದಲ್ಲಿ ಕಳೆದುಹೋದವುಗಳಾಗಿವೆ. ಇನ್ನು ಮುಂದೆ ಅಗ್ನಿಯ ವಂಶಾವಳಿಯನ್ನು ಕೇಳಿರಿ.

೪೪. ಈ ರೀತಿಯಾಗಿ ಅನೇಕಾನುಬಂಧಗಳಿಂದ ಕೂಡಿದ ಋಷಿಗಳ ವಂಶ ಸೃಷ್ಟಿಯನ್ನು ವಿಸ್ತಾರವಾಗಿಯೂ ಕ್ರಮಬದ್ಧವಾಗಿಯೂ ಹೇಳಿ ಮುಗಿಸಿರುವುದರಿಂದ ಮುಂದೆ ಅಗ್ನಿಯ ವಂಶಾವಳಿಯನ್ನು ಹೇಳುವೆನು.

ಹನ್ನೊಂದನೆಯ ಅಧ್ಯಾಯವು ಮುಗಿದುದು.

---

# ದ್ವಾದಶೋಽಧ್ಯಾಯಃ

**ಸೂತ ಉವಾಚ**

**ಯೋಽಸಾವಗ್ನೇರಭಿಮಾನೀ ಸ್ಮೃತಃ ಸ್ವಾಯಂಭುವೇಽನ್ತರೇ।**
**ಬ್ರಹ್ಮಣೋ ಮಾನಸಃ ಪುತ್ರಃ ತಸ್ಮಾತ್ಸ್ವಾಹಾ ವ್ಯಜಾಯತ ॥ ೧ ॥**

**ಪಾವಕಂ ಪವಮಾನಂ ಚ ಶುಚಿರಗ್ನಿಶ್ಚ ಯಃ ಸ್ಮೃತಃ।**
**ನಿರ್ಮಥ್ಯಃ ಪವಮಾನಸ್ತು ವೈದ್ಯುತಃ ಪಾವಕಃ ಸ್ಮೃತಃ ॥ ೨ ॥**

**ಶುಚಿಃ ಸೌರಸ್ತು ವಿಜ್ಞೇಯಃ ಸ್ವಾಹಾಪುತ್ರಾಸ್ತು ತೇ ತ್ರಯಃ।**
**ನಿರ್ಮಥ್ಯಃ ಪವಮಾನಸ್ತು ಶುಚಿಃ ಸೌರಸ್ತು ಯಃ ಸ್ಮೃತಃ ॥ ೩ ॥**

**ಅಬ್ಯೋನಿರ್ವೈದ್ಯುತಶ್ಚೈವ ತೇಷಾಂ ಸ್ಥಾನಾನಿ ತಾನಿ ವೈ।**
**ಪವಮಾನಾತ್ಮಜಶ್ಚೈವ ಕವ್ಯವಾಹನ ಉಚ್ಯತೇ ॥ ೪ ॥**

---

ಸೂತ ಮಹರ್ಷಿಯು ಹೇಳಿದನು :

೧. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮನ ಮಾನಸ ಪುತ್ರನಾಗಿ ಅಗ್ನಿ ಅಭಿಮಾನಿಯಾದ ಅಗ್ನಿದೇವನಿಂದ ಸ್ವಾಹಾದೇವಿಯೆಂಬ ಅಗ್ನಿ ಧರ್ಮಪತ್ನಿಯು ಪಾವಕ-ಪವಮಾನ-ಶುಚಿ ಎಂಬ ಮೂರು ಜನ ಪುತ್ರರನ್ನು ಹಡೆದಳು.

೨. ಇವರಲ್ಲಿ ಮಿಂಚಿನ ಸಂಬಂಧವಾದ ಅಗ್ನಿಯೇ ಪಾವಕಾಗ್ನಿಯೂ ಅರಣಿಗಳಿಂದ ಮಥನ ಮಾಡಿ ಹುಟ್ಟುವ ಅಗ್ನಿಯೇ ಪವಮಾನಾಗ್ನಿಯೂ ಸೂರ್ಯಮಂಡಲಕ್ಕೆ ಸಂಬಂಧಿಸಿದ ಅಗ್ನಿಯೇ ಶುಚಿ ಅಗ್ನಿಯೂ ಆಗಿ ಈ ಮೂವರೂ ಸ್ವಾಹಾದೇವಿಯ ಮಕ್ಕಳಾಗಿರುವರು.

೩. ಇವರ ಸ್ಥಾನಗಳು ಪವಮಾನಾಗ್ನಿಗೆ ಕಡೆಯಬಹುದಾದ ಅರಣಿಗಳೂ, ಪಾವಕಾಗ್ನಿಗೆ ಮಿಂಚೂ, ಶುಚಿ ಅಗ್ನಿಗೆ ಸೂರ್ಯಬಿಂಬವೂ ಈ ರೀತಿಯಾಗಿ ವ್ಯವಸ್ಥೆಯನ್ನು ಹೊಂದಿಕೊಂಡಿರುತ್ತವೆ.

೪. ಇವರಲ್ಲಿ ಪವಮಾನಾಗ್ನಿಗೆ ಕವ್ಯವಾಹನನೂ ಪಾವಕಾಗ್ನಿಗೆ ಸಹ ರಕ್ಷನೂ ಶುಚಿ ಅಗ್ನಿಗೆ ಹವ್ಯವಾಹನನೂ ಪುತ್ರರಾಗಿ ಜನಿಸಿದರು.

ಪಾವಕಿಃ ಸಹ ರಕ್ಷಸ್ತು ಹವ್ಯವಾಹಃ ಶುಚೇಃ ಸುತಃ ।
ದೇವಾನಾಂ ಹವ್ಯವಾಹೋಽಗ್ನಿಃ ಪಿತೃಣಾಂ ಕವ್ಯವಾಹನಃ ॥ ೫ ॥

ಸಹರಕ್ಷೋಽಸುರಾಣಾಂ ತು ತ್ರಯಾಣಾಂ ತು ತ್ರಯೋಽಗ್ನಯಃ ।
ಏತೇಷಾಂ ಪುತ್ರಪೌತ್ರಾಸ್ತು ಚತ್ವಾರಿಂಶನ್ನವೈವ ತು ॥ ೬ ॥

ವಕ್ಷ್ಯಾಮಿ ನಾಮಭಿಸ್ತೇಷಾಂ ಪ್ರವಿಭಾಗಂ ಪೃಥಕ್ ಪೃಥಕ್ ।
ವಿಶ್ರುತೋ ಲೌಕಿಕೋಽಗ್ನಿಸ್ತು ಪ್ರಥಮೋ ಬ್ರಹ್ಮಣಃ ಸುತಃ ॥ ೭ ॥

ಬ್ರಹ್ಮೋದನಾಗ್ನಿಸ್ತತ್ಪುತ್ರೋ ಭರತೋ ನಾಮ ವಿಶ್ರುತಃ ।
ವೈಶ್ವಾನರಃ ಸುತಸ್ತಸ್ಯ ವಹನ್ ಹವ್ಯಂ ಸಮಾಃ ಶತಮ್ ॥ ೮ ॥

ಸಂಭೃತೋಽಥರ್ವಣಾ ಪೂರ್ವಮೇಥಿನಾ ಪುಷ್ಕರೋದಧೌ ।
ಸೋಥರ್ವಾ ಲೌಕಿಕೋಽಗ್ನಿಸ್ತು ದರ್ಪಹಾಽಥರ್ವಣಃ ಸ್ಮೃತಃ ॥ ೯ ॥

ಅಥರ್ವಾ ತು ಭೃಗುರ್ಜಜ್ಞೇ ಹ್ಯಗ್ನಿರಾಥರ್ವಣಃ ಸ್ಮೃತಃ ।
ತಸ್ಮಾತ್ಸ ಲೌಕಿಕೋಽಗ್ನಿಸ್ತು ದಧ್ಯಙ್ಙಾಥರ್ವಣೋ ಮತಃ ॥ ೧೦ ॥

---

೫. ಇವರಲ್ಲಿ ದೇವತೋದ್ದೇಶವನ್ನುಳ್ಳ ಕರ್ಮಗಳಿಗೆ ಹವ್ಯವಾಹನಾಗ್ನಿಯೂ ಪಿತೃದೇವತೋದ್ದೇಶವನ್ನುಳ್ಳ ಕರ್ಮಗಳಲ್ಲಿ ಕವ್ಯವಾಹನಾಗ್ನಿಯೂ ಅಸುರರ ಕರ್ಮಗಳಲ್ಲಿ ಸಹರಕ್ಷಾಗ್ನಿಯೂ ಈ ರೀತಿ ಮೂವರೂ ಕರ್ಮಾಂಗ ಅಗ್ನಿಗಳಾಗಿರುತ್ತಾರೆ.

೬. ಈ ಅಗ್ನಿಗಳ ಪುತ್ರ ಪೌತ್ರರು ನಲವತ್ತೊಂಭತ್ತು ಮಂದಿ ಇರುವರು. ಇವರ ಪ್ರತ್ಯೇಕವಾದ ಹೆಸರು ಮತ್ತು ಪಂಗಡಗಳನ್ನು ವಿಂಗಡಿಸಿ ಹೇಳುವೆನು.

೭-೯. ಬ್ರಹ್ಮನ ಪ್ರಥಮ ಪುತ್ರನಾದ ಲೌಕಿಕಾಗ್ನಿಯು ಲೋಕದಲ್ಲಿ ಪ್ರಸಿದ್ಧನಾಗಿರುವನು. ಆ ಅಗ್ನಿದೇವನಿಗೆ ಸತ್ಪುತ್ರನಾದ ಬ್ರಹ್ಮೋದನ ಕರ್ಮಕ್ಕೆ ಅಂಗವಾದ ಭರತಾಗ್ನಿಯು ಜನಿಸಿದನು. ಭರತಾಗ್ನಿಯ ಪುತ್ರನಾದ ವೈಶ್ವಾನರಾಗ್ನಿಯನ್ನು ಪುಷ್ಕರ ಸಮುದ್ರದಲ್ಲಿ ಪೂರ್ವದಲ್ಲಿ ಯಾಗ ದೀಕ್ಷಿತನಾದ ಅಥರ್ವ ಎಂಬ ಋಷಿಯು ಪ್ರತಿಷ್ಠೆಮಾಡಿದಾಗ ಆ ಅಗ್ನಿಯು ನೂರಾರು ವರ್ಷಗಳ ಕಾಲ ಹವಿಸ್ಸನ್ನು ದೇವತೆಗಳಿಗೆ ತಲುಪಿಸುವ ಅಧಿಕಾರದಲ್ಲಿದ್ದನು. ಆ ಅಗ್ನಿಗೆ ಆಥರ್ವಣದರ್ಪಹಾಗ್ನಿ ಎಂಬ ಹೆಸರು ಬಂದಿತು.

೧೦. ಆ ಅಗ್ನಿಯು ಲೌಕಿಕಾಗ್ನಿಯಾಗಲು ದಧ್ಯಙ್ಙಾಥರ್ವಣ ಎಂಬ ಹೆಸರುಳ್ಳವನಾದನು.

ಅಥರ್ವಣಃ ಪವಮಾನಸ್ತು ನಿರ್ಮಥ್ಯಃ ಕವಿಭಿಃ ಸ್ಮೃತಃ ।
ಸ ಜ್ಞೇಯೋ ಗಾರ್ಹಪತ್ಯೋಽಗ್ನಿ ಸ್ತಸ್ಯ ಪುತ್ರದ್ವಯಂ ಸ್ಮೃತಮ್ ॥ ೧೧ ॥

ಶಂಸ್ಯಸ್ತ್ವಾಹವನೀಯೋಽಗ್ನಿಃ ಸ್ಮೃತೋ ಯೋ ಹವ್ಯವಾಹನಃ ।
ದ್ವಿತೀಯಸ್ತು ಸುತಃ ಪ್ರೋಕ್ತಃ ಶುಕೋಽಗ್ನಿರ್ಯಃ ಪ್ರಣೀಯತೇ॥೧೨॥

ತಥಾ ಸವ್ಯಾಪಸವ್ಯೌ ಚ ಶಂಸ್ಯಸ್ಯಾಗ್ನೇಃ ಸುತಾವುಭೌ ।
ಶಂಸ್ಯಸ್ತು ಷೋಡಶ ನದೀಶ್ಚಕಮೇ ಹವ್ಯಸಾಹನಃ ॥ ೧೩ ॥

ಯೋಽಸಾವಾಹವನೀಯೋಽಗ್ನಿರಭಿಮಾನೀ ದ್ವಿಜೈಃ ಸ್ಮೃತಃ ।
ಕಾವೇರೀಂ ಕೃಷ್ಣವೇಣಾಂ ಚ ನರ್ಮದಾಂ ಯಮುನಾಂ ತಥಾ ॥ ೧೪ ॥

ಗೋದಾವರೀಂ ವಿತಸ್ತಾಂ ಚ ಚನ್ದ್ರಭಾಗಾಮಿರಾವತೀಮ್ ।
ವಿಪಾಶಾಂ ಕೌಶಿಕೀಂ ಚೈವ ಶತದ್ರೂಂ ಶರಯೂಂ ತಥಾ ॥ ೧೫ ॥

ಸೀತಾಂ ಸರಸ್ವತೀಂ ಚೈವ ಹ್ಲಾದಿನೀಂ ಪಾವನೀಂ ತಥಾ ।
ತಾಸು ಷೋಡಶ ಧಾವಗಾನಂ ಪ್ರವಿಭಜ್ಯ ಪೃಥಕ್ ಪೃಥಕ್ ॥ ೧೬ ॥

---

೧೧-೧೩. ಅಥರ್ವ ಪುತ್ರನಾದ ಪವಮಾನಾಗ್ನಿಯು ಯಾಗದಲ್ಲಿ ಅರಣಿಗಳಲ್ಲಿ ಮಥನ ಮಾಡುವಾಗ ಪ್ರಕಾಶಿಸುವನು. ಅವನನ್ನು ಗಾರ್ಹಪತ್ಯಾಗ್ನಿ ಎಂದು ತಿಳಿಯಬೇಕು. ಆ ಗಾರ್ಹಪತ್ಯಾಗ್ನಿಗೆ ಹವಿಸ್ಸನ್ನು ಒಯ್ಯುವವನಾದ್ದರಿಂದ ಹವ್ಯವಾಹನನೆಂದು-ಪ್ರಸಿದ್ಧನಾದ ಶಂಸ್ಯ ಆಹವನೀಯಾಗ್ನಿ, ಮತ್ತು ಪ್ರಣಯನವೆಂಬ ಸಂಸ್ಕಾರವುಳ್ಳ ಶುಕಾಗ್ನಿ ಈ ರೀತಿ ಇಬ್ಬರು ಮಕ್ಕಳು ಜನಿಸಿದರು. ಆ ಶಂಸ್ಯಾಗ್ನಿಗೆ ಸವ್ಯ-ಅಪಸವ್ಯರೆಂಬ ಇಬ್ಬರು ಮಕ್ಕಳು ಹುಟ್ಟಿದರು.

೧೪. ಶ್ರೋತ್ರಿಯರಿಂದ ಆಹವನೀಯವೆಂದು ಸನ್ಮಾನಿಸಲ್ಪಟ್ಟ ಶಂಸ್ಯಾಗ್ನಿಯು ಹದಿನಾರು ಜನ ನದೀರೂಪರಾದ ತರುಣಿಯರನ್ನು ಕಾಮಿಸಿದನು.

೧೫-೧೬. ಆ ಹದಿನಾರು ನದಿಗಳು ಕಾವೇರೀ, ಕೃಷ್ಣವೇಣಾ, ನರ್ಮದಾ, ಯಮುನಾ, ಗೋದಾವರೀ, ವಿತಸ್ತಾ, ಚಂದ್ರಭಾಗಾ, ಇರಾವತೀ, ವಿಪಾಶಾ, ಕೌಶಿಕೀ, ಶತದ್ರೂ, ಶರಯೂ, ಸೀತಾ, ಸರಸ್ವತೀ, ಹ್ಲಾದಿನೀ, ಪಾವನೀ ಎಂದು ಪ್ರಸಿದ್ಧರಾಗಿರುವರು.

ಆತ್ಮಾನಂ ವ್ಯದಧಾತ್ತಾಸು ಧಿಷ್ಣೀಷ್ವಥ ಬಭೂವ ಸಃ ।
ಕೃತ್ತಿಕಾಚಾರಿಣೀ ಧಿಷ್ಣೀ ಜಜ್ಞಿರೇ ತಾಶ್ಚ ಧಿಷ್ಣಯಃ ॥ ೧೭ ॥

ಧಿಷ್ಣೀಷು ಜಜ್ಞಿರೇ ಯಸ್ಮಾದ್ಧಿಷ್ಣಯಸ್ತೇನ ಕೀರ್ತಿತಾಃ ।
ಇತ್ಯೇತೇ ವೈ ನದೀಪುತ್ರಾ ಧಿಷ್ಣೀಷ್ವೇವಂ ವಿಜಜ್ಞಿರೇ ॥ ೧೮ ॥

ತೇಷಾಂ ವಿಹರಣೀಯಾ ಯೇ ಉಪಸ್ಥೇಯಾಶ್ಚ ಯೇಽಗ್ನಯಃ ।
ತಾಞ್ಛೃಣುಧ್ವಂ ಸಮಾಸೇನ ಕೀರ್ತ್ಯಮಾನಾನ್ಯಥಾತಥಮ್ ॥ ೧೯ ॥

ವಿಭುಃ ಪ್ರವಾಹಣೋಽಗ್ನೀಧ್ರಃ ತತ್ರಸ್ಥಾ ಧಿಷ್ಣಯೋಽಪರೇ ।
ವಿಧೀಯಂತೇ ಯಥಾಸ್ಥಾನಂ ಸುತ್ಯಾಹೇ ಸವನೇ ಕ್ರಮಾತ್ ॥ ೨೦ ॥

ಅನುದ್ದೇಶ್ಯನಿವಾಸ್ಯಾನಾಮಗ್ನೀನಾಂ ಶೃಣುತ ಕ್ರಮಮ್ ।
ಸಮ್ರಾಡಗ್ನಿಃ ಕೃಶಾನುರ್ಯೋ ದ್ವಿತೀಯೋಽನ್ತರವೇದಿಕಃ ॥ ೨೧ ॥

---

೧೭-೧೮. ಈ ರೀತಿಯಾಗಿ ಹದಿನಾರು ಜನ ಭಾರ್ಯೆಯರಲ್ಲಿ ಶಂಸ್ಯಾಗ್ನಿಯು ತಾನು ತನ್ನ ಹದಿನಾರು ಅಂಶಗಳನ್ನು ಕಲ್ಪಿಸಿ ಒಬ್ಬೊಬ್ಬರಲ್ಲಿಯೂ ಒಂದೊಂದು ಅಂಶವನ್ನು ಇರಿಸಲು ಆ ಪ್ರತಿಯೊಂದು ಆಶ್ರಯದಲ್ಲಿಯೂ ಹದಿನಾರು ಜನರು ಪುತ್ರರಾಗಿ ಜನಿಸಿದರು. ಮತ್ತು ಅವರೆಲ್ಲರೂ ಪ್ರತ್ಯೇಕ ಕೋಣವಾದ ಆಶ್ರಯದಲ್ಲಿ ಜನ್ಮವನ್ನು ಲಭಿಸಿದ್ದರಿಂದ ಧಿಷ್ಣ್ಯಾಗ್ನಿಗಳೆಂದು ಪ್ರಸಿದ್ಧರಾದರು.

೧೯. ಈ ಹದಿನಾರರಲ್ಲಿ ಕೆಲವು ಅಗ್ನಿಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರಣಯನ (ಕೊಂಡೊಯ್ಯುವುದು) ಸಂಸ್ಕಾರದಿಂದ ಸಂಸ್ಕರಿಸಲ್ಪಡುವುದರಿಂದ ವಿಹರಣೀಯಾಗ್ನಿಗಳೂ ಇನ್ನು ಕೆಲವು ಉಪಸ್ಥಾನ (ಸ್ತೋತ್ರ) ಮಾತ್ರಕ್ಕೆ ಇಟ್ಟು ಕೊಳ್ಳಲ್ಪಡುವುದರಿಂದ ಉಪಸ್ಥೇಯಾಗ್ನಿಗಳೂ ಆಗಿದ್ದಾರೆ. ಇವರ ಸ್ವರೂಪವನ್ನು ಯಥಾವತ್ತಾಗಿ ಕೇಳಿರಿ.

೨೦. ಆಗ್ನೀಧ್ರ ಸ್ಥಾನದಲ್ಲಿರುವ ಪ್ರವಾಹಣ ಆಗ್ನೀಧ್ರಾಗ್ನಿ ಮತ್ತು ಅದರ ಸನ್ನಿಧಿಯಲ್ಲಿರುವ ಇತರ ಧಿಷ್ಣ್ಯಾಗ್ನಿಗಳು ಯಾಗದಲ್ಲಿ ಪ್ರಧಾನಕರ್ಮ ದಿವಸದಲ್ಲಿ ಆಯಾಯ ಸ್ಥಾನದಲ್ಲಿ ಸ್ಥಾಪಿಸಲ್ಪಡುತ್ತವೆ.

೨೧. ಆವಾಹನೋದ್ದೇಶವಿಲ್ಲದ ಸ್ತೋತ್ರಕಾಗಿ ಸ್ಥಾಪಿಸಲ್ಪಡುವ ಅಗ್ನಿಗಳ ಕ್ರಮ ಈ ರೀತಿಯಾಗಿರುವದು. ಅದನ್ನು ಕೇಳಿರಿ.

ಸಮ್ರಾಡಗ್ನಿಮುಖಾನಷ್ಟೌ ಉಪತಿಷ್ಠನ್ತಿ ತಾನ್ ದ್ವಿಜಾಃ ।
ಪರಿಷತ್ಪವಮಾನಸ್ತು ದ್ವಿತೀಯಃ ಸೋಽನುದಿಶ್ಯತೇ ॥ ೨೨ ॥

ಪ್ರತಲ್ಕಾನ್ಯೋ ನಭೋ ನಾಮ ಚತ್ವರೇಽಸೌ ವಿಭಾವ್ಯತೇ ।
ಹವ್ಯಸ್ತತೋ ಹ್ಯಸಂಮೃಷ್ಟಃ ಶಾಮಿತ್ರೇಽಗ್ನೌ ವಿಭಾವ್ಯತೇ ॥ ೨೩ ॥

ಕ್ರತುಧಾಮಾ ಚ ಸುಜ್ಯೋತಿಃ ಔದುಂಬರ್ಯಾಂ ಪ್ರಕೀರ್ತ್ಯತೇ ।
ವಿಶ್ವವ್ಯಚಾಃ ಸಮುದ್ರೋಽಗ್ನಿರ್ಬ್ರಹ್ಮಸ್ಥಾನೇ ಸ ಕೀರ್ತ್ಯತೇ ॥ ೨೪ ॥

ಬ್ರಹ್ಮಜ್ಯೋತಿರ್ವಸುರ್ಧಾಮಾ ಬ್ರಹ್ಮಸ್ಥಾನೇ ಸ ಉಚ್ಯತೇ ।
ಅಜೈಕಪಾದುಪಸ್ಥೋ ಯಃ ಸ ವೈ ಶಾಲಾಮುಖೀಯಕಃ ॥ ೨೫ ॥

ಅನುದ್ದೇಶ್ಯೋ ಹ್ಯಹಿರ್ಬುಧ್ನ್ಯೋ ಸೋಽಗ್ನಿರ್ಗೃಹಪತಿಃ ಸ್ಮೃತಃ ।
ಶಂಸ್ಯಸ್ತ್ವೇತೇ ಸುತಾಃ ಸರ್ವೇ ಉಪಸ್ಥೇಯಾ ದ್ವಿಜೈಃ ಸ್ಮೃತಾಃ ॥ ೨೬ ॥

---

೨೨. ವೇದಿಕೆಯ ಮಧ್ಯದಲ್ಲಿ ಸಮ್ರಾಡಗ್ನಿ ಎಂಬುದಾಗಿ ಒಂದು ಅಗ್ನಿ ಇರುವುದು. ಈ ಸಮ್ರಾಡಗ್ನಿ ಮುಂತಾದ ಎಂಟು ಅಗ್ನಿಗಳನ್ನು ದ್ವಿಜರು ಉಪಸ್ಥಾನಮಾಡುತ್ತಾರೆ.

೨೩-೨೫. ಒಂದನೆಯದು ಸಮ್ರಾಡಗ್ನಿ, ಎರಡನೆಯದು ಪರಿಷತ್ಪವಮಾನಾಗ್ನಿ, ಮೂರನೆಯದು ಚತ್ವರದಲ್ಲಿರಿಸಲ್ಪಡುವ ಪ್ರತಲ್ಕಾನ್ಯನಭ ಎಂಬ ಅಗ್ನಿ, ನಾಲ್ಕನೆಯದು ಸಮ್ಮಾರ್ಜನ ಎಂಬ ಸಂಸ್ಕಾರವಿಲ್ಲದ ಹವ್ಯಾಗ್ನಿ ಎಂಬುದು, ಐದನೆಯದು ಔದುಂಬರ ಶಾಖೆಯ ಸನ್ನಿಧಿಯಲ್ಲಿರುವ ಜ್ಯೋತಿರ್ಮಯವಾದ ಕ್ರತುಧಾಮಾಗ್ನಿ, ಆರನೆಯದು ಬ್ರಹ್ಮಸ್ಥಾನದಲ್ಲಿರುವ ಬ್ರಹ್ಮಜ್ಯೋತಿಯಿಂದ ಪ್ರಕಾಶಿಸುವ ವಸುರ್ಧಾಮಾ ಸಮುದ್ರಾಗ್ನಿ ಎಂಬ ಪರ್ಯಾಯದಿಂದ ಕೂಡಿದ ವಿಶ್ವವ್ಯಚಾಗ್ನಿ, ಏಳನೆಯದು ಶಾಲಾಮುಖೀಯವೆಂಬ ಪರ್ಯಾಯನಾಮವುಳ್ಳ ಅಜೈಕಪಾದಗ್ನಿ, ಎಂಟನೆಯದು ಅಹಿರ್ಬುಧ್ನ್ಯವೆಂಬ ಪರ್ಯಾಯನಾಮವುಳ್ಳ ಗೃಹಪತಿ ಎಂಬ ಅಗ್ನಿ ಈ ರೀತಿ ಎಂಟು ಅಗ್ನಿಗಳು.

೨೬. ಇವು ಎಂಟು ಆವಾಹನೋದ್ದೇಶವಿಲ್ಲದೇ ಉಪಸ್ಥಾನ ಮಾತ್ರದಲ್ಲಿ ಉಪಯೋಗವುಳ್ಳವುಗಳು.

**ತತೋ ವಿಹರಣೀಯಾಂಶ್ಚ ವಕ್ಷ್ಯಾಮ್ಯಷ್ಟೌ ಚ ತತ್ಸುತಾನ್ ।
ವಿಭುಃ ಪ್ರವಾಹಣೋಽಗ್ನೀಧ್ರಃ ತೇಷಾಂ ಧಿಷ್ಣ್ಯಸ್ತಥಾಽಪರೇ ॥ ೨೭ ॥**

**ವಿಧೀಯನ್ತೇ ಯಥಾಸ್ಥಾನಂ ಸೌತ್ಯೇಽಹ್ನಿ ಸವನೇ ಕ್ರಮಾತ್ ।
ಹೌತ್ರೀಯಸ್ತು ಸ್ಮೃತೋ ಹ್ಯಗ್ನಿರ್ವಹ್ನಿಯೋರ್ಹವ್ಯವಾಹನಃ ॥ ೨೮ ॥**

**ಪ್ರಶಾಂತೋಽಗ್ನಿಃ ಪ್ರಚೇತಾಸ್ತು ದ್ವಿತೀಯಶ್ಚಾತ್ರನಾಮಕಃ ।
ತತೋಽಗ್ನಿರ್ವೈಶ್ವದೇವಸ್ತು ಬ್ರಾಹ್ಮಣಾಚ್ಛಂಸಿರುಚ್ಯತೇ ॥ ೨೯ ॥**

**ಉಶಿಗಗ್ನಿಃ ಕವಿರ್ಯಸ್ತು ಪೋತೋಽಗ್ನಿಃ ಸ ವಿಭಾವ್ಯತೇ ।
ಆವಾರಿರಗ್ನಿರ್ವಾಭಾರಿರ್ನೈಷ್ಟ್ರೀಯಸ್ಸ ವಿಭಾವ್ಯತೇ ॥ ೩೦ ॥**

**ಅವಸ್ಫೂರ್ಜೋ ವಿವಸ್ವಾಂಸ್ತು ಆಸ್ಥಾಂಶ್ಚೈವ ಸ ಉಚ್ಯತೇ ।
ಅಷ್ಟಮಃ ಸುಧ್ಯುರಗ್ನಿರ್ಯೋ ಮಾರ್ಜಾಲೀಯಃ ಸ ಉಚ್ಯತೇ ॥ ೩೧ ॥**

**ಧಿಷ್ಣ್ಯಾವಾಹರಣಾ ಹ್ಯೇತೇ ಸೌತ್ಯೇಽಹ್ನೀಜ್ಯನ್ತೇ ವೈ ದ್ವಿಜೈಃ ।
ಅಪಾಂ ಯೋನಿಃ ಸ್ಮೃತೋಽಸೌ ಸ ಹ್ಯಪ್ಸು ನಾಮಾ ವಿಭಾವ್ಯತೇ ॥೩೨॥**

---

೨೭. ಇನ್ನು ವಿಹರಣೀಯಾಗ್ನಿಗಳೆಂಬ ಎಂಟು ಮಂದಿ ಶಂಸ್ಯಾಗ್ನಿಯ ಪುತ್ರರನ್ನು ಹೇಳುವೆನು, ಕೇಳಿರಿ.

೨೮-೩೧. ವಿಭುವಾದ ಪ್ರವಾಹಣ ಆಗ್ನೀಧ್ರಸ್ಥಾನದಲ್ಲಿರುವ ಅಗ್ನಿ ಮತ್ತು ಧಿಷ್ಣಿಯಾಗ್ನಿಗಳು ಯಾಗದಲ್ಲಿ ಸುತ್ಯಾಹಸ್ಸಿನಲ್ಲಿ ಆಯಾಯ ಸ್ಥಾನಗಳಲ್ಲಿ ಯಥಾವಿಧಿಯಾಗಿ ಸ್ಥಾಪಿಸಲ್ಪಡುವುವು. ಈ ಎಂಟು ಅಗ್ನಿಗಳ ನಾಮ— ಪರ್ಯಾಯನಾಮಗಳು ಈ ರೀತಿಯಲ್ಲಿವೆ. ಒಂದನೆಯದು ಹವ್ಯವಾಹನಾಗ್ನಿ ಎಂಬ ಪರ್ಯಾಯವುಳ್ಳ ಹೋತ್ರಿಯಾಗ್ನಿ, ಎರಡನೆಯದು ಪ್ರಚೇತಾಗ್ನಿ ಅಥವಾ ಪ್ರಶಾಂತಾಗ್ನಿ, ಮೂರನೆಯದು ಬ್ರಾಹ್ಮಣಾಚ್ಛಂಸಿ ಅಗ್ನಿ ಅಥವಾ ವೈಶ್ವದೇವಾಗ್ನಿ, ನಾಲ್ಕನೆಯದು ಪೋತಾಗ್ನಿ ಅಥವಾ ಉಶಿಗಗ್ನಿ, ಐದನೆಯದು ಐಷ್ಟ್ರೀಯ ಅಥವಾ ಆವಾರಿ ಅಗ್ನಿ, ಆರನೆಯದು ಐಷ್ಟ್ರೀಯ ಅಥವಾ ಆಭಾರಿ ಅಗ್ನಿ, ಏಳನೆಯದು ಆಸ್ಥಾ, ಅವಸ್ಫೂರ್ಜ, ಅಥವಾ ವಿವಸ್ವದಗ್ನಿ, ಎಂಟನೆಯದು ಮಾರ್ಜಾಲೀಯ ಅಥವಾ ಸುಧ್ಯೆ ಎಂಬ ಅಗ್ನಿ, ಹೀಗೆ ನಾಮ– ಪರ್ಯಾಯನಾಮಗಳು ಇರುತ್ತವೆ.

೩೨. ಈ ಅಗ್ನಿಗಳನ್ನು ಧಿಷ್ಣ್ಯಸ್ಥಾನಗಳಲ್ಲಿ ಆವಾಹಿಸಿ ಯಾಗಮಾಡುತ್ತಾರೆ.

ತತೋ ಯಃ ಪಾವಕೋ ನಾಮ್ನಾ ಅಬ್ಜೋ ಯೋ ಗರ್ಭ ಉಚ್ಯತೇ ।
ಅಗ್ನಿಃ ಸೋಽವಭೃಥೇ ಜ್ಞೇಯೋ ವರುಣೇನ ಸಹೇಜ್ಯತೇ ॥ ೩೩ ॥

ಹೃಚ್ಛಯಸ್ತತ್ಸುತೋ ಹ್ಯಗ್ನಿರ್ಜಠರೇ ಯೋ ನೃಣಾಂ ಪಚನ್ ।
ಮೃತ್ಯುಮಾಞ್ಜಾಠರಸ್ಯಾಗ್ನೇಃ ವಿದ್ವಾನಗ್ನಿಃ ಸುತಃ ಸ್ಮೃತಃ ॥ ೩೪ ॥

ಪರಸ್ಪರೋತ್ಥಿತಃ ಸೋಽಗ್ನಿರ್ಭೂತಾನೀಹ ವಿನಿರ್ದಹೇತ್ ।
ಪುತ್ರಸ್ತ್ವಗ್ನೇರ್ಮನ್ಯುಮತೋ ಘೋರಃ ಸಂವರ್ತಕಃ ಸ್ಮೃತಃ ॥ ೩೫ ॥

ಪಿಬನ್ನಪಃ ಸ ವಸತಿ ಸಮುದ್ರೇ ಬಡಬಾಮುಖಃ ।
ಸಮುದ್ರವಾಸಿನಃ ಪುತ್ರಃ ಸಹರಕ್ಷೋ ವಿಭಾವ್ಯತೇ ॥ ೩೬ ॥

ಸಹರಕ್ಷಸುತಃ ಕ್ಷಾಮೋ ಗೃಹಾಣಾಂ ದಹತೇ ನೃಣಾಮ್ ।
ಕ್ರವ್ಯಾದಗ್ನಿಃ ಸುತಸ್ತಸ್ಯ ಪುರುಷಾನತ್ತಿ ಯೋ ಮೃತಾನ್ ॥ ೩೭ ॥

---

ಜಲೋತ್ಪತ್ತಿಗೆ ಕಾರಣವಾದ ಪಾವಕ ಅಗ್ನಿಗೆ ಈ ಕಾರಣದಿಂದ ಅಪ್ಸು ನಾಮಾಗ್ನಿ ಎಂಬ ಹೆಸರು ಬಂದಿರುತ್ತದೆ.

೩೩. ಈ ಅಬ್ಜರೂಪನಾದ ಪಾವಕಾಗ್ನಿಯು ಯಾಗವು ಪೂರೈಸಿದ ಬಳಿಕ ಅವಭೃಥ ಕರ್ಮದಲ್ಲಿ ವರುಣನ ಜೊತೆಯಲ್ಲಿ ಹವಿರ್ದಾನಕ್ಕೆ ಉದ್ದೇಶ್ಯನಾಗಿರುವನು.

೩೪. ಈ ಪಾವಕಾಗ್ನಿಯ ಪುತ್ರನಾದ ಜಾಠರಾಗ್ನಿಯು ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿದ್ದು ಆಹಾರವನ್ನು ಪಚನಮಾಡುತ್ತಿರುವನು. ಈ ಜಾಠರಾಗ್ನಿಗೆ ಮೃತ್ಯುಮಾನ್ ಅಥವಾ ವಿದ್ವಾನಗ್ನಿ ಎಂಬ ಪುತ್ರನಿರುವನು.

೩೫-೩೬. ಈ ಮನ್ಯುಮಾನ್ ಮತ್ತು ಜಾಠರಾಗ್ನಿಗಳು ಒಂದಕ್ಕೊಂದು ಅನ್ಯೋನ್ಯವಾಗಿ ನಿಮಿತ್ತವಾಗಿದ್ದುಕೊಂಡು ಭೂತಗಳನ್ನು ದಹಿಸುತ್ತಿರುವುವು.

ಮನ್ಯುಮಾನ್ ಎಂಬ ಅಗ್ನಿಗೆ ಸಂವರ್ತಕ, ಘೋರಾಗ್ನಿ ಎಂಬ ಪುತ್ರನಿರುವನು. ಆತನು ಸಮುದ್ರದಲ್ಲಿದ್ದು ಬಡಬಾಗ್ನಿ ಎಂಬ ಪ್ರಸಿದ್ಧಿಯಿಂದ ಸಮುದ್ರದ ನೀರು ಶೋಷಣವಾಗುವಂತೆ ನೀರನ್ನು ಕುಡಿಯುತ್ತಾ ವಾಸಿಸುವನು. ಆ ಸಮುದ್ರವಾಸಿಯಾದ ಬಡಬಾಗ್ನಿಗೆ ಸಹರಕ್ಷನೆಂಬ ಪುತ್ರನಿರುವನು.

೩೭. ಸಹರಕ್ಷ ಅಗ್ನಿಯ ಪುತ್ರನಾದ ಕ್ಷಾಮ ಎಂಬ ಅಗ್ನಿಯು ಮನುಷ್ಯರ

ಇತ್ಯೇತೇ ಪಾವಕಸ್ಯಾಗ್ನೇಃ ಪುತ್ರಾ ಏವ ಪ್ರಕೀರ್ತಿತಾಃ ।
ತತಃ ಶುಚಿಸ್ತು ವೈ ಸೌರೋ ಗಂಧರ್ವೈರಾಯುರಾಹುತಃ ॥ ೩೮ ॥

ಮಥಿತೋ ಯಸ್ತ್ವರಣ್ಯಾಂ ಚ ಸೋಽಗ್ನಿರಗ್ನಿಂ ಸಮಿಂಧತಿ ।
ಆಯುರ್ನಾಮ್ನಾ ತು ಭಗವಾನ್ ಅಸೌ ಯಸ್ತು ಪ್ರಣೀಯತೇ॥ ೩೯ ॥

ಆಯುಷೋ ಮಹಿಷಃ ಪುತ್ರಃ ಸಹಸೋ ನಾಮ ತತ್ಸುತಃ ।
ಪಾಕಯಜ್ಞೇಷ್ವಭೀಮಾನಿ ಸೋಽಗ್ನಿಸ್ತು ಸಹಸಃ ಸ್ಮೃತಃ ॥ ೪೦ ॥

ಪುತ್ರಶ್ಚ ಸಹಸಸ್ಯಾಗ್ನೇಃ ಅದ್ಭುತಃ ಸ ಮಹಾಯಶಾಃ ।
ವಿವಿಧಿಶ್ಚಾದ್ಭುತಸ್ಯಾಪಿ ಪುತ್ರೋಽಗ್ನೇಸ್ತು ಮಹಾನ್ ಸ್ಮೃತಃ ॥ ೪೧ ॥

ಪ್ರಾಯಶ್ಚಿತ್ತೇಷ್ವಭೀಮಾನೀ ಹುತಂ ಭುಂಕ್ತೇ ಹವಿಃ ಸದಾ ।
ವಿವಿಧೇಸ್ತು ಸುತೋ ಹ್ಯರ್ಕಸ್ತಸ್ಯ ಚಾಗ್ನೇಃ ಸುತಾ ಇಮೇ ॥ ೪೨ ॥

ಅನೀಕವಾನ್ ವಾಜಸೃಕ್ಚ ರಕ್ಷೋಹಾ ಯಷ್ಟಿಕೃತ್ತಥಾ ।
ಸುರಭಿರ್ವಸುರನ್ನಾದೋ ಪ್ರವಿಷ್ಟೋ ಯಃ ಸ ರುಕ್ಮರಾಟ್ ॥ ೪೩ ॥

---

ಮನೆಗಳನ್ನು ಸುಟ್ಟುಹಾಕುವ ಶಕ್ತಿಯುಳ್ಳವನು. ಆ ಕ್ಷಾಮಾಗ್ನಿಗೆ ಮೃತಪುರುಷರನ್ನು ತಿನ್ನುವ ಕ್ರವ್ಯಾದಗ್ನಿ ಎಂಬ ಮಗನಿರುವನು. ಹೀಗೆ ಇವರೆಲ್ಲರೂ ಪಾವಕಾಗ್ನಿಯ ಮಕ್ಕಳಾಗಿರುವವರು.

೩೮-೪೨. ಸೂರ್ಯಬಿಂಬಕ್ಕೆ ಸಂಬಂಧಿಸಿರುವ ಶುಚಿ ಅಗ್ನಿಯನ್ನು ಗಂಧರ್ವರು ಅರಣಿಯಲ್ಲಿ ಮಥನಮಾಡಿ ಪ್ರಜ್ವಲಿಸಿ ಆಯು ಎಂಬ ಹೆಸರಿನಿಂದ ಪ್ರಣಯನ ಮಾಡಿರುವುದರಿಂದ ಆಯು ಎಂಬ ಹೆಸರು ಆ ಅಗ್ನಿಗೆ ಬಂದಿದೆ. ಆಯು ಎಂಬುವನಿಗೆ ಮಹಿಷ ಎಂಬ ಪುತ್ರನೂ ಮಹಿಷನಿಗೆ ಸಹಸ ಎಂಬ ಪುತ್ರನೂ ಇರುವರು. ಸಹಸಾಗ್ನಿಯು ಶ್ರೋತ್ರಿಯರು ಮಾಡುವ ಪಾಕಯಜ್ಞಗಳಲ್ಲಿ ಅಭಿಮಾನಿಯಾಗಿರುವನು. ಸಹಸಾಗ್ನಿಗೆ ಮಹಾ ಯಶಸ್ವಿಯಾದ ಅದ್ಭುತಾಗ್ನಿ ಎಂಬ ಪುತ್ರನೂ ಅದ್ಭುತಾಗ್ನಿಗೆ ವಿವಿಧಿ ಎಂಬ ಪ್ರಖ್ಯಾತನಾದ ಪುತ್ರನೂ ಇರುವರು. ವಿವಿಧಿ ಎಂಬ ಅಗ್ನಿಯು ಪ್ರಾಯಶ್ಚಿತ್ತ ಕರ್ಮಗಳಲ್ಲಿ ಅಭಿಮಾನಿಯಾಗಿದ್ದು ಹವಿಸ್ಸನ್ನು ಭುಂಜಿಸುವನು. ವಿವಿಧಿ ಅಗ್ನಿಗೆ ಅರ್ಕಾಗ್ನಿ ಎಂಬ ಪುತ್ರನಿರುವನು.

೪೩-೪೫. ಅರ್ಕಾಗ್ನಿಗೆ ಅನೀಕವಾನ್, ವಾಜಸೃಕ್, ರಕ್ಷೋಹಾ, ಯಷ್ಟಿಕೃತ್,

ಶುಚೇರಗ್ನೇಃ ಪ್ರಜಾ ಹ್ಯೇಷಾ ವಹ್ನಯಶ್ಚ ಚತುರ್ದಶ ।
ಇತ್ಯೇತೇ ಚಾಗ್ನಯಃ ಪ್ರೋಕ್ತಾಃ ಪ್ರಣೀಯನ್ತೇಽಧ್ವರೇಷು ವೈ ॥ ೪೪ ॥

ಆದಿಸರ್ಗೇ ವ್ಯತೀತಾ ವೈ ಯಾಮೈಃ ಸಹ ಸುರೋತ್ತಮೈಃ ।
ಸ್ವಾಯಂಭುವೇಽನ್ತರೇ ಪೂರ್ವಮಗ್ನಯಸ್ತೇಽಭಿಮಾನಿನಃ ॥ ೪೫ ॥

ಏತೇ ವಿಹರಣೀಯೇಷು ಚೇತನಾಚೇತನೇಷು ವೈ ।
ಸ್ಥಾನಾಭಿಮಾನಿನೋ ಲೋಕೇ ಪ್ರಾಗಾಸನ್ ಹವ್ಯವಾಹನಾಃ ॥ ೪೬ ॥

ಕಾಮ್ಯನೈಮಿತ್ತಿಕಾ ಯಜ್ಞೇಷ್ವೇತೇ ಕರ್ಮಸ್ವವಸ್ಥಿತಾಃ ।
ಪೂರ್ವಮನ್ವನ್ತರೇಽತೀತಾಃ ಶುಕ್ರೈರ್ಯಾಮೈಶ್ಚ ತೈಃ ಸಹ ॥ ೪೭ ॥

ದೈವೈರ್ಮಹಾತ್ಮಭಿಃ ಪುಣ್ಯೈಃ ಪ್ರಥಮಸ್ಯಾನ್ತರೇ ಮನೋಃ ।
ಇತ್ಯೇತಾನಿ ಮಯೋಕ್ತಾನಿ ಸ್ಥಾನಾನಿ ಸ್ಥಾನಿನಶ್ಚ ಹ ॥ ೪೮ ॥

---

ಸುರಭಿ, ವಸು, ಅನ್ನಾದ-ಅಥವಾ ರುಕ್ಮರಾಟ್ ಇವರು ಮುಕ್ಯಳಾಗಿದ್ದರು. ಈ ರೀತಿಯಾಗಿ ಇವರೆಲ್ಲರೂ ಸೇರಿ ಹದಿನಾಲ್ಕು ಅಗ್ನಿಗಳೂ ಶುಚಿ ಅಗ್ನಿಯ ಪ್ರಜೆಗಳಾಗಿರುವರು. ಈ ಅಗ್ನಿಗಳು ಯಾಗದಲ್ಲಿ ಪ್ರಣಯನದಿಂದ ಸಂಸ್ಕಾರ್ಯಗಳಾಗಿರುವುವು. ಇವರೆಲ್ಲರೂ ಅಗ್ನ್ಯಭಿಮಾನಿ ದೇವತೆಗಳಾಗಿದ್ದು ಸ್ವಾಯಂಭುವ ಮನ್ವನ್ತರದಲ್ಲಿ ತಮ್ಮ ಅಧಿಕಾರವನ್ನು ನಡೆಸಿ ಹಿಂದಿನ ಸೃಷ್ಟಿಯಲ್ಲಿ ಕಳೆದು ಹೋಗಿರುತ್ತಾರೆ.

೪೬. ಮತ್ತು ವಿಹರಣ ಸ್ಥಾನಗಳಲ್ಲಿಯೂ ಚೇತನಾಚೇತನ ವರ್ಗದಲ್ಲಿಯೂ ಸ್ಥಾನಾಭಿಮಾನಿಗಳಾಗಿ ಹಿಂದಿನ ಕಲ್ಪದಲ್ಲಿ ಹವಿಸ್ಸನ್ನು ಒಯ್ಯುವ ಅಧಿಕಾರದಲ್ಲಿ ನಿರತರಾಗಿದ್ದರು.

೪೭. ಕಾಮ್ಯ-ನೈಮಿತ್ತಿಕಗಳಾದ ಯಜ್ಞಕರ್ಮಗಳಲ್ಲಿ ಈ ಅಗ್ನಿಗಳು ಇದ್ದು ಪೂರ್ವ ಮನ್ವನ್ತರದಲ್ಲಿ ಆ ಕರ್ಮಗಳು ಮತ್ತು ಶುಕ್ರಾದಿಗ್ರಹಗಳು ಇವುಗಳ ಸಂಗಡಲೇ ಕಳೆದುಹೋಗಿರುವರು.

೪೮. ಹೀಗೆ ಅಗ್ನಿಗಳ ಸ್ಥಾನಗಳು ಮತ್ತು ಆಯಾಯ ಸ್ಥಾನಗಳಲ್ಲಿರುವ ಅಗ್ನಿಗಳು ನನ್ನಿಂದ ಹೇಳಲ್ಪಟ್ಟಿವೆ.

ತೈರೇವ ತು ಪ್ರಸಂಖ್ಯಾತಮತೀತಾನಾಗತೇಷ್ವಿಹ ।
ಮನ್ವನ್ತರೇಷು ಸರ್ವೇಷು ಲಕ್ಷಣಂ ಜಾತವೇದಸಾಮ್ ॥ ೪೯ ॥

ಸರ್ವೇ ತಪಸ್ವಿನೋ ಹ್ಯೇತೇ ಸರ್ವೇ ಬ್ರಹ್ಮಭೃತಸ್ತಥಾ ।
ಪ್ರಜಾನಾಂ ಪತಯಃ ಸರ್ವೇ ಜ್ಯೋತಿಷ್ಮನ್ತಶ್ಚ ತೇ ಸ್ಮೃತಾಃ ॥ ೫೦ ॥

ಸ್ವಾರೋಚಿಷಾದಿಷು ಜ್ಞೇಯಾಃ ಸಾವರ್ಣ್ಯಂ ತೇಷು ಸಪ್ತಸು ।
ಮನ್ವನ್ತರೇಷು ಸರ್ವೇಷು ನಾಮರೂಪಪ್ರಯೋಜನೈಃ ॥ ೫೧ ॥

ವರ್ತನ್ತೇ ವರ್ತಮಾನೈಶ್ಚ ಯಾಮೈರ್ದೇವೈಃ ಸಹಾಗ್ನಯಃ ।
ಅನಾಗತೈಃ ಸುರೈಃ ಸಾರ್ಧಂ ವರ್ತ್ಸ್ಯನ್ತೇಽನಾಗತಾಗ್ನಯಃ ॥ ೫೨ ॥

ಇತ್ಯೇಷ ನಿಚಯೋಽಗ್ನೀನಾಮನುಕ್ರಾನ್ತೋ ಯಥಾಕ್ರಮಮ್ ।
ವಿಸ್ತರೇಣಾನುಪೂರ್ವ್ಯಾ ಚ ಪಿತೄಣಾಂ ವಕ್ಷ್ಯತೇ ಪುನಃ ॥ ೫೩ ॥

ಇತಿ ಶ್ರೀ ಬ್ರಹ್ಮಾಣ್ಡ ಪುರಾಣೇ ದ್ವಾದಶೋಽಧ್ಯಾಯಃ.

---

೪೯-೫೦. ಹಿಂದೆ ಕಳೆದುಹೋದ ಮನ್ವಂತರಗಳಲ್ಲಿದ್ದ ಮುಂದಿನ ಮನ್ವಂತರಗಳಲ್ಲಿ ಬರುವ ಅಗ್ನಿಗಳ ಲಕ್ಷಣವು ಅವರಿಂದ ಗಣಿಸಲ್ಪಟ್ಟಿದೆ. ಎಲ್ಲರೂ ಮಹಾ ತಪಸ್ವಿಗಳಾಗಿಯೂ ಮಹಾ ಬ್ರಹ್ಮಜ್ಞಾನಿಗಳಾಗಿಯೂ ಪ್ರಜೆಗಳೆಲ್ಲರಿಗೂ ಪ್ರಭುಗಳಾಗಿಯೂ ಜ್ಯೋತಿರ್ಮಯರಾಗಿಯೂ ಇರುವರೆಂದು ಹೇಳಲ್ಪಟ್ಟಿದೆ.

೫೧. ಸ್ವಾರೋಚಿಷ ಮುಂತಾದ ಏಳು ಮನುಗಳ ಅಧಿಕಾರಾವಧಿಯಲ್ಲಿ ಈ ಮೇಲೆ ಹೇಳಿದ ಎಲ್ಲ ಅಗ್ನಿಗಳಿಗೂ ನಾಮ-ರೂಪ–ಪ್ರಯೋಜನಗಳು ಸಮವಾಗಿಯೇ ಇರುವುವು. ವರ್ತಮಾನ ಕಾಲದಲ್ಲಿರುವ ಅಗ್ನಿಗಳು ವರ್ತಮಾನರಾದ ಯಾಮಾಭಿಮಾನಿದೇವತೆಗಳ ಕೂಡ ಇರುವರು.

೫೨. ಭವಿಷ್ಯತ್ಕಾಲದಲ್ಲಿ ಅಧಿಕಾರಕ್ಕೆ ಬರುವ ಅಗ್ನಿಗಳೂ ಅಂತಹ ದೇವತೆಗಳ ಜೊತೆಯಲ್ಲಿ ಮುಂದೆ ಬಂದು ಅಧಿಕಾರಮಾಡುವರು.

೫೩. ಈ ರೀತಿಯಾಗಿ ಅಗ್ನಿಗಳ ವಿಷಯದಲ್ಲಿ ಅವರ ಗುಂಪಿನ ಉತ್ಪತ್ತಿ ಮುಂತಾದುವುಗಳ ಕ್ರಮವು ವಿಸ್ತಾರವಾಗಿಯೂ ಕ್ರಮವಾಗಿಯೂ ಹೇಳಲ್ಪಟ್ಟಿದೆ. ಮುಂದೆ ಪಿತೃದೇವತೆಗಳ ವೃಂದದ ವಿಷಯವಾಗಿ ಹೇಳುವೆನು.

ಬ್ರಹ್ಮಾಂಡ ಪುರಾಣದಲ್ಲಿ ಹನ್ನೆರಡನೇ ಅಧ್ಯಾಯವು ಸಮಾಪ್ತವು.

# ತ್ರಯೋದಶೋಽಧ್ಯಾಯಃ

**ಸೂತ ಉವಾಚ**

**ಬ್ರಹ್ಮಣಃ ಸೃಜತಃ ಪುತ್ರಾನ್ ಪೂರ್ವಂ ಸ್ವಾಯಮ್ಭುವೇಽನ್ತರೇ ।**
**ಗಾತ್ರೇಭ್ಯೋ ಜಜ್ಞಿರೇ ತಸ್ಯ ಮನುಷ್ಯಾಸುರದೇವತಾಃ ॥ ೧ ॥**

**ಪಿತೃವನ್ಮನ್ಯಮಾನಾಸ್ತಂ ಜಜ್ಞಿರೇ ಪಿತರೋಽಪಿ ಚ ।**
**ತೇಷಾಂ ನಿಸರ್ಗಃ ಪ್ರಾಗುಕ್ತಃ ಸಮಾಸಾಚ್ಛ್ರೂಯತಾಂ ಪುನಃ ॥ ೨ ॥**

**ದೇವಾಸುರ ಮನುಷ್ಯಾಂಶ್ಚ ಸೃಷ್ಟ್ವಾ ಬ್ರಹ್ಮಾಽಭ್ಯಮನ್ಯತ ।**
**ಪಿತೃವನ್ಮನ್ಯಮಾನಾ ವೈ ಜಜ್ಞಿರೇಽಸ್ಯೋಪಪಕ್ಷತಃ ॥ ೩ ॥**

**ಮಧ್ವಾದಯಃ ಷಡೃತವಃ ಪಿತೄಂಸ್ತಾನ್ ಪರಿಚಕ್ಷತೇ ।**
**ಋತವಃ ಪಿತರೋ ದೇವಾ ಇತ್ಯೇಷಾ ವೈದಿಕೀ ಶ್ರುತಿಃ ॥ ೪ ॥**

---

೧. ಸೂತಮಹರ್ಷಿಯು ಹೇಳಿದನು :—ಪೂರ್ವಕಾಲದಲ್ಲಿ ಸ್ವಾಯಮ್ಭುವ ವೆಂಬ ಮನ್ವಂತರದಲ್ಲಿ ಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸುವ ಸಮಯದಲ್ಲಿ ಬ್ರಹ್ಮನ ಅವಯವಗಳಿಂದ ಮನುಷ್ಯರು, ಅಸುರರು ಮತ್ತು ದೇವತೆಗಳು ಜನಿಸಿದರು.

೨. ಮತ್ತು ಪಿತೃದೇವತೆಗಳು ಕೂಡ ಆ ಸೃಷ್ಟಿಕರ್ತನನ್ನು ಪಿತೃವಿನಂತೆ ಭಾವಿಸಿ ಮನುಷ್ಯಾದಿ ಪ್ರಜೆಗಳ ಜೊತೆಯಲ್ಲಿ ಹುಟ್ಟಿದರು. ಅಂತಹ ಪಿತೃದೇವತೆಗಳ ಸೃಷ್ಟಿಯನ್ನು ಪೂರ್ವದಲ್ಲಿ ಸಂಕ್ಷೇಪವಾಗಿ ಹೇಳಿದ್ದರಿಂದ ಅದನ್ನೇ ಈಗ ವಿಸ್ತಾರವಾಗಿ ಹೇಳುವುದನ್ನು ಕೇಳಿರಿ.

೩. ದೇವರು-ಅಸುರರು-ಮನುಷ್ಯರು ಮುಂತಾದ ಪ್ರಜೆಗಳನ್ನು ಸೃಷ್ಟಿಸಿ ಬ್ರಹ್ಮನು ಪಿತೃದೇವತೆಗಳನ್ನು ಸೃಷ್ಟಿಸುವ ಅಭಿಮಾನವನ್ನು ಹೊಂದಿರಲು ಬ್ರಹ್ಮನ ಪಾರ್ಶ್ವಗಳೆಂಬ ಅವಯವಗಳಿಂದ ಪಿತೃಗಳು ಬ್ರಹ್ಮನಲ್ಲಿ ಪಿತೃ ಗೌರವವನ್ನಿಟ್ಟು ಜನಿಸಿದವರಾದರು.

೪. ಪಿತೃದೇವತಾ ಸೃಷ್ಟಿಯ ಅಭಿಮಾನಿಯಾದ ಬ್ರಹ್ಮದೇವನಿಂದ ಹುಟ್ಟಿದ

ಮನ್ವನ್ತರೇಷು ಸರ್ವೇಷು ಹ್ಯತೀತಾನಾಗತೇಷು ವೈ ।
ಏತೇ ಸ್ವಾಯಮ್ಭುವೇ ಪೂರ್ವಮುತ್ಪನ್ನಾಶ್ಚಾನ್ತರೇ ಶುಭೇ ॥ ೫ ॥

ಅಗ್ನಿಷ್ವಾತ್ತಾಃ ಸ್ಮೃತಾ ನಾಮ್ನಾ ತಥಾ ಬರ್ಹಿಷದಶ್ಚ ವೈ ।
ಅಯಜ್ವಾನಸ್ತಥಾ ತೇಷಾಮಾಸ<ನ್> ಯೇ ಗೃಹಮೇಧಿನಃ ॥ ೬ ॥

ಅಗ್ನಿಷ್ವಾತ್ತಾಃ ಸ್ಮೃತಾಸ್ತೇ ವೈ ಪಿತರೋಽನಾಹಿತಾಗ್ನಯಃ ।
ಯಜ್ವಾನಸ್ತೇಷು ಯೇ ತ್ವಾಸ<ನ್> ಪಿತರಸ್ಸೋಮಪೀಥಿನಃ ॥ ೭ ॥

ಸ್ಮೃತಾ ಬರ್ಹಿಷದಸ್ತೇ ವೈ ಪಿತರಸ್ತ್ವಗ್ನಿಹೋತ್ರಿಣಃ ।
ಋತವಃ ಪಿತರೋ ದೇವಾಃ ಶಾಸ್ತ್ರೇಽಸ್ಮಿನ್ನಿಶ್ಚಯಂ ಗತಾಃ ॥ ೮ ॥

---

ಮಧು ಮುಂತಾದ ಆರು ಋತುಗಳನ್ನು ಪಿತೃದೇವತೆಗಳೆಂದು ಹೇಳುತ್ತಾರೆ. ಋತುಗಳೇ ಪಿತೃದೇವತೆಗಳ ಸ್ವರೂಪವು ಎಂದು ವೇದವೂ ಹೇಳುವುದು.

೫. ಭೂತ ಭವಿಷ್ಯತ್ಕಾಲಗಳಲ್ಲಿರುವ ಎಲ್ಲ ಮನ್ವಂತರಗಳಲ್ಲಿಯೂ ಸಹ ಈ ಪಿತೃದೇವತೆಗಳು ಶುಭಕರವಾದ ಸ್ವಾಯಂಭುವವೆಂಬ ಮನ್ವನ್ತರದಲ್ಲಿ ಜನ್ಮವನ್ನು ಹೊಂದುವರು.

೬. ಈ ಪಿತೃದೇವತೆಗಳಲ್ಲಿ ಅಗ್ನಿಷ್ವಾತ್ತ ಪಿತೃಗಳು ಕೆಲವರು, ಬರ್ಹಿಷದ ಪಿತೃಗಳು ಕೆಲವರು—ಹೀಗೆ ಎರಡು ಪಂಗಡಗಳಾಗಿರುವರು. ಎರಡು ಪಂಗಡಗಳಲ್ಲಿ ಅಗ್ನ್ಯಾಧಾನಪೂರ್ವಕವಾಗಿ ಯಾಗವನ್ನು ಮಾಡದೇ ಕೇವಲ ಗೃಹಸ್ಥಾಶ್ರಮಿಗಳಾಗಿ ಯಾರು ಇದ್ದರೋ ಅಂತಹ ಅನಾಹಿತಾಗ್ನಿಗಳನ್ನು ಅಗ್ನಿಷ್ವಾತ್ತ ಪಿತೃಗಳೆಂದು ಕರೆಯುವರು.

೭. ಅಗ್ನಿಯನ್ನು ಆಧಾನ ಮಾಡಿ ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡಿ ಸೋಮ ಪಾನವನ್ನು ಮಾಡಿರುವ ಗೃಹಸ್ಥಾಶ್ರಮಿಗಳಾಗಿರುವ ಇನ್ನೊಂದು ಪಂಗಡದವರು ಯಾರೋ ಅಂತಹ ಅಗ್ನಿಹೋತ್ರಿಗಳಾದ ಪಿತೃಗಳನ್ನು ಬರ್ಹಿಷದ ಪಿತೃಗಳೆಂದು ಕರೆಯುವರು.

೮. ಈ ಎರಡು ಪಂಗಡದ ಪಿತೃದೇವತೆಗಳು ಕೂಡ ಹಿಂದೆ ಹೇಳಿದ ಋತು ಸ್ವರೂಪರು ಎಂಬುದು ಶಾಸ್ತ್ರಾಧಾರದಿಂದ ನುಡಿಯುವ ಸಿದ್ಧಾಂತವಾಗಿರುವುದು.

ಮಧುಮಾಧವೌ ರಸೌ ಜ್ಞೇಯೌ ಶುಚಿಶುಕ್ರೌ ಚ ಶುಷ್ಮಿಣೌ ।
ನಭಾಶ್ಚೈವ ನಭಸ್ಯಶ್ಚ ಜೀವಾವೇತಾವುದಾಹೃತೌ ॥ ೯ ॥

ಇಷಶ್ಚೈವ ತಥೋರ್ಜಶ್ಚ ಸ್ವಧಾವನ್ತಾವುದಾಹೃತೌ ।
ಸಹಶ್ಚೈವ ಸಹಸ್ಯಶ್ಚ ಘೋರಾವೇತಾವುದಾಹೃತೌ ॥ ೧೦ ॥

ತಪಾಶ್ಚೈವ ತಪಸ್ಯಶ್ಚ ಮನ್ಯುಮನ್ತೌ ತು ಶೈಶಿರೌ ।
ಕಾಲಾವಸ್ಥಾಸು ಷಟ್ಸ್ವೇತೇ ಮಾಸಾಖ್ಯಾ ವೈ ವ್ಯವಸ್ಥಿತಾಃ ॥ ೧೧ ॥

ಇಮೇ ಚ ಋತವಃ ಪ್ರೋಕ್ತಾಶ್ಚೇತನಾಚೇತನೇಷು ವೈ ।
ಋತವೋ ಬ್ರಹ್ಮಣಃ ಪುತ್ರಾ ವಿಜ್ಞೇಯಾಸ್ತೇಽಭಿಮಾನಿನಃ ॥ ೧೨ ॥

ಮಾಸಾರ್ಧಮಾಸಸ್ಥಾನೇಷು ಸ್ಥಾನಿನೋ ಋತವೋ ಮತಾಃ ।
ಸ್ಥಾನಾನಾಂ ವ್ಯತಿರೇಕೇಣ ಜ್ಞೇಯಾಃ ಸ್ಥಾನಾಭಿಮಾನಿನಃ ॥ ೧೩ ॥

---

೯. ಹಿಂದೆ ಸೂಚಿಸಿದಂತೆ ಆರು ಸಂಖ್ಯೆಯಿಂದ ಪ್ರಸಿದ್ಧಿ ಹೊಂದಿರುವ ಋತುಗಳಲ್ಲಿ ಎರಡೆರಡು ಮಾಸಗಳನ್ನೊಳಗೊಂಡ ದ್ವಂದ್ವಕ್ಕೆ ಒಂದೊಂದು ಋತುವಿನ ಹೆಸರು ಈ ಕೆಳಗೆ ಕಂಡಂತೆ ಇದೆ. ಮಧು-ಮಾಧವ ಮಾಸಗಳಿಗೆ ರಸ ಎಂದೂ, ಶುಚಿ-ಶುಕ್ರ ಎಂಬ ಮಾಸಗಳಿಗೆ ಶುಷ್ಮೀ ಎಂದೂ, ನಭ-ನಭಸ್ಯ ಎಂಬ ಮಾಸಗಳಿಗೆ ಜೀವ ಎಂದೂ ಹೆಸರು.

೧೦. ಹಾಗೆಯೇ ಇಷ-ಊರ್ಜ ಮಾಸಗಳಿಗೆ ಸ್ವಧಾವತ್ ಎಂದೂ, ಸಹ-ಸಹಸ್ಯವೆಂಬ ಮಾಸಗಳಿಗೆ ಘೋರ ಎಂದೂ ಹೆಸರು.

೧೧. ಶಿಶಿರ ಋತುವಿಗೆ ಸಂಬಂಧಿಸಿದ ತಪ-ತಪಸ್ಯ ಎಂಬ ಮಾಸಗಳಿಗೆ ಮನ್ಯುಮತ್ ಎಂಬ ಹೆಸರು ಬಂದಿದೆ. ಹೀಗೆ ಆರು ಋತುಗಳು ಕಾಲಾತ್ಮಕವಾಗಿ ಪರ್ಯಾಯವಾಗಿ ನಡೆಯುತ್ತಲಿರುವ ಮಧು-ಮುಂತಾದ ಹನ್ನೆರಡು ಮಾಸಗಳಲ್ಲಿ ಅಂತರ್ಭಾವವನ್ನು ಹೊಂದಿರುತ್ತವೆ.

೧೨. ಹೀಗೆ ಬ್ರಹ್ಮನಿಂದ ಜನ್ಮವೆತ್ತಿ ಬ್ರಹ್ಮಪುತ್ರರಾದ ಋತುಗಳು ಪ್ರಪಂಚದಲ್ಲಿರುವ ಚೇತನ-ಅಚೇತನವೆಂಬ ಎಲ್ಲ ವಸ್ತುಗಳಲ್ಲಿಯೂ ಸಹ ಅಭಿಮಾನವನ್ನಿಟ್ಟುಕೊಂಡಿರುವವರಾಗಿರುತ್ತಾರೆ.

೧೩. ಮತ್ತು ಈ ಋತುಗಳು ಮಾಸ-ಅರ್ಧಮಾಸವೆಂಬ ಸ್ಥಾನಗಳಲ್ಲಿ ವಿಶೇಷ

**ಅಹೋರಾತ್ರಾಣಿ ಮಾಸಾಶ್ಚ ಋತವಶ್ಚಾಯನಾನಿ ಚ ।**
**ಸಂವತ್ಸರಾಶ್ಚ ಸ್ಥಾನಾನಿ ಕಾಮಾಖ್ಯಾ ಹ್ಯಭಿಮಾನಿನಾಮ್ ॥ ೧೪ ॥**

**ಏತೇಷು ಸ್ಥಾನಿನೋ ಯೇ ತು ಕಾಲಾವಸ್ಥಾನ್ಯವಸ್ಥಿತಾಃ ।**
**ತತ್ಸತತ್ತ್ವಾತ್ತದಾತ್ಮಾನಸ್ತಾನ್ವಕ್ಷ್ಯಾಮಿ ನಿಬೋಧತ ॥ ೧೫ ॥**

**ಪಾರ್ವಣ್ಯಸ್ತಿಥಯಃ ಸನ್ಧ್ಯಾಃ ಪಕ್ಷಾ ಮಾಸಾರ್ಧಸಮ್ಮಿತಾಃ ।**
**ನಿಮೇಷಾಶ್ಚ ಕಲಾಃ ಕಾಷ್ಠಾ ಮುಹೂರ್ತಾ ದಿವಸಾಃ ಕ್ಷಯಾಃ ॥ ೧೬ ॥**

**ದ್ವಾವರ್ಧಮಾಸೌ ಮಾಸಸ್ತು ದ್ವೌ ಮಾಸಾವೃತುರುಚ್ಯತೇ ।**
**ಋತುತ್ರಯಂ ಚಾಪ್ಯಯನಂ ದ್ವೇಽಯನೇ ದಕ್ಷಿಣೋತ್ತರೇ ॥ ೧೭ ॥**

---

ವಾದ ಅಭಿಮಾನವನ್ನಿಟ್ಟುಕೊಂಡಿರುತ್ತಾರೆ. ಅಭಿಮಾನಿಗಳಾದ ಈ ದೇವತೆಗಳು ತಮ್ಮ ಅಭಿಮಾನಕ್ಕೆ ಗೋಚರಗಳಾದ ಸ್ಥಾನಗಳಿಗಿಂತ ಬೇರೆಯಾಗಿರುವರು

೧೪. ಮತ್ತು ಈ ಅಭಿಮಾನಿ ದೇವತೆಗಳ ಅಭಿಮಾನಾಸ್ಪದವಾದ ಕಾಲಾಂಶಗಳು ಅಹೋರಾತ್ರಗಳು-ಮಾಸಗಳು-ಋತುಗಳು-ಅಯನಗಳು-ಸಂವತ್ಸರಗಳು ಹೀಗೆ ಇಚ್ಛಾನುಸಾರವಾದ ಅನೇಕ ಹೆಸರುಗಳನ್ನು ಹೊಂದಿಕೊಂಡಿರುತ್ತವೆ.

೧೫. ಈ ಆಧಾರಗಳಲ್ಲಿ ಅಭಿಮಾನಿಗಳಾಗಿ ಸ್ಥಾನಿ ದೇವತೆಗಳೆಂದು ಪ್ರಸಿದ್ಧಿ ಹೊಂದಿದ ಕಾಲಾಂಶಗಳು ಯಾವುವು ಇವೆಯೋ ಅವು ಕಾಲವೆಂಬ ವಸ್ತು ತತ್ವಕ್ಕೆ ಸೇರಿ ಕಾಲಾತ್ಮಕಗಳಾದ ಅಂಶಗಳಾಗಿವೆ. ಅಂತಹ ದೇವತೆಗಳ ವಿಷಯವಾಗಿ ಹೇಳುವುದನ್ನು ಕೇಳಿರಿ.

೧೬. ಪರ್ವ ತಿಥಿಗಳಿಂದ ಕೂಡಿದ ಇತರ ತಿಥಿಗಳು, ಸಂಧ್ಯೆಗಳು, ಪಕ್ಷಗಳು, ಮಾಸ-ಅರ್ಧಮಾಸಗಳು, ನಿಮೇಷಗಳು, ಕಲೆಗಳು, ಕಾಷ್ಠೆಗಳು, ಮುಹೂರ್ತಗಳು, ದಿವಸಗಳು, ಮತ್ತು ದಿವಸಾವಸಾನರೂಪವಾದ ರಾತ್ರಿಗಳು—ಇವೆಲ್ಲವೂ ಕಾಲಾವಸ್ಥೆಗಳು.

೧೭. ಇವುಗಳಲ್ಲಿ ಎರಡು ಅರ್ಧ ತಿಂಗಳು ಅಥವಾ ಪಕ್ಷಗಳು ಸೇರಿ ಮಾಸವಾಗುವುದು. ಎರಡು ಮಾಸಗಳು ಸೇರಿ ಋತುವಾಗುವುದು. ಅಂತಹ ಮೂರು ಋತುಗಳು ಸೇರಿದರೆ ಒಂದು ಅಯನವಾಗುವುದು. ಮೂರು ಋತುಗಳ ಒಂದು ಅಯನವು ದಕ್ಷಿಣಾಯನವೆಂದೂ ಇನ್ನೊಂದು ಉತ್ತರಾಯಣವೆಂದೂ ಹೇಳಲ್ಪಡುವುವು.

**ಸಂವತ್ಸರಃ ಸನೋತಶ್ಚ ಸ್ಥಾನಾನ್ಯೇತಾನಿ ಸ್ಥಾನಿನಾಮ್ ।**
**ಋತವಸ್ತು ನಿಮೇಃ ಪುತ್ರಾ ವಿಜ್ಞೇಯಾಸ್ತೇ ತಥೈವ ಷಟ್ ॥ ೧೮ ॥**

**ಋತುಪುತ್ರಾಃ ಸ್ಮೃತಾಃ ಪಂಚ ಪ್ರಜಾಃ ಸ್ವಾರ್ತವಲಕ್ಷಣಾಃ ।**
**ಯಸ್ಮಾಚ್ಚೈವಾರ್ತವೇಭ್ಯಸ್ತು ಜಾಯನ್ತೇ ಸ್ಥಾಣುಜಙ್ಗಮಾಃ ॥ ೧೯ ॥**

**ಆರ್ತವಾಃ ಪಿತರಸ್ತಸ್ಮಾದೃತವಶ್ಚ ಪಿತಾಮಹಾಃ ॥**
**ಸನೋತಾಸ್ತು ಪ್ರಸೂಯನ್ತೇ ಪ್ರಜಾಶ್ಚೈವ ಪ್ರಜಾಪತೇಃ ॥ ೨೦ ॥**

**ತಸ್ಮಾತ್ಸಂಸ್ಮೃತಃ ಪ್ರಜಾನಾಂ ವೈ ವತ್ಸರಃ ಪ್ರಪಿತಾಮಹಃ ।**
**ಸ್ಥಾನೇಷು ಸ್ಥಾನಿನೋ ಹ್ಯೇತೇ ಸ್ಥಾನಾತ್ಮಾನಃ ಪ್ರಕೀರ್ತಿತಾಃ ॥ ೨೧ ॥**

**ತದಾಖ್ಯಾಸ್ತತ್ಸತತ್ತ್ವಾಶ್ಚ ತದಾತ್ಮಾನಶ್ಚ ತೇ ಸ್ಮೃತಾಃ ।**
**ಪ್ರಜಾಪತಿಃ ಸ್ಮೃತೋ ಯಸ್ತು ಸ ತು ಸಂವತ್ಸರೋ ಮತಃ ॥ ೨೨ ॥**

---

೧೮. ಈ ಎಲ್ಲ ಕಾಲಾಂಶಗಳು ಒಂದು ಸಂವತ್ಸರ ಕಾಲದಲ್ಲಿ ಅಡಕವಾಗುವುವು. ಇವೆಲ್ಲವೂ ಕಾಲಾಭಿಮಾನಿ ದೇವತೆಗಳ ಸ್ಥಾನಗಳು. ಇಂತಹ ಆರು ಋತುಗಳನ್ನು ನಿಮಿಪುತ್ರರೆಂದೂ ತಿಳಿಯತಕ್ಕದ್ದು.

೧೯. ಮೇಲೆ ಹೇಳಿದ ಋತು ದೇವತೆಗಳಿಗೆ ತಮ್ಮ ತಮ್ಮ ಋತು ಚಿಹ್ನೆಯಿಂದ ಕೂಡಿದ ಆರ್ತವರೆಂದು ಐದು ಜನ ಪುತ್ರರು ಇರುವರು. ಈ ಲೋಕದಲ್ಲಿ ಹುಟ್ಟುವ ಪ್ರತಿಯೊಂದು ಸ್ಥಾವರ-ಜಂಗಮವೂ ಆರ್ತವಗಳಿಂದಲೇ ಹುಟ್ಟುವುದು.

೨೦. ಈ ಕಾರಣದಿಂದ ಸ್ಥಾವರ ಜಂಗಮ ರೂಪವಾದ, ಪ್ರಜಾಪತಿಯಿಂದ ಅವಿಚ್ಛಿನ್ನವಾಗಿ ಹುಟ್ಟುತ್ತಿರುವ ಪ್ರಜೆಗಳಿಗೆಲ್ಲ ಸಾಮಾನ್ಯವಾಗಿ ಆರ್ತವರು ಪಿತೃಗಳೆಂದೂ, ಋತುಗಳು ಪಿತಾಮಹ (ತಾತ) ರೆಂದೂ ಹೇಳಲ್ಪಡುವರು.

೨೧. ಮತ್ತು ಇದೇ ಜನ್ಮ ಕ್ರಮವನ್ನು ಧ್ಯಾನಿಸಿ ಪ್ರಜೆಗಳಿಗೆ ಪಿತಾಮಹ ಸ್ಥಾನದಲ್ಲಿದ್ದ ಋತುಗಳಿಗೆ ವತ್ಸರ ಪ್ರಜಾಪತಿಯು ಪಿತೃವಾಗಿರುವುದರಿಂದ ಪ್ರಜೆಗಳಿಗೆ ವತ್ಸರ ಪ್ರಜಾಪತಿಯು ಪ್ರಪಿತಾಮಹ (ಮುತ್ತಾತ) ನೆಂದು ಕರೆಯಲ್ಪಡುವನು. ಆಯಾಯ ಸ್ಥಾನಗಳಲ್ಲಿರುವ ಸ್ಥಾನಾಭಿಮಾನಿಗಳು ಸ್ಥಾನದ ಸ್ವಭಾವದಿಂದ ಇರುವವರಾಗಿದ್ದಾರೆ.

೨೨. ಮತ್ತು ಸ್ಥಾನಗಳ ಹೆಸರು, ಸ್ಥಾನಗಳ ತತ್ತ್ವ, ಸ್ಥಾನಗಳ ಸ್ವಭಾವ, ಇವೆ

ಸಂವತ್ಸರಸುತೋ ಹ್ಯಗ್ನಿಃ ಋತ ಇತ್ಯುಚ್ಯತೇ ಬುಧೈಃ ।
ಋತಾತ್ತು ಋತವೋ ಯಸ್ಮಾಜ್ಜಜ್ಞಿರೇ ಋತವಸ್ತತಃ ॥ ೨೩ ॥

ಮಾಸಾಃ ಷಡರ್ತವೋ ಜ್ಞೇಯಾಸ್ತೇಷಾಂ ಪಂಚಾರ್ತವಾಃ ಸ್ಮೃತಾಃ ।
ದ್ವಿಪದಾಂ ಚತುಷ್ಪದಾಂ ಚೈವ ಪಕ್ಷಿಣಾಂ ಸರ್ಪತಾಮಪಿ ॥ ೨೪ ॥

ಸ್ಥಾವರಾಣಾಂ ಚ ಪಂಚಾನಾಂ ಪುಷ್ಪಂ ಕಾಲಾರ್ತವಂ ಸ್ಮೃತಮ್ ।
ಋತುತ್ವಮಾರ್ತವತ್ವಂ ಚ ಪಿತೃತ್ವಂ ಚ ಪ್ರಕೀರ್ತಿತಮ್ ॥ ೨೫ ॥

ಇತ್ಯೇತೇ ಪಿತರೋ ಜ್ಞೇಯಾ ಋತವಶ್ಚಾರ್ತವಾಶ್ಚ ಯೇ ।
ಸರ್ವಭೂತಾನಿ ತೇಭ್ಯೋ ಯದೃತುಕಾಲಾದ್ವಿಜಜ್ಞಿರೇ ॥ ೨೬ ॥

---

ಸ್ಥಾನಿ ದೇವತೆಗಳಿಗೂ ಇರುವುವು. ಅಲ್ಲದೆ ಬೇರೆಯಾಗಿ ಹೆಸರು, ತತ್ತ್ವ, ಸ್ವಭಾವ ಗಳು ಇವೆ. ಹಿಂದೆ ಪ್ರಜಾಪತಿಯೆಂದು ಕರೆಯಲ್ಪಟ್ಟವನು ಸಂವತ್ಸರಾತ್ಮಕನು.

೨೩. ಸಂವತ್ಸರ ಪ್ರಜಾಪತಿಯ ಪುತ್ರನಾಗಿ ಜನಿಸಿದ ಋತ ಎಂಬ ಅಗ್ನಿಯಿಂದ ಋತುಗಳು ಹುಟ್ಟಿರುವುದರಿಂದ ಋತ ಎಂಬ ಪಿತೃವಿನ ನಾಮ ಸಂಬಂಧದಿಂದ ಋತು ಎಂಬ ಹೆಸರನ್ನು ಹೊಂದಿರುತ್ತವೆ.

೨೪.೨೫. ಒಂದು ಸಂವತ್ಸರಕ್ಕೆ ಅವಯವಗಳಾದ ಹನ್ನೆರಡು ಮಾಸಗಳಲ್ಲಿ ವಿಭಾಗದಿಂದ ಆರು ಋತುಗಳೂ ಐದು ಆರ್ತವಗಳೂ ಇರುವುವುಗಳಾಗಿ ಎರಡು ಕಾಲಿನ ಪ್ರಾಣಿ, ನಾಲ್ಕು ಕಾಲಿನ ಪ್ರಾಣಿ, ಪಕ್ಷಿಗಳು, ಹರಿಯುವ ಪ್ರಾಣಿ, ಮತ್ತು ಸ್ಥಾವರಗಳೆಂಬ ಈ ಐದು ಕಾರ್ಯಗಳ ಉತ್ತರೋತ್ತರ ಸಂತತಿಯು ಜನಿಸುವುದಕ್ಕೆ ಕಾಲಾನುಗುಣವಾಗಿ ರಜಃ ಅಥವಾ ಪುಷ್ಪವೆಂಬ ರೂಪದಿಂದ ಕಾರಣವಾಗಿರುವುವು. ಹೀಗೆ ಋತುಗಳ ಸ್ವರೂಪವೂ ಆರ್ತವಗಳ ಸ್ವರೂಪವೂ ಇವುಗಳ ಪಿತೃತ್ವವೂ ಹೇಳಲ್ಪಟ್ಟಿತು.

೨೬. ಸರ್ವ ಪ್ರಾಣಿಗಳೂ ಋತು ಕಾಲವನ್ನನುಸರಿಸಿ ಜನ್ಮವೆತ್ತುವುದರಿಂದ ಜನ್ಮಕ್ಕೆ ಕಾರಣಗಳಾದ ಋತು ಮತ್ತು ಆರ್ತವ ಇವೆರಡನ್ನೂ ಪ್ರಪಂಚದ ಪಿತೃಗ ಳನ್ನಾಗಿ ತಿಳಿಯಬೇಕು.

ತಸ್ಮಾದೇತೇ ಹಿ ಪಿತರ ಆರ್ತವಾ ಇತಿ ನಃ ಶ್ರುತಮ್ ।
ಮನ್ವನ್ತರೇಷ್ವಿಹ ತ್ವೇತೇ ಸ್ಥಿತಾಃ ಕಾಲಾಭಿಮಾನಿನಃ ॥ ೨೭ ॥

ಕಾರ್ಯಕಾರಣಯುಕ್ತಾಸ್ತು ಐಶ್ವರ್ಯಾದ್ವ್ಯಾಪ್ಯ ಸಂಸ್ಥಿತಾಃ ।
ಸ್ಥಾನಾಭಿಮಾನಿನೋ ಹ್ಯೇತೇ ತಿಷ್ಠನ್ತೀಹ ಪ್ರಸಂಗವಾತ್ ॥ ೨೮ ॥

ಅಗ್ನಿಷ್ವಾತ್ತಾ ಬರ್ಹಿಷದಃ ಪಿತರೋ ವಿವಿಧಾಃ ಪುನಃ ।
ಜಜ್ಞೇ ಸ್ವಧಾ ಪಿತೃಭ್ಯಸ್ತು ದ್ವೇ ಕನ್ಯೇ ಲೋಕವಿಶ್ರುತೇ ॥ ೨೯ ॥

ಮೇನಾ ಚ ಧಾರಣೀ ಚೈವ ಯಾಭ್ಯಾಂ ಧೃತಮಿದಂ ಜಗತ್ ।
ತೇ ಉಭೇ ಬ್ರಹ್ಮವಾದಿನ್ಯೌ ಯೋಗಿನ್ಯೌ ಚೈವ ತೇ ಉಭೇ ॥ ೩೦ ॥

ಪಿತರಸ್ತೇ ನಿಜೇ ಕನ್ಯೇ ಧರ್ಮಾರ್ಥಂ ಪ್ರದದುಃ ಶುಭೇ ।
ಅಗ್ನಿಷ್ವಾತ್ತಾಸ್ತು ಯೇ ಪ್ರೋಕ್ತಾಸ್ತೇಷಾಂ ಮೇನಾ ತು ಮಾನಸೀ ॥ ೩೧ ॥

---

೨೭. ಋತುಗಳನ್ನು ಅನುಸರಿಸಿ ಹುಟ್ಟುವುದರಿಂದ ಋತುಗಳು ಪಿತೃಗಳಾದಂತೆ ಆರ್ತವಕ್ಕೆ ಅಧೀನವಾಗಿಯೇ ಸ್ಥಾವರ ಜಂಗಮಗಳು ಜನ್ಮವೆತ್ತುವುದರಿಂದ ಆರ್ತವಗಳೂ ಪಿತೃಗಳೆಂದು ಹೇಳಲ್ಪಡುವುವು. ಮನ್ವನ್ತರಗಳಲ್ಲಿ ಇವರು ಕಾಲಾಭಿಮಾನಿಗಳಾಗಿ ಇರತಕ್ಕವರು.

೨೮. ಈ ದೇವತೆಗಳು ಸಾಧಾರಣ ಪ್ರಾಣಿಗಳಂತೆ ಕಾರ್ಯಕಾರಣ (ದೇಹೇಂದ್ರಿಯ) ಗಳಿಂದ ಕೂಡಿದ್ದರೂ ಈಶ್ವರತ್ವ ಶಕ್ತಿಯು ಹೆಚ್ಚಾಗಿರುವುದರಿಂದ ಸೂಕ್ಷ್ಮರೂಪದಿಂದ ಪ್ರಪಂಚವನ್ನೆಲ್ಲಾ ವ್ಯಾಪಿಸಿಕೊಂಡಿವೆ. ಹೀಗೆಯೇ ಸ್ಥಾನಾಭಿಮಾನದಿಂದ ಕೂಡಿ ಪ್ರಲಯಪರ್ಯನ್ತವೂ ಇರುವುವು.

೨೯. ಹೀಗೆ ಸ್ಥಾನಾಭಿಮಾನದಿಂದ ಇರುವ ದೇವತೆಗಳು ಅಗ್ನಿಷ್ವಾತ್ತ ಬರ್ಹಿಷದ ಎಂಬುದಾಗಿ ಇರುವ ಪಿತೃದೇವತಾಸ್ವರೂಪರು. ಇಂತಹ ಪಿತೃದೇವತೆಗಳ ಭಾರ್ಯೆಯಾದ ಸ್ವಧಾದೇವಿಯು ಲೋಕಪ್ರಸಿದ್ಧರಾದ ಇಬ್ಬರು ಕನ್ಯೆಯರನ್ನು ಹೆತ್ತಳು.

೩೦. ಪ್ರಪಂಚವನ್ನು ಧಾರಣೆ ಮಾಡಲು ಅದ್ಭುತ ಶಕ್ತಿಯಿಂದ ಕೂಡಿದ ಆ ಕನ್ಯೆಯರು ಮೇನಾ–ಧಾರಣೀ ಎಂಬ ಹೆಸರುಗಳುಳ್ಳವರಾಗಿಯೂ ಯೋಗಿನಿಯರೂ ಮತ್ತು ಬ್ರಹ್ಮವಾದಿನಿಯರೂ ಆಗಿದ್ದರು.

೩೧. ಆ ಪಿತೃದೇವತೆಗಳು ತಮ್ಮ ಶುಭ ಲಕ್ಷಣಗಳಿಂದ ಕೂಡಿದ ಕನ್ಯೆಯು

**ಧಾರಣೀ ಮಾನಸೀ ಚೈವ ಕನ್ಯಾ ಬರ್ಹಿಷದಾಂ ಸ್ಮೃತಾ ।**
**ಮೇರೋಸ್ತಾಂ ಧಾರಣೀಂ ನಾಮ ಪತ್ನ್ಯರ್ಥಂ ತಾಂ ಸೃಜನ್ ಶುಭಾಮ್ ॥ ೩೨ ॥**

**ಪಿತರಸ್ತೇ ಬರ್ಹಿಷದಃ ಸ್ಮೃತಾ ಯೇ ಸೋಮಪಾಯಿನಃ ।**
**ಅಗ್ನಿಷ್ವಾತ್ತಾಸ್ತು ತಾಂ ಮೇನಾಂ ಪತ್ನೀಂ ಹಿಮವತೇ ದದುಃ॥ ೩೩ ॥**

**ಉಪಹೂತಾಃ ಸ್ಮೃತಾ ಯೇ ವೈ ತದ್ದೌಹಿತ್ರಾನ್ನಿಬೋಧತ ।**
**ಮೇನಾ ಹಿಮವತಃ ಪತ್ನೀ ಮೈನಾಕಂ ಸಾ ವ್ಯಜಾಯತ ॥ ೩೪ ॥**

**ಗಂಗಾಂ ಸರಿದ್ವರಾಂ ಚೈವ ಪತ್ನೀ ಯಾ ಲವಣೋದಧೇಃ ।**
**ಮೈನಾಕಸ್ಯಾತ್ಮಜಃ ಕ್ರೌಂಚಃ ಕ್ರೌಂಚದ್ವೀಪೋ ಯತಃ ಸ್ಮೃತಃ॥ ೩೫ ||**

---

ರನ್ನು ಧರ್ಮಾಭಿವೃದ್ಧಿಗಾಗಿ ದಾನ ಮಾಡಿಕೊಡುವವರಾದರು. ಅವರಲ್ಲಿ ಅಗ್ನಿಷ್ವಾತ್ತ ರೆಂಬ ಪಿತೃಗಳಿಗೆ ಮೇನಾ ಎಂಬುವಳು ಮಾನಸಪುತ್ರಿಯಾಗಿದ್ದಳು.

೩೨. ಹಾಗೆಯೇ ಬರ್ಹಿಷದರೆಂಬ ಪಿತೃಗಳಿಗೆ ಧಾರಣೀ ಎಂಬುವಳು ಮಾನಸ ಪುತ್ರಿಯಾಗಿದ್ದಳು. ಧಾರಣೀ ಎಂಬುವಳನ್ನು ಮೇರುಪರ್ವತಕ್ಕೆ ಕನ್ಯಾದಾನಮಾಡಿ ಕೊಟ್ಟಿದ್ದರಿಂದ ಆಕೆಯು ಮೇರುವಿಗೆ ಧರ್ಮಪತ್ನಿಯಾದಳು.

೩೩. ಬರ್ಹಿಷದರೆಂಬ ಸೋಮಪಾನ ಮಾಡಿದ ಪಿತೃದೇವತೆಗಳು ತಮ್ಮ ಪುತ್ರಿ ಮೇನಾ ಎಂಬುವಳನ್ನು ಹಿಮವಂತನಿಗೆ ಕನ್ಯಾದಾನ ಮಾಡಿಕೊಟ್ಟಿದ್ದರಿಂದ ಮೇನಾ ದೇವಿಯು ಹಿಮವಂತನ ಧರ್ಮಪತ್ನಿಯಾದಳು.

೩೪. ಆ ಪಿತೃದೇವತೆಗಳ ಮೊಮ್ಮಕ್ಕಳು (ಹೆಣ್ಣು ಮಗಳ ಮಕ್ಕಳು) ಉಪ ಹೂತರೆಂದು ಪ್ರಸಿದ್ಧರಾಗಿರುವುದನ್ನು ಕೇಳಿರಿ. ಹಿಮವಂತನ ಪತ್ನಿಯಾದ ಮೇನಾ ದೇವಿಯು ಮೈನಾಕನೆಂಬ ಪುತ್ರನನ್ನು ಹಡೆದಳು.

೩೫. ಮತ್ತು ಶ್ರೇಷ್ಠವಾದ ನದಿಯೆಂದು ಪ್ರಸಿದ್ಧಿ ಹೊಂದಿದ, ಲವಣ ಸಮುದ್ರಕ್ಕೆ ಪತ್ನಿಯಾಗುವ ಗಂಗಾನದಿಯೆಂಬ ಕನ್ಯೆಯನ್ನೂ ಹಡೆದಳು. ಮೈನಾಕನಿಗೆ ತನ್ನಿಂ ದಲೇ ಕ್ರೌಂಚದ್ವೀಪಕ್ಕೆ ಆ ಹೆಸರನ್ನು ತಂದಿಟ್ಟ ಕ್ರೌಂಚ ಪರ್ವತವು ಪುತ್ರನಾಗಿ ಜನಿಸಿತು.

**ಮೇರೋಸ್ತು ಧಾರಣೀ ಪತ್ನೀ ದಿವ್ಯೌಷಧಿಸಮನ್ವಿತಮ್ ।**
**ಮಂದರಂ ಸುಷುವೇ ಪುತ್ರಂ ತಿಸ್ರಃ ಕನ್ಯಾಶ್ಚ ವಿಶ್ರುತಾಃ ॥ ೩೬ ॥**

**ವೇಲಾಂ ಚ ನಿಯತಿಂ ಚೈವ ತೃತೀಯಾಂ ಚಾಯತಿಂ ವಿದುಃ ।**
**ಧಾತುಶ್ಚೈವಾಯತಿಃ ಪತ್ನೀ ವಿಧಾತುರ್ನಿಯತಿಃ ಸ್ಮೃತಾ ॥ ೩೭ ॥**

**ಸ್ವಾಯಮ್ಭುವೇಽನ್ತರೇ ಪೂರ್ವಂ ಯಯೋರ್ವೈ ಕೀರ್ತಿತಾಃ ಪ್ರಜಾಃ ।**
**ಸುಷುವೇ ಸಾಗರಾದ್ವೇಲಾ ಕನ್ಯಾಮೇಕಾಮನಿನ್ದಿತಾಮ್ ॥ ೩೮ ॥**

**ಸವರ್ಣಾಂ ನಾಮ ಸಾಮುದ್ರೀಂ ಪತ್ನೀಂ ಪ್ರಾಚೀನಬರ್ಹಿಷಃ ।**
**ಸವರ್ಣಾಯಾಂ ಸುತಾ ಜಾತಾ ದಶ ಪ್ರಾಚೀನಬರ್ಹಿಷಃ ॥ ೩೯ ॥**

**ಸರ್ವೇ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾಃ ।**
**ತೇಷಾಂ ಸ್ವಾಯಮ್ಭುವೋ ದಕ್ಷಃ ಪುತ್ರತ್ವಂ ಜಗ್ಮಿವಾನ್ಪ್ರಭುಃ॥ ೪೦ ॥**

---

೩೬. ಮೇರು ಪರ್ವತದ ಧರ್ಮಪತ್ನಿಯಾದ ಧಾರಣೀ ದೇವಿಯು ದಿವ್ಯವಾದ ಓಷಧಿಗಳಿಂದ ಕೂಡಿದ ಮಂದರನೆಂಬ ಪುತ್ರನನ್ನೂ ಮೂರು ಜನ ಕನ್ನಿಕೆಯರನ್ನೂ ಹಡೆದಳು.

೩೭. ಆ ಮೂರು ಕನ್ಯೆಯರಲ್ಲಿ ಒಬ್ಬಳಿಗೆ ವೇಲಾ ಎಂದು ಹೆಸರು. ಮತ್ತೊಬ್ಬಳಿಗೆ ನಿಯತಿ ಎಂದೂ ಇನ್ನೊಬ್ಬಳಿಗೆ ಆಯತಿ ಎಂದೂ ಹೆಸರುಗಳಿದ್ದವು. ನಿಯತಿ, ಆಯತಿ ಎಂಬಿಬ್ಬರು ಕ್ರಮವಾಗಿ ವಿಧಾತೃ-ಧಾತೃ ಎಂಬಿಬ್ಬರಿಗೆ ಪತ್ನಿಯಾಗಿದ್ದರು.

೩೮. ಪೂರ್ವದಲ್ಲಿ ಸ್ವಾಯಮ್ಭುವ ಮನ್ವಂತರದಲ್ಲಿ ಆಯತಿ ನಿಯತಿ ಎಂಬಿಬ್ಬರ ಪ್ರಜೆಗಳನ್ನು ಹೇಳಿರುತ್ತೇನೆ. ವೇಲಾ ಎಂಬುವಳು ಸಾಗರನ ಪತ್ನಿಯಾಗಿ ಪ್ರಶಸ್ತಳಾದ ಒಬ್ಬಳು ಕನ್ಯೆಯನ್ನು ಹೆತ್ತಳು.

೩೯. ಆ ಕನ್ಯೆಯ ಹೆಸರು ಸವರ್ಣಾ ಎಂದು ಪ್ರಸಿದ್ಧವಾಗಿದೆ. ಈಕೆಯು ಪ್ರಾಚೀನ ಬರ್ಹಿ ಎಂಬವನ ಪತ್ನಿಯಾಗಿದ್ದು ಹತ್ತು ಮಂದಿ ಪ್ರಚೇತರು ಎಂದು ಕರೆಯಲ್ಪಡುವ ಪುತ್ರರನ್ನು ಹೊಂದಿದಳು.

೪೦. ಹತ್ತು ಜನ ಪುತ್ರರೂ ಸಹ ಧನುರ್ವೇದದಲ್ಲಿ ಪಾರಂಗತರಾದವರು.

ತ್ರ್ಯಮ್ಬಕಸ್ಯಾಭಿಶಾಪೇನ ಚಾಕ್ಷುಷಸ್ಯಾನ್ತರೇ ಮನೋಃ ।
ಏತಚ್ಛ್ರುತ್ವಾ ತತಃ ಸೂತಮಪೃಚ್ಛಚ್ಛಾಂಶಪಾಯನಿಃ ॥ ೪೧ ॥

ಉತ್ಪನ್ನಃ ಸ ಕಥಂ ದಕ್ಷೋ ಹ್ಯಭಿಶಾಪಾದ್ಭವಸ್ಯ ತು ।
ಚಾಕ್ಷುಷಸ್ಯಾನ್ತರೇ ಪೂರ್ವಂ ತನ್ನಃ ಪ್ರಬ್ರೂಹಿ ಪೃಚ್ಛತಾಮ್॥ ೪೨ ॥

ಇತ್ಯುಕ್ತಃ ಕಥಯಾಮಾಸ ಸೂತೋ ದಕ್ಷಾಶ್ರಯಾಂ ಕಥಾಮ್ ॥
ಶಾಂಶಪಾಯನಿಮಾಮನ್ತ್ರ್ಯ ತ್ರ್ಯಮ್ಬಕಾಚ್ಛಾಪಕಾರಣಮ್ ॥ ೪೩ ॥

ಸೂತ ಉವಾಚ

ದಕ್ಷಸ್ಯಾಸನ್ ಸುತಾ ಹ್ಯಷ್ಟೌ ಕನ್ಯಾ ಯಾಃ ಕೀರ್ತಿತಾ ಮಯಾ ।
ಸ್ವೇಭ್ಯೋ ಗೃಹೇಭ್ಯ ಆನಾಯ್ಯ ತಾಃ ಪಿತಾಽಭ್ಯರ್ಚಯದ್ಗೃಹೇ॥ ೪೪ ॥

---

ಮತ್ತು ಪ್ರಚೇತ ಎಂಬ ನಾಮಧೇಯದಿಂದಲೇ ಅಂಕಿತರಾದವರು. ಅಂತಹ ಹತ್ತು ಮಂದಿಗೆ ಸ್ವಯಂಭು ಪ್ರಜಾಪತಿಯ ಪುತ್ರನಾದ ಪ್ರಭುಶಕ್ತಿಯನ್ನುಳ್ಳ ದಕ್ಷಬ್ರಹ್ಮನು ಪುತ್ರತ್ವವನ್ನು ಹೊಂದಿದನು.

೪೧. ದಕ್ಷನು ಹೀಗ ಪ್ರಚೇತರ ಪುತ್ರತ್ವವನ್ನು ಹೊಂದಲು ಈಶ್ವರನ ಶಾಪವೇ ಕಾರಣವು. ಶಾಪದ ನಿಮಿತ್ತದಿಂದ ಚಾಕ್ಷುಷ ಮನ್ವನ್ತರದಲ್ಲಿ ದಕ್ಷನಿಗೆ ಪ್ರಚೇತರ ಪುತ್ರತ್ವವು ಪ್ರಾಪ್ತವಾಯಿತೆಂದು ಕೇಳಿ ಶಾಂಶಪಾಯನಿಮುನಿಯು ಸೂತಮಹರ್ಷಿ ಯನ್ನು ಪುನಃ ಪ್ರಶ್ನಿಸಿದನು.

೪೨. ದಕ್ಷಬ್ರಹ್ಮನು ಈಶ್ವರನ ಶಾಪಕ್ಕೆ ಗುರಿಯಾದುದು ಹೇಗೆ? ಮತ್ತು ಶಾಪಬಲದಿಂದ ಹಿಂದೆ ಚಾಕ್ಷುಷ ಮನ್ವನ್ತರದಲ್ಲಿ ಹೇಗೆ ಹುಟ್ಟಿದನು? ಎಂಬ ವಿಷಯ ವನ್ನು ಜಿಜ್ಞಾಸುಗಳಾದ ನಮಗೆ ವಿಸ್ತಾರವಾಗಿ ಹೇಳು ಎಂದು ಪ್ರಶ್ನಿಸಿದನು.

೪೩. ಹೀಗೆ ಪ್ರಶ್ನಿಸಲ್ಪಟ್ಟ ಆ ಸೂತಮುನಿಯು ಶಾಂಶಪಾಯನಿಯನ್ನು ಕರೆದು ದಕ್ಷಬ್ರಹ್ಮನಿಗೆ ಈಶ್ವರನಿಂದ ಶಾಪ ಪ್ರಾಪ್ತವಾಗಲು ಕಾರಣವನ್ನು ಉಪಕ್ರಮಿಸಿ ಸಂಪೂರ್ಣವಾಗಿ ದಕ್ಷನ ಕಥೆಯನ್ನು ಹೇಳಿದನು.

೪೪. ಸೂತ ಮಹಾಮುನಿಯು ಹೇಳಿದ್ದೇನೆಂದರೆ ಹಿಂದೆ ನಾನು ಹೇಳಿರುವಂತೆ ದಕ್ಷಬ್ರಹ್ಮನಿಗೆ ಯಾವ ಎಂಟು ಕನ್ಯೆಯರಿದ್ದರೋ ಅವರೆಲ್ಲರನ್ನೂ ಅವರವರ ಪತಿ ಗೃಹದಿಂದ ತನ್ನ ಮನೆಗೆ ಕರೆಸಿಕೊಂಡು ತಂದೆಯು ವಾತ್ಸಲ್ಯದಿಂದ ಉಪಚರಿಸಿದನು.

**ತತಸ್ತ್ವಭ್ಯರ್ಚಿತಾಃ ಸರ್ವಾ ನ್ಯವಸಂಸ್ತಾಃ ಪಿತುರ್ಗೃಹೇ ।**
**ತಾಸಾಂ ಜ್ಯೇಷ್ಠಾ ಸತೀ ನಾಮ ಪತ್ನೀ ಯಾ ತ್ರ್ಯಮ್ಬಕಸ್ಯ ವೈ ॥ ೪೫ ॥**

**ನಾಜುಹಾವಾತ್ಮಜಾಂ ತಾಂ ವೈ ದಕ್ಷೋ ರುದ್ರಮಭಿದ್ವಿಷನ್ ।**
**ಅಕರೋತ್ಸನ್ನತಿಂ ದಕ್ಷೇ ನ ಕದಾಚಿನ್ಮಹೇಶ್ವರಃ ॥ ೪೬ ॥**

**ಜಾಮಾತಾ ಶ್ವಶುರೇ ತಸ್ಮಿನ್ ಸ್ವಭಾವಾತ್ತೇಜಸಿ ಸ್ಥಿತಃ ।**
**ತತೋ ಜ್ಞಾತ್ವಾ ಸತೀ ಸರ್ವಾಃ ಸ್ವಸ್ರ್ಯಾಃ ಪ್ರಾಪ್ತಾಃ ಪಿತುರ್ಗೃಹಮ್॥೪೭॥**

**ಜಗಾಮ ಸಾಪ್ಯನಾಹೂತಾ ಸತೀ ತತ್ತು ಪಿತುರ್ಗೃಹಮ್ ।**
**ತಾಭ್ಯೋ ಹೀನಾಂ ಪಿತಾ ಚಕ್ರೇ ಸತ್ಯಾಃ ಪೂಜಾಮಸಮ್ಮತಾಮ್॥೪೮॥**

---

೪೫. ಹಾಗೆ ಪ್ರೀತ್ಯುಪಚಾರಗಳಿಂದ ಸನ್ಮಾನಿಸಲ್ಪಟ್ಟ ಆ ಕನ್ಯೆಯರು ಸ್ವಲ್ಪ ಕಾಲ ತಂದೆಯ ಮನೆಯಲ್ಲಿಯೇ ವಾಸಮಾಡಿದರು. ಆದರೆ ಇತರ ಕನ್ಯೆಯರಿಗೆಲ್ಲ ಜ್ಯೇಷ್ಠಳಾಗಿ ಸಾಕ್ಷಾತ್ ಮಹಾದೇವನಿಗೆ ಪತ್ನಿಯಾಗಿರುವ ಸತೀದೇವಿಯೆಂಬ ಕನ್ಯೆಯಲ್ಲಿ ತಂದೆಯು ವೈಷಮ್ಯವನ್ನು ತೋರಿಸಿದನು.

೪೬. ಆ ತನ್ನ ಮಗಳಾದ ಸತಿಯನ್ನು ಮಾತ್ರ ಆಕೆಯ ಪತಿಯಾದ ಈಶ್ವರನ ಮೇಲಿನ ದ್ವೇಷದಿಂದ ಈ ವೈಭವದಲ್ಲಿ ಕರೆಯಲಿಲ್ಲ. ಈಶ್ವರನು ಯಾವಾಗಲೂ ದಕ್ಷಬ್ರಹ್ಮನಿಗೆ ನಮಸ್ಕಾರ ಮುಂತಾದ ಗೌರವವನ್ನು ತೋರಿಸುತ್ತಿರಲಿಲ್ಲ.

೪೭. ಅಳಿಯನಿಗೆ ಮಾವನು ಪೂಜ್ಯನಾಗಿದ್ದರೂ ಸರ್ವ ಲೋಕೇಶ್ವರನಾದ ತೇಜೋಮಯನಾದ ಅಳಿಯನಿಗೆ ದಕ್ಷಬ್ರಹ್ಮನು ಮಾನ್ಯನಾಗಲಾರನು. ಆದ್ದರಿಂದ ಈಶ್ವರನು ದಕ್ಷನಲ್ಲಿ ಗೌರವ ತೋರಿಸುವುದು ಅವಶ್ಯವಾಗಿರಲಿಲ್ಲ. ಹೀಗಿರಲು ಸತೀದೇವಿಯು ತನ್ನ ತಂಗಿಯರೆಲ್ಲರೂ ತಂದೆ ಮನೆಗೆ ಬಂದಿರುವುದನ್ನು ಕೇಳಿದಳು.

೪೮. ತಾನೂ ಕೂಡ ತನ್ನ ಪಿತೃ ಗೃಹಕ್ಕೆ ಅನಾಹೂತಳಾಗಿಯೇ ಬಂದಳು. ಆಗಲಾದರೋ ದಕ್ಷನು ಇತರ ಕನ್ಯೆಯರಿಗೆ ಮಾಡಿದ ಸತ್ಕಾರಕ್ಕಿಂತಲೂ ಕಡಿಮೆಯಾದ, ಲೋಕವೇ ಒಪ್ಪಲಾರದಂತಹ ಹೀನವಾದ ಸನ್ಮಾನವನ್ನು ಸತಿಗೆ ಮಾಡುವವನಾದನು.

ತತೋಽಬ್ರವೀತ್ ಸಾ ಪಿತರಂ ದೇವೀ ಕ್ರೋಧಾದಮರ್ಷಿತಾ ।
ಯವೀಯಸೀಭ್ಯೋಽಪ್ಯಧಮಾಂ ಪೂಜಾಂ ಕೃತ್ವಾ ಮಮ ಪ್ರಭೋ॥೪೯॥

ಅಸತ್ಕೃತ್ಯ ಪಿತರ್ಮಾಂ ತ್ವಂ ಕೃತವಾನಸಿ ಗರ್ಹಿತಮ್ ।
ಅಹಂ ಜ್ಯೇಷ್ಠಾ ವರಿಷ್ಠಾ ಚ ತ್ವಂ ಮಾಂ ಸತ್ಕರ್ತುಮರ್ಹಸಿ ॥ ೫೦ ॥

ಏವಮುಕ್ತೋಽಬ್ರವೀದೇನಾಂ ದಕ್ಷಃ ಸಂರಕ್ತಲೋಚನಃ ।
ತ್ವತ್ತಃ ಶ್ರೇಷ್ಠಾ ವರಿಷ್ಠಾಶ್ಚ ಪೂಜ್ಯಾ ಬಾಲಾಸ್ಸುತಾ ಮಮ ॥ ೫೧ ॥

ತಾಸಾಂ ಚೈವ ತು ಭರ್ತಾರಃ ತೇ ಮೇ ಬಹುಮತಾಃ ಸತಿ ।
ಬ್ರಹ್ಮಿಷ್ಠಾಃ ಸುತಪಸ್ಕಾಶ್ಚ ಮಹಾಯೋಗಾಃ ಸುಧಾರ್ಮಿಕಾಃ ॥ ೫೨ ॥

---

೪೯. ಆಗ ಆ ಸತೀದೇವಿಯು ದಕ್ಷನು ತೋರಿಸಿದ ಪಕ್ಷಪಾತವನ್ನು ಸಹಿಸದೇ ಕೋಪಗೊಂಡವಳಾಗಿ ತನ್ನ ತಂದೆಯನ್ನು ಕುರಿತು ಪ್ರಭುವೇ ನನಗಿಂತಲೂ ಕಿರಿಯರಲ್ಲಿ ಮಾಡಿದ್ದ ಸನ್ಮಾನಕ್ಕಿಂತಲೂ ನನ್ನಲ್ಲಿ ಕೀಳಾದ ಮರ್ಯಾದೆಯನ್ನು ತೋರಿಸುವಿ.

೫೦. ನನಗೆ ಅವಮಾನ ಮಾಡಿ ನಿಂದ್ಯವಾದ ಕೆಲಸವನ್ನು ನೀನು ಮಾಡಿರುತ್ತೀ. ನಾನು ಎಲ್ಲ ಸಹೋದರಿಯರಲ್ಲಿ ಜ್ಯೇಷ್ಠಳಾಗಿಯೂ ಶ್ರೇಷ್ಠಳಾಗಿಯೂ ಇರುವೆನಾದ ಕಾರಣ ನೀನು ನನಗೆ ಉತ್ತಮ ರೀತಿಯಿಂದಲೇ ಸತ್ಕಾರವನ್ನು ಮಾಡಬೇಕು.

೫೧. ಸತೀದೇವಿಯ ಈ ಮಾತನ್ನು ಕೇಳಿ ದಕ್ಷಬ್ರಹ್ಮನು ಕಣ್ಣುಗಳು ಕೆಂಪಾಗುವಷ್ಟು ಕೋಪಗೊಂಡವನಾಗಿ ಸತೀದೇವಿಗೆ ಈ ರೀತಿ ಉತ್ತರವನ್ನಿತ್ತನು.—ನಿನಗಿಂತಲೂ ಇತರ ಕನ್ಯೆಯರು ಶ್ರೇಷ್ಠರೂ ಗುಣವತಿಯರೂ ಆದ ಕಾರಣ ನನಗೆ ಅವರು ಹೆಚ್ಚಾಗಿ ಪೂಜ್ಯರೇ ಹೊರತು ನೀನು ಪೂಜ್ಯಳಲ್ಲ.

೫೨. ಮತ್ತು ಆ ಕನ್ಯೆಯರ ಪತಿಯರು ಹೆಚ್ಚಾಗಿ ಧಾರ್ಮಿಕರೂ ಮಹಾಯೋಗಿಗಳೂ ತಪಸ್ವಿಗಳೂ ಬ್ರಹ್ಮಜ್ಞಾನಿಗಳೂ ಆದಕಾರಣ ಅವರೇ ನನಗೆ ಅತಿಶಯವಾಗಿ ಮಾನ್ಯರು.

ಗುಣೈಶ್ಚೈವಾಧಿಕಾಃ ಶ್ಲಾಘ್ಯಾಃ ಸರ್ವೇ ತೇ ತ್ರ್ಯಮ್ಬಕಾತ್ಸತಿ ।
ವಸಿಷ್ಠೋಽತ್ರಿಃ ಪುಲಸ್ತ್ಯಶ್ಚ ಹ್ಯಂಗಿರಾಃ ಪುಲಹಃ ಕ್ರತುಃ ॥ ೫೩ ॥

ಭೃಗುರ್ಮರೀಚಿಶ್ಚ ತಥಾ ಶ್ರೇಷ್ಠಾ ಜಾಮಾತರೋ ಮಮ ।
ಯಸ್ಮಾನ್ಮಾಂ ಸ್ಪರ್ಧತೇ ಶರ್ವಃ ಸದಾ ಚೈವಾಪಮನ್ಯತೇ ॥ ೫೪ ॥

ತೇನ ತ್ವಾಂ ನ ವಿಭೂಷಾಮಿ ಪ್ರತಿಕೂಲೋ ಹಿ ಮೇ ಭವಃ ।
ಇತ್ಯುಕ್ತವಾಂಸ್ತದಾ ದಕ್ಷಃ ಸಂಪ್ರಮೂಢೇನ ಚೇತಸಾ ॥ ೫೫ ॥

ಶಾಪಾರ್ಥಮಾತ್ಮನಶ್ಚೈವ ಯೇ ಚೋಕ್ತಾಃ ಪರಮರ್ಷಯಃ ।
ತಥೋಕ್ತಾ ಪಿತರಂ ಸಾ ವೈ ಕ್ರುದ್ಧಾ ದೇವೀದಮಬ್ರವೀತ್ ॥ ೫೬ ॥

ವಾಙ್ಮನಃಕರ್ಮಭಿರ್ಯಸ್ಮಾದದುಷ್ಟಾಂ ಮಾಂ ವಿಗರ್ಹಸೇ ।
ತಸ್ಮಾತ್ತ್ಯಜಾಮ್ಯಹಮಿಮಂ ದೇಹಂ ತಾತ ತವಾತ್ಮಜಮ್ ॥ ೫೭ ॥

---

೫೩-೫೪. ಮತ್ತು ಆ ನನ್ನ ಅಳಿಯಂದಿರು ಎಲ್ಲರೂ ಸಹ ನಿನ್ನ ಪತಿಯಾದ ಈಶ್ವರನಿಗಿಂತಲೂ ಹೆಚ್ಚಾಗಿ ಗುಣವಂತರು ಮತ್ತು ಶ್ಲಾಘ್ಯರು. ಅವರು ವಸಿಷ್ಠ, ಅತ್ರಿ, ಪುಲಸ್ತ್ಯ, ಅಂಗಿರ, ಪುಲಹ, ಕ್ರತು, ಭೃಗು, ಮರೀಚಿ ಎಂಬ ಹೆಸರುಗಳಿಂದ ಲೋಕಪ್ರಸಿದ್ಧರೂ ಶ್ರೇಷ್ಠರೂ ಆದ ಅಳಿಯಂದಿರಾಗಿರುವರು. ನಿನ್ನ ಪತಿಯು ನನ್ನನ್ನು ಯಾವಾಗಲೂ ಅವಮಾನಪಡಿಸುತ್ತಾ ಸ್ಪರ್ಧಿಸುತ್ತಾ ಇರುವನಾದ ಕಾರಣ ಅವನಿಗಿಂತ ವಸಿಷ್ಠ ಮುಂತಾದವರು ವಿನಯಾದಿ ಗುಣಗಳಿಂದ ಶ್ರೇಷ್ಠರೆನಿಸಿಕೊಂಡಿರುವರು.

೫೫. ಹೀಗೆ ದುರ್ವಿನಯಶೀಲನಾದ ಈಶ್ವರನು ನನಗೆ ಪ್ರತಿಕೂಲನಾಗಿದ್ದುದರಿಂದ ನಿನ್ನನ್ನು ಸತ್ಕರಿಸಲಾರೆನು. ಎಂಬುದಾಗಿ ವಿಚಾರ ಶೂನ್ಯವಾದ ಮನಸ್ಸಿನಿಂದ ದಕ್ಷನು ಉತ್ತರವನ್ನು ಕೊಟ್ಟನು.

೫೬. ಈ ರೀತಿಯಾಗಿ ಉತ್ತರ ಕೊಟ್ಟದ್ದರ ಪರಿಣಾಮವಾಗಿ ತನಗೆ ಮಾತ್ರವಲ್ಲದೇ ತನ್ನಿಂದ ಪ್ರಶಂಸಿಸಲ್ಪಟ್ಟ ಮಹರ್ಷಿಗಳಿಗೂ ಶಾಪವು ಸಂಭವಿಸಲು ಕಾರಣವಾಯಿತು. ಈ ರೀತಿಯ ಉತ್ತರವನ್ನು ಕೇಳಿ ಕುಪಿತಳಾದ ಸತೀದೇವಿಯು ಪುನಃ ಈ ಮಾತನ್ನು ಹೇಳಿದಳು.

೫೭. ಮಾತಿನಲ್ಲಿಯೂ, ಮನಸ್ಸಿನಲ್ಲಿಯೂ, ಕರ್ತವ್ಯಕರ್ಮದಲ್ಲಿಯೂ ಯಾವ

ತತಸ್ತೇನಾಪಮಾನೇನ ಸತೀ ದುಃಖಾದಮರ್ಷಿತಾ ।
ಅಬ್ರವೀದ್ವಚನಂ ದೇವೀ ನಮಸ್ಕೃತ್ಯ ಸ್ವಯಮ್ಭುವೇ ॥ ೫೮ ॥

ಯತ್ರಾಹಮುಪಪದ್ಯೇ ಚ ಪುನರ್ದೇಹೇನ ಭಾಸ್ವತಾ ।
ತತ್ರಾಪ್ಯಹಮಸಂಭೂತಾ ಸಂಭೂತಾ ಧಾರ್ಮಿಕಾದಪಿ ॥ ೫೯ ॥

ಗಚ್ಛೇಯಂ ಧರ್ಮಪತ್ನೀತ್ವಂ ತ್ರ್ಯಮ್ಬಕಸ್ಯೈವ ಧೀಮತಃ ।
ತತ್ರೈವಾಥ ಸಮಾಸೀನಾ ಯುಕ್ತಾತ್ಮಾನಂ ಸಮಾದಧೇ ॥ ೬೦ ॥

ಧಾರಯಾಮಾಸ ಚಾಗ್ನೇಯೀಂ ಧಾರಣಾಂ ಮನಸಾತ್ಮನಃ ।
ತತ ಆತ್ಮಸಮುತ್ಥೋಽಸ್ಯಾ ವಾಯುನಾ ಸಮುದೀರಿತಃ ॥
ಸರ್ವಾಂಗೇಭ್ಯೋವಿನಿಃ ಸೃತ್ಯ ವಹ್ನಿಸ್ತಾಂ ಭಸ್ಮಸಾತ್ಕರೋತ್ ॥ ೬೧ ॥

---

ದೋಷವೂ ಇಲ್ಲದೇ ಪವಿತ್ರಳಾದ ನನ್ನನ್ನು ಈ ರೀತಿಯಾಗಿ ನಿಂದಿಸುತ್ತಿರುವೆಯಾದ ಕಾರಣ ನಿನ್ನಿಂದ ಜನ್ಮವನ್ನು ಹೊಂದಿದ ಈ ದೇಹವನ್ನು ಈಗಲೇ ಬಿಡುವೆನು.

೫೮. ಹೀಗೆ ಹೇಳಿದ ಅನಂತರದಲ್ಲಿ ಆ ಅವಮಾನದಿಂದಾದ ಅತಿ ದುಃಖದಲ್ಲಿ ಮುಳುಗಿದವಳಾಗಿ ಸತೀದೇವಿಯು ಆದಿಕಾರಣನಾದ ಸ್ವಯಂಭು ಬ್ರಹ್ಮನಿಗೆ ನಮಸ್ಕರಿಸಿ ಈ ವಿಧವಾಗಿ ಪ್ರಾರ್ಥನಾ ವಾಕ್ಯಗಳನ್ನು ಆಡಿದಳು.

೫೯. ಕಾಂತಿಯಿಂದ ಉಜ್ವಲವಾದ ಶರೀರದಿಂದ ಎಲ್ಲಿ ನಾನು ಪುನಃ ಜನ್ಮವೆತ್ತುವೆನೋ ಅಲ್ಲಿಯೂ ಧಾರ್ಮಿಕನಿಂದಲೇ ಜನ್ಮವನ್ನು ಹೊಂದಿದವಳಾಗಿಯೂ ಈ ವಿಧದ ಅವಮಾನಕ್ಕೆ ಭಾಗಿಯಾಗದಂತೆಯೂ ಆಗಿರುವೆನು.

೬೦. ಮತ್ತು (ಜ್ಞಾನಿಯಾದ) ಸರ್ವಜ್ಞನಾದ ಈಶ್ವರನ ಧರ್ಮಪತ್ನಿಯಾಗಿಯೇ ಇರುವೆನು. ಈ ರೀತಿ ಪ್ರಾರ್ಥಿಸಿಕೊಂಡು ಅಲ್ಲಿಯೇ ಆಸನಸ್ಥಳಾಗಿ ಯೋಗದಿಂದ ಆತ್ಮ ಸಮಾಧಿಯಲ್ಲಿ ನಿರತಳಾದಳು.

೬೧. ಮತ್ತು ಅಗ್ನಿ ಸಂಬಂಧವಾದ ಧಾರಣಾ ಯೋಗವನ್ನು ನಿಶ್ಚಲವಾದ ಮನಸ್ಸಿನಿಂದ ಧ್ಯಾನಿಸಲು ಆತ್ಮ ಬಲದಿಂದ ಅಗ್ನಿಯು ಎಲ್ಲ ಅಂಗ ಪ್ರತ್ಯಂಗಗಳಿಂದ ಎದ್ದು ಗಾಳಿಯಿಂದ ಚನ್ನಾಗಿ ಉರಿಸಲ್ಪಟ್ಟದ್ದಾಗಿ ಆ ಸತೀದೇವಿಯ ಶರೀರವನ್ನು ಪೂರ್ಣವಾಗಿ ಭಸ್ಮಮಾಡಿತು.

ತದುಪಶ್ರುತ್ಯ ನಿಧನಂ ಸತ್ಯಾ ದೇವ್ಯೋಽಥ ಶೂಲಭೃತ್ ।
ಸಂವಾದಂ ಚ ತಯೋರ್ಬುದ್ಧ್ವಾ ಯಾಥಾತಥ್ಯೇನ ಶಂಕರಃ ॥
ದಕ್ಷಸ್ಯ ಚ ಋಷೀಣಾಂ ಚ ಚುಕೋಪ ಭಗವಾನ್ ಪ್ರಭುಃ ॥ ೬೨ ॥

ರುದ್ರ ಉವಾಚ
ಸರ್ವೇಷಾಮೇವ ಲೋಕಾನಾಂ ಭೂರ್ಲೋಕಸ್ತ್ವಾದಿರುಚ್ಯತೇ ।
ತಂ ಸದಾ ಧಾರಯಿಷ್ಯಾಮಿ ನಿದೇಶಾತ್ಪರಮೇಷ್ಠಿನಃ ॥ ೬೩ ॥

ಅಸ್ಯಾಂ ಕ್ಷಿತೌ ಧೃತಾ ಲೋಕಾಃ ಸರ್ವೇ ತಿಷ್ಠನ್ತಿ ಭಾಸ್ವರಾಃ ।
ತಾನಹಂ ಧಾರಯಾಮೀಹ ಸತತಂ ಚ ತದಾಜ್ಞಯಾ ॥ ॥ ೬೪ ॥

ಚಾತುರ್ವರ್ಣ್ಯಂ ಹಿ ದೇವಾನಾಂ ತೇ ಚಾಪ್ಯೇಕತ್ರ ಭುಂಜತೇ ।
ನಾಹಂ ತೈಃ ಸಹ ಭೋಕ್ಷ್ಯೇ ವೈ ತತೋ ದಾಸ್ಯನ್ತಿ ತೇ ಪೃಥಕ್॥ ೬೫ ॥

---

೬೨. ಅನಂತರದಲ್ಲಿ ಈಶ್ವರನು ಸತೀದೇವಿಗೆ ಸಂಭವಿಸಿದ ಈ ರೀತಿಯ ನಿಧನವನ್ನೂ ಇದಕ್ಕೆ ಕಾರಣವಾಗಿ ದಕ್ಷನಿಗೂ ಸತೀದೇವಿಗೂ ಆದ ಸಂವಾದವನ್ನೂ ಯಥಾವತ್ತಾಗಿ ಕೇಳಿ ಪೂಜ್ಯನೂ ಸರ್ವಲೋಕ ಪ್ರಭುವೂ ಆದ ಈಶ್ವರನು ದಕ್ಷನ ಮೇಲೂ, ಅವನು ಪ್ರಶಂಸೆ ಮಾಡಿದ ಮುನಿಗಳ ಮೇಲೂ ಕೋಪಗೊಂಡನು.

೬೩. ರುದ್ರನು ಹೇಳಿದ್ದೇನೆಂದರೆ :—ಎಲ್ಲ ಲೋಕಗಳಿಗೂ ಭೂಲೋಕವೆಂಬುದು ಆದಿಯು. ಅಂತಹ ಲೋಕವನ್ನು ಪ್ರಜಾಪತಿಯ ಅಪ್ಪಣೆಯಂತೆ ಧರಿಸಿಕೊಂಡಿರುವೆನು.

೬೪. ಸಮಸ್ತ ಲೋಕಗಳು ಈ ಭೂಮಿಯನ್ನು ಅವಲಂಬಿಸಿ ಇದರ ಬಲದಿಂದ ಧರಿಸಲ್ಪಟ್ಟವುಗಳಾಗಿ ಪ್ರಕಾಶಿಸುತ್ತಿವೆ. ಅಂತಹ ಲೋಕಗಳನ್ನು ನಾನು ಅವನ ಆಜ್ಞೆಯಿಂದಲೇ ಸರ್ವ ಕಾಲದಲ್ಲಿಯೂ ಧರಿಸಿಕೊಂಡಿರುವೆನು.

೬೫. ದೇವರ ಗುಂಪಿನಲ್ಲಿಯೂ ಚಾತುರ್ವರ್ಣ್ಯ ವಿಭಾಗವಿರುವುದರಿಂದ ಆ ದೇವತೆಗಳೆಲ್ಲರೂ ಒಂದುಕಡೆ ವಾಸಿಸುವರಾಗಿ ಸಮಾನವಾದ ಸುಖವನ್ನು ಅನುಭವಿಸುತ್ತಿರುತ್ತಾರೆ. ನಾನು ಅವರ ಕೂಡ ಸಮಾನವಾದ ಸುಖ ಭೋಗವನ್ನು ಅನುಭವಿಸದಿರುವ ಕಾರಣ ಅವರು ನನಗೆ ಪ್ರತ್ಯೇಕವಾಗಿ ಭೋಗೋಪಕರಣಗಳನ್ನು ಒದಗಿಸುತ್ತಾರೆ.

ಯಸ್ಮಾದವಮತಾ ದಕ್ಷ ಮತ್ಕೃತೇಽನಾಗಸಾ ಸತೀ ।
ಪ್ರಶಸ್ತಾಶ್ಚೇತರಾಃ ಸರ್ವಾಃ ಸ್ವಸುತಾ ಭರ್ತೃಭಿಸ್ಸಹ ॥ ೬೬ ॥

ತಸ್ಮಾದ್ವೈವಸ್ವತೇ ಪ್ರಾಪ್ತೇ ಪುನರೇತೇ ಮಹರ್ಷಯಃ ।
ಉತ್ಪತ್ಸ್ಯನ್ತೇ ದ್ವಿತೀಯೇ ವೈ ಮಮ ಯಜ್ಞೇ ಹ್ಯಯೋನಿಜಾಃ॥೬೭॥

ಹುತೇ ವೈ ಬ್ರಹ್ಮಣಾ ಶುಕ್ರೇ ಚಾಕ್ಷುಷಸ್ಯಾನ್ತರೇ ಮನೋಃ ।
ಅಭಿವ್ಯಾಹೃತ್ಯ ಸರ್ವಾಂಸ್ತಾನ್ ದಕ್ಷಂ ಚೈವಾಶಪತ್ಪುನಃ ॥ ೬೮ ॥

ಭವಿತಾ ಮಾನುಷೋ ರಾಜಾ ಚಾಕ್ಷುಷಸ್ಯ ತ್ವಮನ್ವಯೇ ।
ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚೈವ ಪ್ರಚೇತಸಾಮ್ ॥ ೬೯ ॥

ದಕ್ಷ ಏವೇಹ ನಾಮ್ನಾ ತು ಮಾರಿಷಾಯಾಂ ಜನಿಷ್ಯಸಿ ।
ಕನ್ಯಾಯಾಂ ಶಾಖಿನಾಂ ತ್ವಂ ವೈ ಪ್ರಾಪ್ತೇ ವೈವಸ್ವತೇಽನ್ತರೇ ॥ ೭೦ ॥

---

೬೬. ದಕ್ಷ ಪ್ರಜಾಪತಿಯೇ ನನ್ನ ಮೇಲಿನ ದ್ವೇಷದಿಂದ ನಿರಪರಾಧಿನಿಯಾದ ಸತೀದೇವಿಯನ್ನು ಅವಮಾನ ಪಡಿಸಿದೆ. ಮತ್ತು ಅವರವರ ಪತಿಯರೊಂದಿಗೆ ಇತರ ಎಂಟು ಮಂದಿ ಕನ್ಯೆಯರನ್ನು ಅತಿಶಯವಾಗಿ ಪ್ರಶಂಸೆ ಮಾಡಿರುತ್ತೀ.

೬೭. ಆ ಕಾರಣದಿಂದ ಈ ಮಹರ್ಷಿಗಳೆಲ್ಲರೂ ಕೂಡ ಎರಡನೆಯ ವೈವಸ್ವತ ಮನ್ವಂತರವು ಪ್ರಾಪ್ತವಾಗಲು ನನ್ನ ಯಜ್ಞದಲ್ಲಿ ಅಯೋನಿಜರಾಗಿ ಉತ್ಪತ್ತಿಯನ್ನು ಹೊಂದುವರು.

೬೮. ಚಾಕ್ಷುಷಮನ್ವಂತರದಲ್ಲಿ ಬ್ರಹ್ಮನಿಂದ ಶುಕ್ರಗ್ರಹವು ಹೋಮ ಮಾಡಲ್ಪಡಲು ಮೇಲೆ ಹೇಳಿದಂತೆ ಮಹರ್ಷಿಗಳೆಲ್ಲರಿಗೂ ಅಯೋನಿಜ ಜನ್ಮವು ಪ್ರಾಪ್ತವಾಗುವುದು, ಎಂದು ಮುನಿಗಳನ್ನು ಕುರಿತು ಶಾಪಕೊಟ್ಟು ದಕ್ಷನನ್ನು ಕುರಿತು ಪುನಃ ಶಾಪವನ್ನು ಕೊಟ್ಟನು.

೬೯. ಚಾಕ್ಷುಷ ಮನುವಿನ ವಂಶದಲ್ಲಿ ಮನುಷ್ಯ ಜನ್ಮವನ್ನೆತ್ತುವ ರಾಜನಾಗಿಯೂ ಪ್ರಾಚೀನಬರ್ಹಿಯ ಮಕ್ಕಳಾದ ಹತ್ತುಮಂದಿ ಪ್ರಚೇತರಿಗೆ ಮಗನಾಗಿಯೂ ಹುಟ್ಟುತ್ತೀ.

೭೦. ವೈವಸ್ವತ ಮನ್ವಂತರವು ಪ್ರಾಪ್ತವಾಗಲು ವೃಕ್ಷಗಳ ಕನ್ಯೆಯಾದ

ವಿಘ್ನಂ ತತ್ರಾಪ್ಯಹಂ ತುಭ್ಯಮಾಚರಿಷ್ಯಾಮಿ ದುರ್ಭಗ ।
ಧರ್ಮಯುಕ್ತೇ ಚ ತೇ ಕಾರ್ಯೇ ಏಕಸ್ಮಿಂಸ್ತು ದುರಾಸದೇ ॥ ೭೧ ॥

**ಸೂತ ಉವಾಚ**
ತದುಪಶ್ರುತ್ಯ ದಕ್ಷಸ್ತು ರುದ್ರಂ ಸೋಽಭ್ಯಶಪತ್ಪುನಃ ।
ಯಸ್ಮಾತ್ತ್ವಂ ಮತ್ಕೃತೇಽನಿಷ್ಟಮೃಷೀಣಾಂ ಕೃತವಾನಸಿ
ತಸ್ಮಾತ್ಸಾರ್ಧಂ ಸುರೈರ್ಯಜ್ಞೇ ನ ತ್ವಾಂ ಯಕ್ಷ್ಯನ್ತಿ ವೈ ದ್ವಿಜಾಃ॥ ೭೨ ॥

ಹುತ್ವಾಽಽಹುತಿಂ ತವ ಕ್ರೂರ ಹ್ಯಪಃ ಸ್ಪ್ರಕ್ಷ್ಯನ್ತಿ ಕರ್ಮಸು ।
ಇಹೈವ ವತ್ಸ್ಯಸಿ ತಥಾ ದಿವಂ ಹಿತ್ವಾಽಽಯುಗಕ್ಷಯಾತ್ ॥ ೭೩ ॥

ತತೋ ದೇವೈಃ ಸ ತೈಃ ಸಾರ್ಧಂ ನೇಜ್ಯತೇ ಪೃಥಗಿಜ್ಯತೇ ।
ತತೋಽಭಿವ್ಯಾಹೃತೋ ದಕ್ಷೋ ರುದ್ರೇಣಾಮಿತತೇಜಸಾ ॥ ೭೪ ॥

---

ಮಾರಿಷಾ ಎಂಬಾಕೆಯಲ್ಲಿ ದಕ್ಷನೆಂಬ ಹೆಸರನ್ನು ಹೊಂದಿಕೊಂಡಿರುವವನಾಗಿಯೇ ಹುಟ್ಟುತ್ತೀಯೆ.

೭೧. ಆ ಜನ್ಮದಲ್ಲಿಯೂ ಸಹ ಒಂದಾನೊಂದು ಕಷ್ಟಸಾಧ್ಯವಾದ ನಿನ್ನ ಧಾರ್ಮಿಕ ಕಾರ್ಯದಲ್ಲಿ ನಾನು ವಿಘ್ನವನ್ನಾಚರಿಸುವೆನು.

೭೨. ಸೂತಮುನಿಯು ಹೇಳಿದ್ದೇನೆಂದರೆ :—ದಕ್ಷನು ಈ ಶಾಪ ವೃತ್ತಾಂತವನ್ನು ಕೇಳಿ ರುದ್ರನಿಗೆ ಪುನಃ ಶಾಪವನ್ನಿತ್ತನು. ನನ್ನ ಅಪರಾಧಕ್ಕಾಗಿ ಮಹರ್ಷಿಗಳಿಗೆ ನೀನು ಕೆಟ್ಟದ್ದನ್ನು ಮಾಡಿದ್ದಕ್ಕಾಗಿ ಯಜ್ಞದಲ್ಲಿ ದ್ವಿಜರು ನಿನಗೆ ದೇವತೆಗಳ ಸಂಗಡ ಹವಿಸ್ಸನ್ನು ಕೊಡುವುದಿಲ್ಲ.

೭೩. ಮತ್ತು ಪೃಥಕ್ಕಾಗಿ ಕ್ರೂರನಾದ ನಿನಗೆ ಆಹುತಿಯನ್ನು ಕೊಟ್ಟನಂತರ ಕರ್ಮ ಮಧ್ಯದಲ್ಲಿ ಜಲವನ್ನು ಸ್ಪರ್ಶ ಮಾಡುವರು. ಮತ್ತು ಪ್ರಲಯ ಕಾಲದವರೆಗೂ ಸ್ವರ್ಗವನ್ನು ಬಿಟ್ಟು ಇಲ್ಲಿಯೇ ವಾಸಮಾಡುತ್ತೀ.

೭೪. ಆದುದರಿಂದ ರುದ್ರನು ದೇವತೆಗಳ ಸಂಗಡ ಯಾಗ ಮಾಡಲ್ಪಡದೇ ಬೇರೆಯಾಗಿ ಯಾಗದಲ್ಲಿ ಹವಿಸ್ಸನ್ನು ಪಡೆಯುತ್ತಾನೆ. ಆಮೇಲೆ ತೇಜಸ್ವಿಯಾದ ರುದ್ರನಿಂದ ಶಪಿಸಲ್ಪಟ್ಟು ದಕ್ಷನು ಶಾಪಫಲವನ್ನು ಅನುಭವಿಸಿದನು.

ಸ್ವಾಯಂಭುವೀಂ ತನುಂ ತ್ಯಕ್ತ್ವಾ ಉತ್ಪನ್ನೋ ಮಾನುಷೇಷ್ವಿಹ ।
ಜ್ಞಾತ್ವಾ ಗೃಹಪತಿರ್ದಕ್ಷೋ ಯಜ್ಞಾನಾಮೀಶ್ವರಂ ಪ್ರಭುಮ್॥ ೭೫ ॥

ಸಮಸ್ತೇನೇಹ ಯಜ್ಞೇನ ಸೋಽಯಜದ್ದೈವತೈಃ ಸಹ ॥ ೭೬ ॥

ಅಥ ದೇವೀ ಸತೀ ಯಾ ತು ಪ್ರಾಪ್ತೇ ವೈವಸ್ವತೇಽನ್ತರೇ ।
ಮೇನಾಯಾಂ ತಾಮುಮಾಂ ದೇವೀಂ ಜನಯಾಮಾಸ ಶೈಲರಾಟ್ ॥ ೭೭ ॥

ಯಾ ತು ದೇವೀ ಸತೀ ಪೂರ್ವಮಾಸೀತ್ಪಶ್ಚಾದುಮಾಽಭವತ್ ।
ಸದಾ ಪತ್ನೀ ಭವಸ್ಯೈಷಾ ನ ತಯಾ ಮುಚ್ಯತೇ ಭವಃ ॥ ೭೮ ॥

ಮಾರೀಚಂ ಕಶ್ಯಪಂ ದೇವೀ ಯಥಾಽದಿತಿರನುವ್ರತಾ ।
ಯಥಾ ನಾರಾಯಣಂ ಶ್ರೀಶ್ಚ ಮಘವನ್ತಂ ಶಚೀ ಯಥಾ ॥ ೭೯ ॥

---

೭೫-೭೬. ಆ ಶಾಪಬಲದಿಂದ ಸ್ವಯಂಭುವಿನಿಂದ ಪ್ರಾಪ್ತವಾದ ಶರೀರವನ್ನು ಬಿಟ್ಟು ಮನುಷ್ಯ ಜನ್ಮವನ್ನೆತ್ತಿದನು. ಮತ್ತು ಆಗ ಯಜ್ಞಗಳಿಗೆ ಈಶ್ವರನೇ ಪ್ರಭುವಾಗಿರುವನೆಂದು ತಿಳಿದು ಯಜಮಾನನಾದ ದಕ್ಷನು ದೇವತೆಗಳೆಲ್ಲರ ಕೂಡ ಸಮಸ್ತ ಯಜ್ಞಗಳಿಂದಲೂ ಈಶ್ವರನನ್ನು ಆರಾಧಿಸಿದನು.

೭೭. ಅನಂತರದಲ್ಲಿ ವೈವಸ್ವತ ಮನ್ವಂತರ ಕಾಲದಲ್ಲಿ ಹಿಂದೆ ದಕ್ಷನು ತೋರಿಸಿದ ಅವಮಾನದಿಂದ ಶರೀರವನ್ನು ತ್ಯಜಿಸಿರುವ ಸತೀದೇವಿಯನ್ನು ಪರ್ವತರಾಜನಾದ ಹಿಮವಂತನು ತನ್ನ ಪತ್ನಿಯಾದ ಮೇನಕೆಯಲ್ಲಿ ಪುತ್ರಿಯನ್ನಾಗಿ ಹೊಂದಿದನು.

೭೮. ಪೂರ್ವಜನ್ಮದಲ್ಲಿ ದಕ್ಷನ ಮಗಳಾಗಿದ್ದ ಸತೀದೇವಿಯು ಮತ್ತೊಂದು ಜನ್ಮದಲ್ಲಿ ಪರ್ವತ ರಾಯನ ಮಗಳು ಪಾರ್ವತಿಯಾಗಿ ಹುಟ್ಟಿ ಈಶ್ವರನಿಗೆ ಪತ್ನಿಯಾದಳು. ಈಶ್ವರನು ಈ ಪಾರ್ವತಿಯಿಂದ ಯಾವಾಗಲೂ ವಿಮುಕ್ತನಾಗಿರುವುದಿಲ್ಲ.

೭೯. ಮರೀಚಿ ಮುನಿಯ ಪುತ್ರನಾದ ಕಶ್ಯಪ ಮುನಿಯನ್ನು ಅದಿತಿದೇವಿಯೂ ಶ್ರೀಮನ್ನಾರಾಯಣನನ್ನು ಲಕ್ಷ್ಮೀದೇವಿಯೂ, ದೇವೇಂದ್ರನನ್ನು ಶಚೀದೇವಿಯೂ

ವಿಷ್ಣುಂ ಕೀರ್ತಿರುಷಾ ಸೂರ್ಯಂ ವಸಿಷ್ಠಂ ಚಾಪ್ಯರುನ್ಧತೀ ।
ನೈತಾಸ್ತು ವಿಜಹತ್ಯೇತಾನ್ ಭರ್ತ್ರ್ಯಾನ್ ದೇವ್ಯಃ ಕದಾಚನ ॥ ೮೦ ॥

ಆವರ್ತಮಾನಾಃ ಕಲ್ಪೇಷು ಜಾಯನ್ತೇ ತೈಃ ಪುನಃ ಸಹ ।
ಏವಂ ಪ್ರಾಚೇತಸೋ ದಕ್ಷೋ ಜಜ್ಞೇ ವೈ ಚಾಕ್ಷುಷೇಽನ್ತರೇ ॥ ೮೧ ॥

ದಶಭ್ಯಸ್ತು ಪ್ರಚೇತೋಭ್ಯೋ ಮಾರಿಷಾಯಾಂ ಪುನರ್ನೃಪಃ ।
ಜಜ್ಞೇ ತದಾಽಭಿಶಾಪೇನ ದ್ವಿತೀಯ ಇತಿ ನಃ ಶ್ರುತಮ್ ॥ ೮೨ ॥

ಭೃಗ್ವಾದಯ ಶ್ಚ ತೇ ಸಪ್ತ ಜಜ್ಞಿರೇ ಚ ಮಹರ್ಷಯಃ ।
ಆದ್ಯೇ ತ್ರೇತಾಯುಗೇ ಪೂರ್ವಂ ಮನೋರ್ವೈವಸ್ವತಸ್ಯ ಚ ॥ ೮೩ ॥

---

ಸಹಾ ಯಾವಾಗಲೂ ಅವಿಯುಕ್ತರಾಗಿ ಪತಿ ಸೇವೆಯನ್ನು ಮಾಡುತ್ತಿರುವಂತೆ ಈಶ್ವರ ನಿಗೆ ಪಾರ್ವತಿಯೂ ಯಾವಾಗಲೂ ಸಹಚಾರಿಣಿಯಾದ ಪತ್ನಿಯು.

೮೦. ಮತ್ತು ಕೀರ್ತಿಯು ವಿಷ್ಣುವನ್ನೂ, ಉಷಾದೇವಿಯು ಸೂರ್ಯನನ್ನೂ ಅರುಂಧತೀದೇವಿಯು ವಸಿಷ್ಠ ಋಷಿಯನ್ನೂ ಸೇವಿಸುತ್ತಿರುವುದೂ ಪಾರ್ವತಿಯು ಈಶ್ವರನಿಗೆ ನಿತ್ಯ ಸಹಚಾರಿಣಿಯಾಗಿ ಸೇವಿಸುತ್ತಿರುವುದಕ್ಕೆ ದೃಷ್ಟಾಂತವು. ಮೇಲೆ ಹೇಳಿದ ಸಾಧ್ವಿಯರೆಲ್ಲರೂ ತಮ್ಮ ತಮ್ಮ ಪತಿಯನ್ನು ಯಾವಾಗಲೂ ಅಗಲಿರುವುದಿಲ್ಲ.

೮೧. ಕಲ್ಪಗಳು ಒಂದರ ಹಿಂದೆ ಒಂದಾಗಿ ನಡೆಯುತ್ತಿರಲು ಮತ್ತೆ ಮತ್ತೆ ಅವರು ಜನಿಸಿ ಆ ಪತಿಯರೊಂದಿಗೆ ಪತ್ನಿಯರಾಗಿ ಸೇರುವರು. ಈ ರೀತಿಯಾಗಿ ಚಾಕ್ಷುಷ ಮನ್ವಂತರದಲ್ಲಿ ದಕ್ಷನು ಪ್ರಚೇತರ ಪುತ್ರನಾಗಿ ಜನಿಸಿದನು.

೮೨. ಪೂರ್ವದಲ್ಲಿಯೂ ದಕ್ಷ ನಾಮಾಂಕಿತನೇ ಆಗಿದ್ದವನು ಪುನರ್ಜನ್ಮದಲ್ಲಿಯೂ ಎರಡನೇ ದಕ್ಷನೆಂದು ಪ್ರಸಿದ್ಧನಾಗಿಯೇ ಈಶ್ವರನ ಶಾಪ ವಶದಿಂದ ಹತ್ತು ಜನ ಪ್ರಚೇತರಿಗೆ ಮಾರಿಷಾದೇವಿಯಲ್ಲಿ ಜನ್ಮವನ್ನೆತ್ತಿ ರಾಜನಾದನು.

೮೩. ವೈವಸ್ವತ ಮನ್ವಂತರದ ಮೊದಲನೆಯ ತ್ರೇತಾಯುಗದಲ್ಲಿ ಈಶ್ವರಶಪ್ತರಾದ ಭೃಗು ಮುಂತಾದ ಸಪ್ತ ಮಹರ್ಷಿಗಳೂ ಕೂಡ ಶಾಪ ಫಲವನ್ನು ಅನುಭವಿಸಿದರು.

**ದೇವಸ್ಯ ಮಹತೋ ಯಜ್ಞೇ ವಾರುಣೀಂ ಬಿಭ್ರತಸ್ತನುಮ್ ।**
**ಇತ್ಯೇಷೋಽನುಶಯೋ ಹ್ಯಾಸೀತ್ತಯೋರ್ಜಾತ್ಯನ್ತರಾನುಗಃ ॥ ೮೪ ॥**

**ಪ್ರಜಾಪತೇಶ್ಚ ದಕ್ಷಸ್ಯ ತ್ರ್ಯಮ್ಬಕಸ್ಯ ಚ ಧೀಮತಃ ।**
**ತಸ್ಮಾನ್ನಾನುಶಯಃ ಕಾರ್ಯೋ ವೈರೇಷ್ವಿಹ ಕದಾಚನ ॥ ೮೫ ॥**

**ಜಾತ್ಯನ್ತರಗತಸ್ಯಾಪಿ ಭಾವಿತಸ್ಯ ಶುಭಾಶುಭೈಃ ।**
**ಖ್ಯಾತಿಂ ನ ಮುಂಚತೇ ಜನ್ತುಸ್ತನ್ನ ಕಾರ್ಯಂ ವಿಪಶ್ಚಿತಾ ॥ ೮೬ ॥**

**ಇತ್ಯೇಷಾ ಸಮನುಕ್ರಾನ್ತಾ ಕಥಾ ಪಾಪಪ್ರಮೋಚನೀ ।**
**ಯಾ ದಕ್ಷಮಧಿಕೃತ್ಯೇಹ ತ್ವಯಾ ಪೂರ್ವಂ ಪ್ರಚೋದಿತಾ ॥ ೮೭ ॥**

**ಪಿತೃವಂಶಪ್ರಸಂಗೇನ ಕಥಾ ಹ್ಯೇಷಾ ಪ್ರಕೀರ್ತಿತಾ ।**
**ಪಿತೄಣಾಮಾನುಪೂರ್ವ್ಯೇಣ ದೇವಾನ್ ವಕ್ಷ್ಯಾಮ್ಯತಃ ಪರಮ್ ॥ ೮೮ ॥**

---

೮೪. ವರುಣ ಮೂರ್ತಿಯ ಸ್ವರೂಪವನ್ನು ಧರಿಸಿದ ಮಹಾದೇವನ ಯಜ್ಞ ಸಂದರ್ಭವಲ್ಲಿ ಸಪ್ತಋಷಿಗಳು ಶಾಪದ ಫಲವಾಗಿ ಜನ್ಮವೆತ್ತಿದರು. ಹೀಗೆ ಜನ್ಮಾಂತರದಲ್ಲಿಯೂ ಅನುವರ್ತಿಸುವ ದ್ವೇಷ ಭಾವನೆಯು ಅವರಿಬ್ಬರಿಗೂ ಇತ್ತು.

೮೫. ಯಾವ ಕಾರಣದಿಂದ ದಕ್ಷ ಪ್ರಜಾಪತಿಗೂ ಸರ್ವಜ್ಞನಾದ ಈಶ್ವರನಿಗೂ ಕೂಡ ಜನ್ಮಾಂತರದಲ್ಲಿಯೂ ಮರೆಯದಿರುವ ದ್ವೇಷಭಾವನೆಯು ಅಂಟಿಕೊಂಡಿತ್ತೋ ಆ ಕಾರಣದಿಂದ ಯಾವನೂ ಯಾವಾಗಲೂ ವೈರ ಬಂದರೆ ಶಾಪ ಪ್ರತಿಶಾಪಗಳಿಗೆ ನಿಮಿತ್ತವಾದ ಭಾವನೆಯನ್ನು ವೃದ್ಧಿಗೊಳಿಸದೇ ಮರೆತುಬಿಡಬೇಕು.

೮೬. ಶುಭ-ಅಶುಭ ಕರ್ಮವಶನಾಗಿ ಅವಶ್ಯವಾಗಿ ಅನುಭವಿಸಬೇಕಾದ ಯಾವ ವಿಧದ ಜನ್ಮವನ್ನು ಹೊಂದಿದ್ದ ಪ್ರಾಣಿಯೂ ಪೂರ್ವಜನ್ಮದ ಪ್ರಬಲವಾದ ವಾಸನಾರಾಶಿಯ ಪ್ರಸಿದ್ಧಿಯನ್ನು ಬಿಡುವುದಿಲ್ಲ. ಆದ್ದರಿಂದ ವಿದ್ವಾಂಸನು ವೈರವನ್ನು ಮಾಡಕೂಡದು.

೮೭. ಈ ವಿಧವಾಗಿ ದಕ್ಷಬ್ರಹ್ಮನ ವಿಷಯವಾಗಿ ಪೂರ್ವದಲ್ಲಿ ನಿಮ್ಮಿಂದ ಪ್ರಶ್ನಿಸಲ್ಪಟ್ಟ ಕಥೆಯು ಅನುಕ್ರಮವಾಗಿ ವರ್ಣಿಸಲ್ಪಟ್ಟಿತು. ಇದು ಶ್ರವಣ ಮಾತ್ರದಿಂದ ಪಾಪಗಳನ್ನು ಕಳೆಯುವುದು.

೮೮. ಪಿತೃ ವಂಶವನ್ನು ನಿರೂಪಣ ಮಾಡುವ ಪ್ರಸಂಗದಿಂದ ಮಧ್ಯದಲ್ಲಿ ಬಂದ

ತ್ರೇತಾಯುಗಮುಖೇ ಪೂರ್ವಮಾಸನ್ ಸ್ವಾಯಂಭುವೇಽನ್ತರೇ ।
ದೇವಾ ಯಾಮಾ ಇತಿ ಖ್ಯಾತಾಃ ಪೂರ್ವಂ ಯೇ ಯಜ್ಞಸೂನವಃ॥೮೯॥

ಪ್ರಥಿತಾ ಬ್ರಹ್ಮಣಃ ಪುತ್ರಾ ಅಜತ್ವಾದಜಿತಾಸ್ತು ತೇ ।
ಪುತ್ರಾಃ ಸ್ವಾಯಮ್ಭುವಸ್ಯೈತೇ ಶಕ್ರಾ ನಾಮ ತು ಮಾನಸಾಃ ॥ ೯೦ ॥

ತೇಷಾಂ ಯತೋ ಗಣಾ ಹ್ಯೇತೇ ದೇವಾನಾಂ ತು ತ್ರಯಃ ಸ್ಮೃತಾಃ ।
ಛನ್ದಜಾಸ್ತು ತ್ರಯಸ್ತ್ರಿಂಶತ್ ಸರ್ಗೇ ಸ್ವಾಯಮ್ಭುವಸ್ಯ ಹ ॥ ೯೧ ॥

ಯದುರ್ಯಯಾತಿರ್ದೇವೌ ದ್ವೌ ವೀವಧಸ್ರಾಸತೌ ಮತಿಃ ।
ವಿಭಾಸಶ್ಚ ಕ್ರತುಶ್ಚೈವ ಪ್ರಯಾತಿರ್ವಿಶ್ರುತೋ ದ್ಯುತಿಃ ॥ ೯೨ ॥

ವಾಯವ್ಯಃ ಸಂಯಮಶ್ಚೈವ ಯಾಮಾ ದ್ವಾದಶ ಕೀರ್ತಿತಾಃ ।
ಅಸಮಶ್ಚೋಗ್ರದೃಷ್ಟಿಶ್ಚ ಸುನಯೋಽಥ ಶುಚಿಶ್ರವಾಃ ॥ ೯೩ ॥

ಕೇವಲೋ ವಿಶ್ವರೂಪಶ್ಚ ಸುದಕ್ಷೋ ಮಧುಪಸ್ತಥಾ ।
ತುರೀಯ ಇಂದ್ರಯುಕ್ಚೈವ ಯುಕ್ತೋ ಗ್ರಾವಜಿತಸ್ತು ವೈ ॥ ೯೪ ॥

---

ಉಪಕಥೆಯಿದು. ಇನ್ನು ಮುಂದೆ ಪಿತೃದೇವತೆಗಳನ್ನು ಅವರ ಕ್ರಮವನ್ನನುಸರಿಸಿ ಹೇಳುವೆನು.

೮೯. ಸ್ವಾಯಂಭುವ ಮನ್ವಂತರದ ತ್ರೇತಾಯುಗದ ಆದಿಯಲ್ಲಿ ಯಾಮದೇವರೆಂದು ಪ್ರಸಿದ್ಧರಾದ ಯಜ್ಞದ ಪುತ್ರರು ಇದ್ದರು.

೯೦. ಅವರು ಬ್ರಹ್ಮನ ಪುತ್ರರೆಂದು ಪ್ರಸಿದ್ಧರಾಗಿ, ಮತ್ತು ಜನ್ಮವಿಲ್ಲದವರಾದ ಕಾರಣ ಅಜಿತರೆಂದೂ ಪ್ರಸಿದ್ಧಿ ಹೊಂದಿದವರಾಗಿ, ಸ್ವಾಯಂಭುವ ಮನುವಿಗೆ ಮಾನಸ ಪುತ್ರರಾಗಿ ಜನಿಸಿ ಶಕ್ರ ಎಂಬ ಹೆಸರಿನಿಂದಲೂ ಪ್ರಸಿದ್ಧರಾಗಿರುವರು.

೯೧. ಆದಕಾರಣ ಮುಂದೆ ಹೇಳುವ ದೇವತೆಗಳೆಲ್ಲರೂ ಮೂರು ಗಣದಲ್ಲಿ ಅಂತರ್ಗತರಾಗಿರುವರು. ಸ್ವಯಂಭು ಪ್ರಜಾಪತಿಯ ಸರ್ಗದಲ್ಲಿ ಇಚ್ಛಾ ಮಾತ್ರದಿಂದ ಮೂವತ್ತಮೂರು ದೇವಗಣದ ಸೃಷ್ಟಿಯು ಆಗಿರುವುದು.

೯೨-೯೩-೯೪. ಯದು, ಯಯಾತಿ, ವೀವಧ, ಸ್ರಾಸತ, ಮತಿ, ವಿಭಾಸ, ಕ್ರತು, ಪ್ರಯಾತಿ, ವಿಶ್ರುತ, ದ್ಯುತಿ, ವಾಯವ್ಯ, ಸಂಯಮ, ಎಂಬ ಹನ್ನೆರಡು

**ಜನಿಮಾ ವಿಶ್ವದೇವಾ ಚ ಜವಿಷ್ಠೋ ಮಿತವಾನಪಿ ।**
**ಜರೋ ವಿಭುರ್ವಿಭಾವಶ್ಚ ಸ ಋಚೀಕೋಽಥ ದುರ್ದಿಹಃ ॥ ೯೫ ॥**

**ಶ್ರುತಿರ್ಗೃಣಾನೋಽಥ ಬೃಹಚ್ಛುಕ್ರಾ ದ್ವಾದಶ ಕೀರ್ತಿತಾಃ ।**
**ಆಸನ್ ಸ್ವಾಯಮ್ಭುವಸ್ಯೈತೇ ಚಾನ್ತರೇ ಸೋಮಪಾಯಿನಃ ॥ ೯೬ ॥**

**ದೀಪ್ತಿಮನ್ತೋ ಗಣಾ ಹ್ಯೇತೇ ವೀರ್ಯವನ್ತೋ ಮಹಾಬಲಾಃ ।**
**ತೇಷಾಮಿನ್ದ್ರಸ್ತದಾ ಹ್ಯಾಸೀತ್ಪ್ರಥಮೋ ವಿಶ್ವಭುಕ್ಪ್ರಭುಃ ॥ ೯೭ ॥**

**ಅಸುರಾ ಯೇ ತದಾ ತೇಷಾಮಾಸನ್ ದಾಯಾದಬಾನ್ಧವಾಃ ।**
**ಸುಪರ್ಣಯಕ್ಷಗನ್ಧರ್ವಾಃ ಪಿಶಾಚೋರಗರಾಕ್ಷಸಾಃ ॥ ೯೮ ॥**

**ಅಷ್ಟೌ ತಾಃ ಪಿತೃಭಿಃ ಸಾರ್ಧಮಾಸನ್ ಯಾ ದೇವಯೋನಯಃ ॥೯೯॥**

---

ದೇವತೆಗಳ ಗಣಕ್ಕೆ ಯಾಮದೇವರೆಂದು ಹೆಸರು. ಅಸಮ, ಉಗ್ರದೃಷ್ಟಿ, ಸುನಯ, ಶುಚಿಶ್ರವ, ಕೇವಲ, ವಿಶ್ವರೂಪ, ಸುದಕ್ಷ, ಮಧುಪ, ತುರೀಯ, ಇಂದ್ರಯುಕ್, ಯುಕ್ತ, ಗ್ರಾವಜಿತ್ ಎಂಬ ಹನ್ನೆರಡು ದೇವತೆಗಳ ಗುಂಪು ಮತ್ತೊಂದು ಗಣವಾಗಿರುವುದು.

೯೫-೯೬. ಜನಿಮಾ, ವಿಶ್ವದೇವ, ಜವಿಷ್ಠ, ಮಿತವಾರ್, ಜರ, ವಿಭು, ವಿಭಾವ, ಋಚೀಕ, ದುರ್ದಿಹ, ಶ್ರುತಿ, ಗೃಣಾನ, ಬೃಹತ್ ಈ ಹನ್ನೆರಡು ದೇವತೆಗಳನ್ನು "ಶುಕ್ರ" ಎಂಬ ಹೆಸರಿನಿಂದ ಕೀರ್ತನ ಮಾಡಿರುವರು. ಸ್ವಾಯಂಭುವ ಮನ್ವಂತರದಲ್ಲಿ ಈ ದೇವತೆಗಳು ಸೋಮಪಾನ ಮಾಡಿದವರಾಗಿದ್ದರು.

೯೭. ಮೇಲೆ ಹೇಳಿರುವ ಸಮಸ್ತ ದೇವತೆಗಳು ಉಜ್ಜ್ವಲವಾದ ಕಾಂತಿಯುಳ್ಳವರೂ, ವೀರ್ಯ ಸಂಪನ್ನರೂ, ಮತ್ತು ಮಹಾ ಬಲಿಷ್ಠರೂ ಆಗಿದ್ದರು. ಪೂರ್ವದಲ್ಲಿ ಆ ದೇವಗಣಕ್ಕೆ ಸಕಲ ಭೋಗ ಸಂಪನ್ನನಾದ ಇಂದ್ರನು ಪ್ರಭುವಾಗಿ ಇದ್ದನು.

೯೮. ಆ ಕಾಲದಲ್ಲಿ ದೇವಗಣಕ್ಕೆ ದಾಯಾದ ಮತ್ತು ಬಾಂಧವ ವರ್ಗಕ್ಕೆ ಸೇರಿ ಅಸುರ, ಸುವರ್ಣ, ಯಕ್ಷ, ಗಂಧರ್ವ, ಪಿಶಾಚ, ಸರ್ಪ, ಮತ್ತು ರಾಕ್ಷಸರೆಂದು ಅನೇಕ ವರ್ಗಗಳು ಜನಿಸಿದವು.

೯೯. ಪಿತೃದೇವತೆಗಳ ಜೊತೆಗೆ ಯಾವ ಎಂಟು ದೇವಯೋನಿ ವಿಶೇಷಗಳು

ಪ್ರಭಾವರೂಪಸಂಪನ್ನಾ ಆಯುಷಾ ಚ ಬಲೇನ ಚ ।
ವಿಸ್ತರಾದಿಹ ನೋಚ್ಯನ್ತೇ ಮಾ ಪ್ರಸಂಗೋ ಭವೇದಿಹ ॥ ೧೦೦ ॥

ಸ್ವಾಯಂಭುವೋ ವಿಸರ್ಗಸ್ತು ವಿಜ್ಞೇಯಃ ಸಾಂಪ್ರತೇನ ಹ ।
ಅತೀತೋ ವರ್ತಮಾನೇನ ದೃಷ್ಟೋ ವೈವಸ್ವತೇನ ಸಃ ॥ ೧೦೧ ॥

ಪ್ರಜಾಭಿರ್ದೇವತಾಭಿಶ್ಚ ಋಷಿಭಿಃ ಪಿತೃಭಿಃ ಸಹ ।
ತೇಷಾಂ ಸಪ್ತರ್ಷಯಃ ಪೂರ್ವಮಾಸನ್ ಯೇ ತಾನ್ನಿಬೋಧತ ॥೧೦೨॥

ಭೃಗ್ವಂಗಿರಾ ಮರೀಚಿಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।
ಅತ್ರಿಶ್ಚೈವ ವಸಿಷ್ಠಶ್ಚ ಸಪ್ತ ಸ್ವಾಯಂಭುವೇಽನ್ತರೇ ॥ ೧೦೩ ॥

---

ಹಿಂದೆ ಇದ್ದರೋ ಅವರ ಸಾವಿರಾರು ಪ್ರಜೆಗಳು ಸ್ವಾಯಂಭುವ ಮನ್ವಂತರದಲ್ಲಿ ಕಳೆದುಹೋಗಿವೆ.

೧೦೦. ಆ ಪ್ರಜೆಗಳು ಮಹಿಮೆ, ರೂಪ, ಆಯುಸ್ಸು, ಬಲ ಮುಂತಾದ ಸಕಲ ಗುಣಗಳ ಅತಿಶಯದಿಂದ ಕೂಡಿದವರಾಗಿ ಇದ್ದರು. ಅಮುಖ್ಯ ವಿಷಯದಲ್ಲಿ ಹೆಚ್ಚು ಪ್ರಸಂಗವು ಬೆಳೆಯುವುದರಿಂದ ಅವರ ಪ್ರತ್ಯೇಕ ಚರಿತ್ರಗಳನ್ನು ವಿಸ್ತಾರವಾಗಿ ವರ್ಣಿಸುವುದಿಲ್ಲ.

೧೦೧. ಸ್ವಾಯಂಭುವ ಮನುವಿನ ಸೃಷ್ಟಿಯು ಈ ಮನ್ವಂತರದ ಸೃಷ್ಟಿಗೆ ಸಮಾನವಾದುದು. ಅನಾದಿಯಾಗಿ ಬಂದ ಸೃಷ್ಟಿ ಪ್ರವಾಹದಲ್ಲಿ ಅತೀತವು ವರ್ತಮಾನ ವೈವಸ್ವತ ಮನ್ವಂತರದ ಸೃಷ್ಟಿಯಂತೆ ಇರುವುದು ಸ್ವಭಾವವು.

೧೦೨. ಹಿಂದಿನ ಸೃಷ್ಟಿಯಲ್ಲಿ ಪ್ರಜಾ, ದೇವತೆ, ಋಷಿ, ಪಿತೃಗಳು ಯಾವ ರೀತಿಯ ನಾಮ-ರೂಪ-ಕರ್ಮಗಳಿಂದ ಇದ್ದರೊ ಮುಂದಿನ ಸಕಲ ಮನ್ವಂತರಗಳಲ್ಲಿಯೂ ಅದೇ ರೀತಿಯಲ್ಲಿರುವರು. ಈಗ ಸಪ್ತರ್ಷಿಗಳ ಸ್ಥಾನದಲ್ಲಿ ಪೂರ್ವದಲ್ಲಿದ್ದ ಋಷಿಗಳನ್ನು ಕೇಳಿರಿ.

೧೦೩. ಭೃಗು, ಅಂಗಿರ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ಅತ್ರಿ, ವಸಿಷ್ಠ ಎಂಬ ಅನೇಕ ಮಂದಿ ಋಷಿಗಳು ಸ್ವಾಯಂಭುವ ಮನ್ವಂತರದಲ್ಲಿ ಸಪ್ತರ್ಷಿಸ್ಥಾನವನ್ನು ಅಲಂಕರಿಸಿದ್ದರು.

ಆಗ್ನೀಧ್ರಶ್ಚಾಗ್ನಿಬಾಹುಶ್ಚ ಮೇಧಾ ಮೇಧಾತಿಥಿರ್ವಸುಃ।
ಜ್ಯೋತಿಷ್ಮಾನ್ ದ್ಯುತಿಮಾನ್ ಹವ್ಯಃ ಸವನಃ ಸತ್ರ ಏವ ಚ ॥ ೧೦೪ ॥

ಮನೋಃ ಸ್ವಾಯಂಭುವಸ್ಯೈತೇ ದಶ ಪುತ್ರಾ ಮಹೌಜಸಃ।
ವಾಯುವೇಗಾ ಮಹಾಸತ್ತ್ವಾ ರಾಜಾನಃ ಪ್ರಥಮೇಽನ್ತರೇ ॥ ೧೦೫ ॥

ಸಾಸುರಂ ತತ್ಸಗಂಧರ್ವಂ ಸಯಕ್ಷೋರಗರಾಕ್ಷಸಮ್।
ಸಪಿಶಾಚಮನುಷ್ಯಂ ಚ ಸಸುಪರ್ಣಾಪ್ಸರೋಗಣಮ್ ॥ ೧೦೬ ॥

ನ ಶಕ್ಯಮಾನುಪೂರ್ವ್ಯೇಣ ವಕ್ತುಂ ವರ್ಷಶತೈರಪಿ।
ಬಹುತ್ವಾನ್ನಾಮಧೇಯಾನಾಂ ಸಂಖ್ಯಾ ತೇಷಾಂ ಕುತಃ ಕುಲೇ ॥೧೦೭॥

ಯಾ ವೈ ಪ್ರಜಾ ಯುಗಾಖ್ಯಾಸ್ತು ಆಸನ್ ಸ್ವಾಯಂಭುವೇಽನ್ತರೇ।
ಕಾಲೇನ ಮಹತಾಽತೀತಾ ಅಯನಾಬ್ದಯುಗಕ್ರಮೈಃ ॥ ೧೦೮ ॥

---

೧೦೪-೧೦೫. ಆಗ್ನೀಧ್ರ, ಅಗ್ನಿಬಾಹು, ಮೇಧಾ, ಮೇಧಾತಿಥಿ, ವಸು, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಸವನ, ಸತ್ರ, ಎಂಬುವರು ಸ್ವಾಯಂಭುವ ಮನುವಿನ ಮಹಾವೀರ್ಯ ಸಂಪನ್ನರಾದ ಹತ್ತುಮಂದಿ ಪುತ್ರರಾಗಿದ್ದರು. ಮತ್ತು ಇವರೆಲ್ಲರೂ ಆ ಪ್ರಥಮ ಮನ್ವಂತರದಲ್ಲಿ·ವಾಯುವೇಗ ಮತ್ತ ಗಂಭೀರವಾದ ಸತ್ತ್ವ ಇವುಗಳಿಂದ ಕೂಡಿದ ಶ್ರೇಷ್ಠರಾದ ರಾಜರೆನಿಸಿಕೊಂಡಿದ್ದರು.

೧೦೬-೧೦೭. ಅಸುರ, ಗಂಧರ್ವ, ಯಕ್ಷ, ಉರಗ, ರಾಕ್ಷಸ, ಪಿಶಾಚ, ಮನುಷ್ಯ, ಸುಪರ್ಣ ಅಪ್ಸರಃಸ್ತ್ರೀ ಎಂಬ ವಿವಿಧ ಯೋನಿಯಲ್ಲಿ ಹುಟ್ಟಿದ ಪ್ರಜೆಗಳಿಂದ ತುಂಬಿದ ಮನ್ವಂತರವನ್ನು ಒಂದನ್ನೂ ಬಿಡದಂತೆ ಕ್ರಮವಾಗಿ ವರ್ಣಿಸುವುದು ನೂರಾರು ವರ್ಷಗಳ ಕಾಲವಾದರೂ ಸಾಧ್ಯವಿಲ್ಲ. ಪ್ರತಿಯೊಂದು ಕುಲ ವಿಶೇಷದಲ್ಲಿ ಹುಟ್ಟಿದ ವ್ಯಕ್ತಿಗಳ ಹೆಸರು ಅನಂತವಾಗಿರುವುದರಿಂದ ಒಂದು ಯೋನಿಯಲ್ಲಿ ಅಥವಾ ಪೂರ್ಣವಾದ ಮನ್ವಂತರದಲ್ಲಿ ಅದನ್ನು ಗಣನೆಮಾಡುವುದು ಅಸಾಧ್ಯವು.

೧೦೮. ಸ್ವಾಯಂಭುವ ಮನ್ವಂತರದಲ್ಲಿ ಯುಗ ಎಂಬ ಹೆಸರಿನಿಂದ ಯಾವ ಪ್ರಜೆಗಳು ಜನಿಸಿದ್ದರೋ ಆ ಪ್ರಜೆಗಳು ಅಯನ-ಸಂವತ್ಸರ-ಯುಗ ಮುಂತಾದ ಕಾಲಾವಸ್ಥಾಭಿಮಾನದಿಂದ ಕ್ರಮವಾಗಿ ಇದ್ದು ಕಾಲಚಕ್ರ ವಶದಿಂದ ಕಳೆದುಹೋಗಿರುವರು.

**ಋಷಯ ಊಚುಃ**
**ಕ ಏಷ ಭಗವಾನ್ ಕಾಲಃ ಸರ್ವಭೂತಾಪಹಾರಕಃ।**
**ಕಸ್ಯ ಯೋನಿಃ ಕಿಮಾದಿಶ್ಚ ಕಿಂಸತತ್ತ್ವಃ ಕಿಮಾತ್ಮಕಃ ॥ ೧೦೯ ॥**

**ಕಿಮಸ್ಯ ಚಕ್ಷುಃ ಕಾ ಮೂರ್ತಿಃ ಕೇ ವಾ ಅವಯವಾಃ ಸ್ಮೃತಾಃ।**
**ಕಿಂ ನಾಮಧೇಯಂ ಕೋಽಸ್ಯಾತ್ಮಾ ಏತತ್ತ್ವಂ ಬ್ರೂಹಿ ತತ್ತ್ವತಃ॥೧೧೦॥**

**ಸೂತ ಉವಾಚ :—**
**ಶ್ರೂಯತಾಂ ಕಾಲಸದ್ಭಾವಃ ಶ್ರುತ್ವಾ ಚೈವಾವಧಾರ್ಯತಾಮ್।**
**ಸೂರ್ಯಯೋನಿರ್ನಿಮೇಷಾದಿಃ ಸಂಖ್ಯಾ ಚಕ್ಷುಃ ಸ ಉಚ್ಯತೇ ॥೧೧೧॥**

**ಮೂರ್ತಿರಸ್ಯ ತ್ವಹೋರಾತ್ರೇ ನಿಮೇಷಾವಯವಶ್ಚ ಸಃ।**
**ಸಂವತ್ಸರಃ ಸತತ್ತ್ವಶ್ಚ ನಾಮ ಚಾಸ್ಯ ಕಲಾತ್ಮಕಃ ॥ ೧೧೨ ॥**

---

೧೦೯. ಇದನ್ನು ಕೇಳಿ ಋಷಿಗಳು ಪ್ರಶ್ನಿಸಿದರು. ಸರ್ವಭೂತಗಳನ್ನು ಮೃತ್ಯುರೂಪದಿಂದ ಅಪಹರಿಸುವ ಪೂಜ್ಯನಾದ ಕಾಲಾತ್ಮನು ಯಾರು? ಇವನಿಂದ ಹುಟ್ಟುವ ಕಾರ್ಯವು ಯಾವುದು? ಮತ್ತು ಈ ಕಾಲಾತ್ಮನ ಆದಿಕಾರಣ, ತತ್ತ್ವ, ಸ್ವರೂಪ ಮುಂತಾದುವುಗಳು ಯಾವುವು?

೧೧೦. ಸರ್ವ ಪ್ರಪಂಚವನ್ನು ಸಾಕ್ಷಾತ್ಕರಿಸುವ ಕಾಲಾತ್ಮನಿಗೆ ಕಣ್ಣು ಯಾವುದು? ವಿಗ್ರಹವು ಯಾವುದು? ಹಾಗೆ ಅವಯವಗಳು ಯಾವುವು? ಅದಕ್ಕೆ ನಾಮಧೇಯವೇನು? ಮತ್ತು ಆತ್ಮ ಯಾವುದು? ಕರುಣೆಯಿಂದ ಇದನ್ನು ಉಪದೇಶಿಸಬೇಕು.

೧೧೧. ಮುನಿಗಳ ಪ್ರಶ್ನವನ್ನು ಕೇಳಿದ ಸೂತಮುನಿಯು ಉತ್ತರವಿತ್ತನು. ಕಾಲದ ಸತ್ತೆಯನ್ನು ಕೇಳಿ ಅದನ್ನು ಯುಕ್ತಿಯಿಂದ ವಿವೇಚಿಸಿ ತಿಳಿಯಿರಿ. ನಿಮೇಷ ಮುಂತಾದ ವಿಭಾಗಾವಸ್ಥೆಗಳುಳ್ಳ ಕಾಲಾತ್ಮನಿಗೆ ಸೂರ್ಯನು ಉತ್ಪತ್ತಿಸ್ಥಾನವು. ಗಣನೆಯೆಂಬುದು ಕಾಲಾತ್ಮನ ಕಣ್ಣು ಎಂದು ತಿಳಿಯಲ್ಪಡಬೇಕು.

೧೧೨. ಹಗಲು ಮತ್ತು ರಾತ್ರಿಗಳೆಂಬುದು ಮೂರ್ತಿಯು, ನಿಮೇಷ ಮುಂತಾದುದು ಅವಯವ, ಸಂವತ್ಸರವು ಆ ಕಾಲಾತ್ಮನ ತತ್ತ್ವವು, ಕಲನ ಅಥವಾ

ಸಾಂಪ್ರತಾನಾಗತಾತೀತಕಾಲಾತ್ಮಾ ಸ ಪ್ರಜಾಪತಿಃ ।
ಪಂಚಧಾ ಪ್ರವಿಭಕ್ತಾಂ ತು ಕಾಲಾವಸ್ಥಾಂ ನಿಬೋಧತ ॥ ೧೧೩ ॥

ದಿವಸಾರ್ಧಮಾಸಮಾಸೈಶ್ಚ ಋತುಭಿಸ್ತ್ವಯನೈಸ್ತಥಾ ।
ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ॥ ೧೧೪ ॥

ಇಡ್ವತ್ಸರಸ್ತೃತೀಯಶ್ಚ ಚತುರ್ಥಶ್ಚಾನುವತ್ಸರಃ ।
ಪಂಚಮೋ ವತ್ಸರಸ್ತೇಷಾಂ ಕಾಲಃ ಸ ಯುಗಸಂಜ್ಞಿತಃ ॥ ೧೧೫ ॥

ತೇಷಾಂ ತತ್ತ್ವಂ ಪ್ರವಕ್ಷ್ಯಾಮಿ ಕೀರ್ತ್ಯಮಾನಂ ನಿಬೋಧತ ।
ಕ್ರತುರಗ್ನಿಸ್ತು ಯಃ ಪ್ರೋಕ್ತಃ ಸ ತು ಸಂವತ್ಸರೋ ಮತಃ ॥ ೧೧೬ ॥

---

ರೂಪಾಂತರವನ್ನು ಹೊಂದಿಸುತ್ತ ಸರ್ವವನ್ನು ಲಯಮಾಡುವುದೆಂಬ ಭಾವಾರ್ಥದಿಂದ ಕೂಡಿದ ಕಾಲ ಎಂಬುದು ಅನ್ವರ್ಥವಾದ ಹೆಸರು.

೧೧೩. ವರ್ತಮಾನ, ಭವಿಷ್ಯತ್, ಭೂತ, ಎಂಬ ಕಾಲತ್ರಯಾಭಿಮಾನದಿಂದ ಕಾಲಸ್ವರೂಪನಾಗಿ ಪ್ರಜಾಪತಿಯು ಆವಿರ್ಭಾವ ಹೊಂದಿರುವನು. ವಿಶೇಷವಾಗಿ ವಿಂಗಡಿಸಲ್ಪಟ್ಟ ಈ ಕಾಲದ ಪಂಚಾವಸ್ಥೆಗಳನ್ನು ಕೇಳಿರಿ.

೧೧೪. ಕಾಲಾತ್ಮನಾದ ಪ್ರಜಾಪತಿಯು ದಿವಸ, ಅರ್ಧಮಾಸ, ಋತು, ಅಯನಗಳೆಂಬ ತನ್ನ ಅಂಶಗಳಿಂದ ಚಲಿಸುತ್ತ ಮುಂದೆ ಹೇಳುವ ಐದುಬಗೆಯ ವಿಭಾಗವನ್ನು ಹೊಂದಿರುವನು. ಅದರಲ್ಲಿ ಸಂವತ್ಸರವೆಂಬುದು ಮೊದಲನೆಯ ಅವಸ್ಥೆಯು. ಪರಿವತ್ಸರವು ದ್ವಿತೀಯಾವಸ್ಥೆಯು.

೧೧೫. ಇಡ್ವತ್ಸರ, ಮತ್ತು ಅನುವತ್ಸರಗಳು ಮೂರು ಮತ್ತು ನಾಲ್ಕನೆಯ ಅವಸ್ಥೆಗಳು. ವತ್ಸರವು ಐದನೆಯ ಅವಸ್ಥೆಯು. ಇದು ಯುಗ ಎಂಬ ಸಂಜ್ಞಾಂಕಿತವಾದ ಮುಖ್ಯವಾದ ಕಾಲ ಸ್ವರೂಪವು.

೧೧೬. ಮೇಲೆ ಹೇಳಿರುವ ಒಂದೊಂದು ಅವಸ್ಥಾರೂಪಗಳ ತತ್ತ್ವ ವಿಷಯದಲ್ಲಿ ನನ್ನ ವ್ಯಾಖ್ಯಾನವನ್ನು ಕೇಳಿರಿ, ಹಿಂದೆ ಹೇಳಲ್ಪಟ್ಟಿರುವ ಕ್ರತು ಅಗ್ನಿಯೆಂಬುದು ಸಂವತ್ಸರಾತ್ಮಕವಾದ ಪ್ರಜಾಪತಿಯ ರೂಪವು.

ಆದಿತೇಯಸ್ತ್ವಸೌ ಸೂರ್ಯಃ ಕಾಲಾಗ್ನಿಃ ಪರಿವತ್ಸರಃ ।
ಶುಕ್ಲಕೃಷ್ಣಗತಿಶ್ಚಾಪಿ ಅಪಾಂ ಸಾರಮಯಃ ಖಗಃ ॥ ೧೧೭ ॥

ಸ ಇಡಾವತ್ಸರಃ ಸೋಮಃ ಪುರಾಣೇ ನಿಶ್ಚಯಂ ಗತಃ ।
ಯಶ್ಚಾಯಂ ಪವತೇ ಲೋಕಾಂಸ್ತನುಭಿಃ ಸಪ್ತಸಪ್ತಭಿಃ ॥ ೧೧೮ ॥

ಅನುವಾತಾ ಚ ಲೋಕಸ್ಯ ಸ ವಾಯುರನುವತ್ಸರಃ ।
ಅಹಂಕಾರಾದುದಗ್ರುದ್ರಃ ಸಂಭೂತೋ ಬ್ರಹ್ಮಣಸ್ತು ಯಃ ॥ ೧೧೯ ॥

ಸ ರುದ್ರೋ ವತ್ಸರಸ್ತೇಷಾಂ ವಿಜ್ಞೇಯೋ ನೀಲಲೋಹಿತಃ ।
ಸತತ್ತ್ವಂ ತಸ್ಯ ವಕ್ಷ್ಯಾಮಿ ಕೀರ್ತ್ಯಮಾನಂ ನಿಬೋಧತ ॥ ೧೨೦ ॥

ಅಂಗಪ್ರತ್ಯಂಗಸಂಯೋಗಾತ್ಕಾಲಾತ್ಮಾ ಪ್ರಪಿತಾಮಹಃ ।
ಋಕ್ಸಾಮಯಜುಷಾಂ ಯೋನಿಃ ಪಂಚಾನಾಂ ಪತಿರೀಶ್ವರಃ ॥ ೧೨೧ ॥

---

೧೧೭. ಅದಿತಿಗೆ ಪುತ್ರನಾಗಿ ಜನಿಸಿದ ಸೂರ್ಯನು ಕಾಲಾಗ್ನಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿ ಪರಿವತ್ಸರರೂಪನಾಗಿರುವನು. ಹಾಗೆ ಚಂದ್ರನು ಶುಕ್ಲ ಮತ್ತು ಕೃಷ್ಣ ಎಂಬ ಗತಿ ವಿಶೇಷವುಳ್ಳವನಾಗಿಯೂ ನೀರಿನ ಸಾರಾಂಶರೂಪನಾಗಿಯೂ ಮತ್ತು ಆಕಾಶದಲ್ಲಿ ಸಂಚರಿಸುವವನಾಗಿಯೂ ಇರುವನು.

೧೧೮-೧೧೯. ಈ ಚಂದ್ರನು ಇಡಾವತ್ಸರ ಸ್ವರೂಪನೆಂದು ಪುರಾಣದಲ್ಲಿ ಪ್ರತಿಪಾದಿಸಲ್ಪಟ್ಟಿರುವನು. ಮತ್ತು ಈ ಲೋಕವನ್ನು ಪ್ರತ್ಯೇಕ ಏಳು ಅಂಶಗಳುಳ್ಳ ಸಪ್ತವ್ಯೂಹಗಳಿಂದ ಪವಿತ್ರವನ್ನಾಗಿ ಮಾಡುತ್ತ, ಲೋಕದಲ್ಲಿ ಎಲ್ಲಕಡೆಯೂ ಬೀಸುತ್ತಲಿರುವ ವಾಯುವು ಅನುವತ್ಸರವೆಂಬ ಕಾಲಾತ್ಮ ಪ್ರಜಾಪತಿಯ ರೂಪವು. ಪೂರ್ವದಲ್ಲಿ ಬ್ರಹ್ಮನ ಅಹಂಕಾರದಿಂದ ಹುಟ್ಟಿದ ನೀಲಲೋಹಿತನೆಂಬ ಪರ್ಯಾಯನಾಮವುಳ್ಳ ರುದ್ರನು ಕಾಲಾತ್ಮಕ ಪ್ರಜಾಪತಿಯ ಕಡೆಯ ವತ್ಸರವೆಂಬ ರೂಪವು. ಈಗ ಆ ಕಾಲಾತ್ಮಕನ ತತ್ತ್ವದ ವಿವರಣೆಯನ್ನು ಕೇಳಿರಿ.

೧೨೧. ಕಾಲಾತ್ಮಕನಾದ ಪ್ರಜಾಪತಿಯು ಅನೇಕ ಅಂಗಗಳಿಂದಲೂ ಪ್ರತ್ಯಂಗಗಳಿಂದಲೂ ಕೂಡಿದವನಾಗಿಯೂ, ಋಕ್, ಸಾಮ, ಯಜುಸ್ಸು ಎಂಬ ವೇದತ್ರಯಕ್ಕೆ ಕಾರಣನಾಗಿಯೂ, ಹಿಂದೆ ಹೇಳಿದ ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ಮತ್ತು ವತ್ಸರವೆಂಬ ಐದು ಅವಸ್ಥಾಭಿಮಾನಿಗಳಿಗೆ ಪತಿಯಾಗಿಯೂ ಇರುವನು.

ಸೋಽಗ್ನಿರ್ಯಮಶ್ಚ ಕಾಲಶ್ಚ ಸಂಭೂತಿಃ ಸ ಪ್ರಜಾಪತಿಃ ।
ಪ್ರೋಕ್ತಃ ಸಂವತ್ಸರಶ್ಚೇತಿ ಸೂರ್ಯಯೋನಿರ್ಮನೀಷಿಭಿಃ ॥ ೧೨೨ ॥

ಯಸ್ಮಾತ್ಕಾಲವಿಭಾಗಾನಾಂ ಮಾಸರ್ತ್ವಯನಯೋರಪಿ ।
ಗ್ರಹನಕ್ಷತ್ರಶೀತೋಷ್ಣವರ್ಷಾಯುಃಕರ್ಮಣಾಂ ತಥಾ ॥ ೧೨೩ ॥

ಯೋನಿಃ ಸ ಪ್ರವಿಭಾಗಾನಾಂ ದಿವಸಾನಾಂ ಚ ಭಾಸ್ಕರಃ ।
ವೈಕಾರಿಕಃ ಪ್ರಸನ್ನಾತ್ಮಾ ಬ್ರಹ್ಮಪುತ್ರಃ ಪ್ರಜಾಪತಿಃ ॥ ೧೨೪ ॥

ಏಕೋ ನೈಕೋಽಥ ದಿವಸೋ ಮಾಸೋಽಥರ್ತುಃ ಪಿತಾಮಹಃ ।
ಆದಿತ್ಯಃ ಸವಿತಾ ಭಾನುರ್ಜೀವನೋ ಬ್ರಹ್ಮಸತ್ಕೃತಃ ॥ ೧೨೫ ॥

---

೧೨೨. ಮೇಲೆ ಹೇಳಿರುವ ಸಂವತ್ಸರಾದಿ ಪಂಚಕಾಲಾವಸ್ಥೆಗಳಲ್ಲಿ ಅಗ್ನಿಯೆಂಬ ತತ್ತ್ವವನ್ನು ಯಮ, ಕಾಲ, ಸಮಸ್ತ ಪ್ರಜೋತ್ಪತ್ತಿಯ ಕಾರಣ, ಪ್ರಜಾಪತಿ, ಸೂರ್ಯನ ಕಾರಣ, ಮತ್ತು ಸಂವತ್ಸರವೆಂದು ಅನೇಕ ಗುಣವಾಚಕಗಳಿಂದ ವಿದ್ವಾಂಸರು ವರ್ಣಿಸುತ್ತಾರೆ.

೧೨೩. ಎರಡನೆಯ ಕಾಲಾಂಶವನ್ನು ಸೂರ್ಯರೂಪವೆಂದು ಹಿಂದೆ ಹೇಳಿದೆ. ಆ ಸೂರ್ಯನು ಮಾಸ, ಋತು, ಅಯನ ಮುಂತಾದ ನಾನಾವಿಧದ ಕಾಲವಿಭಾಗ ಗಳಿಗೆ ಕಾರಣನಾಗಿಯೂ, ಗ್ರಹ-ನಕ್ಷತ್ರಗಳಿಂದ ಕೂಡಿದ ತೇಜೋಮಂಡಲಕ್ಕೆ ಆಧಾರನಾಗಿಯೂ, ಶೀತ-ಉಷ್ಣ-ವೃಷ್ಟಿ-ಆಯುಸ್ಸು ಮತ್ತು ಕರ್ಮಗಳಿಗೆ ಕಾರಣ ನಾಗಿಯೂ ಇರುವನು.

೧೨೪. ಮತ್ತು ಆ ಸೂರ್ಯನು ಹಗಲು ಎಂಬ ದಿನವಿಭಾಗ ಮೊದಲುಗೊಂಡು ಪ್ರತಿಯೊಂದು ಕಾಲಾಂಶಗಳಿಗೆ ಅಧಿಪತಿಯಾಗಿಯೂ ಸೃಷ್ಟಿಕರ್ತನಾದ ಪ್ರಜಾಪತಿ ಯಿಂದ ಹುಟ್ಟಿದ ವಿಕಾರರೂಪವಾದ ತತ್ತ್ವಸ್ವರೂಪನಾಗಿಯೂ ನಿರ್ಮಲವಾದ ಸ್ವರೂಪವುಳ್ಳವನಾಗಿಯೂ ಇರುವನು.

೧೨೫. ಕಾಲಾಭಿಮಾನಿಯಾದ ಸೂರ್ಯದೇವನು ಚ್ಯುತಿಯಿಲ್ಲದ ತತ್ತ್ವರೂಪ ದಿಂದ ಅದ್ವಿತೀಯನಾಗಿಯೂ ದಿವಸ ಮಾಸ-ಋತು ಮುಂತಾದ ವ್ಯವಹಾರಕ್ಕೆ ಕಲ್ಪಿತಗಳಾದ ಪರಿಣಾಮರೂಪದಿಂದ ಅನೇಕ ಸ್ವರೂಪನಾಗಿಯೂ ಬ್ರಹ್ಮನಿಂದ

**ಪ್ರಭವಶ್ಚಾವ್ಯಯಶ್ಚೈವ ಭೂತಾನಾಂ ತೇನ ಭಾಸ್ಕರಃ ।**
**ತಾರಾಭಿಮಾನೀ ವಿಜ್ಞೇಯೋ ದ್ವಿತೀಯಃ ಪರಿವತ್ಸರಃ ॥ ೧೨೬ ॥**

**ಸೋಮಃ ಸರ್ವೌಷಧಿಪತಿರ್ಯಸ್ಮಾತ್ಸ ಪ್ರಪಿತಾಮಹಃ ।**
**ಆಜೀವಃ ಸರ್ವಭೂತಾನಾಂ ಯೋಗಕ್ಷೇಮಕೃದೀಶ್ವರಃ ॥ ೧೨೭ ॥**

**ಅವೇಕ್ಷಮಾಣಃ ಸತತಂ ಬಿಭರ್ತಿ ಜಗದಂಶುಭಿಃ ।**
**ತಿಥೀನಾಂ ಪರ್ವಸಂಧೀನಾಂ ಪೂರ್ಣಿಮಾದರ್ಶಯೋರಪಿ ॥ ೧೨೮ ॥**

**ಯೋನಿರ್ನಿಶಾಕರೋ ಯಶ್ಚ ಅಮೃತಾತ್ಮಾ ಪ್ರಜಾಪತಿಃ ।**
**ತಸ್ಮಾತ್ಸ ಪಿತೃಮಾನ್ ಸೋಮಃ ಸ್ಮೃತ ಇಡ್ವತ್ಸರಾತ್ಮಕಃ ॥ ೧೨೯ ॥**

---

ಸತ್ಕರಿಸಲ್ಪಟ್ಟವನಾಗಿಯೂ, ಲೋಕದ ಜೀವನಾಧಾರನಾಗಿಯೂ, ಆದಿತ್ಯ, ಸವಿತಾ, ಭಾನು ಮುಂತಾದ ನಾಮವುಳ್ಳವನಾಗಿಯೂ ಇರುವನು.

೧೨೬. ಆದುದರಿಂದ ಆ ಸೂರ್ಯನು ಸಕಲ ಭೂತಗಳಿಗೆ ಉತ್ಪತ್ತಿಕಾರಣನೂ ತಾನು ಅನಾದಿಯಾದವನೂ ಆಗಿರುವನು. ಸಮಸ್ತ ನಕ್ಷತ್ರಗಳಲ್ಲಿ ಅಭಿಮಾನಿಯಾಗಿ ನಕ್ಷತ್ರೇಶನೆಂಬ ಚಂದ್ರನು ಎರಡನೆಯ ಪರಿವತ್ಸರ ಎಂದು ತಿಳಿಯಲ್ಪಡಬೇಕು.

೧೨೭. ಆ ಚಂದ್ರನು ಸಮಸ್ತ ಓಷಧಿಗಳಿಗೆ ಅಧಿಪತಿಯಾಗಿರುವ ಸೋಮನೆಂದು ಕರೆಯಲ್ಪಡುತ್ತಾನೆ. ಸಕಲ ಪ್ರಾಣಿಗಳಿಗೆ ಜೀವವನ್ನು ಕೊಡುವವನಾಗಿಯೂ ಯೋಗಕ್ಷೇಮವನ್ನು ಪಾಲಿಸುವ ಪ್ರಭುವಾಗಿಯೂ ಇರುವುದರಿಂದ ಆ ಸೋಮನು ಲೋಕಕ್ಕೆ ಪ್ರಪಿತಾಮಹಸ್ವರೂಪನು.

೧೨೮. ಅಂತಹ ಸೋಮನು ತನ್ನ ಕಿರಣಗಳಿಂದ ಯಾವಾಗಲೂ ಜಗತ್ತನ್ನು ನೋಡುತ್ತ ಪೂರ್ಣಿಮಾ, ಅಮಾವಾಸ್ಯಾ ಎಂಬ ಪರ್ವ ತಿಥಿಗಳನ್ನೂ ಪ್ರತಿಪತ್ ಮತ್ತು ಆ ಪರ್ವಕಾಲಗಳ ಸಂಧಿಯೆಂಬ ಪರ್ವ ಸಂಧಿಗಳನ್ನು ಮತ್ತು ಇತರ ಸಮಸ್ತ ತಿಥಿಗಳನ್ನೂ ನೆರವೇರಿಸುತ್ತ ಜಗತ್ತನ್ನು ರಕ್ಷಿಸುವನು.

೧೨೯. ರಾತ್ರಿಯೆಂಬ ಕಾಲವಿಭಾಗಕ್ಕೆ ಅಧಿಪತಿಯೂ ಅಮೃತಮಯವಾದ ಕಿರಣಗಳುಳ್ಳವನೂ ಪ್ರಜಾಪತಿಸ್ವರೂಪನೂ ಆದ ಆ ಸೋಮನು ಪಿತೃರಾಜನಾಗಿರುವನು. ಅವನನ್ನು ಇಡಾವತ್ಸರವೆಂದು ತಿಳಿಯಬೇಕು.

ಪ್ರಾಣಾಪಾನಸಮಾನಾದ್ಯೈರ್ವ್ಯಾನೋದಾನಾತ್ಮಕೈರಪಿ ।
ಕರ್ಮಭಿಃ ಪ್ರಾಣಿನಾಂ ಲೋಕೇ ಸರ್ವಚೇಷ್ಟಾಪ್ರವರ್ತಕಃ ॥ ೧೩೦ ॥

ಪಂಚಾನಾಂ ಚೇಂದ್ರಿಯಮನೋಬುದ್ಧಿಸ್ಮೃತಿಬಲಾತ್ಮನಾಮ್ ।
ಸಮಾನಕಾಲಕರಣಕ್ರಿಯಾಃ ಸಂಪಾದಯನ್ನಪಿ ॥ ೧೩೧ ॥

ಸರ್ವಾತ್ಮಾ ಸರ್ವಲೋಕೇಶ ಆವಹಪ್ರವಹಾದಿಭಿಃ ।
ವರ್ತತೇ ಚೋಪಕಾರ್ಯೈರ್ಯಸ್ತ್ವಸುಭಿಃ ಸಪ್ತಸಪ್ತಭಿಃ ॥ ೧೩೨ ॥

ವಿಧಾತಾ ಸರ್ವಭೂತಾನಾಂ ಕ್ಷೇಮೀ ನಿತ್ಯಂ ಪ್ರಭಂಜನಃ ।
ಯೋನಿರಗ್ನೇರಪಾಂ ಭೂಮೇ ರವೇಶ್ಚಂದ್ರಮಸಶ್ಚ ಯಃ ॥ ೧೩೩ ॥

ವಾಯುಃ ಪ್ರಜಾಪತಿರ್ಭೂತೋ ಲೋಕಾತ್ಮಾ ಪ್ರಪಿತಾಮಹಃ ।
ಅಹೋರಾತ್ರಕರಸ್ತಸ್ಮಾತ್ ಸ ವಾಯುರನುವತ್ಸರಃ ॥ ೧೩೪ ॥

---

೧೩೦. ವಾಯುವು ಅನುವತ್ಸರ ಸ್ವರೂಪನು, ಆ ವಾಯುವು ಪ್ರತಿಯೊಂದು ಪ್ರಾಣಿಯ ಶರೀರದೊಳಗೆ ಪ್ರಾಣ, ಅಪಾನ, ವ್ಯಾನ, ಉದಾನ, ಮತ್ತು ಸಮಾನ ಎಂಬ ಐದು ಬಗೆಯ ವೃತ್ತಿಗಳಿಂದ ಇದ್ದು ಸಕಲ ವ್ಯವಹಾರಗಳನ್ನೂ ನಡೆಸುತ್ತಿರುವನು.

೧೩೧. ಮತ್ತು ಇಂದ್ರಿಯ-ಮನಸ್ಸು-ಬುದ್ಧಿ-ಸ್ಮೃತಿ-ಬಲಗಳೆಂಬ ಈ ಶರೀರ ಸಂಘಾತದೊಳಗಿನ ಪಂಚೋಪಕರಣಗಳು ಸೇರಿ ಒಂದು ಸಮಯದಲ್ಲಿ ಉಚಿತವಾದ ಕರ್ಮವನ್ನು ಮಾಡುವಂತೆ ಶಕ್ತಿಯನ್ನು ಆಯಾಯ ಉಪಕರಣಗಳಿಗೆ ಉಂಟು ಮಾಡುತ್ತಿರುವನು.

೧೩೨. ಮತ್ತು ಸರ್ವಲೋಕಗಳಿಗೆ ನಿಯಾಮಕನಾಗಿ ಆವಹ-ಪ್ರವಹ ಮುಂತಾದ ಏಳು ವಿಭಾಗಗಳಿಂದ ಕೂಡಿದ ಸಪ್ತ ಸ್ಕಂಧಗಳಿಂದ ಆಯಾಯ ಪ್ರಾಣಿವರ್ಗದ ಮುಖ ಉಪಕಾರಗಳನ್ನು ಮಾಡುತ್ತ ಸರ್ವಾತ್ಮಕನಾಗಿರುವನು.

೧೩೩. ಮತ್ತು ಸರ್ವ ಭೂತಗಳನ್ನು ಸೃಜಿಸಿದವನೂ ಯಾವಾಗಲೂ ಲೋಕದ ಕ್ಷೇಮವನ್ನು ಮಾಡುವವನೂ ಅಗ್ನಿ, ಜಲ, ಭೂಮಿ, ಸೂರ್ಯ, ಮತ್ತು ಚಂದ್ರರ ಸ್ಥಿತಿ-ಚಲನ ಮುಂತಾದುವುಗಳಿಗೆ ಕಾರಣನೂ ಆಗಿರುವನು.

೧೩೪. ಪಂಚಭೂತಗಳಲ್ಲಿ ಒಂದಾದ ವಾಯುವು ಹಗಲು ಮತ್ತು ರಾತ್ರಿಗಳನ್ನು

ಏತೇ ಪ್ರಜಾನಾಂ ಪತಯಶ್ಚತ್ವಾರ ಉಪಪಕ್ಷಜಾಃ ।
ಪಿತರಃ ಸರ್ವಲೋಕಾನಾಂ ಲೋಕಾತ್ಮಾನಃ ಪ್ರಕೀರ್ತಿತಾಃ ॥ ೧೩೫ ॥

ಧ್ಯಾಯತೋ ಬ್ರಹ್ಮಣೋ ವಕ್ತ್ರಾದ್ರುದ್ರಃ ಸಮುಭವದ್ಭವಃ ।
ಋಷಿರ್ವಿಪ್ರಾ ಮಹಾದೇವೋ ಭೂತಾತ್ಮಾ ಪ್ರಪಿತಾಮಹಃ ॥ ೧೩೬ ॥

ಈಶ್ವರಃ ಸರ್ವಭೂತಾನಾಂ ಪ್ರಣವೋ ಯೋಽಥ ಪಠ್ಯತೇ ।
ಆತ್ಮಾವೇಶೇನ ಭೂತಾನಾಮಂಗಪ್ರತ್ಯಂಗಸಂಭವಃ ॥ ೧೩೭ ॥

ಉನ್ಮಾದಕೋಽನುಗ್ರಹಕೃದ್ರುದ್ರೋ ವತ್ಸರ ಉಚ್ಯತೇ ।
ಸೂರ್ಯಶ್ಚ ಚಂದ್ರಮಾಶ್ಚಾಗ್ನಿರ್ವಾಯೂ ರುದ್ರಸ್ತಥೈವ ಚ ॥ ೧೩೮ ॥

---

ಉಂಟುಮಾಡಿ ಲೋಕಕ್ಕೆ ಪ್ರಪಿತಾಮಹನೆಂದೂ ಲೋಕದ ಆತ್ಮಸ್ವರೂಪನೆಂದೂ ಮತ್ತು ಪ್ರಜಾಪತಿಯೆಂದೂ ಕರೆಯಲ್ಪಡುವನು. ಆದ್ದರಿಂದ ಅಂತಹ ವಾಯುವು ಅನುವತ್ಸರವೆಂಬ ಕಾಲಸ್ವರೂಪವು.

೧೩೫. ಅಗ್ನಿ, ಸೂರ್ಯ, ಚಂದ್ರ, ವಾಯುಗಳೆಂಬ ನಾಲ್ಕುಜನ ಪ್ರಜಾಪತಿಗಳು ಬ್ರಹ್ಮನ ಪಕ್ಷಸಮೀಪ ಪ್ರದೇಶದಿಂದ ಹುಟ್ಟಿದರು. ಮತ್ತು ಲೋಕದ ಪ್ರತಿಯೊಂದು ವರ್ತನಕ್ಕೂ ಮುಖ್ಯ ನಿಮಿತ್ತರಾಗಿರುವುದರಿಂದ ಪಿತೃಸ್ವರೂಪರೂ ಸರ್ವಲೋಕಾತ್ಮಕರೂ ಆಗಿರುವರು.

೧೩೬. ಬ್ರಹ್ಮನು ಸೃಷ್ಟಿಧ್ಯಾನ ತತ್ಪರನಾಗಿರುವಸಮಯದಲ್ಲಿ ಅವನ ಮುಖದಿಂದ ಭವದೇವನು ರೋದನಮಾಡುತ್ತ ಜನಿಸಿದನು. ರೋದನ ಮಾಡಿದ ನಿಮಿತ್ತದಿಂದ ಅವನಿಗೆ ರುದ್ರನೆಂಬ ಹೆಸರು ಬಂದಿತು. ಅವನು ಸರ್ವ ಭೂತಗಳ ಆತ್ಮಸ್ವರೂಪನಾಗಿಯೂ ಪ್ರಪಿತಾಮಹಸ್ವರೂಪನಾಗಿಯೂ ಸರ್ವಜ್ಞನಾಗಿಯೂ ಇರುವುದರಿಂದ ಮಹಾದೇವನೆಂದು ಕರೆಯಲ್ಪಡುವನು.

೧೩೭. ಮತ್ತು ಸರ್ವ ಪ್ರಾಣಿಗಳಿಗೆ ಈಶ್ವರರೂಪನೂ, ಸರ್ವರಿಗೂ ಸ್ತುತ್ಯನೂ ಆಗಿರುವುದರಿಂದ ಪ್ರಣವಸ್ವರೂಪನೂ ಆಗಿರುವನು. ಅಂತಹ ರುದ್ರನು ಸಕಲ ಭೂತಗಳ ಅಂಗ ಪ್ರತ್ಯಂಗಗಳ ಉತ್ಪತ್ತಿಗೆ ಆತ್ಮರೂಪನಾಗಿ ಪ್ರವೇಶಿಸಿ ಕಾರಣನಾಗಿರುವನು.

೧೩೮. ಉನ್ಮಾದವನ್ನು ಉಂಟುಮಾಡುವವನೂ, ಅನುಗ್ರಹವನ್ನು ತೋರಿ

ಯುಗಾಭಿಮಾನೀ ಕಾಲಾತ್ಮಾ ನಿತ್ಯಂ ಸಂಕ್ಷಯಕೃದ್ವಿಭುಃ ।
ರುದ್ರಃ ಪ್ರವಿಷ್ಟೋ ಭಗವಾಂಜ್ಜಗತ್ಯಸ್ಮಿನ್ ಸ್ವತೇಜಸಾ ॥ ೧೩೯ ॥

ಆಶ್ರಯಾನ್ಮಯಿ ಸಂಯೋಗಾತ್ತನುಭಿರ್ನಾಮಭಿಸ್ತಥಾ ।
ತತಸ್ತಸ್ಯ ತು ವೀರ್ಯೇಣ ಲೋಕಾನುಗ್ರಹಕಾರಕಮ್ ॥ ೧೪೦ ॥

ದೇವತ್ವಂ ಚ ಪಿತೃತ್ವಂ ಚ ಕಾಲತ್ವಂ ಚಾಸ್ಯ ಯತ್ಪರಮ್ ।
ತಸ್ಮಾದ್ವೈ ಸರ್ವಥಾ ರುದ್ರಸ್ತದ್ವಿದ್ವದ್ಭಿರಭೀಜ್ಯತೇ ॥ ೧೪೧ ॥

ಯತಃ ಪತಿಃ ಸ ಭಗವಾನ್ ಪ್ರಜೇಶಾನಾಂ ಪ್ರಜಾಪತಿಃ ।
ಭಾವನಃ ಸರ್ವಭೂತಾನಾಂ ಸರ್ವಾತ್ಮಾ ನೀಲಲೋಹಿತಃ ॥ ೧೪೨ ॥

---

ಸುವವನೂ ಆದ ರುದ್ರನು ಪರಿವತ್ಸರನೆಂದು ಕರೆಯಲ್ಪಡುವನು. ಹೀಗೆ ಸೂರ್ಯ, ಚಂದ್ರ, ಅಗ್ನಿ, ವಾಯು, ರುದ್ರರೆಂದು ಐದು ವಿಭಾಗಗಳಿಂದ ಕೂಡಿ ಕಾಲಾವಸ್ಥೆಗಳು ಇರುವುವು.

೧೩೯. ಯುಗವೆಂಬ ಮಹಾ ಕಾಲದಲ್ಲಿ ಅಭಿಮಾನವುಳ್ಳ ಕಾಲಾಂಶ ಸ್ವರೂಪನೂ, ಸರ್ವ ವ್ಯಾಪಕನೂ, ಸರ್ವಪೂಜ್ಯನೂ, ಆದ ರುದ್ರನು ಈ ಜಗತ್ತಿನಲ್ಲಿ ತನ್ನ ತೇಜಸ್ಸಿನಿಂದ ಕ್ಷಯ ವ್ಯಾಪಾರವನ್ನು ಮುಖ್ಯವಾಗಿ ನಿರ್ವಹಿಸುವವನಾಗಿ ಪ್ರಪಂಚದಲ್ಲಿ ಪ್ರವೇಶಮಾಡಿದನು.

೧೪೦. ಕಾಲಾತ್ಮಕನಾದ ಪ್ರಜಾಪತಿಯನ್ನು ಆಶ್ರಯಿಸಿರುವುದರಿಂದಲೂ ವಿವಿಧವಾದ ಮೂರ್ತಿ ಮತ್ತು ನಾಮುಗಳಿಂದ ಕೂಡಿರುವುದರಿಂದಲೂ ಮಹತ್ತ್ವದಿಂದ ಕೂಡಿದ ಆ ರುದ್ರನ ವೀರ್ಯದಿಂದ ಲೋಕವು ಸರ್ವತೋಮುಖವಾದ ಅನುಗ್ರಹಕ್ಕೆ ಪಾತ್ರವಾಯಿತು.

೧೪೧. ಅಂತಹ ರುದ್ರನು ತನ್ನ ಮಹಿಮೆಯಿಂದ ದೇವಸ್ವರೂಪನ್ನೂ ಪ್ರಪಂಚದ ಉತ್ಪತ್ತಿಗೆ ಕಾರಣನಾದ್ದರಿಂದ ಪಿತೃಸ್ವರೂಪವನ್ನೂ ಸರ್ವ ವಸ್ತುವಿನ ಪರಿಮಾಣವನ್ನು ಅಳೆಯುವವನಾದ್ದರಿಂದ ಕಾಲಸ್ವರೂಪವನ್ನೂ ಹೊಂದಿರುವುದರಿಂದ ಜ್ಞಾನಿಗಳು ರುದ್ರನನ್ನು ಪೂಜಿಸುವರು.

೧೪೨. ಆ ಪರಮ ಪೂಜ್ಯನೂ ಪ್ರಜಾಪತಿಯರಲ್ಲಿ ಉತ್ತಮನಾದ ಪ್ರಜಾಪತಿ

ಔಷಧೀಃ ಪ್ರತಿಸಂಧತ್ತೇ ರುದ್ರಃ ಕ್ಷೀಣಾಃ ಪುನಃ ಪುನಃ ।
ಪ್ರಜಾಪತಿಮುಖ್ಯೈರ್ದೇವೈಃ ಸಮ್ಯಗಿಷ್ಟಫಲಾರ್ಥಿಭಿಃ ॥ ೧೪೩ ॥

ತ್ರಿಭಿರೇವ ಕಪಾಲೈಶ್ಚ ತ್ರ್ಯಮ್ಬಕೈರೋಷಧಿಕ್ಷಯೇ ।
ಇಜ್ಯತೇ ಭಗವಾನ್ ಯಸ್ಮಾತ್ತಸ್ಮಾತ್ತ್ರ್ಯಮ್ಬಕ ಉಚ್ಯತೇ ॥ ೧೪೪ ॥

ಗಾಯತ್ರೀ ಚೈವ ತ್ರಿಷ್ಟುಪ್ಚ ಜಗತೀ ಚೈವ ಯಾಃ ಸ್ಮೃತಾಃ ।
ತ್ರ್ಯಮ್ಬಕಾ ನಾಮತಃ ಪ್ರೋಕ್ತಾ ಯೋನಯಸ್ತಾ ವನಸ್ಪತೇಃ ॥೧೪೫॥

ತಾಭಿರೇಕತ್ವಭೂತಾಭಿಸ್ತ್ರಿವಿಧಾಭಿಃ ಸ್ವವೀರ್ಯತಃ ।
ತ್ರಿಸಾಧನಃ ಪುರೋಡಾಶಸ್ತ್ರಿಕಪಾಲಃ ಸ ವೈ ಸ್ಮೃತಃ ॥ ೧೪೬ ॥

---

ಸ್ವರೂಪನೂ ಸರ್ವ ಭೂತಗಳ ಸೃಷ್ಟಿಗೆ ಕಾರಣನೂ ಆದ ನೀಲಲೋಹಿತ ಅಥವಾ ರುದ್ರನು ಸರ್ವಾತ್ಮಕನಾಗಿರುವನು.

೧೪೩. ಸರ್ವ ಲೋಕವನ್ನು ಅನುಗ್ರಹಿಸಲು ಪ್ರಜಾಪತಿ ಮುಂತಾದ ದೇವತೆಗಳು ವೃಷ್ಟಿ ಮುಂತಾಗ ಇಷ್ಟಫಲಾಕಾಂಕ್ಷೆಯಿಂದ ಪೂಜಿಸಲ್ಪಡಲಾಗಿ ರುದ್ರನು ನಶಿಸಿ ಹೋದ ಓಷಧಿಗಳನ್ನು ವೃದ್ಧಿ ಹೊಂದುವಂತೆ ಉಪಕಾರ ಮಾಡುವನು.

೧೪೪. ಅನಾವೃಷ್ಟಿ ಮುಂತಾದ ವಿಪತ್ತುಗಳಿಂದ ಓಷಧಿಗಳು ನಶಿಸಿಹೋಗಲು ಭೀತರಾದ ಪ್ರಜೆಗಳು ಮೂರು ಕಪಾಲಗಳಲ್ಲಿ ಸಂಸ್ಕಾರ ಮಾಡಿದ ಪುರೋಡಾಶವೆಂಬ ಹವಿಸ್ಸಿನಿಂದ ಪೂಜ್ಯನಾದ ರುದ್ರನನ್ನು ಪೂಜಿಸುವುದರಿಂದ ರುದ್ರನಿಗೆ ತ್ರ್ಯಂಬಕನೆಂಬ ಹೆಸರು ಬಂದಿರುವುದು.

೧೪೫. ಗಾಯತ್ರೀ, ತ್ರಿಷ್ಟುಪ್, ಮತ್ತು ಜಗತೀ ಎಂಬ ಮೂರು ಛಂದೋವಿಶೇಷಗಳು ವನಸ್ಪತಿ ಜಾತಿಗೆ ಪ್ರೀತಿಯಿಂದ ಅಭಿವೃದ್ಧಿ ಸಾಧಕಗಳಾಗಿವೆ. ಅವುಗಳನ್ನು ತ್ರ್ಯಂಬಕಾ ಎಂಬ ಹೆಸರಿನಿಂದ ಕರೆಯುವರು.

೧೪೬. ಹಿಂದೆ ಹೇಳಿದ ಮೂರು ಛಂದೋಬದ್ಧವಾದ ಋಙ್ಮಂತ್ರಗಳು ಐಕ್ಯವನ್ನು ಹೊಂದಿ ತಮ್ಮ ವೀರ್ಯದಿಂದ ಮೂರು ಸಾಧನಗಳಿಂದ ಆಗುವ ಪುರೋಡಾಶ

ತ್ರ್ಯಂಬಕಃ ಸ ಪುರೋಡಾಶಸ್ತ್ರೇನೈಷ ತ್ರ್ಯಮ್ಬಕಃ ಸ್ಮೃತಃ ।
ಇತ್ಯೇತತ್ಪಂಚವರ್ಷಂ ಹಿ ಯುಗಂ ಪ್ರೋಕ್ತಂ ಮನೀಷಿಭಿಃ ॥ ೧೪೭ ॥

ಯಶ್ಚೈಷ ಪಂಚಧಾತ್ಮಾ ವೈ ಪ್ರೋಕ್ತಃ ಸಂವತ್ಸರೋ ದ್ವಿಜೈಃ ।
ಸೈಕಃ ಷಟ್ಕೋ ವಿಜಜ್ಞೇಽಥ ಮಧ್ವಾದಿಋತುಸಂಜ್ಞಕಃ ॥ ೧೪೮ ॥

ಋತುಪುತ್ರಾರ್ತವಾಃ ಪಂಚ ಇತಿ ಸರ್ಗಃ ಸಮಾಸತಃ ।
ಇತ್ಯೇಷ ಬಹುಮಾನೋ ವೈ ಪ್ರಾಣಿನಾಂ ಜೀವಿತಾನಿ ಚ ॥
ನದೀವೇಗ ಇವಾಸಕ್ತಃ ಕಾಲೋ ಧಾವತಿ ಸಂಹರನ್ ॥ ೧೪೯ ॥

---

ವನ್ನು ನಿರ್ಮಿಸಿದ್ದರಿಂದ ಆ ಪುರೋಡಾಶವೆಂಬ ಹವಿಸ್ಸು ತ್ರಿಕಪಾಲವೆಂಬ ಸಂಜ್ಞೆಯನ್ನು ಹೊಂದಿರುವುದು.

೧೪೭. ಹೀಗೆ ಪುರೋಡಾಶವು ತ್ರ್ಯಂಬಕರೂಪವಾದುದಲ್ಲದೆ ಆ ಪುರೋಡಾಶಯಾಗದಿಂದ ತೃಪ್ತಿ ಹೊಂದುವ ದೇವತೆಯಾದ ರುದ್ರನೂ ತ್ರ್ಯಂಬಕನೆಂದು ಕರೆಯಲ್ಪಡುವನು. ಹೀಗೆ ಯುಗವೆಂಬ ಕಾಲಾಂಶದಲ್ಲಿ ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ಮತ್ತು ವತ್ಸರವೆಂಬ ಐದು ವರ್ಷಗಳು ಇರುವುದಾಗಿ ವಿದ್ವಾಂಸರಿಂದ ಹೇಳಲ್ಪಟ್ಟಿದೆ.

೧೪೮. ಈ ರೀತಿಯಾಗಿ ಐದು ವಿಭಾಗಗಳನ್ನು ಹೊಂದಿರುವುದಾಗಿ ಬ್ರಾಹ್ಮಣರಿಂದ ವರ್ಣಿಸಲ್ಪಟ್ಟ ಸಂವತ್ಸರವು ಮತ್ತೆ ಒಂದು ಅಧಿಕ ರೂಪವನ್ನು ಹೊಂದಿ ಹಿಂದೆ ಹೇಳಿದ ಮಧು ಮುಂತಾದ ಆರು ಋತುಗಳ ಸಂಜ್ಞೆಯನ್ನು ಹೊಂದಿರುವುದು.

೧೪೯. ಋತುಗಳ ಪುತ್ರರಾದ ಆರ್ತವ ಎಂಬ ಪ್ರಜೆಗಳು ಐದು ಮಂದಿಯೆಂದು ಹಿಂದೆ ಹೇಳಲ್ಪಟ್ಟಿದೆ. ಈ ರೀತಿಯಾಗಿ ಪ್ರತಿಯೊಂದು ಪ್ರಾಣಿಗೆ ಋತು-ಆರ್ತವಗಳಲ್ಲಿಯೂ ಅವುಗಳ ಕಾರ್ಯವಿಶೇಷಗಳಲ್ಲಿಯೂ ಬಹುಮಾನವು ಉಂಟಾಗಿರುವುದು. ಈ ಕಾಲಾಂಶದಿಂದ ಪ್ರಜೆಗಳ ಜೀವನ ಕಾಲವೆಂಬ ಆಯುಷ್ಯವು ನಡೆಯುವುದು. ಇಂತಹ ಕಾಲವು ನದಿಯ ಪ್ರಬಲ ವೇಗದಂತೆ ಸಂಹಾರ ಮಾಡುತ್ತ ಚಲಿಸುವುದು.

**ಏತೇಷಾಂ ಯದಪತ್ಯಂ ವೈ ತದಶಕ್ಯಂ ಪ್ರಮಾಣತಃ |**
**ಬಹುತ್ವಾತ್ಪರಿಸಂಖ್ಯಾತುಂ ಪುತ್ರಪೌತ್ರಮನಂತಕಮ್ || ೧೫೦ ||**

**ಇಮಂ ವಂಶಂ ಪ್ರಜೇಶಾನಾಂ ಮಹತಃ ಪುಣ್ಯಕರ್ಮಣಾಮ್ |**
**ಕೀರ್ತಯರ್ನ್ ಪುಣ್ಯಕೀರ್ತೀನಾಂ ಮಹತೀಂ ಸಿದ್ಧಿಮಾಪ್ನುಯಾತ್ ||**
**|| ೧೫೧ ||**

**ಇತಿ ಶ್ರೀ ಬ್ರಹ್ಮಾಣ್ಡಪುರಾಣೇ ತ್ರಯೋದಶೋಽಧ್ಯಾಯಃ.**

---

೧೫೦ ಮೇಲೆ ಹೇಳಿದ ಪ್ರಜೆಗಳಿಗೆ ಉಂಟಾದ ಸಂತತಿಯನ್ನು ಗಣಿಸಿ ಸಂಪೂರ್ಣವಾಗಿ ಹೇಳುವುದು ಸಾಧ್ಯವಾದುದಲ್ಲ. ಆ ಸಂತತಿಯು ಅನಂತವಾಗಿ ಪುತ್ರಪೌತ್ರರಿಂದ ಬೆಳೆದುಹೋಗಿರುವುದರಿಂದ ಅದನ್ನು ಪ್ರತ್ಯೇಕವಾಗಿ ಎಣಿಸುವುದು ಅಶಕ್ಯವು.

ಪುಣ್ಯವಂತರಾದ ಪ್ರಜಾಪತಿಗಳ ಈ ವಂಶಾವಳಿಯನ್ನೂ ಮತ್ತು ಆ ವಂಶದಲ್ಲಿ ಹುಟ್ಟಿದ ಪುಣ್ಯಾತ್ಮರ ಚರಿತ್ರೆಯನ್ನೂ ಕೀರ್ತನ ಮಾಡಿದವನು ಮಹಾ ಫಲಸಿದ್ಧಿಯನ್ನು ಹೊಂದುತ್ತಾನೆ.

ಬ್ರಹ್ಮಾಂಡ ಪುರಾಣದಲ್ಲಿ ಹದಿಮೂರನೇ ಅಧ್ಯಾಯವು ಸಮಾಪ್ತವು.

# ಚತುರ್ದಶೋऽಧ್ಯಾಯಃ

**ಸೂತ ಉವಾಚ**

ಅಥಾನ್ತರೇಷು ಸರ್ವೇಷು ಅತೀತಾನಾಗತೇಷ್ವಿಹ ।
ತುಲ್ಯಾಭಿಮಾನಿನಃ ಸರ್ವೇ ಜಾಯಂತೇ ನಾಮರೂಪತಃ ॥ ೧ ॥

ದೇವಾಶ್ಚಾಷ್ಟವಿಧಾ ಯೇ ಚ ತಸ್ಮಿನ್ಮನ್ವನ್ತರೇऽಧಿಪಾಃ ।
ಋಷಯೋ ಮನವಶ್ಚೈವ ಸರ್ವೇ ತುಲ್ಯಪ್ರಯೋಜನಾಃ ॥ ೨ ॥

ಮಹರ್ಷಿಸರ್ಗಃ ಸಂಕ್ರಾನ್ತೋ ವಂಶಂ ಸ್ವಾಯಮ್ಭುವಸ್ಯ ತು ।
ವಿಸ್ತರೇಣಾನುಪೂರ್ವ್ಯಾ ಚ ಕೀರ್ತ್ಯಮಾನಂ ನಿಬೋಧತ ॥ ೩ ॥

ಮನೋಃ ಸ್ವಾಯಮ್ಭುವಸ್ಯಾಸನ್ ದಶ ಪೌತ್ರಾಸ್ತು ತತ್ಸಮಾಃ ।
ಯೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ॥ ೪ ॥

ಸಸಮುದ್ರಾ ಕರವತೀ ಪ್ರತಿವರ್ಷಂ ನಿವೇಶಿತಾ ।
ಸ್ವಾಯಂಭುವೇऽನ್ತರೇ ಪೂರ್ವಮಾದ್ಯೇ ತ್ರೇತಾಯುಗೇ ತಥಾ ॥ ೫ ॥

---

ಸೂತಮುನಿಯು ಹೇಳಿದನು.

೧. ಅನಂತರದಲ್ಲಿ ಹಿಂದೆ ಕಳೆದು ಹೋಗಿರುವ ಮತ್ತು ಮುಂದೆ ಬರುವಂತಹ ಎಲ್ಲ ಮನ್ವಂತರಗಳಲ್ಲಿಯೂ ಸರ್ವರೂ ಒಂದೇ ವಿಧವಾದ ನಾಮ-ರೂಪಗಳುಳ್ಳವರಾಗಿ ಸಮಾನವಾದ ಅಭಿಮಾನದಿಂದಲೇ ಹುಟ್ಟುತ್ತಾರೆ.

೨. ಆ ಮನ್ವನ್ತರದಲ್ಲಿ ಅಧಿಕೃತರಾಗಿದ್ದ ಎಂಟುವಿಧ ದೇವತೆಗಳೂ ಮಹರ್ಷಿಗಳೂ ಮತ್ತು ಮನುಗಳೂ ಎಲ್ಲರೂ ಒಂದೇ ವಿಧವಾದ ಪ್ರಯೋಜನ ಉಳ್ಳವರಾಗಿರುತ್ತಾರೆ.

೩. ಹಿಂದಿನ ಅಧ್ಯಾಯಗಳಿಂದ ಮಹರ್ಷಿಗಳ ಸೃಷ್ಟಿಯನ್ನು ತಿಳಿಸಿಯಾಗಿದೆ. ಈಗ ಸ್ವಾಯಮ್ಭುವ ಮನುವಿನ ವಂಶದ ವಿಷಯವಾಗಿ ಕ್ರಮವಾಗಿಯೂ ವಿಸ್ತಾರವಾಗಿಯೂ ಹೇಳುವುದನ್ನು ತಿಳಿಯಿರಿ.

೪-೫. ಸ್ವಾಯಂಭುವ ಮನ್ವಂತರದಲ್ಲಿ ಮೊದಲನೆಯ ತ್ರೇತಾಯುಗದ

ಪ್ರಿಯವ್ರತಸ್ಯ ಪುತ್ರೈಸ್ತ್ಯೈಃ ಪೌತ್ರೈಃ ಸ್ವಾಯಮ್ಭುವಸ್ಯ ತು ।
ಪ್ರಜಾಸತ್ತ್ವತಪೋಯುಕ್ತೈಸ್ತೈರಿಯಂ ವಿನಿವೇಶಿತಾ ॥ ೬ ॥

ಪ್ರಿಯವ್ರತಾತ್ಪ್ರಜೋಪೇತಾನ್ ವೀರಾನ್ಕಾಮ್ಯಾವ್ಯಜಾಯತ ।
ಕನ್ಯಾ ಸಾ ತು ಮಹಾಭಾಗಾ ಕರ್ದಮಸ್ಯ ಪ್ರಜಾಪತೇಃ ॥ ೭ ॥

ಕನ್ಯೇ ದ್ವೇ ದಶ ಪುತ್ರಾಶ್ಚ ಸಮ್ರಾಟ್ ಕುಕ್ಷಿಶ್ಚ ತೇ ಶುಭೇ ।
ತಯೋರ್ವೈ ಭ್ರಾತರಃ ಶೂರಾಃ ಪ್ರಜಾಪತಿಸಮಾ ದಶ ॥ ೮ ॥

ಆಗ್ನೀಧ್ರಶ್ಚಾಗ್ನಿಬಾಹುಶ್ಚ ಮೇಧಾ ಮೇಧಾತಿಥಿರ್ವಸುಃ ।
ಜ್ಯೋತಿಷ್ಮಾನ್ ದ್ಯುತಿಮಾನ್ ಹವ್ಯಃ ಸವನಃ ಸತ್ರ ಏವ ಚ ॥ ೯ ॥

---

ಆದಿಯಲ್ಲಿ ಸಪ್ತದ್ವೀಪಗಳು ಅನೇಕ ಪಟ್ಟಣಗಳು ಸಮುದ್ರಗಳು ಮತ್ತು ಗಣಿಗಳು ಇವುಗಳಿಂದ ಅಲಂಕೃತವಾದ ಭೂಮಿಯನ್ನು ಆಳಲು ಪ್ರತಿಯೊಂದೊಂದು ವರ್ಷಗಳಲ್ಲಿ ಸ್ಥಾಪಿಸಲ್ಪಟ್ಟ ಮಹಾಪ್ರಭಾವರಾದ ಹತ್ತು ಜನರು ಸ್ವಾಯಂಭುವ ಮನುವಿಗೆ ಅನುರೂಪರಾದ ಮೊಮ್ಮಕ್ಕಳಾಗಿ ಹುಟ್ಟಿದರು.

೬, ಸ್ವಾಯಂಭುವ ಮನುವಿನ ಮೊಮ್ಮಕ್ಕಳೂ ಪ್ರಿಯವ್ರತನ ಪುತ್ರರೂ ಆದ ಆ ಮಹನೀಯರು ತಮ್ಮ ವಿಕ್ರಮ-ತಪಸ್ಸುಗಳ ಬಲದಿಂದ ಭೂಮಿಯಲ್ಲಿ ಪ್ರಜೆಗಳನ್ನು ಶಾಶ್ವತವಾಗಿ ಇರಿಸಿದರು.

೭. ಕರ್ದಮಪ್ರಜಾಪ್ರತಿಯ ಮಗಳಾದ ಮತ್ತು ಪ್ರಿಯವ್ರತನ ಪತ್ನಿಯಾದ ಮಹಾಶಯಳು ಎಲ್ಲರಿಗೂ ಕಾಮ್ಯರೂ ಪ್ರಜಾವಂತರೂ ಮತ್ತು ವೀರರೂ ಆದ ಪ್ರಜೆಯನ್ನು ಹಡೆದಳು.

೮. ಆ ಪ್ರಿಯವ್ರತನ ಸನ್ತತಿಯಲ್ಲಿ ಸಮ್ರಾಟ್-ಕುಕ್ಷಿ ಎಂಬ ಮಂಗಳ ರೂಪರಾದ ಇಬ್ಬರು ಕನ್ಯೆಯರೂ ಮತ್ತು ಪ್ರಜಾಪ್ರತಿಸಮರೆಂದೆನಿಸುವ ಶೂರ ಪುರುಷರಾದ ಹತ್ತು ಮಂದಿ ಪುತ್ರರೂ ಸೇರಿ ಹನ್ನೆರಡು ಮಕ್ಕಳು ಜನಿಸಿದರು.

೯. ಪ್ರಿಯವ್ರತನ ವಂಶದಲ್ಲಿ ಹುಟ್ಟಿದ ಪುತ್ರರು ಕ್ರಮವಾಗಿ ಆಗ್ನೀಧ್ರ, ಅಗ್ನಿಬಾಹು, ಮೇಧಾ, ಮೇಧಾತಿಥಿ, ವಸು, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಸವನ, ಸತ್ರ ಎಂಬ ನಾಮಧೇಯದಿಂದ ಅಂಕಿತರಾಗಿರುವರು.

ಪ್ರಿಯವ್ರತೋಽಭ್ಯಷಿಂಚತ್ತಾನ್ ಸಪ್ತಸಪ್ತಸು ಪಾರ್ಥಿವಾನ್ ।
ದ್ವೀಪೇಷು ತೇಷು ಧರ್ಮೇಣ ದ್ವೀಪಾಂಸ್ತಾಂಶ್ಚ ನಿಬೋಧತ ॥ ೧೦ ॥

ಜಮ್ಬೂದ್ವೀಪೇಶ್ವರಂ ಚಕ್ರೇ ಆಗ್ನೀಧ್ರಂ ಸುಮಹಾಬಲಮ್ ।
ಪ್ಲಕ್ಷದ್ವೀಪೇಶ್ವರಶ್ಚಾಪಿ ತೇನ ಮೇಧಾತಿಥಿಃ ಕೃತಃ ॥ ೧೧ ॥

ಶಾಲ್ಮಲೇ ತು ವಪುಷ್ಮನ್ತಂ ರಾಜಾನಂ ಸೋಽಭಿಷಿಕ್ತವಾನ್ ।
ಜ್ಯೋತಿಷ್ಮನ್ತಂ ಕುಶದ್ವೀಪೇ ರಾಜಾನಂ ಕೃತವಾನ್ ಪ್ರಭುಃ ॥ ೧೨ ॥

ದ್ಯುತಿಮನ್ತಂ ಚ ರಾಜಾನಂ ಕ್ರೌಂಚದ್ವೀಪೇಽಭ್ಯಷೇಚಯತ್ ।
ಶಾಕದ್ವೀಪೇಶ್ವರಂ ಚಾಪಿ ಹವ್ಯಂ ಚಕ್ರೇ ಪ್ರಿಯವ್ರತಃ ॥ ೧೩ ॥

ಪುಷ್ಕರಾಧಿಪತಿಂ ಚೈವ ಸವನಂ ಕೃತವಾನ್ಪ್ರಭುಃ ।
ಪುಷ್ಕರೇ ಸವನಸ್ಯಾಥ ಮಹಾವೀತಃ ಸುತೋಽಭವತ್ ॥ ೧೪ ॥

ಧಾತಕಿಶ್ಚಾಪಿ ದ್ವಾವೇತೌ ಪುತ್ರೌ ಪುತ್ರವತಾಂ ವರೌ ।
ಮಹಾವೀತಂ ಸ್ಮೃತಂ ವರ್ಷಂ ತಸ್ಯ ನಾಮ್ನಾ ಮಹಾತ್ಮನಃ ॥ ೧೫ ॥

---

೧೦. ಪ್ರಿಯವ್ರತನು ಆ ಪುತ್ರರಲ್ಲಿ ಏಳು ಜನರನ್ನು ಧರ್ಮವನ್ನತಿಕ್ರಮಿಸದೇ ಏಳು ದ್ವೀಪಗಳ ರಾಜರನ್ನಾಗಿ ಪಟ್ಟಕಟ್ಟಿದನು. ಆ ದ್ವೀಪಗಳ ವರ್ಣನೆಯನ್ನು ಕೇಳಿರಿ.

೧೧-೧೨-೧೩. ಪ್ರಿಯ ವ್ರತನು ಜಂಬೂದ್ವೀಪದಲ್ಲಿ ಬಲಿಷ್ಠನಾದ ಆಗ್ನೀಧ್ರನನ್ನೂ ಪ್ಲಕ್ಷದ್ವೀಪದಲ್ಲಿ ಮೇಧಾತಿಥಿಯನ್ನೂ ಶಾಲ್ಮಲಿದ್ವೀಪದಲ್ಲಿ ವಪುಷನ್ತನನ್ನೂ ಕುಶದೀಪ ದಲ್ಲಿ ಜ್ಯೋತಿಷ್ಮನ್ತನನ್ನೂ ಕ್ರೌಂಚದ್ವೀಪದಲ್ಲಿ ದ್ಯುತಿಮಂತನನ್ನೂ ಶಾಕದ್ವೀಪದಲ್ಲಿ ಹವ್ಯನನ್ನೂ ಪುಷ್ಕರದ್ವೀಪದಲ್ಲಿ ಸವನನನ್ನೂ ಈ ರೀತಿಯಲ್ಲಿ ಏಳು ದ್ವೀಪಗಳಲ್ಲಿ ಏಳು ಜನ ಬಲಿಷ್ಠರಾದ ಪುತ್ರರನ್ನು ಪಟ್ಟಾಭಿಷೇಕ ಮಾಡಿ ರಾಜರನ್ನಾಗಿ ಮಾಡಿದನು.

೧೪-೧೫. ಪುಷ್ಕರ ದ್ವೀಪಾಧಿಪತಿಯಾದ ಸವನನಿಗೆ ಮಹಾವೀತ-ಧಾತಕಿ ಎಂಬ ಇಬ್ಬರು ರತ್ನಪ್ರಾಯರಾದ ಮಕ್ಕಳು ಜನಿಸಿದರು. ಅವರಲ್ಲಿ ಮಹಾವೀತನು ಆಳಿದ ವರ್ಷಕ್ಕೆ ಆತನ ಹೆಸರಿನಿಂದ ಮಹಾವೀತ ವರ್ಷವೆಂದು ಪ್ರಸಿದ್ಧಿಯುಂಟಾ ಯಿತು.

ನಾಮ್ನಾ ಚ ಧಾತಕೇಶ್ಚಾಪಿ ಧಾತಕೀಖಣ್ಡ ಉಚ್ಯತೇ ।
ಹವ್ಯೋ ವ್ಯಜನಯತ್ಪುತ್ರಾನ್ ಶಾಕದ್ವೀಪೇಶ್ವರಾನ್ ಪ್ರಭುಃ ॥ ೧೬ ॥

ಜಲದಂ ಚ ಕುಮಾರಂ ಚ ಸುಕುಮಾರಂ ಮಣೀವಕಮ್ ।
ಕುಸುಮೋತ್ತರಮೋದಾಕೌ ಸಪ್ತಮಂ ಚ ಮಹಾದ್ರುಮಮ್ ॥ ೧೭ ॥

ಜಲದಂ ಜಲದಸ್ಯಾಥ ಪ್ರಥಮಂ ವರ್ಷಮುಚ್ಯತೇ ।
ಕುಮಾರಸ್ಯ ತು ಕೌಮಾರಂ ದ್ವಿತೀಯಂ ಪರಿಕೀರ್ತಿತಮ್ ॥ ೧೮ ॥

ಸುಕುಮಾರಂ ತೃತೀಯಂ ತು ಸುಕುಮಾರಸ್ಯ ತತ್ ಸ್ಮೃತಮ್ ।
ಮಣೀವಸ್ಯ ಚತುರ್ಥಂ ತು ಮಣೀವಕಮಿಹೋಚ್ಯತೇ ॥ ೧೯ ॥

ಕುಸುಮೋತ್ತರವರ್ಷಂ ಯತ್ ಪಂಚಮಂ ಕುಸುಮೋತ್ತರಮ್ ।
ಮೋದಾಕಸ್ಯಾಪಿ ಮೋದಾಕಂ ಷಷ್ಠಂ ವರ್ಷಂ ಪ್ರಕೀರ್ತಿತಮ್॥ ೨೦ ॥

ಮಹಾದ್ರುಮಸ್ಯ ನಾಮ್ನಾ ಚ ಸಪ್ತಮಂ ತನ್ಮಹಾದ್ರುಮಮ್ ।
ತೇಷಾಂ ತು ನಾಮಭಿಸ್ತಾನಿ ಸಪ್ತ ವರ್ಷಾಣಿ ತತ್ರ ವೈ ॥ ೨೧ ॥

---

೧೬-೧೭. ಹವ್ಯನೆಂಬುವನು ಶಾಕದ್ವೀಪದಲ್ಲಿ ಅನೇಕ ಖಂಡಗಳಿಗೆ ಪ್ರಭುಗಳಾದ ಜಲದ, ಕುಮಾರ, ಸುಕುಮಾರ, ಮಣೀವಕ, ಕುಸುಮೋತ್ತರ, ಮೋದಾಕ, ಮಹಾದ್ರುಮ ಎಂಬ ಹೆಸರಿನ ಏಳುಜನ ಪುತ್ರರನ್ನು ಹೊಂದಿದನು.

೧೮-೧೯-೨೦-೨೧. ಹವ್ಯನ ಪುತ್ರರಾದ ಏಳುಜನ ವೀರರು ಶಾಕದ್ವೀಪದ ಪ್ರತ್ಯೇಕ ಖಂಡಗಳನ್ನು ಆಳಿದ್ದರಿಂದ ಪ್ರತಿಯೊಂದು ವರ್ಷಗಳಿಗೂ ತನ್ನನ್ನು ಆಳಿದ ಪ್ರಭುವಿನ ನಾಮಾಂಕಿತವಾದ ಖಂಡವೆಂದು ಪ್ರಸಿದ್ಧಿಯುಂಟಾಗಿ ಮೊದಲನೆಯ ವರ್ಷವು ಜಲದನ ಹೆಸರಿನಿಂದ ಜಲದ ವರ್ಷವೆಂದೂ ಎರಡನೆಯ ವರ್ಷವು ಕುಮಾರನ ಹೆಸರಿನಿಂದ ಕುಮಾರ ವರ್ಷವೆಂದೂ ಮೂರನೆಯ ವರ್ಷವು ಸುಕುಮಾರನ ಹೆಸರಿನಿಂದ ಸುಕುಮಾರ ವರ್ಷವೆಂದೂ ನಾಲ್ಕನೆಯ ವರ್ಷವು ಮಣೀವಕನ ಹೆಸರಿನಿಂದ ಮಣೀವಕ ವರ್ಷವೆಂದೂ ಐದನೆಯ ವರ್ಷವು ಕುಸುಮೋತ್ತರನ ಹೆಸರಿನಿಂದ ಕುಸುಮೋತ್ತರ ವರ್ಷವೆಂದೂ ಆರನೆಯ ವರ್ಷವು ಮೋದಾಕನ ಹೆಸರಿನಿಂದ ಮೋದಾಕ ವರ್ಷವೆಂದೂ ಏಳನೆಯ ವರ್ಷವು ಮಹಾದ್ರುಮನ ಹೆಸರಿನಿಂದ ಮಹಾದ್ರುಮ ವರ್ಷವೆಂದೂ ಕರೆಯಲ್ಪಡುವುವುಗಳಾದವು.

ಕ್ರೌಂಚದ್ವೀಪೇಶ್ವರಸ್ಯಾಪಿ ಪುತ್ರಾ ದ್ಯುತಿಮತಸ್ತು ವೈ ।
ಕುಶಲೋ ಮನೋಽನುಗಶ್ಚೋಽಷ್ಣಃ ಪಾವನಶ್ಚಾನ್ಧಕಾರಕಃ ।
ಮುನಿಶ್ಚ ದುನ್ದುಭಿಶ್ಚೈವ ಸುತಾ ದ್ಯುತಿಮತಸ್ತು ವೈ ॥ ೨೨ ॥

ಕುಶಲಸ್ಯ ತು ದೇಶೋಽಭೂತ್ ಕೌಶಲೋ ನಾಮ ವಿಶ್ರುತಃ ।
ದೇಶೋ ಮನೋಽನುಗಸ್ಯಾಪಿ ಮನೋಽನುಗ ಇತಿ ಸ್ಮೃತಃ ॥ ೨೩ ॥

ಉಷ್ಣಸ್ಯೋಽಷ್ಣಃ ಸ್ಮೃತೋ ದೇಶಃ ಪಾವನಸ್ಯಾಪಿ ಪಾವನಃ ।
ಅಂಧಕಾರಸ್ಯ ದೇಶಸ್ತು ಅಂಧಕಾರಃ ಪ್ರಕೀರ್ತಿತಃ ॥ ೨೪ ॥

ಮುನೇಶ್ಚ ಮುನಿದೇಶೋ ವೈ ದುಂದುಭೇರ್ದುಂದುಭಿಃ ಸ್ಮೃತಃ ।
ಏತೇ ಜನಪದಾಃ ಸಪ್ತ ಕ್ರೌಂಚದ್ವೀಪೇ ತು ಭಾಸ್ವರಾಃ ॥ ೨೫ ॥

ಜ್ಯೋತಿಷ್ಮತಃ ಕುಶದ್ವೀಪೇ ಸಪ್ತೈವಾಽಽಸನ್ಮಹೌಜಸಃ ॥ ೨೬ ॥

ಉದ್ಭಿದೋ ವೇಣುಮಾಂಶ್ಚೈವ ವೈರಥೋ ಲವಣೋ ಧೃತಿಃ ।
ಷಷ್ಠಃ ಪ್ರಭಾಕರಶ್ಚಾಪಿ ಸಪ್ತಮಃ ಕಪಿಲಃ ಸ್ಮೃತಃ ॥ ೨೭ ॥

---

೨೨. ಕ್ರೌಂಚದ್ವೀಪಾಧಿಪತಿಯಾದ ದ್ಯುತಿಮಂತನೆಂಬುವನಿಗೆ ಕುಶಲ, ಮನೋನುಗ, ಉಷ್ಣ, ಪಾವನ, ಅನ್ಧಕಾರಕ, ಮುನಿ, ದುಂದುಭಿ ಎಂಬ ಪುತ್ರರು ಜನಿಸಿ ಮುಂದೆ ವರ್ಣಿಸುವ ದೇಶಗಳಿಗೆ ಪ್ರಭುಗಳಾದರು.

೨೩-೨೪-೨೫. ಹಿಂದಿನಂತೆ ದ್ಯುತಿಮಂತನ ಪುತ್ರರು ಆಳಿದ ದೇಶಗಳಿಗೂ ಪ್ರತ್ಯೇಕವಾಗಿ ಆಳಿದ ಪ್ರಭುಗಳ ಹೆಸರನ್ನು ಸೂಚಿಸುವ ನಾಮಧೇಯಗಳು ಬಂದು ಕುಶಲನು ಆಳಿದ ದೇಶವು ಕೌಶಲದೇಶವೆಂದೂ ಮನೋನುಗನು ಆಳಿದ ದೇಶವು ಮನೋನುಗ ದೇಶವೆಂದೂ ಉಷ್ಣನು ಆಳಿದ ದೇಶವು ಉಷ್ಣದೇಶವೆಂದೂ ಪಾವನನು ಆಳಿದ ದೇಶವು ಪಾವನದೇಶವೆಂದೂ ಅಂಧಕಾರನು ಆಳಿದ ದೇಶವು ಅಂಧಕಾರ ದೇಶವೆಂದೂ ಮುನಿಯು ಆಳಿದ ದೇಶವು ಮುನಿದೇಶವೆಂದೂ ದುಂದುಭಿಯು ಆಳಿದ ದೇಶವು ದುಂದುಭಿದೇಶವೆಂದೂ ಕ್ರೌಂಚದ್ವೀಪದಲ್ಲಿ ಪ್ರಕಾಶಮಾನವಾದ ಏಳು ದೇಶಗಳು ಕರೆಯಲ್ಪಟ್ಟಿದ್ದುವು.

೨೬-೨೭. ಕುಶದ್ವೀಪೇಶ್ವರನಾದ ಜ್ಯೋತಿಷ್ಮಂತನಿಗೂ ಉದ್ಭಿದ, ವೇಣುಮಾ

ಉದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ವೇಣುಮಂಡಲಮ್ ।
ತೃತೀಯಂ ವೈರಥಾಕಾರಂ ಚತುರ್ಥಂ ಲವಣಂಸ್ಮೃತಮ್ ॥ ೨೮ ॥

ಪಂಚಮಂ ಧೃತಿಮದ್ವರ್ಷಂ ಷಷ್ಠಂ ವರ್ಷಂ ಪ್ರಭಾಕರಮ್ ।
ಸಪ್ತಮಂ ಕಪಿಲಂ ನಾಮ ಕಪಿಲಸ್ಯ ಪ್ರಕೀರ್ತಿತಮ್ ॥ ೨೯ ॥

ತೇಷಾಂ ದೇಶಾಃ ಕುಶದ್ವೀಪೇ ತತ್ಸನಾವಾನ ಏವ ಚ ।
ಆಶ್ರಮಾಚಾರಯುಕ್ತಾಭಿಃ ಪ್ರಜಾಭಿಃ ಸಮಲಂಕೃತಾಃ ॥ ೩೦ ॥

ಶಾಲ್ಮಲಸ್ಯೇಶ್ವರಾಃ ಸಪ್ತ ಸುತಾಸ್ತೇ ಚ ವಪುಷ್ಮತಃ ।
ಶ್ವೇತಶ್ಚ ಹರಿತಶ್ಚೈವ ಜೀಮೂತೋ ರೋಹಿತಸ್ತಥಾ ।
ವೈದ್ಯುತೋ ಮಾನಸಶ್ಚಾಪಿ ಸುಪ್ರಭಃ ಸಪ್ತಮಸ್ತಥಾ । ॥ ೩೧ ॥

ಶ್ವೇತಸ್ತು ದೇಶಃ ಶ್ವೇತಸ್ಯ ಹರಿತಸ್ಯ ಸುಹಾರಿತಃ ।
ಜೀಮೂತಸ್ಯಾಪಿ ಜೀಮೂತೋ ರೋಹಿತಸ್ಯಾಪಿ ರೋಹಿತಃ ॥ ೩೨ ॥

ವೈದ್ಯುತೋ ವೈದ್ಯುತಸ್ಯಾಪಿ ಮಾನಸಸ್ಯ ತು ಮಾನಸಃ ।
ಸುಪ್ರಭಃ ಸುಪ್ರಭಸ್ಯಾಪಿ ಸಪ್ತೈತೇ ದೇಶಪಾಲಕಾಃ ॥ ೩೩ ॥

---

ವೈರಥ, ಲವಣ, ಧೃತಿ, ಪ್ರಭಾಕರ, ಕಪಿಲ ಎಂಬ ಹೆಸರಿನ ಅತಿಶೂರರಾದ ಏಳುಜನ ಮಕ್ಕಳು ಇದ್ದರು.

೨೮-೩೦. ಕುಶದ್ವೀಪಕ್ಕೆ ಸೇರಿದ, ವರ್ಣಾಶ್ರಮ ಧರ್ಮವನ್ನು ಅನುಷ್ಠಾನ ಮಾಡುವ ಪ್ರಜೆಗಳಿಂದ ಶೋಭಿಸುವ, ಅನೇಕ ದೇಶಗಳೂಕೂಡ ಆಳಿದ ಪ್ರಭುಗಳ ಹೆಸರಿನಿಂದಲೇ ಪ್ರಖ್ಯಾತಗಳಾಗಿ ಮೊದಲನೆಯ ವರ್ಷವು ಉದ್ಭಿದವೆಂದೂ ಎರಡನೆಯದು ವೇಣು ವರ್ಷವೆಂದೂ ಮೂರನೆಯದು ವೈರಥವರ್ಷವೆಂದೂ ನಾಲ್ಕನೆಯದು ಲವಣವರ್ಷವೆಂದೂ ಐದನೆಯದು ಧೃತಿಮತ್ ವರ್ಷವೆಂದೂ ಆರನೆಯದು ಪ್ರಭಾಕರ ವರ್ಷವೆಂದೂ ಏಳನೆಯದು ಕಪಿಲವರ್ಷವೆಂದೂ ಕರೆಯಲ್ಪಟ್ಟವು.

೩೧. ಶಾಲ್ಮಲ ದ್ವೀಪಾಧಿಪತಿಯಾದ ವಪುಷ್ಮಂತನಿಗೆ ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ, ಸುಪ್ರಭ ಎಂದು ಏಳು ಜನ ಮಕ್ಕಳಿದ್ದರು.

೩೨-೩೩. ಈ ಏಳು ಜನರೂ ಶಾಲ್ಮಲ ದ್ವೀಪದ ಒಂದೊಂದು ದೇಶಕ್ಕೆ ಪಾಲಕ

ಪ್ಲಕ್ಷದ್ವೀಪಂ ಪ್ರವಕ್ಷ್ಯಾಮಿ ಜಂಬೂದ್ವೀಪಾದನನ್ತರಮ್ ।
ಸಪ್ತಮೇಧಾತಿಥೇಃ ಪುತ್ರಾ ಪ್ಲಕ್ಷದ್ವೀಪೇಶ್ವರಾ ನೃಪಾಃ ॥ ೩೪ ॥

ಜ್ಯೇಷ್ಠಃ ಶಾಂತಭಯೋ ನಾಮ ದ್ವಿತೀಯಃ ಶಿಶಿರಃ ಸ್ಮೃತಃ ।
ಸುಖೋದಯಸ್ತೃತೀಯಸ್ತು ಚತುರ್ಥೋ ನಂದ ಉಚ್ಯತೇ ॥ ೩೫ ॥

ಶಿವಸ್ತು ಪಂಚಮಸ್ತೇಷಾಂ ಕ್ಷೇಮಕಃ ಷಷ್ಠ ಉಚ್ಯತೇ ॥
ಧ್ರುವಸ್ತು ಸಪ್ತಮೋ ಜ್ಞೇಯಃ ಪುತ್ರಾ ಮೇಧಾತಿಥೇಃ ಸ್ಮೃತಾಃ ॥೩೬॥

ಸಪ್ತಾನಾಂ ನಾಮಭಿಸ್ತೇಷಾಂ ತಾನಿ ವರ್ಷಾಣಿ ಸಪ್ತ ವೈ ॥ ೩೭ ॥

ತಸ್ಮಾಚ್ಛಾನ್ತಭಯಂ ಚೈವ ಶಿಶಿರಂ ಚ ಸುಖೋದಯಮ್ ।
ಆನಂದಂ ಚ ಶಿವಂ ಚೈವ ಕ್ಷೇಮಕಂ ಚ ಧ್ರುವಂ ತಥಾ ॥ ೩೮ ॥

ತಾನಿ ತೇಷಾಂ ಸನಾಮಾನಿ ಸಪ್ತ ವರ್ಷಾಣಿ ಭಾಗಶಃ ।
ನಿವೇಶಿತಾನಿ ತೈಸ್ತಾನಿ ಪೂರ್ವಂ ಸ್ವಾಯಂಭುವೇಽನ್ತರೇ ॥ ೩೯ ॥

ಮೇಧಾತಿಥೇಸ್ತು ಪುತ್ರೈಸ್ತೈಃ ಪ್ಲಕ್ಷದ್ವೀಪೇಶ್ವರೈರ್ನೃಪೈಃ ।
ವರ್ಣಾಶ್ರಮಾಚಾರಯುಕ್ತಾಃ ಪ್ಲಕ್ಷದ್ವೀಪೇ ಪ್ರಜಾಃ ಕೃತಾಃ ॥ ೪೦ ॥

---

ರಾಗಿದ್ದುದರಿಂದ ಶ್ವೇತನ ದೇಶಕ್ಕೆ ಶ್ವೇತ ವರ್ಷವೆಂದೂ ಹರಿತನ ದೇಶಕ್ಕೆ ಹರಿತವರ್ಷ ವೆಂದೂ ಜೀಮೂತನ ದೇಶಕ್ಕೆ ಜೀಮೂತವರ್ಷವೆಂದೂ ರೋಹಿತನ ದೇಶಕ್ಕೆ ರೋಹಿತ ವರ್ಷವೆಂದೂ ವೈದ್ಯುತನ ದೇಶಕ್ಕೆ ವೈದ್ಯುತ ವರ್ಷವೆಂದೂ ಮಾನಸನ ದೇಶಕ್ಕೆ ಮಾನಸ ವರ್ಷವೆಂದೂ ಸುಪ್ರಭನ ದೇಶಕ್ಕೆ ಸುಪ್ರಭ ವರ್ಷವೆಂದೂ ಹೆಸರುಗಳು ಬಂದವು.

೩೪-೩೫-೩೬. ಜಂಬೂ ದ್ವೀಪಕ್ಕೆ ಪಕ್ಕದಲ್ಲಿರುವ ಪ್ಲಕ್ಷದ್ವೀಪದ ಖಂಡಗಳು ಮತ್ತು ಅವುಗಳ ಅರಸರನ್ನು ಹೇಳುತ್ತೇನೆ, ಕೇಳಿರಿ. ಪ್ಲಕ್ಷದ್ವೀಪದ ಅರಸರಾಗಿ ಮೇಧಾತಿಥಿ ಎಂಬುವನಿಗೆ ಶಾಂತಭಯ. ಶಿಶಿರ, ಸುಖೋದಯ, ನಂದ, ಶಿವ, ಕ್ಷೇಮಕ, ಧ್ರುವ ಎಂಬ ಏಳು ಜನ ಪುತ್ರರು ಜನಿಸಿ ದೇಶಗಳನ್ನು ಆಳಿದರು.

೩೭-೩೮-೩೯-೪೦. ಪ್ಲಕ್ಷದ್ವೀಪದಲ್ಲಿಯೂ ಈ ಏಳು ಜನರು ಆಳಿದ ದೇಶಗಳಿಗೆ ಪ್ರತ್ಯೇಕವಾಗಿ ಆಳಿದ ರಾಜರ ಹೆಸರುಗಳೇ ಬಂದು ಶಾನ್ತಭಯವರ್ಷ, ಶಿಶಿರವರ್ಷ,

ಪ್ಲಕ್ಷದ್ವೀಪಾದಿಷು ತ್ವೇಷು ಶಾಕದ್ವೀಪಾಂತಿಕೇಷು ವೈ ।
ಜ್ಞೇಯಃ ಪಂಚಸು ಧರ್ಮೋ ವೈ ವರ್ಣಾಶ್ರಮವಿಭಾಜಕಃ ॥ ೪೧ ॥

ಸುಖಮಾಯುಶ್ಚ ರೂಪಂ ಚ ಬಲಂ ಧರ್ಮಶ್ಚ ನಿತ್ಯಶಃ ।
ಪಂಚಸ್ವೇತೇಷು ದ್ವೀಪೇಷು ಸರ್ವಸಾಧಾರಣಂ ಸ್ಮೃತಮ್ ॥ ೪೨ ॥

ಪ್ಲಕ್ಷದ್ವೀಪಃ ಪರಿಕ್ರಾನ್ತೋ ಜಂಬೂದ್ವೀಪಂ ನಿಬೋಧತ ।
ಆಗ್ನೀಧ್ರಂ ಜ್ಯೇಷ್ಠದಾಯಾದಂ ಕಾಮ್ಯಾಪುತ್ರಂ ಮಹಾಬಲಮ್ ।
ಪ್ರಿಯವ್ರತೋಽಭ್ಯಷಿಂಚತ್ತಂ ಜಂಬೂದ್ವೀಪೇಶ್ವರಂ ನೃಪಮ್ ॥೪೩ ॥

ತಸ್ಯ ಪುತ್ರಾ ಬಭೂವುರ್ಹಿ ಪ್ರಜಾಪತಿಸಮಾ ನವ ।
ಜ್ಯೇಷ್ಠೋ ನಾಭಿರಿತಿ ಖ್ಯಾತಸ್ತಸ್ಯ ಕಿಂಪುರುಷೋಽನುಜಃ ॥ ೪೪ ॥

---

ಸುಖೋದಯವರ್ಷ, ಆನಂದವರ್ಷ, ಶಿವವರ್ಷ, ಕ್ಷೇಮುಕವರ್ಷ ಮತ್ತು ಧ್ರುವ ವರ್ಷವೆಂದು ರಾಜರ ಹೆಸರಿಗೆ ಸಮಾನವಾದ ನಾಮಾಂಕನವುಳ್ಳ ಏಳು ಭಾಗಗಳಾದವು. ಹೀಗೆ ಪೂರ್ವದಲ್ಲಿ ಸ್ವಾಯಮ್ಭುವ ಮನ್ವನ್ತರದಲ್ಲಿ ಮೇಧಾತಿಥಿಯ ಈ ಏಳು ಜನ ಪುತ್ರರು ರಾಜರಾಗಿ ಪ್ರಜೆಗಳಲ್ಲಿ ವರ್ಣಾಶ್ರಮಧರ್ಮಗಳು ಸಂಪೂರ್ಣವಾಗಿರುವಂತೆ ರಾಜ್ಯವನ್ನು ಪರಿಪಾಲಿಸಿದರು.

೪೧-೪೨. ಮೇಲೆ ಹೇಳಿದ ಪ್ಲಕ್ಷದ್ವೀಪ ಮೊದಲ್ಗೊಂಡು ಶಾಕದ್ವೀಪದವರೆಗೂ ಇರುವ ಐದು ದ್ವೀಪಗಳಲ್ಲಿಯೂ ಕೂಡ ವರ್ಣ-ಆಶ್ರಮಗಳ ವಿಭಾಗವನ್ನು ತೋರ್ಪಡಿಸುವ ಧರ್ಮವೂ, ಸುಖವೂ, ಆಯುಷ್ಯವೂ, ಸೌಂದರ್ಯವೂ, ಶಕ್ತಿಯೂ ಮತ್ತು ಧರ್ಮಾಚರಣೆಯೂ ಯಾವಾಗಲೂ ಎಲ್ಲ ಪ್ರಜೆಗಳಲ್ಲಿಯೂ ಸರ್ವರಿಗೂ ಒಂದೇ ವಿಧವಾಗಿ ಇದ್ದುವು.

೪೩. ಈ ವಿಧವಾಗಿ ಪ್ಲಕ್ಷದ್ವೀಪವನ್ನು ವರ್ಣಿಸಿ ಮುಗಿದುದರಿಂದ ಈಗ ಜಂಬೂ ದ್ವೀಪದ ವರ್ಣನೆಯನ್ನು ಕೇಳಿ ತಿಳಿಯಿರಿ. ಪ್ರಿಯವ್ರತನು ತನ್ನ ಪತ್ನಿಯಾದ ಕಾಮ್ಯಾ ಎಂಬಾಕೆಯಲ್ಲಿ ಹುಟ್ಟಿದ ಬಲಿಷ್ಠನಾದ ಜೇಷ್ಠಪುತ್ರನನ್ನು ಜಂಬೂದ್ವೀಪ ದಲ್ಲಿ ರಾಜನನ್ನಾಗಿ ಪಟ್ಟಾಭಿಷೇಕಮಾಡಿದನಷ್ಟೆ.

ಹರಿವರ್ಷಸ್ತೃತೀಯಸ್ತು ಚತುರ್ಥೋಽಭೂದಿಲಾವೃತಃ ।
ರಮ್ಯಸ್ತು ಪಂಚಮಃ ಪುತ್ರೋ ಹಿರಣ್ವಾನ್ ಷಷ್ಠ ಉಚ್ಯತೇ ॥ ೪೫ ॥

ಕುರುಸ್ತು ಸಪ್ತಮಸ್ತೇಷಾಂ ಭದ್ರಾಶ್ವಶ್ಚಾಷ್ಟಮಃ ಸ್ಮೃತಃ
ನವಮಃ ಕೇತುಮಾಲಶ್ಚ ತೇಷಾಂ ದೇಶಾನ್ನಿಬೋಧತ ॥ ೪೬ ॥

ನಾಭೇಸ್ತು ದಕ್ಷಿಣಂ ವರ್ಷಂ ಹಿಮಾಖ್ಯಂ ತು ಪಿತಾ ದದೌ ।
ಹೇಮಕೂಟಂ ತು ಯದ್ವರ್ಷಂ ದದೌ ಕಿಂಪುರುಷಾಯ ತತ್ ॥ ೪೭ ॥

ನೈಷಧಂ ಯತ್ ಸ್ಮೃತಂ ವರ್ಷಂ ಹರಿವರ್ಷಾಯ ತಂ ದದೌ ।
ಮಧ್ಯಮಂ ಯತ್ ಸುಮೇರೋಸ್ತು ದದೌ ಸ ತದಿಲಾವೃತಮ್ ॥ ೪೮ ॥

ನೀಲಂ ತು ಯತ್ ಸ್ಮೃತಂ ವರ್ಷಂ ರಮ್ಯಾಯೈತತ್ಪಿತಾ ದದೌ ।
ಶ್ವೇತಂ ಯದುತ್ತರಂ ತಸ್ಮಾತ್ ಪಿತ್ರಾ ದತ್ತಂ ಹಿರಣ್ವತೇ ॥ ೪೯ ॥

ಯದುತ್ತರೇ ಶೃಂಗವತೋ ವರ್ಷಂ ತತ್ಕುರವೇ ದದೌ ।
ಮಾಲ್ಯವಂತಂ ತಥಾ ವರ್ಷಂ ಭದ್ರಾಶ್ವಾಯ ನ್ಯವೇದಯತ್ ॥ ೫೦ ॥

---

೪೬. ಪ್ರಿಯವ್ರತನ ಜೇಷ್ಠಪುತ್ರನಾದ ಆಗ್ನೀಧ್ರನಿಗೆ ಪ್ರಜಾಪತಿಗೆ ಸಮಾನ ಮಹಿಮೆಯುಳ್ಳಂತಹ ಜ್ಯೇಷ್ಠ ಪುತ್ರನಾದ ನಾಭಿ, ಹಾಗೆ ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯ, ಹಿರಣ್ವಾನ್, ಕುರು, ಭದ್ರಾಶ್ವ, ಕೇತುಮಾಲ ಎಂಬ ಹೆಸರು ಗಳಿಂದ ಪ್ರಸಿದ್ಧರಾದ ಒಂಭತ್ತು ಜನ ಪುತ್ರರಿದ್ದರು.

೫೧. ತಂದೆಯಾದ ಆಗ್ನೀಧ್ರನು ಒಂಭತ್ತು ಜನ ಪುತ್ರರಿಗೂ ಜಂಬೂದ್ವೀಪದಲ್ಲಿ ಪ್ರಖ್ಯಾತಗಳಾದ ಒಂಭತ್ತು ವರ್ಷಗಳನ್ನು ಪ್ರತ್ಯೇಕವಾಗಿ ನಾಭಿ ಎಂಬುವನಿಗೆ ಹಿಮ ವರ್ಷವನ್ನೂ ಕಿಂಪುರುಷನಿಗೆ ಹೇಮಕೂಟವರ್ಷವನ್ನೂ ಹರಿವರ್ಷನಿಗೆ ನೈಷಧ ವರ್ಷವನ್ನೂ ಇಲಾವೃತನಿಗೆ ಸುಮೇರುವಿನ ಮಧ್ಯದಲ್ಲಿದ್ದ ಇಲಾವೃತವೆಂಬ ವರ್ಷ ವನ್ನೂ ರಮ್ಯನೆಂಬುವನಿಗೆ ನೀಲವರ್ಷವನ್ನೂ ಹಿರಣ್ವಾನ್ ಎಂಬುವನಿಗೆ ಶ್ವೇತವೆಂಬ ಉತ್ತರ ಭಾಗದ ವರ್ಷವನ್ನೂ ಕುರುವಿಗೆ ಅದಕ್ಕೂ ಉತ್ತರದಲ್ಲಿದ್ದ ಶೃಂಗವದ್ವರ್ಷ ವನ್ನೂ ಭದ್ರಾಶ್ವನಿಗೆ ಮಾಲ್ಯವದ್ವರ್ಷವನ್ನೂ ಕೇತುಮಾಲನಿಗೆ ಗಂಧಮಾದನ ವರ್ಷ ವನ್ನೂ ಸಹ ಕ್ರಮವಾಗಿ ವಿಂಗಡಿಸಿಕೊಟ್ಟನು. ಈ ರೀತಿಯಾಗಿ ಜಂಬೂದ್ವೀಪಕ್ಕೆ ಸೇರಿದ ಒಂಭತ್ತು ವರ್ಷಗಳೂ ಸಹ ವರ್ಣಿಸಲ್ಪಟ್ಟವೆ.

ಗಂಧಮಾದನವರ್ಷಂ ತು ಕೇತುಮಾಲೇ ನ್ಯವೇದಯತ್ ।
ಇತ್യೇತಾನಿ ಮಯೋಕ್ತಾನಿ ನವ ವರ್ಷಾಣಿ ಭಾಗಶಃ ॥ ೫೧ ॥

ಆಗ್ನೀಧ್ರಸ್ತೇಷು ವರ್ಷೇಷು ಪುತ್ರಾಂಸ್ತಾನಭ್ಯಷೇಚಯತ್ ।
ಯಥಾಕ್ರಮಂ ಸ ಧರ್ಮಾತ್ಮಾ ತತಸ್ತು ತಪಸಿ ಸ್ಥಿತಃ ॥ ೫೨ ॥

ಇತ್ಯೇತೈಃ ಸಪ್ತಭಿಃ ಕೃತ್ಸ್ನಾಃ ಸಪ್ತದ್ವೀಪಾ ನಿವೇಶಿತಾಃ ।
ಪ್ರಿಯವ್ರತಸ್ಯ ಪುತ್ರೈಸ್ತೈಃ ಪೌತ್ರೈಃ ಸ್ವಾಯಂಭುವಸ್ಯ ಚ ॥ ೫೩ ॥

ಏವಂ ವರ್ಷೇಷು ಸರ್ವೇಷು ಸನ್ನಿವೇಶಾಃ ಪುನಃ ಪುನಃ ।
ಕ್ರಿಯನ್ತೇ ಪ್ರಲಯೇ ವೃತ್ತೇ ಸಪ್ತಸಪ್ತಸು ಪಾರ್ಥಿವೈಃ ॥ ೫೪ ॥

ಏವಂ ಸ್ವಭಾವಃ ಕಲ್ಪಾನಾಂ ದ್ವೀಪಾನಾಂ ಚ ನಿವೇಶನೇ ॥ ೫೫ ॥

ಯಾನಿ ಕಿಮ್ಪುರುಷಾದ್ಯಾನಿ ವರ್ಷಾಣ್ಯಷ್ಟೌ ಶ್ರುತಾನಿ ತು ।
ತೇಷಾಂ ಸ್ವಭಾವತಃ ಸಿದ್ಧಿಃ ಸುಖಪ್ರಾಯಮಯತ್ನತಃ ॥ ೫೬ ॥

---

೫೨. ಆಗ್ನೀಧ್ರನು ಈ ರೀತಿಯಾಗಿ ಒಂಭತ್ತು ವರ್ಷ ಖಂಡಗಳಲ್ಲಿ ಒಂಭತ್ತು ಜನ ಪುತ್ರರನ್ನೂ ಪಟ್ಟಾಭಿಷೇಕಮಾಡಿ ಯಥಾಕ್ರಮವಾಗಿ ತಾನು ಧರ್ಮಾರ್ಜನೆಗಾಗಿ ತಪಸ್ವಿಯಾದನು.

೫೩. ಈ ರೀತಿಯಾಗಿ ಸ್ವಾಯಂಭುವನ ಮೊಮ್ಮಕ್ಕಳೂ ಪ್ರಿಯವ್ರತನ ಪುತ್ರರೂ ಆದ ಏಳು ಜನರಿಂದ ಸಂಪೂರ್ಣವಾಗಿ ಏಳು ದ್ವೀಪಗಳು ಪ್ರತ್ಯೇಕವಾಗಿ ಇರಿಸಲ್ಪಟ್ಟವು.

೫೪. ಈ ರೀತಿಯಾಗಿ ಪ್ರಲಯಾನಂತರದ ಪ್ರತಿಯೊಂದು ಸೃಷ್ಟಿಯಲ್ಲಿಯೂ ಪ್ರತಿವರ್ಷಭಾಗಗಳಲ್ಲಿಯೂ ಏಳು ಏಳು ಜನ ಉತ್ತಮರಾದ ರಾಜರಿಂದ ಬೇರೆ ಬೇರೆ ಯಾದ ಸಪ್ತ ದೇಶಗಳು ಮಾಡಲ್ಪಡುತ್ತವೆ.

೫೫. ಈ ರೀತಿಯಲ್ಲಿ ಕಲ್ಪಗಳು, ಅವುಗಳಲ್ಲಿ ದ್ವೀಪಗಳ ನಿವೇಶನಗಳು——ಇವು ಪುನಃ ಪುನಃ ಆವೃತ್ತಿಯಾಗುತ್ತಿರುವುವು.

೫೬-೫೭. ಕಿಂಪುರುಷ ವರ್ಷವೇ ಆದಿಯಾಗಿ ಹಿಂದೆ ಹೇಳಲ್ಪಟ್ಟ ಎಂಟು ವರ್ಷಗಳಲ್ಲಿ ಎಲ್ಲೆಲ್ಲಿಯೂ ಕೂಡ ವಾಸಿಸುವ ಪ್ರಜೆಗಳಿಗೆ ಸ್ವಾಭಾವಿಕವಾಗಿಯೇ ತಮ್ಮ

ವಿಪರ್ಯಯೋ ನ ತೇಷ್ವಸ್ತಿ ಜರಾಮೃತ್ಯುಭಯಂ ನ ಚ ।
ಧರ್ಮಾಧರ್ಮೌ ನ ತೇಷ್ವಾಸ್ತಾಂ ನೋತ್ತಮಾಧಮಮಧ್ಯಮಾಃ ॥ ೫೭ ॥

ನ ತೇಷ್ವಸ್ತಿ ಯುಗಾವಸ್ಥಾ ಕ್ಷೇತ್ರೇಷ್ವಷ್ಟಾಸು ಸರ್ವಶಃ ।
ನಾಭೇರ್ನಿಸರ್ಗಂ ವಕ್ಷ್ಯಾಮಿ ಹಿಮಾಹ್ವೇಽಸ್ಮಿನ್ನಿಬೋಧತ ॥ ೫೮ ॥

ನಾಭಿಸ್ತ್ವಜನಯತ್ಪುತ್ರಂ ಮೇರುದೇವ್ಯಾಂ ಮಹಾದ್ಯುತಿಮ್ ।
ಋಷಭಂ ಪಾರ್ಥಿವಶ್ರೇಷ್ಠಂ ಸರ್ವಕ್ಷತ್ರಸ್ಯ ಪೂರ್ವಜಮ್ ॥ ೫೯ ॥

ಋಷಭಾದ್ಭರತೋ ಜಜ್ಞೇ ವೀರಃ ಪುತ್ರಶತಾಗ್ರಜಃ ।
ಸೋಽಭಿಷಿಚ್ಯರ್ಷಭಃ ಪುತ್ರಂ ಮಹಾಪ್ರವ್ರಜ್ಯಯಾ ಸ್ಥಿತಃ ॥ ೬೦ ॥

ಹಿಮಾಹ್ವಂ ದಕ್ಷಿಣಂ ವರ್ಷಂ ಭರತಾಯ ನ್ಯವೇದಯತ್ ।
ತಸ್ಮಾತ್ತು ಭಾರತಂ ವರ್ಷಂ ತಸ್ಯ ನಾಮ್ನಾ ವಿದುರ್ಬುಧಾಃ ॥ ೬೧ ॥

---

ತಮ್ಮ ಧ್ಯೇಯವಾದ ಫಲಗಳ ಸಿದ್ಧಿಯೂ, ಪ್ರಯತ್ನವಿಲ್ಲದೆಯೇ ಅತಿಶಯವಾದ ಸುಖವೂ ಸಹ ಉಂಟಾಗುವುವು. ಮತ್ತು ಆ ಪ್ರದೇಶಗಳಲ್ಲಿ ಇರತಕ್ಕ ಸನ್ನಿವೇಶಕ್ಕೆ ಆಕಸ್ಮಿಕವಾದ ಬದಲಾವಣೆಯೂ, ಮುಪ್ಪು-ಮರಣ ಮುಂತಾದುವುಗಳಿಂದ ಭಯವೂ, ಧರ್ಮ-ಅಧರ್ಮಗಳೆಂಬ ವಿಭಾಗವೂ, ಅಧಮ-ಮಧ್ಯಮ-ಉತ್ತಮರೆಂಬ ವಿಭಾಗವೂ, ವಿಚಿತ್ರ ಸ್ವಭಾವಗಳಿಂದ ಕೂಡಿದ ಯುಗಮಹಿಮೆಯ ವ್ಯತ್ಯಾಸವೂ ಕಂಡು ಬರುವುದಿಲ್ಲ.

೫೮-೫೯. ಹಿಮಾಖ್ಯವೆಂಬ ಈ ವರ್ಷದಲ್ಲಿ ರಾಜನಾಗಿದ್ದ ನಾಭಿ ಎಂಬುವನ ವಂಶದ ಸೃಷ್ಟಿಯನ್ನು ವರ್ಣಿಸುತ್ತೇನೆ, ಕೇಳಿರಿ. ನಾಭಿ ಎಂಬುವನ ಪತ್ನಿಯಾದ ಮೇರುದೇವಿಯಲ್ಲಿ ಕ್ಷತ್ರಿಯ ವಂಶಕ್ಕೆಲ್ಲ ಮೂಲಪುರುಷನಾದ ಪ್ರಶಸ್ತನಾದ ರಾಜನೂ ಅತಿತೇಜಸ್ವಿಯೂ ಆದ ಋಷಭನೆಂಬ ಪುತ್ರನು ಜನಿಸಿದನು.

೬೦-೬೧. ಆ ಋಷಭನೆಂಬುವನಿಗೆ ನೂರಾರು ಜನ ಪುತ್ರರು ಹುಟ್ಟಿ ಅವರಲ್ಲಿ ಭರತನೆಂಬ ವೀರನು ಜ್ಯೇಷ್ಠ ಪುತ್ರನಾಗಿ ಜನಿಸಿದನು. ಋಷಭನು ಆ ಜ್ಯೇಷ್ಠ ಪುತ್ರನಿಗೆ ಪಟ್ಟಾಭಿಷೇಕ ಮಾಡಿ ಹಿಮವರ್ಷವೆಂಬ ದಕ್ಷಿಣ ದಿಕ್ಕಿನಲ್ಲಿರುವ ವರ್ಷವನ್ನು ಕೊಟ್ಟು ತಾನು ವಿರಕ್ತಿಯಿಂದ ಸನ್ನ್ಯಾಸ ಮಾರ್ಗವನ್ನು ಅವಲಂಬಿಸಿದನು. ಆ ಭರತನು ಆಳಿದ ವರ್ಷವನ್ನು ಪ್ರಾಜ್ಞರು ಭಾರತ ವರ್ಷವೆಂದು ಕರೆಯುವರು.

ಭರತಸ್ಯಾತ್ಮಜೋ ವಿದ್ವಾನ್ ಸುಮತಿರ್ನಾಮ ಧಾರ್ಮಿಕಃ ।
ಬಭೂವ ತಸ್ಮಿನ್ ರಾಜ್ಯೇ ತಂ ಭರತಸ್ತ್ವಭ್ಯಷೇಚಯತ್ ॥ ೬೨ ॥

ಪುತ್ರಸಂಕ್ರಾಮಿತಶ್ರೀಸ್ತು ವನಂ ರಾಜಾ ವಿವೇಶ ಸಃ ॥ ೬೩ ॥

ತೇಜಸಸ್ತತ್ಸುತಶ್ಚಾಪಿ ಪ್ರಜಾಪತಿರಮಿತ್ರಜಿತ್ ।
ತೇಜಸಸ್ಯಾತ್ಮಜೋ ವಿದ್ವಾನಿಂದ್ರದ್ಯುಮ್ನ ಇತಿ ಸ್ಮೃತಃ ॥ ೬೪ ॥

ಪರಮೇಷ್ಠೀ ಸುತಶ್ಚಾಪಿ ನಿಧನೇ ತಸ್ಯ ಚಾಪ್ಯಭೂತ್ ।
ಪ್ರತೀಹಾರಃ ಕುಲಂ ತಸ್ಯ ನಾಮ್ನಾ ಜಜ್ಞೇ ತದನ್ವಯಃ ॥ ೬೫ ॥

ಪ್ರತಿಹರ್ತೇತಿ ವಿಖ್ಯಾತೋ ಜಜ್ಞೇ ತಸ್ಯಾಪಿ ಧೀಮತಃ ।
ಉನ್ನೇತಾ ಪ್ರತಿಹರ್ತುಸ್ತು ಭೂಮಾ ತಸ್ಯ ಸುತಃ ಸ್ಮೃತಃ ॥ ೬೬ ॥

---

೬೨. ಭರತನಿಗೆ ಸುಮತಿಯೆಂಬ ಧಾರ್ಮಿಕ ಪುತ್ರನು ಹುಟ್ಟಿದನು. ಆ ಜ್ಞಾನಿಯಾದ ಪುತ್ರನನ್ನು ಭರತನು ರಾಜ್ಯದಲ್ಲಿ ಪಟ್ಟಗಟ್ಟಿದನು.

೬೩. ಮತ್ತು ಈ ರೀತಿ ಪುತ್ರನಲ್ಲಿ ರಾಜ್ಯವನ್ನು ಒಪ್ಪಿಸಿದ ನಂತರ ಭರತನು ತಪಸ್ಸಿನ ಆಚರಣೆಗಾಗಿ ವನಕ್ಕೆ ಹೊರಟುಹೋದನು.

೬೪. ಸುಮತಿಗೆ ಶತ್ರುಗಳ ಸಂಹಾರದಲ್ಲಿ ದಕ್ಷನಾಗಿ ಪ್ರಜಾಪರಿಪಾಲಕನಾದ ತೇಜಸನೆಂಬ ಪುತ್ರನೂ ಅವನಿಗೆ ಜ್ಞಾನಿಯಾದ ಇಂದ್ರದ್ಯುಮ್ನನೆಂಬ ಪುತ್ರನೂ ಕೂಡ ಇದ್ದರು.

೬೫. ಇಂದ್ರದ್ಯುಮ್ನನಿಗೆ ಪರಮೇಷ್ಠಿ ಎಂಬ ಪುತ್ರನೂ ಆತನಿಗೆ ಪ್ರತೀಹಾರನೆಂಬ ಪುತ್ರನೂ ಇದ್ದರು. ಪ್ರತೀಹಾರನ ಹೆಸರಿನಿಂದ ಮುಂದೆ ಆ ವಂಶಕ್ಕೆ ಪ್ರತೀಹಾರ ವಂಶವೆಂದು ಪ್ರಖ್ಯಾತಿಯುಂಟಾಯಿತು.

೬೬. ಪ್ರತೀಹಾರನ ವಂಶದಲ್ಲಿ ಪ್ರತಿಹರ್ತಾ ಎಂಬ ಪುತ್ರನೂ ಬುದ್ಧಿಶಾಲಿಯಾದ ಆತನಿಗೆ ಉನ್ನೇತಾ ಎಂಬ ಪುತ್ರನೂ ಅವನಿಗೆ ಭೂಮಾ ಎಂಬ ಪುತ್ರನೂ ಇದ್ದರು.

ಉದ್ಗೀಥಸ್ತಸ್ಯ ಪುತ್ರೋಽಭೂತ್ ಪ್ರಸ್ತಾವಶ್ಚಾಪಿ ತತ್ಸುತಃ ।
ಪಸ್ತಾವೇಸ್ತು ವಿಭುಃ ಪುತ್ರಃ ಪೃಥುಸ್ತಸ್ಯ ಸುತೋಽಭವತ್ ॥ ೬೭ ॥

ಪೃಥೋಶ್ಚಾಪಿ ಸುತೋ ನಕ್ತೋ ನಕ್ತಸ್ಯಾಪಿ ಗಯಃ ಸುತಃ ।
ಗಯಸ್ಯಾಪಿ ನರಃ ಪುತ್ರೋ ನರಸ್ಯಾಪಿ ಸುತೋ ವಿರಾಟ್ ॥ ೬೮ ॥

ವಿರಾಟ್‌ಸುತೋ ಮಹಾವೀರ್ಯೋ ಧೀಮಾಂಸ್ತಸ್ಯ ಸುತೋಽಭವತ್।
ಧೀಮತಶ್ಚ ಮಹಾನ್ಪುತ್ರೋ ಮಹತಶ್ಚಾಪಿ ಭೌವನಃ ॥ ೬೯ ॥

ಭೌವನಸ್ಯ ಸುತಸ್ತ್ವಷ್ಟಾ ವಿರಜಾಸ್ತಸ್ಯ ಚಾತ್ಮಜಃ ।
ರಜಾ ವಿರಜಸಃ ಪುತ್ರಃ ಶತಜಿದ್ರಜಸಸ್ತಥಾ ॥ ೭೦ ॥

ತಸ್ಯ ಪುತ್ರಶತಂ ತ್ವಾಸೀದ್ರಾಜಾನಃ ಸರ್ವ ಏವ ತು ।
ವಿಶ್ವಜ್ಯೋತಿಷ್ಪ್ರಧಾನಾಸ್ತೇ ಯ್ಯೆರಿಮಾ ವರ್ಧಿತಾಃ ಪ್ರಜಾಃ ॥ ೭೧ ॥

ತೈರಿದಂ ಭಾರತಂ ವರ್ಷಂ ಸಪ್ತದ್ವೀಪಮಿಹಾಂಕಿತಮ್ ।
ತೇಷಾಂ ವಂಶಪ್ರಸೂತೈಸ್ತು ಭುಕ್ತೇಯಂ ಭಾರತೀ ಪುರಾ ॥ ೭೨ ॥

---

೬೭. ಉದ್ಗೀಥನಿಗೆ ಪ್ರಸ್ತಾವನೆಂಬ ಪುತ್ರನೂ ಪ್ರಸ್ತಾವನಿಗೆ ವಿಭುವೆಂಬ ಪುತ್ರನೂ ವಿಭುವಿಗೆ ಪೃಥುವೆಂಬ ಪುತ್ರನೂ ಜನಿಸಿದರು.

೬೮-೬೯. ಪೃಥುವಿಗೆ ನಕ್ತನೆಂಬುವನೂ ನಕ್ತನಿಗೆ ಗಯನೆಂಬುವನೂ ಗಯನಿಗೆ ನರನೆಂಬುವನೂ ನರನಿಗೆ ವಿರಾಟ್ ಎಂಬುವನೂ ವಿರಾಟ್‌ನಿಗೆ ಮಹಾವೀರ್ಯನೂ ಮಹಾವೀರ್ಯನಿಗೆ ಧೀಮಂತನೆಂಬುವನೂ ಧೀಮಂತನಿಗೆ ಮಹಾನ್ ಎಂಬುವನೂ ಮಹಾನ್ ಎಂಬುವನಿಗೆ ಭೌವನನೂ ಪುತ್ರರಾಗಿ ಜನಿಸಿದರು.

೭೦. ಭೌವನನಿಗೆ ತ್ವಷ್ಟಾ ಎಂಬುವನೂ ಆತನಿಗೆ ವಿರಜಾ ಎಂಬುವನೂ ಆತನಿಗೆ ರಜಾ ಎಂಬುವನೂ ಅವನಿಗೆ ಶತಜಿತ್ ಎಂಬುವನೂ ಪುತ್ರರು ಜನಿಸಿದರು.

೭೧. ಕಡೆಯವನಾದ ಶತಜಿತ್ ಎಂಬುವನಿಗೆ ನೂರಾರು ಪುತ್ರರು ಹುಟ್ಟಿ ಎಲ್ಲರೂ ರಾಜರಾಗಿ ಲೋಕದಲ್ಲೆಲ್ಲ ಜ್ಯೋತಿಷ್ಮಂತರಾಗಿದ್ದು ಪ್ರಜೆಗಳನ್ನು ಅಭಿವೃದ್ಧಿ ಸ್ಥಿತಿಯಲ್ಲಿ ಇರಿಸುವವರಾದರು.

೭೨. ಸಪ್ತದ್ವೀಪಗಳಿಂದ ಅಂಕಿತವಾದ ಈ ಭಾರತ ವರ್ಷವನ್ನು ಅವರ ವಂಶದಲ್ಲಿ ಹುಟ್ಟಿದ ಪುತ್ರರು ಆಳಿ ಅವರಿಂದ ಈ ಭಾರತ ಭೂಮಿಯು ಭುಂಜಿಸಲ್ಪಟ್ಟಿತು.

ಕೃತತ್ರೇತಾದಿಯುಕ್ತಾಸ್ತು ಯುಗಾಖ್ಯಾ ಹ್ಯೇಕಸಪ್ತತಿಃ ।
ಯೇಽತೀತಾಸ್ತೈರ್ಯುಗೈಃ ಸಾರ್ಧಂ ರಾಜಾನಸ್ತೇ ತದನ್ವಯಾಃ ।
ಸ್ವಾಯಂಭುವೇಽನ್ತರೇ ಪೂರ್ವಂ ಶತಶೋಽಥ ಸಹಸ್ರಶಃ ॥ ೭೩ ॥

ಏವಂ ಸ್ವಾಯಮ್ಭುವಃ ಸರ್ಗೋ ಯೇನೇದಂ ಪೂರಿತಂ ಜಗತ್ ।
ಋಷಿಭಿರ್ದೇವತೈಶ್ಚಾಪಿ ಪಿತೃಗಂಧರ್ವರಾಕ್ಷಸೈಃ ॥ ೭೪ ॥

ಯಕ್ಷಭೂತಪಿಶಾಚೈಶ್ಚ ಮನುಷ್ಯಮೃಗಪಕ್ಷಿಭಿಃ ।
ತೇಷಾಂ ಸೃಷ್ಟಿರಿಯಂ ಪ್ರೋಕ್ತಾ ಯುಗೈಃ ಸಹ ವಿವರ್ತತೇ ॥ ೭೫ ॥

ಇತಿ ಶ್ರೀ ಬ್ರಹ್ಮಾಂಡ ಪುರಾಣೇ ಚತುರ್ದಶೋಽಧ್ಯಾಯಃ ಸಮಾಪ್ತಃ.

---

೭೩. ಕೃತತ್ರೇತಾದಿ ಯುಗಗಳು ದಿವ್ಯ ಯುಗದ ಪರಿಮಾಣದಲ್ಲಿ ಎಪ್ಪತ್ತೊಂದು ಸಲ ಆವೃತ್ತಿಯಾಗಿ ನಡೆದಲ್ಲಿ ಒಂದು ಮನ್ವಂತರವಾಗುವುದು. ಅಂತಹ ಯುಗಗಳ ಕೂಡ ಸ್ವಾಯಂಭುವ ಮನ್ವಂತರದಲ್ಲಿ ಹುಟ್ಟಿದ ಸಾವಿರಾರು ರಾಜರೂ ಅವರ ವಂಶಗಳೂ ಕೂಡ ಕಳೆದುಹೋಗಿವೆ.

೭೪-೭೫. ಈ ರೀತಿಯಾಗಿ ಸ್ವಾಯಂಭುವನ ವಂಶ ಸೃಷ್ಟಿಯು ವರ್ಣಿಸಲ್ಪಟ್ಟಿತು. ಈ ವಂಶದಿಂದಲೇ ಜಗತ್ತೆಲ್ಲವೂ ಋಷಿಗಳು, ದೇವತೆಗಳು, ಪಿತೃಗಳು, ಗಂಧರ್ವರು, ರಾಕ್ಷಸರು, ಯಕ್ಷರು, ಭೂತಗಳು, ಪಿಶಾಚಗಳು, ಮನುಷ್ಯರು, ಮೃಗಗಳು ಮತ್ತುಪಕ್ಷಿಗಳು ಇವುಗಳಿಂದ ತುಂಬಿ ಯುಗಗಳ ಜೊತೆಯಲ್ಲಿ ಇವುಗಳ ಸೃಷ್ಟಿಯೂ ಪರ್ಯಾಯವಾಗಿ ಸುತ್ತುತ್ತಿದೆ.

ಬ್ರಹ್ಮಾಂಡ ಪುರಾಣದಲ್ಲಿ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವು.

# ಪಂಚದಶೋಽಧ್ಯಾಯಃ

**ಸೂತ ಉವಾಚ**

**ಏವಂ ಪ್ರಜಾಸನ್ನಿವೇಶಂ ಶ್ರುತ್ವಾ ವೈ ಶಾಂಶಪಾಯನಿಃ ।**
**ಪಪ್ರಚ್ಛ ನಿಯತಂ ಸೂತಂ ಪೃಥಿವ್ಯುದಧಿವಿಸ್ತರಮ್ ॥ ೧ ॥**

**ಕತಿ ದ್ವೀಪಾಃ ಸಮುದ್ರಾ ವಾ ಪರ್ವತಾ ವಾ ಕತಿ ಸ್ಮೃತಾಃ ।**
**ಕಿಯಂತಿ ಚೈವ ವರ್ಷಾಣಿ ತೇಷು ನದ್ಯಶ್ಚ ಕಾಃ ಸ್ಮೃತಾಃ ॥ ೨ ॥**

**ಮಹಾಭೂತಪ್ರಮಾಣಂ ಚ ಲೋಕಾಲೋಕಂ ತಥೈವ ಚ ।**
**ಪರ್ಯಾಯಂ ಪರಿಮಾಣಂ ಚ ಗತಿಂ ಚಂದ್ರಾರ್ಕಯೋಸ್ತಥಾ ।**
**ಏತತ್ಪ್ರಬ್ರೂಹಿ ನಃ ಸರ್ವಂ ವಿಸ್ತರೇಣ ಯಥಾರ್ಥತಃ ॥ ೩ ॥**

**ಸೂತ ಉವಾಚ**

**ಹಂತ ವೋಽಹಂ ಪ್ರವಕ್ಷ್ಯಾಮಿ ಪೃಥಿವ್ಯಾಯಾಮವಿಸ್ತರಮ್ ॥ ೪ ॥**

---

೧. ಸೂತಮುನಿಯು ಈ ರೀತಿಯಾಗಿ ನುಡಿದನು.—ಹಿಂದಿದ ಅಧ್ಯಾಯದಲ್ಲಿ ಹೇಳಿರುವ ಪ್ರಜೆಗಳ ಸನ್ನಿವೇಶವನ್ನು ಕೇಳಿದ ತರುವಾಯ ಶ್ರೋತೃವರ್ಗಕ್ಕೆ ಸೇರಿದ ಶಾಂಶಪಾಯನಿ ಎಂಬ ಮುನಿಯು ಪೃಥಿವೀ ಮತ್ತು ಸಮುದ್ರಗಳ ವಿಸ್ತಾರ ವಿಷಯವಾಗಿ ಶಿಷ್ಯ ನಿಯಮದಿಂದ ಕೂಡಿಕೊಂಡು ವಿನಯದಿಂದ ಪ್ರಶ್ನಿಸಿದನು.

೨. ಈ ವಿಶಾಲವಾದ ಪೃಥಿವಿಯಲ್ಲಿ ಅನೇಕ ದ್ವೀಪ, ಸಮುದ್ರ, ಪರ್ವತ, ಭೂಮಿಯ ದೊಡ್ಡ ಖಂಡ ಅಥವಾ ವರ್ಷ, ಹಾಗೂ ನದಿಗಳು ವ್ಯಾಪಿಸಿಕೊಂಡು ಇವೆಯಷ್ಟೆ. ಅವುಗಳು ಎಷ್ಟೆಷ್ಟು ಸಂಖ್ಯೆಯಿಂದ ಇವೆ ?

೩. ಮತ್ತು ಪೃಥಿವೀ ಮುಂತಾದ ಮಹಾ ಭೂತಗಳ ಪರಿಮಾಣ, ಲೋಕಾಲೋಕವೆಂಬ ಪರ್ವತ, ಮತ್ತು ಬ್ರಹ್ಮಾಂಡಪರ್ಯಾಯದ ಪರಿಮಾಣ, ಚಂದ್ರ ಸೂರ್ಯರ ಗತಿ—ಇವುಗಳನ್ನು ವಿಸ್ತಾರವಾಗಿ ಉಪದೇಶಿಸಬೇಕು.

೪ ೫. ಈ ಪ್ರಶ್ನೆಯನ್ನು ಕೇಳಿ ಸೂತಮುನಿಯು ಪ್ರತ್ಯುತ್ತರವಿತ್ತನು. ಮುನಿ

ಸಂಖ್ಯಾಂ ಚೈವ ಸಮುದ್ರಾಣಾಂ ದ್ವೀಪಾನಾಂ ಚೈವ ವಿಸ್ತರಮ್ ।
ದ್ವೀಪಭೇದಸಹಸ್ರಾಣಿ ಸಪ್ತಸ್ವಂತರ್ಗತಾನಿ ಚ ॥ ೫ ॥

ನ ಶಕ್ಯಂತೇ ಕ್ರಮೇಣೇಹ ವಕ್ತುಂ ಯ್ಯೈಃ ಸತತಂ ಜಗತ್ ।
ಸಪ್ತ ದ್ವೀಪಾನ್ ಪ್ರವಕ್ಷ್ಯಾಮಿ ಚಂದ್ರಾದಿತ್ಯಗ್ರಹೈಃ ಸಹ ॥ ೬ ॥

ತೇಷಾಂ ಮನುಷ್ಯಾಸ್ತರ್ಕೇಣ ಪ್ರಮಾಣಾನಿ ಪ್ರಚಕ್ಷತೇ ।
ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಸಾಧಯೇತ್॥ ೭ ॥

ಪ್ರಕೃತಿಭ್ಯಃ ಪರಂ ಯಚ್ಚ ತದಚಿಂತ್ಯಂ ಪ್ರಚಕ್ಷತೇ ।
ನವವರ್ಷಂ ಪ್ರವಕ್ಷ್ಯಾಮಿ ಜಂಬೂದ್ವೀಪಂ ಯಥಾತಥಮ್ ॥ ೮ ॥

---

ಗಳೆ! ಪೃಥಿವೀ ಮಂಡಲದ ದೀರ್ಘ ಮತ್ತು ವಿಸ್ತಾರಗಳ ಪರಿಮಾಣವನ್ನು ನಿಮಗೆ ಹೇಳುವೆನು. ಮತ್ತು ಸಮುದ್ರ, ದ್ವೀಪಗಳ ಸಂಖ್ಯೆಯನ್ನೂ ವಿಸ್ತಾರವನ್ನೂ ಹೇಳುವೆನು. ಸಮುದ್ರ ಮಧ್ಯದಲ್ಲಿ ಅನೇಕ ಸಂಖ್ಯೆಯಿಂದ ಇರುವ ಚಿಕ್ಕಪುಟ್ಟ ದ್ವೀಪಗಳೆಲ್ಲವೂ ಒಟ್ಟಾಗಿ ಸಪ್ತದ್ವೀಪಗಳಲ್ಲಿ ಅಂತರ್ಭಾವ ಹೊಂದಿವೆ.

೬. ಚಿಕ್ಕಚಿಕ್ಕ ದ್ವೀಪಗಳನ್ನು ಪ್ರತ್ಯೇಕವಾಗಿ ಹೇಳಲು ಸಾಧ್ಯವಾಗಲಾರದು. ಅವು ಗಣನೆ ಮಾಡಲಾಗದಂತೆ ನಿಖಿಲ ಜಗತ್ತನ್ನು ವ್ಯಾಪಿಸಿಕೊಂಡಿರುತ್ತವೆ. ಆದುದ ರಿಂದ ಚಂದ್ರ-ಸೂರ್ಯ ಮತ್ತು ಇತರ ಗ್ರಹಗಣದ ಜೊತೆಯಲ್ಲಿ ಮುಖ್ಯವಾದ ಸಪ್ತ ದ್ವೀಪಗಳನ್ನು ವಿಸ್ತಾರವಾಗಿ ನಿರೂಪಣ ಮಾಡುತ್ತೇನೆ.

೭. ಮಾನವರು ದ್ವೀಪ ಮುಂತಾದುವುಗಳ ತತ್ತ್ವವನ್ನು ತರ್ಕಪ್ರಮಾಣ ದಿಂದ ಸಾಧಿಸಲು ಯತ್ನಿಸುವರು. ಆದರೆ ಚಿಂತಿಸಲು ಕೂಡ ಅಶಕ್ಯವಾದ ಅತಿ ಸೂಕ್ಷ್ಮ ವಸ್ತುಗಳ ಸತ್ತೆಯನ್ನು ತರ್ಕಪ್ರಮಾಣದಿಂದ ಸಾಧಿಸಲು ಯತ್ನಿಸುವುದು ಸಮಂಜಸವಲ್ಲ.

೮. ಕಾರ್ಯಕಾರಣಗಳ ಪ್ರವಾಹದಲ್ಲಿ ಪ್ರತ್ಯಕ್ಷಾದಿ ಪ್ರಮಾಣದಿಂದ ಸಿದ್ಧಿಸಿರುವ ಕಡೆಯ ಪ್ರಕೃತಿಯನ್ನು ಮೀರಿಸಿರುವ ತತ್ತ್ವವೆಂಬುದು ಅಚಿಂತ್ಯವಾದುದೆಂದು ಹೇಳ ಲ್ಪಡುತ್ತದೆ. ಮೇಲೆ ಹೇಳಿರುವ ಮುಖ್ಯವಾದ ಸಪ್ತ ದ್ವೀಪಗಳಲ್ಲಿ ನವ ವರ್ಷ (ಖಂಡ)ಗಳಿಂದ ಕೂಡಿದ ಜಂಬೂದ್ವೀಪದ ಸ್ಥಿತಿಯನ್ನು ವರ್ಣಿಸುತ್ತೇನೆ.

**ವಿಸ್ತರಾನ್ಮಂಡಲಾಚ್ಚೈವ ಯೋಜನೈಸ್ತನ್ನಿಬೋಧತ ।**
**ಶತಮೇಕಂ ಸಹಸ್ರಾಣಾಂ ಯೋಜನಾಗ್ರಾತ್ಸಮಂತತಃ ॥ ೯ ॥**

**ನಾನಾಜನಪದಾಕೀರ್ಣಃ ಪುರೈಶ್ಚ ವಿವಿಧೈಃ ಶುಭೈಃ ।**
**ಸಿದ್ಧಚಾರಣಸಂಕೀರ್ಣೈಃ ಪರ್ವತೈರುಪಶೋಭಿತಃ ॥ ೧೦ ॥**

**ಸರ್ವಧಾತುನಿಬದ್ಧೈಶ್ಚ ಶಿಲಾಜಾಲಸಮುದ್ಭವೈಃ ।**
**ಪರ್ವತಪ್ರಭವಾಭಿಶ್ಚ ನದೀಭಿಃ ಸರ್ವತಸ್ತತಃ ॥ ೧೧ ॥**

**ಜಂಬೂದ್ವೀಪಃ ಪೃಥುಃ ಶ್ರೀಮಾನ್ ಸರ್ವತಃ ಪೃಥುಮಂಡಲಃ ।**
**ನವಭಿಶ್ಚಾವೃತಃ ಸರ್ವೋ ಭುವನೈರ್ಭೂತಭಾವನೈಃ ॥ ೧೨ ॥**

**ಲವಣೇನ ಸಮುದ್ರೇಣ ಸರ್ವತಃ ಪರಿವಾರಿತಃ ।**
**ಜಂಬೂದ್ವೀಪಸ್ಯ ವಿಸ್ತಾರಾತ್ ಸಮೇನ ತು ಸಮಂತತಃ ॥ ೧೩ ॥**

---

೯. ಆ ದ್ವೀಪದ ಸುತ್ತಳತೆ ಮತ್ತು ವಿಸ್ತಾರ ಮುಂತಾದ ಪರಿಮಾಣಗಳನ್ನು ಯೋಜನ ಸಂಖ್ಯೆಗೆ ಅನುಗುಣವಾಗಿ ಹೇಳುವೆನು ಕೇಳಿರಿ, ಈ ಜಂಬೂದ್ವೀಪವೆಂಬುದು ಸುತ್ತಲೂ ಒಂದು ಲಕ್ಷ ಯೋಜನ ಪರಿಮಾಣದ ಅಂತವುಳ್ಳದ್ದಾಗಿದೆ

೧೦. ಈ ದ್ವೀಪವು ಅನೇಕ ದೇಶಗಳಿಂದಲೂ, ಮಂಗಳಕರವಾದ ಅನೇಕ ನಗರಗಳಿಂದಲೂ, ಸಿದ್ಧ ಚಾರಣ ಮುಂತಾದ ದೇವಯೋನಿ ವಿಶೇಷರು ವಾಸಮಾಡುವ ಅನೇಕ ಪರ್ವತಗಳಿಂದಲೂ ಶೋಭಿಸಲ್ಪಟ್ಟಿರುವುದು.

೧೧. ಇಲ್ಲಿರುವ ಪರ್ವತಗಳು ವಿಚಿತ್ರವಾದ ಸಮಸ್ತ ಧಾತುಗಳಿಂದ ಅಲಂಕೃತವಾಗಿಯೂ ಶಿಲಾಸಂಘಾತದಿಂದ ವ್ಯಾಪಿಸಲ್ಪಟ್ಟವುಗಳಾಗಿಯೂ ಇವೆ. ಇಂತಹ ಪರ್ವತಗಳಿಂದ ಹುಟ್ಟಿರುವ ಅನೇಕ ನದಿಗಳು ಈ ದ್ವೀಪದಲ್ಲಿ ಸುತ್ತಲೂ ಎಲ್ಲೆಲ್ಲಿಯೂ ಹರಿಯುತ್ತಿವೆ.

೧೨. ಈ ಜಂಬೂದ್ವೀಪವು ವಿಶಾಲವಾಗಿಯೂ, ವಿಶಾಲವಾದ ರಾಷ್ಟ್ರಗಳಿಂದ ಕೂಡಿದುದಾಗಿಯೂ, ಮತ್ತು ಕಾಂತಿಯಿಂದ ಪ್ರಕಾಶಿಸುವುದಾಗಿಯೂ ಇರುವುದು. ಮತ್ತು ಸಮಸ್ತ ಭೂತಗಳ ಉತ್ಪತ್ತಿಗೆ ಆಧಾರವಾದ ನವ (ಒಂಭತ್ತು) ಭುವನಗಳಿಂದ ಆವರಿಸಲ್ಪಟ್ಟಿರುವುದು.

೧೩. ಈ ದ್ವೀಪವು ತನ್ನ ವಿಸ್ತಾರಕ್ಕೆ ಸಮವಾದ ವಿಸ್ತಾರವುಳ್ಳ ಲವಣ ಸಮುದ್ರದಿಂದ ಸುತ್ತಲೂ ಸರ್ವ ಪ್ರದೇಶಗಳಲ್ಲಿಯೂ ಸುತ್ತುವರಿಯಲ್ಪಟ್ಟಿರುತ್ತದೆ.

ಪ್ರಾಗಾಯತಾಃ ಸುಪರ್ವಾಣಃ ಷಡಿಮೇ ವರ್ಷಪರ್ವತಾಃ ।
ಅವಗಾಢಾ ಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ॥ ೧೪ ॥

ಹಿಮಪ್ರಾಯಶ್ಚ ಹಿಮವಾನ್ ಹೇಮಕೂಟಶ್ಚ ಹೇಮವಾನ್ ।
ಸರ್ವರ್ತುಷು ಸುಖಶ್ಚಾಪಿ ನಿಷಧಃ ಪರ್ವತೋ ಮಹಾನ್ ॥ ೧೫ ॥

ಚತುರ್ವರ್ಣಶ್ಚ ಸೌವರ್ಣೋ ಮೇರುಶ್ಚಾರುತಮಃ ಸ್ಮೃತಃ ।
ದ್ವಾತ್ರಿಂಶಚ್ಚ ಸಹಸ್ರಾಣಿ ವಿಸ್ತೀರ್ಣಃ ಸ ಚ ಮೂರ್ಧನಿ ॥ ೧೬ ॥

ವೃತ್ತಾಕೃತಿಪ್ರಮಾಣಶ್ಚ ಚತುರಸ್ರಃ ಸಮುಚ್ಛ್ರಿತಃ ।
ನಾನಾವರ್ಣಸ್ತು ಪಾರ್ಶ್ವೇಷು ಪ್ರಜಾಪತಿಗುಣಾನ್ವಿತಃ ॥ ೧೭ ॥

---

೧೪. ಇಂತಹ ದ್ವೀಪದಲ್ಲಿ ಪೂರ್ವಪಶ್ಚಿಮ ದಿಕ್ಕುಗಳನ್ನು ವ್ಯಾಪಿಸಿ ದೀರ್ಘಾಕಾರವುಳ್ಳವುಗಳೂ ದೃಢವಾದ ಸಂಧಿಗಳಿಂದ ಕೂಡಿರುವುವೂ ಮತ್ತು ವರ್ಷಗಳ ವಿಭಜನೆಗೆ ಗುರುತಾಗಿರುವುದರಿಂದ ವರ್ಷ ಪರ್ವತಗಳೆಂಬ ಸಂಜ್ಞಾಂಕಿತಗಳೂ ಆದ ಆರು ಪರ್ವತಗಳು ಪೂರ್ವಪಶ್ಚಿಮ ಸಮುದ್ರಗಳನ್ನು ಒತ್ತಿಕೊಂಡು ಭೂಮಿಯನ್ನು ವ್ಯಾಪಿಸಿಕೊಂಡಿರುತ್ತವೆ.

೧೫. ಅವುಗಳಲ್ಲಿ ಅತಿಯಾಗಿ ಹಿಮ (ಮಂಜು)ವು ವ್ಯಾಪಿಸಿರುವುದರಿಂದ ಹಿಮವಂತನೆಂಬ ಅನ್ವರ್ಥನಾಮವುಳ್ಳ ಪರ್ವತವು ಮೊದಲನೆಯದು. ಚಿನ್ನದ ಶಿಖರಗಳಿಂದ ಪೂರ್ಣವಾಗಿ ಹೇಮಕೂಟವೆಂಬ ಅನ್ವರ್ಥನಾಮವುಳ್ಳ ಪರ್ವತವು ಎರಡನೆಯದು. ಸರ್ವ ಋತುಗಳಲ್ಲಿಯೂ ಸುಖಕರವಾದ ನಿಷಧವೆಂಬ ನಾಮಾಂಕಿತ ಪರ್ವತವು ಮೂರನೆಯದು, ಹೀಗೆ ಮೂರು ಪರ್ವತಗಳು ಸೇರಿಕೊಂಡಿವೆ.

೧೬. ಮತ್ತು ಮುಂದೆ ಹೇಳುವ ನಾಲ್ಕು ವರ್ಣಗಳಿಂದ ರಂಜಿಸಲ್ಪಟ್ಟದ್ದಾಗಿ ಸುಂದರವಾಗಿ ಕಾಣುವ ಸುವರ್ಣಮಯವಾದ ಮೇರುವೆಂಬ ಪರ್ವತವು ನಾಲ್ಕನೆಯದಾಗಿರುವುದು. ಇದು ಶಿಖರದಲ್ಲಿ ಮೂವತ್ತೆರಡು ಸಾವಿರ ಯೋಜನ ಪರಿಮಾಣ ವಿಸ್ತಾರವಾಗಿರುವುದು.

೧೭. ಈ ಪರ್ವತವು ನಾಲ್ಕು ಮೂಲೆಗಳಿಂದ ಕೂಡಿದುದಾಗಿಯೂ, ಗುಂಡಾದ ಮಹಾ ಪರಿಮಾಣದ ಆಕಾರವುಳ್ಳದ್ದಾಗಿಯೂ, ನಾನಾ ವರ್ಣಗಳಿಂದ ಪಾರ್ಶ್ವಗಳಲ್ಲಿ

**ನಾಭಿಬಂಧನಸಂಭೂತೋ ಬ್ರಹ್ಮಣೋಽವ್ಯಕ್ತಜನ್ಮನಃ ।**
**ಪೂರ್ವತಃ ಶ್ವೇತವರ್ಣಶ್ಚ ಬ್ರಾಹ್ಮಣಸ್ತಸ್ಯ ತೇನ ತತ್ ॥ ೧೮ ॥**

**ಪಾರ್ಶ್ವಮುತ್ತರತಸ್ತಸ್ಯ ರಕ್ತವರ್ಣಃ ಸ್ವಭಾವತಃ ।**
**ತೇನಾಸ್ಯ ಕ್ಷತ್ರಭಾವಸ್ತು ಮೇರೋರ್ನಾನಾರ್ಥಕಾರಣಾತ್ ॥ ೧೯ ॥**

**ಪೀತಶ್ಚ ದಕ್ಷಿಣೇನಾಸೌ ತೇನ ವೈಶ್ಯತ್ವಮಿಷ್ಯತೇ ।**
**ಭೃಂಗಪತ್ರನಿಭಶ್ಚಾಪಿ ಪಶ್ಚಿಮೇನ ಸಮಾಚಿತಃ ॥ ೨೦ ॥**

**ತೇನಾಸ್ಯ ಶೂದ್ರಭಾವಃ ಸ್ಯಾದಿತಿ ವರ್ಣಾಃ ಪ್ರಕೀರ್ತಿತಾಃ ।**
**ವೃತ್ತಃ ಸ್ವಭಾವತಃ ಪ್ರೋಕ್ತೋ ವರ್ಣತಃ ಪರಿಮಾಣತಃ ॥ ೨೧ ॥**

---

ಶೋಭಿತವಾಗಿಯೂ, ಉನ್ನತವಾಗಿಯೂ, ಮತ್ತು ಸೃಷ್ಟಿಕರ್ತನಾದ ಪ್ರಜಾಪತಿಯ ಗುಣಗಳಿಂದ ಸಹಿತವಾಗಿಯೂ ಇರುವುದು.

೧೮. ಈ ಮಹಾ ಮೇರು ಪರ್ವತವು ಅವ್ಯಕ್ತ ಅಥವಾ ಪ್ರಧಾನದಿಂದ ಜನ್ಮವನ್ನೆತ್ತಿರುವ ಬ್ರಹ್ಮನ ನಾಭಿಯೆಂಬ ಶರೀರ ಬಂಧದಿಂದ ಹುಟ್ಟಿದೆ. ಇದು ಪೂರ್ವ ಪಾರ್ಶ್ವದಲ್ಲಿ ಬಿಳಿಯ ಬಣ್ಣದಿಂದ ಶೋಭಿಸುತ್ತಿದೆ. ಬ್ರಾಹ್ಮಣ ಜಾತಿಯ ಚಿಹ್ನವಾದ ಶ್ವೇತವರ್ಣದಿಂದ ಶೋಭಿಸುವ ಆ ಮೇರು ಪರ್ವತವು ಬ್ರಾಹ್ಮಣ ಜಾತಿಯನ್ನು ಹೊಂದಿರುವುದು.

೧೯. ಹಾಗೆಯೇ 'ಆ ಪರ್ವತದ ಉತ್ತರ ದಿಕ್ಕಿನ ಪಾರ್ಶ್ವವು ಸ್ವಭಾವವಾಗಿಯೇ ಕೆಂಪು ಬಣ್ಣದಿಂದ ರಾಜಿಸುತ್ತಿರುವುದು. ರಕ್ತ ವರ್ಣವು ಕ್ಷತ್ರಿಯ ಜಾತಿಯ ಚಿಹ್ನವು. ಈ ಚಿಹ್ನದಿಂದಲೂ ಅನೇಕ ಅರ್ಥಗಳನ್ನು ಸಾಧಿಸುವುದರಿಂದಲೂ ಈ ಮೇರು ಪರ್ವತವು ಕ್ಷತ್ರಿಯ ಜಾತಿಯನ್ನು ಹೊಂದಿರುವುದು.

೨೦. ಮತ್ತು ದಕ್ಷಿಣ ಪಾರ್ಶ್ವವು ಹಳದಿಯ ಬಣ್ಣವಾಗಿರುವುದರಿಂದ ವೈಶ್ಯ ಜಾತಿಯ ಪೀತವರ್ಣವೆಂಬ ಗುರುತಿನಿಂದ ಈ ಪರ್ವತವು ವೈಶ್ಯ ಜಾತಿಯನ್ನು ಧರಿಸಿದೆ. ಹಾಗೆಯೇ ಪಶ್ಚಿಮ ಭಾಗದಲ್ಲಿ ಭೃಂಗಪತ್ರದಂತೆ ನೀಲವರ್ಣದಿಂದ ಕೂಡಿರುವುದರಿಂದ ಆ ಪರ್ವತವು ಶೂದ್ರಜಾತಿಗೆ ಸೇರಿದುದೂ ಆಗಿರುವುದು. ನೀಲವರ್ಣವು ಅಂತ್ಯವರ್ಣದ ಚಿಹ್ನವು.

೨೧. ಹೀಗೆ ಕ್ರಮವಾಗಿ ನಾಲ್ಕು ವರ್ಣ (ಬಣ್ಣ)ಗಳಿಂದ ರಂಜಿತವಾದ್ದರಿಂದ

**ನೀಲಶ್ಚ ವೈದೂರ್ಯಮಯಃ ಶ್ವೇತಃ ಶುಕ್ಲೋ ಹಿರಣ್ಮಯಃ |**
**ಮಯೂರಬರ್ಹವರ್ಣಸ್ತು ಶಾತಕೌಂಭಶ್ಚ ಶೃಂಗವಾನ್ || ೨೨ ||**

**ಏತೇ ಪರ್ವತರಾಜಾನಃ ಸಿದ್ಧಚಾರಣಸೇವಿತಾಃ |**
**ತೇಷಾಮಂತರವಿಷ್ಕಂಭೋ ನವಸಾಹಸ್ರ ಉಚ್ಯತೇ || ೨೩ ||**

**ಮಧ್ಯೇ ತ್ವಿಲಾವೃತಂ ನಾಮ ಮಹಾಮೇರೋಃ ಸಮಂತತಃ |**
**ನವೈವ ತು ಸಹಸ್ರಾಣಿ ವಿಸ್ತೀರ್ಣಂ ಸರ್ವತಸ್ತು ತತ್ || ೨೪ ||**

**ಮಧ್ಯೇ ತಸ್ಯ ಮಹಾಮೇರುರ್ವಿಧೂಮ ಇವ ಪಾವಕಃ |**
**ವೇದ್ಯರ್ಧಂ ದಕ್ಷಿಣಂ ಮೇರೋರುತ್ತರಾರ್ಧಂ ತಥೋತ್ತರಮ್ || ೨೫ ||**

---

ಚಾತುರ್ವರ್ಣ್ಯವನ್ನು ಧರಿಸಿರುವುದೂ ಸ್ವಭಾವವಾಗಿ ವರ್ತುಲಾಕಾರವೂ ವರ್ಣ-ಪರಿಮಾಣಗಳಿಂದ ಇತರ ಪರ್ವತಗಳನ್ನು ಮೀರಿರುವುದೂ ಆಗಿದೆ.

೨೨. ವೈದೂರ್ಯರತ್ನಗಳಿಂದ ತುಂಬಿರುವ ನೀಲಪರ್ವತವೂ, ಶುಕ್ಲ ವರ್ಣ-ಸುವರ್ಣಮಯವಾದ ಆಕಾರ ಮತ್ತು ಶಿಖರ ಇವುಗಳಿಂದ ನವಿಲಿನ ಗರಿಯಂತೆ ಶೋಭಿಸುವ ಶ್ವೇತವೆಂಬ ಪರ್ವತವೂ ಮತ್ತೆರಡು ವರ್ಷಪರ್ವತಗಳಾಗಿವೆ.

೨೩. ಸಿದ್ಧ-ಚಾರಣ ಮುಂತಾದ ದೇವಯೋನಿ ವಿಶೇಷರಿಂದ ಸೇವಿಸಲ್ಪಟ್ಟಿರುವ ಈ ಮಹಾ ಪರ್ವತಗಳು ಪರ್ವತರಾಜ ಎಂದು ಕರೆಯಲ್ಪಡುತ್ತವೆ. ಇವುಗಳ ಮಧ್ಯದ ವಿಷ್ಕಂಭವೆಂಬ ಪರಿಮಾಣವು ನವಸಹಸ್ರ ಯೋಜನ ಪರಿಮಿತವಾಗಿರುವುದು. ಒಂದು ಮೂಲೆಯಿಂದ ನೇರವಾಗಿ ಮತ್ತೊಂದು ಮೂಲೆಗೆ ಇರುವ ವರ್ತುಲಾಕಾರವಾದ ಪರಿಮಾಣವು ವಿಷ್ಕಂಭ ಪರಿಮಾಣವೆಂದು ಪ್ರಸಿದ್ಧವಾಗಿರುವುದು.

೨೪. ಇಂತಹ ಸುಮೇರು ಪರ್ವತದ ಮಧ್ಯದಲ್ಲಿ ಸರ್ವಭಾಗಗಳಲ್ಲಿಯೂ ನವ ಸಹಸ್ರ ಯೋಜನ ಪರಿಮಾಣ ವಿಸ್ತಾರದಿಂದ ಕೂಡಿದ ಇಲಾವೃತವೆಂಬ ವರ್ಷವು ವ್ಯಾಪಿಸಿಕೊಂಡಿರುವುದು.

೨೫. ಹೀಗೆ ಸುತ್ತಲೂ ಇದ್ದ ಅನೇಕಾನೇಕ ವರ್ಷ ಭೂಮಿಗಳ ನಡುವೆ ಸ್ವರ್ಣಮಯವಾಗಿ ಉಜ್ಜ್ವಲವಾದ ಮಹಾಮೇರುಪರ್ವತವು ಧೂಮವಿಲ್ಲದ ಅಗ್ನಿಯಂತೆ ಹೊಳೆಯುತ್ತಲಿದೆ. ಈ ಪರ್ವತದ ದಕ್ಷಿಣ ಭಾಗದ ಅರ್ಧವೇದಿಯು ದಕ್ಷಿಣಾರ್ಧ

**ವರ್ಷಾಣಿ ಯಾನಿ ಷಟ್ಚೈವ ತೇಷಾಂ ಯೇ ವರ್ಷಪರ್ವತಾಃ ।**
**ದ್ವೇ ದ್ವೇ ಸಹಸ್ರೇ ವಿಸ್ತೀರ್ಣಾ ಯೋಜನಾನಾಂ ಸಮುಚ್ಛ್ರಯಾತ್ ॥ ೨೬ ॥**

**ಜಂಬೂದ್ವೀಪಸ್ಯ ವಿಸ್ತಾರಾತ್ತೇಷಾಮಾಯಾಮ ಉಚ್ಯತೇ ।**
**ಯೋಜನಾನಾಂ ಸಹಸ್ರಾಣಿ ಶತಂ ದ್ವಾವಾಯತೌ ಗಿರೀ ॥ ೨೭ ॥**

**ನೀಲಶ್ಚ ನಿಷಧಶ್ಚೈವ ತಾಭ್ಯಾಂ ಹೀನಾಸ್ತು ಯೇ ಪರೇ ।**
**ಶ್ವೇತಶ್ಚ ಹೇಮಕೂಟಶ್ಚ ಹಿಮವಾನ್ ಶೃಂಗವಾಂಸ್ತಥಾ ॥ ೨೮ ॥**

**ನವತೀ ದ್ವೇ ಅಶೀತೀ ದ್ವೇ ಸಹಸ್ರಾಣ್ಯಾಯತಾಸ್ತು ತೈಃ ।**
**ತೇಷಾಂ ಮಧ್ಯೇ ಜನಪದಾಸ್ತಾನಿ ವರ್ಷಾಣಿ ಸಪ್ತ ವೈ ॥ ೨೯ ॥**

---

ವೆಂದೂ ಉತ್ತರ ಭಾಗದ ಮತ್ತೊಂದು ಅರ್ಧವೇದಿಯು ಉತ್ತರಾರ್ಧವೆಂದೂ ಕರೆಯಲ್ಪಡುತ್ತವೆ.

೨೬. ಹಿಂದೆ ಹೇಳಿರುವ ಆರು ವರ್ಷಗಳ ಸೀಮ (ಎಲ್ಲೆ) ಭೂಮಿಯಲ್ಲಿರುವ ಆರು ವರ್ಷಪರ್ವತಗಳು ಎರಡೆರಡು ಸಾವಿರ ಯೋಜನ ಪರಿಮಾಣದ ವಿಸ್ತಾರದಿಂದ ಔನ್ನತ್ಯವನ್ನು ಹೊಂದಿವೆ.

೨೭. ಜಂಬೂದ್ವೀಪದ ವಿಸ್ತಾರದ ಗಣನೆಯಿಂದ ಆ ವರ್ಷಪರ್ವತಗಳ ದೀರ್ಘ ಪರಿಮಾಣವು ಹೇಳಲ್ಪಡುತ್ತದೆ. ಮೇಲೆ ಹೇಳಿರುವ ವರ್ಷಪರ್ವತಗಳಲ್ಲಿ ನೀಲ ಮತ್ತು ನಿಷಧವೆಂಬ ಮಹಾ ಪರ್ವತಗಳು ಒಂದು ಲಕ್ಷ ಯೋಜನ ಪರಿಮಾಣದಷ್ಟು ದೀರ್ಘತ್ವವನ್ನು ಹೊಂದಿವೆ.

೨೮. ಈ ಎರಡು ಪರ್ವತಗಳನ್ನು ಬಿಟ್ಟು ಮಿಕ್ಕವುಗಳಲ್ಲಿ ಶ್ವೇತ, ಹೇಮಕೂಟ, ಎಂಬ ಎರಡು ಪರ್ವತಗಳು. ಹದಿನೆಂಟುಸಾವಿರ ಯೋಜನ ಪರಿಮಾಣ ದೀರ್ಘತ್ವವನ್ನೂ, ಹಿಮವಾನ್, ಶೃಂಗವಾನ್ ಎಂಬ ಮತ್ತೆರಡು ಪರ್ವತಗಳು ಹದಿನಾರು ಸಹಸ್ರ ಯೋಜನ ದೀರ್ಘತ್ವವನ್ನೂ ಹೊಂದಿವೆ.

೨೯. ಇಂತಹ ವರ್ಷಪರ್ವತಗಳಿಂದ ವಿಭಾಗಿಸಲ್ಪಟ್ಟವುಗಳಾಗಿ ಸಪ್ತವರ್ಷಗಳು ಇವೆ. ಅವುಗಳ ಮಧ್ಯದಲ್ಲಿ ಅನೇಕ ದೇಶಗಳು ಒಳಗೊಂಡಿವೆ.

ಪ್ರಪಾತವಿಷಮೈಸ್ತೈಸ್ತು ಪರ್ವತೈರಾವೃತಾನಿ ತು ।
ಸಂತತಾನಿ ನದೀಭೇದೈರಗಮ್ಯಾನಿ ಪರಸ್ಪರಮ್ ॥ ೩೦ ॥

ವಸಂತಿ ತೇಷು ಸತ್ತ್ವಾನಿ ನಾನಾಜಾತೀನಿ ಸರ್ವತಃ ।
ಇದಂ ಹೈಮವತಂ ವರ್ಷಂ ಭಾರತಂ ನಾಮ ವಿಶ್ರುತಮ್ ॥ ೩೧ ॥

ಹೇಮಕೂಟಂ ಪರಂ ಹ್ಯಸ್ಮಾನ್ನಾಮ್ನಾ ಕಿಂಪುರುಷಂ ಸ್ಮೃತಮ್ ।
ನೈಷಧಂ ಹೇಮಕೂಟಾತ್ತು ಹರಿವರ್ಷಂ ತದುಚ್ಯತೇ ॥ ೩೨ ॥

ಹರಿವರ್ಷಾತ್ಪರಂ ಚಾಪಿ ಮೇರೋಶ್ಚ ತದಿಲಾವೃತಮ್ ।
ಇಲಾವೃತಾತ್ಪರಂ ನೀಲಂ ರಮ್ಯಕಂ ನಾಮ ವಿಶ್ರುತಮ್ ॥ ೩೩ ॥

ರಮ್ಯಕಾತ್ಪರಕಂ ಶ್ವೇತಂ ವಿಶ್ರುತಂ ತದ್ಧಿರಣ್ಮಯಮ್ ।
ಹಿರಣ್ಮಯಾತ್ಪರಂ ಚೈವ ಶೃಂಗವತ್ತು ಕುರುಸ್ಮೃತಮ್ ॥ ೩೪ ॥

---

೩೦. ಜಲಪಾತ ಮತ್ತು ಭೃಗು ಪ್ರದೇಶಗಳಿಂದ ದುರ್ಗಮವಾದ ಪರ್ವತಗಳಿಂದ ಆವರಿಸಲ್ಪಟ್ಟಿರುವ ವರ್ಷಗಳು ಸಾವಿರಾರು ನದಿಗಳಿಂದ ವ್ಯಾಪಿಸಲ್ಪಟ್ಟಿರುವುದರಿಂದ ಒಂದರಿಂದ ಮತ್ತೊಂದು ವರ್ಷವು ಅಗಮ್ಯವಾಗಿರುವುದು.

೩೧. ಈ ವರ್ಷಗಳಲ್ಲಿ ಸೇರಿದ ದೇಶಗಳಲ್ಲಿ ನಾನಾ ಜಾತಿಯ ಪ್ರಾಣಿಗಳು ಎಲ್ಲೆಲ್ಲಿಯೂ ವಾಸಮಾಡುತ್ತಿವೆ. ಅವುಗಳಲ್ಲಿ ಈ ಹೈಮವತವೆಂಬ ವರ್ಷವು ಭಾರತ ವರ್ಷವೆಂದು ಪ್ರಖ್ಯಾತಿಯನ್ನು ಹೊಂದಿರುವುದು.

೩೨. ಈ ಭಾರತವರ್ಷದ ಮುಂದೆ ಹೇಮಕೂಟಪರ್ವತದಿಂದ ಕೂಡಿರುವ ಕಿಂಪುರುಷವೆಂಬ ಹೆಸರಿನ ವರ್ಷವಿರುವುದು. ಹೇಮಕೂಟ ಪರ್ವತದ ವರ್ಷದ ಮುಂದೆ ಇರುವುದು ನಿಷಧಪರ್ವತದಿಂದ ಕೂಡಿರುವ ಹರಿವರ್ಷವೆಂದು ಪ್ರಖ್ಯಾತ ವಾದ ವರ್ಷವು.

೩೩. ಹರಿವರ್ಷದ ಮುಂದೆ ಮೇರು ಪರ್ವತವನ್ನು ಸಂಬಂಧಿಸಿರುವ ಇಲಾವೃತವರ್ಷವೂ, ಆ ಇಲಾವೃತ ವರ್ಷವನ್ನು ಮೀರಿಸಿ ನೀಲಪರ್ವತದಿಂದ ವಿಭಜನೆ ಹೊಂದಿದ ರಮ್ಯಕವರ್ಷವೆಂದು ಖ್ಯಾತಿಯನ್ನು ಗಳಿಸಿದ ವರ್ಷವೂ ಇರುವುವು.

೩೪. ಆ ರಮ್ಯಕ ವರ್ಷದ ಮುಂದಿರುವುದು ಶ್ವೇತವೆಂಬ ವರ್ಷವು. ಇದು

ಧನುಃಸಂಸ್ಥೇ ತು ವಿಜ್ಞೇಯೇ ದ್ವೇ ವರ್ಷೇ ದಕ್ಷಿಣೋತ್ತರೇ ।
ದೀರ್ಘಾಣಿ ತತ್ರ ಚತ್ವಾರಿ ಮಧ್ಯಮಂ ತದಿಲಾವೃತಮ್ ॥ ೩೫ ॥

ಅರ್ವಾಕ್ಚ ನಿಷಧಸ್ಯಾಥ ವೇದ್ಯರ್ಧಂ ದಕ್ಷಿಣಂ ಸ್ಮೃತಮ್ ।
ಪರಂ ನೀಲವತೋ ಯಚ್ಚ ವೇದ್ಯರ್ಧಂ ತು ತದುತ್ತರಮ್ ॥ ೩೬ ॥

ವೇದ್ಯರ್ಧೇ ದಕ್ಷಿಣೇ ತ್ರೀಣಿ ವರ್ಷಾಣಿ ಚೋತ್ತರೇ ।
ತಯೋರ್ಮಧ್ಯೇ ತು ವಿಜ್ಞೇಯೋ ಮೇರುರ್ಮಧ್ಯ ಇಲಾವೃತಮ್ ॥ ೩೭ ॥

ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ।
ಉದಗಾಯತೋ ಮಹಾಶೈಲೋ ಮಾಲ್ಯವಾನ್ನಾಮ ನಾಮತಃ ॥೩೮ ॥

---

ಹಿರಣ್ಮಯವೆಂದು ಪ್ರಸಿದ್ಧಿಯನ್ನು ಹೊಂದಿದೆ. ಶೃಂಗವತ್ ಎಂಬ ವರ್ಷವು ಹಿರಣ್ಮಯವರ್ಷವನ್ನು ಅತಿಕ್ರಮಿಸಿ ಇರುವುದೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿದೆ.

೩೫. ಆ ಮೇರು ಪರ್ವತವನ್ನು ಸಂಬಂಧಿಸಿ ಶೃಂಗವತ್ ಎಂಬ ವರ್ಷವು ಇರುವಂತೆ ಬಿಲ್ಲಿನ ಆಕಾರದಲ್ಲಿ ಆ ಮೇರು ಪರ್ವತದ ದಕ್ಷಿಣ ಮತ್ತು ಉತ್ತರಾರ್ಧಗಳನ್ನು ವ್ಯಾಪಿಸಿ ಮತ್ತೆರಡು ವರ್ಷಗಳು ಇರುವುವು. ಹಿಂದೆ ಮೇರು ಶಿಖರದ ಮಧ್ಯದಲ್ಲಿ ಇಲಾವೃತವೆಂಬ ವರ್ಷವು ಇರುವುದೆಂದು ಹೇಳಲ್ಪಟ್ಟಿದೆ. ಹೀಗೆ ನಾಲ್ಕು ದೀರ್ಘಾಕಾರವಾದ ವರ್ಷಗಳು ಮೇರುಪರ್ವತದಲ್ಲಿವೆ. ಅವುಗಳಲ್ಲಿ ಇಲಾವೃತವೆಂಬುದು ಮಧ್ಯೆದಲ್ಲಿರುವ ವರ್ಷವು.

೩೬. ನಿಷಧ ಪರ್ವತದ ಕೆಳಭಾಗವನ್ನು ದಕ್ಷಿಣಭಾಗದ ವೇದ್ಯರ್ಧವೆಂದೂ, ನೀಲಪರ್ವತದ ಪರಭಾಗವನ್ನು ಉತ್ತರಭಾಗದ ವೇದ್ಯರ್ಧವೆಂದೂ ಕರೆಯುವರು.

೩೭. ದಕ್ಷಿಣ ವೇದ್ಯರ್ಧದಲ್ಲಿ ಮೂರು ವರ್ಷಗಳು ಮತ್ತು ಉತ್ತರ ವೇದ್ಯರ್ಧದಲ್ಲಿ ಮೂರು ವರ್ಷಗಳೂ ಅಂತರ್ಭಾವ ಹೊಂದಿವೆ. ಇವುಗಳ ಮಧ್ಯೆದಲ್ಲಿ ಮಹಾಮೇರು ಪರ್ವತವೂ ಅದರ ಶಿಖರಮಧ್ಯದಲ್ಲಿ ಇಲಾವೃತವೆಂಬ ವರ್ಷವೂ ಇರುವುವು.

೩೮. ನೀಲಪರ್ವತದ ದಕ್ಷಿಣದಲ್ಲಿಯೂ ನಿಷಧಪರ್ವತದ ಉತ್ತರದಲ್ಲಿಯೂ ಮಾಲ್ಯವಾನ್ ಎಂಬ ಹೆಸರಿನ ಮಹಾಪರ್ವತವು ಉತ್ತರ ಭಾಗದಲ್ಲಿ ಅತಿಶಯವಾದ ದೀರ್ಘತ್ವವನ್ನು ಹೊಂದಿಕೊಂಡಿರುವುದು.

**ಯೋಜನಾನಾಂ ಸಹಸ್ರಂ ತು ಆನೀಲನಿಷಧಾಯತಃ ।**
**ಆಯಾಮತಶ್ಚತುಸ್ತ್ರಿಂಶತ್ಸಹಸ್ರಾಣಿ ಪ್ರಕೀರ್ತಿತಃ ॥ ೩೯ ॥**

**ತಸ್ಯ ಪ್ರತೀಚ್ಯಾಂ ವಿಜ್ಞೇಯಃ ಪರ್ವತೋ ಗಂಧಮಾದನಃ ।**
**ಆಯಾಮತೋಽಥ ವಿಸ್ತಾರಾನ್ಮಾಲ್ಯವಾನಿತಿ ವಿಶ್ರುತಃ ॥ ೪೦ ॥**

**ಪರಿಮಂಡಲಯೋರ್ಮೇರುರ್ಮಧ್ಯೇ ಕನಕಪರ್ವತಃ ।**
**ಚತುರ್ವರ್ಣಃ ಸ ಸೌವರ್ಣಶ್ಚತುರಸ್ರಃ ಸಮುಚ್ಛ್ರಿತಃ ॥ ೪೧ ॥**

**ಸುಮೇರುಃ ಶುಶುಭೇ ಶುಭ್ರೋ ರಾಜವತ್ಸಮಧಿಷ್ಠಿತಃ ।**
**ತರುಣಾದಿತ್ಯವರ್ಣಾಭೋ ವಿಧೂಮ ಇವ ಪಾವಕಃ ॥ ೪೨ ॥**

**ಯೋಜನಾನಾಂ ಸಹಸ್ರಾಣಿ ಚತುರಶೀತಿರುಚ್ಛ್ರಿತಃ ।**
**ಪ್ರವಿಷ್ಟಃ ಷೋಡಶಾಧಸ್ತಾದ್ವಿಸ್ತೃತಃ ಷೋಡಶೈವ ತು ॥ ೪೩ ॥**

---

೩೯. ಈ ಮಾಲ್ಯವತ್ಪರ್ವತವು ನೀಲ-ನಿಷಧ ಪರ್ವತಗಳ ಹೋಲಿಕೆಯಿಂದ ಸಹಸ್ರಯೋಜನ ವಿಸ್ತಾರವನ್ನೂ ಮೂವತ್ತನಾಲ್ಕುಸಾವಿರ ಯೋಜನ ದೀರ್ಘಪರಿಮಾಣವನ್ನೂ ಹೊಂದಿರುವುದು.

೪೦. ಆ ಪರ್ವತದ ಪಶ್ಚಿಮದಲ್ಲಿ ಗಂಧಮಾದನವೆಂಬ ಪರ್ವತವು ಇರುವುದೆಂದು ತಿಳಿಯಬೇಕು. ಇದರ ಎತ್ತರ ಮತ್ತು ವಿಸ್ತಾರ ಪರಿಮಾಣಗಳು ಮಾಲ್ಯವತ್ ಪರ್ವತಕ್ಕೆ ಸಮಾನವಾಗಿವೆ.

೪೧-೪೨. ವರ್ತುಲಾಕಾರವಾದ ಈ ಮಾಲ್ಯವತ್-ಗಂಧಮಾದನ ಪರ್ವತಗಳ ನಡುವೆ ಹಿಂದೆ ಹೇಳಿರುವಂತೆ ನಾಲ್ಕು ವರ್ಣಗಳಿಂದ ರಂಜಿಸಲ್ಪಟ್ಟಿರುವುದೂ ಸುವರ್ಣಮಯವಾದ್ದರಿಂದ ಕನಕಪರ್ವತವೆಂದು ಪ್ರಸಿದ್ಧವಾದುದೂ ನಾಲ್ಕು ಮೂಲೆಗಳಲ್ಲಿಯೂ ಸಮವಾದ ಉನ್ನತಿಯನ್ನು ಹೊಂದಿರುವುದೂ ಮತ್ತು ಶುಭ್ರವೂ ಆದ ಸುಮೇರುಪರ್ವತವು ರಾಜನಂತೆ ಪ್ರಭು ಶಕ್ತಿಯಿಂದ ಕೂಡಿಕೊಂಡು ಪ್ರೌಢಸೂರ್ಯನಂತೆಯೂ ಧೂಮವಿಲ್ಲದ ಅಗ್ನಿಯಂತೆಯೂ ಉಜ್ವಲವಾಗಿರುವುದು.

೪೩. ಈ ಪರ್ವತವು ತನಗಿರುವ ಸಹಸ್ರಯೋಜನ ಉನ್ನತಿ ಪರಿಮಾಣದಲ್ಲಿ ಹದಿನಾರುಯೋಜನ ಪರಿಮಾಣದಷ್ಟು ಭೂಮಿಯ ಅಧೋಭಾಗವನ್ನು ವ್ಯಾಪಿಸಿರುವುದಾಗಿಯೂ ಮಿಕ್ಕ ಎಂಭತ್ತನಾಲ್ಕುಯೋಜನ ಪರಿಮಾಣದಷ್ಟು ಮೇಲ್ಭಾಗವನ್ನು

ಶರಾವಸಂಸ್ಥಿತತ್ವಾತ್ತು ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ।
ವಿಸ್ತಾರಾತ್ತ್ರಿಗುಣಸ್ತಸ್ಯ ಪರಿಣಾಹಃ ಸಮಂತತಃ ॥ ೪೪ ॥

ಮಂಡಲೇನ ಪ್ರಮಾಣೇನ ತ್ರ್ಯಸ್ರೇ ಮಾನಂ ತದಿಷ್ಯತೇ ।
ಚತ್ವಾರಿಂಶತ್ಸಹಸ್ರಾಣಿ ಯೋಜನಾನಾಂ ಸಮಂತತಃ ॥ ೪೫ ॥

ಅಷ್ಟಾಭಿರಧಿಕಾನಿ ಸ್ಯುಸ್ತ್ರ್ಯಸ್ರೇ ಮಾನಂ ಪ್ರಕೀರ್ತಿತಮ್ ।
ಚತುರಸ್ರೇಣ ಮಾನೇನ ಪರಿಣಾಹಃ ಸಮಂತತಃ ॥ ೪೬ ॥

ಚತುಃಷಷ್ಟಿಸಹಸ್ರಾಣಿ ಯೋಜನಾನಾಂ ವಿಧೀಯತೇ ।
ಸ ಪರ್ವತೋ ಮಹಾದಿವ್ಯೋ ದಿವ್ಯೌಷಧಿಸಮನ್ವಿತಃ ॥ ೪೭ ॥

ಭುವನೈರಾವೃತಃ ಸರ್ವೋ ಜಾತರೂಪಮಯೈಃ ಶುಭೈಃ ।
ತತ್ರ ದೇವಗಣಾಃ ಸರ್ವೇ ಗಂಧರ್ವೋರಗರಾಕ್ಷಸಾಃ ॥ ೪೮ ॥

---

ವ್ಯಾಪಿಸಿಕೊಂಡಿರುವುದಾಗಿಯೂ ಮತ್ತು ಹದಿನಾರು ಸಹಸ್ರಯೋಜನ ಪರಿಮಾಣ ವಿಸ್ತಾರವನ್ನು ಹೊಂದಿರುವುದಾಗಿಯೂ ಇದೆ.

೪೪. ಇದು ತಟ್ಟೆಯಂತೆ ಮೇಲುಭಾಗದಲ್ಲಿ ವಿಸ್ತಾರವಾಗುತ್ತ ಹೋಗುವುದರಿಂದ ಶಿಖರದಲ್ಲಿ ಮೂವತ್ತೆರಡು ಯೋಜನ ಪರಿಮಾಣವುಳ್ಳದ್ದಾಗಿದೆ. ಇದರ ಪರಿಣಾಹವು ಸುತ್ತಲೂ ವಿಸ್ತಾರಕ್ಕಿಂತ ತ್ರಿಗುಣಿತವಾದ ಪರಿಮಾಣವನ್ನು ಹೊಂದಿರುವುದು.

೪೫. ಈ ವಿಶಾಲವೂ ವರ್ತುಲವೂ ಆದ ಪರ್ವತದ ತ್ರ್ಯಸ್ರ (ಮೂರುಮೂಲೆ) ಗಳ ಪರಿಮಾಣವು ಸುತ್ತಲೂ ನಲವತ್ತುಸಹಸ್ರ ಯೋಜನ ಸಂಖ್ಯೆಯಿಂದ ಮಂಡಲಾ ಕಾರವನ್ನು ಹೊಂದಿರುವುದು.

೪೬. ಮೊದಲು ಹೇಳಿದ ಶರಾವಾಕಾರದ ಮೂವತ್ತೆರಡು ಯೋಜನ ಪರಿ ಮಾಣಕ್ಕಿಂತ ತ್ರ್ಯಸ್ರಪರಿಮಾಣದಲ್ಲಿ ಎಂಟು ಯೋಜನ ಪರಿಮಾಣವು ಅಧಿಕವಾಗಿ ಸೇರುವುದು. ಚತುರಸ್ರ (ನಾಲ್ಕುಮೂಲೆ)ದ ಪರಿಮಾಣದಿಂದ ಸುತ್ತಲೂ ಇರುವ ಇದರ ವಿಶಾಲತೆಯು ಅರವತ್ತನಾಲ್ಕು ಯೋಜನ ಪರಿಮಾಣವಿರುವುದು.

೪೭. ಇಂತಹ ಅತಿಶಯವಾದ ಪರಿಮಾಣದಿಂದ ಕೂಡಿರುವ ಈ ಪರ್ವತವು ಅತಿ ದಿವ್ಯವಾಗಿಯೂ ದಿವ್ಯವಾದ ಓಷಧಿಗಳಿಂದ ಕೂಡಿರುವುದೂ ಆಗಿದೆ.

೪೮. ಈ ಪರ್ವತವು ಸರ್ವ ಭಾಗಗಳಲ್ಲಿಯೂ ಮಂಗಳಕರವಾದ ಸುವರ್ಣ

**ಶೈಲರಾಜೇ ಪ್ರದೃಶ್ಯಂತೇ ಶುಭಾಶ್ಚಾಪ್ಸರಸಾಂ ಗಣಾಃ ।**
**ಸ ತು ಮೇರುಃ ಪರಿವೃತೋ ಭುವನೈರ್ಭೂತಭಾವನೈಃ ॥ ೨೯ ॥**

**ಚತ್ವಾರೋ ಯಸ್ಯ ದೇಶಾ ವೈ ಚತುಃಪಾರ್ಶ್ವೇಷ್ವಧಿಷ್ಠಿತಾಃ ।**
**ಭದ್ರಾಶ್ವಾ ಭರತಾಶ್ಚೈವ ಕೇತುಮಾಲಾಶ್ಚ ಪಶ್ಚಿಮಾಃ ॥ ೩೦ ॥**

**ಉತ್ತರಾಃ ಕುರವಶ್ಚೈವ ಕೃತಪುಣ್ಯಪ್ರತಿಶ್ರಯಾಃ ।**
**ಗಂಧಮಾದನಪಾರ್ಶ್ವೇ ತು ಪರೈಷಾಽಪರಗಂಡಿಕಾ ॥ ೩೧ ॥**

**ಸರ್ವರ್ತುರಮಣೀಯಾ ಚ ನಿತ್ಯಂ ಪ್ರಮುದಿತಾ ಶಿವಾ ।**
**ದ್ವಾತ್ರಿಂಶತ್ತು ಸಹಸ್ರಾಣಿ ಯೋಜನೈಃ ಪೂರ್ವಪಶ್ಚಿಮಾತ್ ॥ ೩೨ ॥**

**ಆಯಾಮತಶ್ಚತುಸ್ತ್ರಿಂಶತ್ಸಹಸ್ರಾಣಿ ಪ್ರಮಾಣತಃ ।**
**ತತ್ರ ತೇ ಶುಭಕರ್ಮಾಣಃ ಕೇತುಮಾಲಾಃ ಪ್ರತಿಷ್ಠಿತಾಃ ॥ ೩೩ ॥**

---

ಮಯ ಭುವನಗಳಿಂದ ಸುತ್ತುವರಿಯಲ್ಪಟ್ಟಿದೆ. ಅಲ್ಲಿ ಗಂಧರ್ವ, ಉರಗ, ರಾಕ್ಷಸ ರಿಂದ ಸಹಿತರಾದ ಅನೇಕ ದೇವತೆಗಳ ಗುಂಪು ವಾಸಮಾಡುತ್ತಿದೆ.

೨೯. ಆ ಪರ್ವತರಾಜನಾದ ಮಹಾ ಮೇರುವಿನಲ್ಲಿ ಮಂಗಳಕರರಾದ ಅಪ್ಸರಃ ಸ್ತ್ರೀಯರು ವಾಸಮಾಡುತ್ತಿರುವುದು ಕಾಣುವುದು. ಇದು ಅನೇಕ ಪ್ರಾಣಿಗಳನ್ನು ರಕ್ಷಿಸುವ ಭುವನಗಳಿಂದ ಆವರಿಸಲ್ಪಟ್ಟಿರುವುದು.

೩೦. ಅಂತಹ ಪರ್ವತದ ನಾಲ್ಕು ಪಾರ್ಶ್ವಗಳಲ್ಲಿ ಭದ್ರಾಶ್ವ, ಭರತ, ಕೇತು ಮಾಲ, ಕುರು ಎಂಬ ದೇಶಗಳು ಕ್ರಮವಾಗಿ ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ದಿಕ್ಕು ಗಳಲ್ಲಿ ಅಧಿಷ್ಠಾನವನ್ನು ಹೊಂದಿದೆ.

೩೧. ಈ ದೇಶಗಳು ಸುಕೃತಿಗಳಿಗೆ ವಾಸಭೂಮಿಯಾಗಿ ಗಂಧಮಾದನವೆಂಬ ಪರ್ವತದ ಪಾರ್ಶ್ವದ ಅಪರಭಾಗದಲ್ಲಿ ಗಂಡಶೈಲಶ್ರೇಣಿಯಲ್ಲಿ ರಾಜಿಸುತ್ತಿವೆ.

೩೨. ಈ ಶ್ರೇಣಿಯು ಸಮಸ್ತ ಋತುಗಳ ಸೌಖ್ಯದಿಂದ ರಮಣೀಯವೂ, ಸಂತೋಷಸಮೃದ್ಧಿಯಿಂದ ಕೂಡಿರುವುದೂ, ಮಂಗಳಕರವೂ ಆಗಿ ಪೂರ್ವದಿಂದ ಪಶ್ಚಿಮದ ವರೆಗೆ ಮೂವತ್ತೆರಡು ಸಹಸ್ರ ಯೋಜನ ಪರಿಮಾಣವನ್ನು ಹೊಂದಿದೆ.

೩೩. ದೀರ್ಘ ಪರಿಮಾಣವು ಮೂವತ್ತನಾಲ್ಕು ಸಹಸ್ರ ಯೋಜನ ಪರಿಮಿತ

**ತತ್ರ ಕಾಲಾ ನರಾಃ ಸರ್ವೇ ಮಹಾಸತ್ತ್ವಾ ಮಹಾಬಲಾಃ ।**
**ಸ್ತ್ರಿಯಶ್ಚೋತ್ಪಲಪತ್ರಾಭಾಃ ಸರ್ವಾಸ್ತಾಃ ಪ್ರಿಯದರ್ಶನಾಃ ॥ ೫೪ ॥**

**ತತ್ರ ದಿವ್ಯೋ ಮಹಾವೃಕ್ಷಃ ಪನಸಃ ಷಡ್ರಸಾಶ್ರಯಃ ।**
**ಈಶ್ವರೋ ಬ್ರಹ್ಮಣಃ ಪುತ್ರೋ ಕಾಮಚಾರೀ ಮನೋಜವಃ ॥ ೫೫ ॥**

**ತಸ್ಯ ಪೀತ್ವಾ ಫಲರಸಂ ಜೀವಂತಿ ಚ ಸಮಾಯುತಮ್ ।**
**ಪಾರ್ಶ್ವೇ ಮಾಲ್ಯವತಶ್ಚಾಪಿ ಪೂರ್ವೇಽಪೂರ್ವಾ ತು ಗಂಡಿಕಾ ॥ ೫೬ ॥**

**ಆಯಾಮಾದಥ ವಿಸ್ತಾರಾದ್ಯಥೈಷಾಽಪರಗಂಡಿಕಾ ।**
**ಭದ್ರಾಶ್ವಾಸ್ತತ್ರ ವಿಜ್ಞೇಯಾ ನಿತ್ಯಂ ಮುದಿತಮಾನಸಾಃ ॥ ೫೭ ॥**

---

ವಾಗಿರುವುದು. ಅಲ್ಲಿ ಶುಭಕರ್ಮಾಚರಣೆಯಿಂದ ಕೂಡಿದ ಪ್ರಜಾವರ್ಗಕ್ಕೆ ಆಧಾರವಾದ ಕೇತುಮಾಲದೇಶಗಳು ಪ್ರತಿಷ್ಠೆಯನ್ನು ಹೊಂದಿವೆ.

೫೪. ಆ ದೇಶಗಳಲ್ಲಿ ನೀಲವರ್ಣ, ಗಂಭೀರವಾದ ಸತ್ತ್ವ ಮತ್ತು ಅತಿಶಯವಾದ ವೀರ್ಯ ಇವುಗಳಿಂದ ಕೂಡಿದ ಪುರುಷರು ವಾಸಮಾಡುವರು. ಹಾಗೂ ಸ್ತ್ರೀಯರು ಕನ್ನೈದಿಲೆಯ ಎಲೆಯಂತೆ ನೀಲವಾದ ಕಾಂತಿಯಿಂದ ಕೂಡಿದ ಗಾತ್ರವುಳ್ಳವರಾಗಿಯೂ ಇಷ್ಟವಾದ ನೋಟದಿಂದ ದರ್ಶನೀಯರಾಗಿಯೂ ಇರುವರು.

೫೫. ಅಲ್ಲಿ ಷಡ್ರಸಗಳಿಗೆ ಆಧಾರವಾದ, ದಿವ್ಯವೂ ದೊಡ್ಡದೂ ಆದ ಒಂದು ಹಲಸಿನ ಗಿಡವು ಇರುವುದು. ಅದು ಬ್ರಹ್ಮನಿಂದ ಜನಿಸಿದುದಾಗಿಯೂ ಪ್ರಜಾನಿಯಾಮಕತ್ವ ಶಕ್ತಿಯುಳ್ಳದ್ದಾಗಿಯೂ ಮತ್ತು ಮನೋವೇಗದಿಂದ ಸ್ವಚ್ಛಂದವಾಗಿ ಸಂಚರಿಸುವುದರಿಂದ ಜಂಗಮ ಪ್ರಾಣಿಯ ಶೀಲವುಳ್ಳದ್ದೂ ಆಗಿದೆ.

೫೬. ಅಲ್ಲಿರುವ ಪ್ರಜೆಗಳು ಆ ಹಲಸಿನ ಹಣ್ಣಿನ ರಸವನ್ನು ಪಾನಮಾಡಿ ಅದರ ಮಹಿಮೆಯಿಂದ ಅನೇಕ ವರ್ಷಗಳ ಕಾಲ ಜೀವಿಸುವರು. ಹೀಗೆ ಮಾಲ್ಯವತ್ಪರ್ವತದ ಪೂರ್ವಪಾರ್ಶ್ವದಲ್ಲಿ ಮತ್ತೊಂದು ಅಪೂರ್ವವಾದ ಶಿಲಾಘನವಾದ ಶ್ರೇಣಿಯು ಇರುವುದು.

೫೭. ಇದರ ದೀರ್ಘ ವಿಸ್ತಾರ ಪರಿಮಾಣಗಳು ಹಿಂದೆ ಹೇಳಿದ ಶ್ರೇಣಿಯ ಪರಿಮಾಣಗಳಿಗೆ ತುಲ್ಯವಾಗಿರುವುವು. ಇಲ್ಲಿ ಯಾವಾಗಲೂ ಸಂತುಷ್ಟಚಿತ್ತರಾದ ಪ್ರಜೆಗಳು ವಾಸಮಾಡುವ ಭದ್ರಾಶ್ವ ಎಂಬ ದೇಶಗಳು ಪ್ರತಿಷ್ಠಿತಗಳಾಗಿವೆ.

ಭದ್ರಶಾಲವನಂ ಚಾತ್ರ ಕಾಲಾಮ್ರಸ್ತು ಮಹಾದ್ರುಮಃ ।
ತತ್ರ ತೇ ಪುರುಷಾಃ ಶ್ವೇತಾ ಮಹೋತ್ಸಾಹಾ ಬಲಾನ್ವಿತಾಃ ॥ ೫೮ ॥

ಸ್ತ್ರಿಯಃ ಕುಮುದವರ್ಣಾಭಾಃ ಸುಂದರ್ಯಃ ಪ್ರಿಯದರ್ಶನಾಃ ।
ಚಂದ್ರಪ್ರಭಾಶ್ಚಂದ್ರವರ್ಣಾಃ ಪೂರ್ಣಚಂದ್ರನಿಭಾನನಾಃ ॥ ೫೯ ॥

ಚಂದ್ರಶೀತಲಗಾತ್ರ್ಯಸ್ತಾಃ ಸ್ತ್ರಿಯ ಉತ್ಪಲಗಂಧಿಕಾಃ ।
ದಶವರ್ಷಸಹಸ್ರಾಣಿ ತೇಷಾಮಾಯುರನಾಮಯಮ್ ॥ ೬೦ ॥

ಕಾಲಾಮ್ರಸ್ಯ ರಸಂ ಪೀತ್ವಾ ಸರ್ವೇ ಚ ಸ್ಥಿರಯೌವನಾಃ ।
ದಕ್ಷಿಣೇನ ತು ಶ್ವೇತಸ್ಯ ನೀಲಸ್ಯೈವೋತ್ತರೇಣ ಚ ॥ ೬೧ ॥

---

೫೮. ಈ ದೇಶದಲ್ಲಿ ಭದ್ರಶಾಲವೆಂಬ ಒಂದು ರಮ್ಯವಾದ ವನವೂ, ಅದರಲ್ಲಿ ಕಾಲಾಮ್ರ (ಕಪ್ಪು ಮಾವು) ಎಂಬ ಒಂದು ಮಹಾವೃಕ್ಷವೂ ಇವೆ. ಅಲ್ಲಿ ಮಹೋತ್ಸಾಹ-ಬಲಗಳಿಂದ ತುಂಬಿದ ಶ್ವೇತವರ್ಣದ ಪುರುಷರು ವಾಸಿಸುವರು.

೫೯. ಹಾಗು ಶ್ವೇತೋತ್ಪಲದಂತೆ ಶ್ವೇತವರ್ಣದಿಂದ ಕೂಡಿದ ಮತ್ತು ಪ್ರಿಯವಾದ ದರ್ಶನವುಳ್ಳ ಸುಂದರ ಸ್ತ್ರೀಯರು ವಾಸಮಾಡುವರು. ಆ ವನಿತೆಯರು ಚಂದ್ರನಂತೆ ಕಾಂತಿ ವರ್ಣಗಳಿಂದ ಕೂಡಿದವರೂ ಪೂರ್ಣಚಂದ್ರನಂತೆ ಒಪ್ಪುವ ಮುಖದಿಂದ ಶೋಭಿತರೂ ಆಗಿರುವರು.

೬೦. ಮತ್ತು ಚಂದ್ರಬಿಂಬದಂತೆ ಶೀತಲವಾದ ದೇಹ, ನೈದಿಲೆಯ ಹೂವಿನ ಸುಗಂಧಗಳಿಂದ ಕೂಡಿದ ಉತ್ತಮ ಸ್ತ್ರೀಯರಾಗಿದ್ದರು. ಈ ಸ್ತ್ರೀಪುರುಷರ ಆಯುಷ್ಯವು ಹತ್ತುಸಾವಿರ ವರ್ಷವೆಂಬ ದೀರ್ಘಕಾಲ ವ್ಯಾಪಿಯೂ ಆರೋಗ್ಯ ಪರಿಪೂರ್ಣವೂ ಆಗಿತ್ತು.

೬೧. ಆ ಪ್ರಜೆಗಳು ಅಲ್ಲಿದ್ದ ಕಾಲಾಮ್ರವೃಕ್ಷದ ಫಲರಸವನ್ನು ಪಾನಮಾಡಿರುವುದರಿಂದ ಸ್ಥಿರವಾದ ತಾರುಣ್ಯ, ಆರೋಗ್ಯ, ದೀರ್ಘಾಯುಷ್ಯಗಳನ್ನು ಹೊಂದಿದ್ದರು. ಶ್ವೇತಪರ್ವತದ ದಕ್ಷಿಣಭಾಗ ನೀಲಪರ್ವತದ ಉತ್ತರಭಾಗಗಳಲ್ಲಿ ರಮಣಕವೆಂಬ ವರ್ಷವಿರುವುದು.

ವರ್ಷಂ ರಮಣಕಂ ನಾಮ ಜಾಯಂತೇ ತತ್ರ ಮಾನವಾಃ ।
ರತಿಪ್ರಧಾನಾ ವಿಮಲಾ ಜರಾದೌರ್ಗಂಧ್ಯವರ್ಜಿತಾಃ ॥ ೬೨ ॥

ಶುಕ್ಲಾಭಿಜನಸಂಪನ್ನಾಃ ಸರ್ವೇ ಚ ಪ್ರಿಯದರ್ಶನಾಃ ।
ತತ್ರಾಪಿ ಸುಮಹಾನ್ ವೃಕ್ಷೋ ನ್ಯಗ್ರೋಧೋ ರೋಹಿತೋ ಮಹಾನ್ ॥ ೬೩ ॥

ತಸ್ಯಾಪಿ ತೇ ಫಲರಸಂ ಪಿಬಂತೋ ವರ್ತಯಂತಿ ವೈ ।
ದಶವರ್ಷಸಹಸ್ರಾಣಿ ಶತಾನಿ ದಶ ಪಂಚ ಚ ॥ ೬೪ ॥

ಜೀವಂತಿ ತೇ ಮಹಾಭಾಗಾಃ ಸದಾ ಹೃಷ್ಟಾ ನರೋತ್ತಮಾಃ ।
ದಕ್ಷಿಣೇ ವೈ ಶೃಂಗವತಃ ಶ್ವೇತಸ್ಯಾಪ್ಯುತ್ತರೇಣ ಚ ॥ ೬೫ ॥

ವರ್ಷಂ ಹೈರಣ್ವತಂ ನಾಮ ಯತ್ರ ಹೈರಣ್ವತೀ ನದೀ ।
ಮಹಾಬಲಾಃ ಸುತೇಜಸ್ಕಾ ಜಾಯಂತೇ ತತ್ರ ಮಾನವಾಃ ॥ ೬೬ ॥

---

೬೨-೬೩. ಆ ವರ್ಷದಲ್ಲಿ ವಾಸಮಾಡುವ ಮಾನವರು ಸರ್ವರೂ ರತಿಸೌಖ್ಯವನ್ನು ಅತಿಶಯವಾಗಿ ಅನುಭವಿಸುವವರೂ ನಿರ್ಮಲರೂ ಮುಪ್ಪೆಂಬ ದುರ್ವಾಸನಾ ರಹಿತರೂ, ದೀಪ್ತಿಯಿಂದ ಕೂಡಿದ ಉತ್ತಮವಂಶ ಸಂಭೂತರೂ ಮತ್ತು ಪ್ರಿಯವಾದ ದರ್ಶನವುಳ್ಳವರೂ ಆಗಿದ್ದರು. ಅಲ್ಲಿ ಕೆಂಪುವರ್ಣದಿಂದ ಕೂಡಿದ ಅತಿ ದೀರ್ಘ-ವಿಸ್ತಾರಗಳಿಂದ ಕೂಡಿದ ಒಂದು ಆಲದ ವೃಕ್ಷವಿರುವುದು.

೬೪. ಆ ಆಲದ ಗಿಡದ ಫಲರಸವನ್ನು ಸೇವಿಸಿ ಅದರ ಮಹಿಮೆಯಿಂದ ಪ್ರಜೆಗಳು ಹದಿನೈದು ಸಹಸ್ರ ವರ್ಷಗಳಕಾಲ ದೀರ್ಘವಾದ ಆಯುಷ್ಯವನ್ನು ಹೊಂದಿ ಜೀವಿಸುವರು.

೬೫. ಮತ್ತು ಅವರು ಮಹಾ ಭಾಗ್ಯವಂತರೂ ನಿತ್ಯತೃಪ್ತರೂ ಆದ ನರೋತ್ತಮರೆಂದೆನಿಸಿದವರಾಗಿರುವರು. ಶೃಂಗವತ್ಪರ್ವತ ಶ್ವೇತಪರ್ವತಗಳ ದಕ್ಷಿಣೋತ್ತರ ಭಾಗಗಳಲ್ಲಿ ಹೈರಣ್ವತವೆಂಬ ವರ್ಷವಿರುವುದು.

೬. ಆ ವರ್ಷದಲ್ಲ ಹೈರಣ್ವತಿಯೆಂಬ ಒಂದು ನದಿಯು ಹರಿಯುವುದು. ಅಲ್ಲಿರುವ ಮಾನವರು ಮಹಾ ಬಲಿಷ್ಠರೂ, ಉತ್ತಮ ತೇಜಸ್ವಿಗಳೂ, ಯಕ್ಷರೂ, ವೀರಪುರುಷರೂ, ಉದಾತ್ತವಾದ ಸತ್ತ್ವಗುಣವುಳ್ಳವರೂ ಧನಿಕರೂ ಮತ್ತು ಪ್ರಿಯ ದರ್ಶನದಿಂದ ಕೂಡಿದವರೂ ಆಗಿರುವರು.

ಯುಕ್ತಾ ವೀರಾ ಮಹಾಸತ್ತ್ವಾ ಧನಿನಃ ಪ್ರಿಯದರ್ಶನಾಃ ।
ಏಕಾದಶ ಸಹಸ್ರಾಣಿ ವರ್ಷಾಣಾಂ ತೇ ಸುಹೌಜಸಃ ॥ ೬೭ ॥

ಆಯುಃ ಪ್ರಮಾಣಂ ಜೀವಂತಿ ಶತಾನಿ ದಶ ಪಂಚ ಚ ।
ಯಸ್ಮಿನ್ ವರ್ಷೇ ಮಹಾವೃಕ್ಷೋ ಲಕುಚಃ ಷಡ್ರಸಾಶ್ರಯಃ ॥ ೬೮ ॥

ತಸ್ಯ ಪೀತ್ವಾ ಫಲರಸಂ ತೇ ಜೀವಂತಿ ನಿರಾಮಯಾಃ ।
ತ್ರೀಣಿ ಶೃಂಗವತಃ ಶೃಂಗಾಣ್ಯುಚ್ಛ್ರಿತಾನಿ ಮಹಾಂತಿ ಚ ॥ ೬೯ ॥

ಏಕಂ ಮಣಿಮಯಂ ತೇಷಾಮೇಕಂ ಚೈವ ಹಿರಣ್ಮಯಮ್ ।
ಸರ್ವರತ್ನಮಯಂ ಚೈಕಂ ಭವನೈರುಪಶೋಭಿತಮ್ ॥ ೭೦ ॥

ಉತ್ತರೇ ವೈ ಶೃಂಗವತಃ ಸಮುದ್ರಸ್ಯ ಚ ದಕ್ಷಿಣೇ ।
ಕುರವಸ್ತತ್ರ ತದ್ವರ್ಷಂ ಪುಣ್ಯಂ ಸಿದ್ಧನಿಷೇವಿತಮ್ ॥ ೭೧ ॥

---

೬೭. ಆ ಮಹಾ ವಿಕ್ರಮದಿಂದ ಕೂಡಿದ ಮಾನವರು ಹನ್ನೆರಡುಸಾವಿರದ ಇಪ್ಪತ್ತೈದು ಸಂವತ್ಸರಗಳಷ್ಟು ದೀರ್ಘಾಯುಷ್ಯದಿಂದ ಜೀವಿಸುವರು.

೬೮. ಆ ವರ್ಷದಲ್ಲಿ ಮಧುರಾದಿ ಷಡ್ರಸಪೂರ್ಣವಾದ ಅತ್ಯುನ್ನತವಾದ ಒಂದು ನಿಂಬೆಯ ಗಿಡವು ಇರುವುದು.

೬೯. ಅಲ್ಲಿರುವ ಪ್ರಜೆಗಳು ಆ ವೃಕ್ಷದ ಫಲರಸವನ್ನು ಸೇವಿಸುವರು ಆದುದ ರಿಂದ ಅವರ ಆರೋಗ್ಯ-ದೀರ್ಘಾಯುಷ್ಯ ಮುಂತಾದ ಗುಣಗಳು ಈ ಫಲರಸದ ವೀರ್ಯದಿಂದ ಜನಿಸಿವೆ. ಶೃಂಗವತ್ ಎಂಬ ಪರ್ವತದಲ್ಲಿ ಅತ್ಯುನ್ನತವೂ ವಿಶಾಲವೂ ಆದ ಮೂರು ಶಿಖರಗಳು ಇವೆ.

೭೦. ಆ ಶಿಖರಗಳಲ್ಲಿ ಒಂದು ಮಣಿಮಯವೂ, ಮತ್ತೊಂದು ಸುವರ್ಣ ಮಯವೂ ಮೂರನೆಯದು ಸರ್ವರತ್ನನಿರ್ಮಿತವೂ ಆಗಿ ನಾನಾವಿಧವಾದ ವಾಸಗೃಹ ಗಳಿಂದ ಅಲಂಕರಿಸಲ್ಪಟ್ಟಿವೆ.

೭೧. ಶೃಂಗವತ್ ಪರ್ವತದ ಉತ್ತರಭಾಗದಲ್ಲಿಯೂ ಸಮುದ್ರದ ದಕ್ಷಿಣಭಾಗ ದಲ್ಲಿಯೂ ಕುರುವರ್ಷವೆಂಬ ಸಿದ್ಧರಿಂದ ಸೇವಿಸಲ್ಪಟ್ಟ ಒಂದು ಪವಿತ್ರವಾದ ವರ್ಷ ವಿರುವುದು.

ತತ್ರ ವೃಕ್ಷಾ ಮಧುಫಲಾ ನಿತ್ಯಪುಷ್ಪಫಲೋಪಗಾಃ ।
ವಸ್ತ್ರಾಣಿ ಚ ಪ್ರಸೂಯಂತೇ ಫಲೇಷ್ವಾಭರಣಾನಿ ಚ ॥ ೭೨ ॥

ಸರ್ವಕಾಮಪ್ರದಾಸ್ತತ್ರ ಕೇಚಿದ್ವೃಕ್ಷಾ ಮನೋರಮಾಃ ।
ಗಂಧವರ್ಣರಸೋಪೇತಂ ಪ್ರಕ್ಷರಂತಿ ಮಧೂತ್ತಮಮ್ ॥ ೭೩ ॥

ಅಪರೇ ಕ್ಷೀರಿಣೋ ನಾಮ ವೃಕ್ಷಾಸ್ತತ್ರ ಮನೋರಮಾಃ ।
ಯೇ ಕ್ಷರಂತಿ ಸದಾ ಕ್ಷೀರಂ ಷಡ್ರಸಂ ಹ್ಯಮೃತೋಪಮಮ್ ॥ ೭೪ ॥

ಸರ್ವಾ ಮಣಿಮಯೀ ಭೂಮಿಃ ಸೂಕ್ಷ್ಮಕಾಂಚನವಾಲುಕಾ ।
ಸರ್ವರ್ತುಸುಖಸಂಪನ್ನಾ ನಿಷ್ಪಂಕಾ ನೀರಜಾ ಶುಭಾ ॥ ೭೫ ॥

ದೇವಲೋಕಚ್ಯುತಾಸ್ತತ್ರ ಜಾಯಂತೇ ಮಾನವಾಃ ಶುಭಾಃ ।
ಶುಕ್ಲಾಭಿಜನಸಂಪನ್ನಾಃ ಸರ್ವೇ ಚ ಸ್ಥಿರಯೌವನಾಃ ॥ ೭೬ ॥

---

೭೨. ಅಲ್ಲಿ ಮಧುರವಾದ ಫಲಗಳಿಂದ ಸದಾಕಾಲದಲ್ಲಿಯೂ ಇರುವ ಪುಷ್ಪ ಮತ್ತು ಫಲಗಳಿಂದಲೂ ಕೂಡಿದ ಮಹಾವೃಕ್ಷಗಳು ಅನೇಕ ಫಲಗಳ ಜೊತೆಗೆ ವಿವಿಧ ವಸ್ತ್ರ-ಅಲಂಕಾರಗಳನ್ನು ಪ್ರಸವಿಸುತ್ತವೆ.

೭೩. ಇನ್ನು ಕೆಲವು ರಮಣೀಯ ವೃಕ್ಷಗಳು ಸಕಲ ಇಷ್ಟಾರ್ಥಗಳನ್ನು ಕೊಡುತ್ತ ಸುವಾಸನೆ-ಸುಂದರವಾದ ವರ್ಣ, ರುಚಿಸುವ ಉತ್ತಮ ರಸಗಳಿಂದ ಕೂಡಿದ ಉತ್ತಮವಾದ ಮಧುವನ್ನು ಸುರಿಸುತ್ತಲಿವೆ.

೭೪. ಮತ್ತೆ ಕೆಲವು ಪ್ರಧಾನವಾಗಿ ಹಾಲನ್ನು ಸುರಿಸುವುದರಿಂದ ಕ್ಷೀರಿವೃಕ್ಷ ವೆಂಬ ಪ್ರಸಿದ್ಧವಾದ ಸುಂದರ ವೃಕ್ಷಗಳು ಅಮೃತದಂತಿರುವ ಷಡ್ರಸೋಪೇತವಾದ ಕ್ಷೀರವನ್ನು ಕೊಡುತ್ತಿವೆ.

೭೫. ಅಲ್ಲಿರುವ ಭೂಮಿಯು ಮಣಿಮಯವಾಗಿಯೂ ಚಿನ್ನದ ಸೂಕ್ಷ್ಮ ರೇಣುಗಳೆಂಬ ಮಳಲಿನಿಂದ ತುಂಬಿರುವುದಾಗಿಯೂ ಜುಗುಪ್ಸಾಕರವಾದ ಪಂಕ (ಕೆಸರು) ಧೂಳಿಗಳಿಂದ ವರ್ಜಿತವಾಗಿಯೂ ಮತ್ತು ಯಾವಾಗಲೂ ಆರು ಋತು ಗಳಿಂದಾಗುವ ಸೌಖ್ಯವನ್ನು ಕೊಡುತ್ತಲೂ ಇರುವುದು.

೭೬. ಅಲ್ಲಿರುವ ಮಾನವರು ಸುಕೃತವನ್ನು ಮಾಡಿ ದೇವಲೋಕ ಸೌಖ್ಯವನ್ನು ಅನುಭವಿಸಿ ಅಲ್ಲಿಂದ ಚ್ಯುತರಾದ ಮಹನೀಯರು. ಅವರೆಲ್ಲರೂ ಪವಿತ್ರವಂಶದಲ್ಲಿ

ಮಿಥುನಾನಿ ಪ್ರಸೂಯಂತೇ ಸ್ತ್ರಿಯಶ್ಚಾಪ್ಸರಸಃ ಸಮಾಃ ।
ತೇಷಾಂ ತೇ ಕ್ಷೀರಿಣಾಂ ಕ್ಷೀರಂ ಪಿಬಂತಿ ಹ್ಯಮೃತೋಪಮಮ್॥ ೭೭ ॥

ಮಿಥುನಂ ಜಾಯತೇ ಸದ್ಯಃ ಸಮಂ ಚೈವ ವಿವರ್ಧತೇ ।
ಸಮಂ ಶೀಲಂ ಚ ರೂಪಂ ಚ ಪ್ರಿಯತಾ ಚೈವ ತತ್ಸಮಾ ॥ ೭೮ ॥

ಅನ್ಯೋನ್ಯಮನುರಕ್ತಾಶ್ಚ ಚಕ್ರವಾಕಸಧರ್ಮಿಣಃ ।
ಅನಾಮಯಾ ಹ್ಯಶೋಕಾಶ್ಚ ನಿತ್ಯಂ ಸುಖನಿಷೇವಿಣಃ ॥ ೭೯ ॥

ತ್ರಯೋದಶಸಹಸ್ರಾಣಿ ಶತಾನಿ ದಶ ಪಂಚ ಚ ।
ಜೀವಂತಿ ತೇ ಮಹಾವೀರ್ಯಾ ನ ಚಾನ್ಯಸ್ತ್ರೀನಿಷೇವಿಣಃ ॥ ೮೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಪಂಚದಶೋಽಧ್ಯಾಯಃ

---

ಹುಟ್ಟಿ ಶಾಶ್ವತವಾದ ತಾರುಣ್ಯ ವಯಸ್ಸಿನಿಂದ ಕೂಡಿದವರಾಗಿ ಈ ವರ್ಷದಲ್ಲಿ ವಾಸ ಮಾಡುವರು.

೭೭. ಅಪ್ಸರಃ ಸ್ತ್ರೀಯರಿಗೆ ಸಮಾನರಾದ ಇಲ್ಲಿರುವ ಸ್ತ್ರೀಯರು ಸ್ತ್ರೀ ಪುರುಷ ರೆಂಬ ಮಿಥುನವನ್ನು ಹೆರುವರು. ಅವರು ಹಿಂದೆ ಹೇಳಿದ ಆ ಕ್ಷೀರಿವೃಕ್ಷಗಳಿಂದ ಲಭಿಸಿದ ಅಮೃತ ಸಮಾನವಾದ ಕ್ಷೀರವನ್ನು ಪಾನಮಾಡುವರು.

೭೮. ಹಾಗೆ ಕ್ಷೀರವನ್ನು ಪಾನಮಾಡಿದ ಕೂಡಲೆ ಸ್ತ್ರೀ ಪುರುಷ ಮಿಥುನ ರೂಪವಾದ ಪ್ರಜೆಯು ಹುಟ್ಟಿ ಒಂದೇ ವಿಧವಾಗಿ ವೃದ್ಧಿಹೊಂದುವುದು. ಈ ಎಲ್ಲ ಪ್ರಜೆಗಳ ಶೀಲ, ರೂಪ, ಮತ್ತು ಪ್ರಿಯತಾ ಮುಂತಾದ ಗುಣಗಳು ಸಮತ್ವದಿಂದ ಇವೆ.

೭೯. ಸ್ತ್ರೀ ಪುರುಷರು ಚಕ್ರವಾಕ ಪಕ್ಷಿಗಳಂತೆ ಅನ್ಯೋನ್ಯ ಪ್ರೇಮಿಗಳಾಗಿಯೂ ಶಾರೀರಿಕ ರೋಗ ಮತ್ತು ಮಾನಸ ವ್ಯಥೆಗಳಿಂದ ರಹಿತರಾಗಿಯೂ ಸುಖಭೋಗವನ್ನು ಸರ್ವದಾ ಅನುಭವಿಸುವವರಾಗಿಯೂ ಇರುವರು.

೮೦. ಮತ್ತು ಈ ಪ್ರಜೆಗಳು ಪರಾಂಗನಾ ಸಂಗವೆಂಬ ನೀಚ ಕರ್ಮವಿಲ್ಲದೆ ಪರಮ ಪವಿತ್ರರಾಗಿ ಮತ್ತು ಮಹಾವೀರ್ಯಸಂಪನ್ನರಾಗಿ ಹದಿಮೂರು ಸಾವಿರದ ಒಂದುನೂರ ಐದುವರ್ಷಗಳ ದೀರ್ಘಾಯುಷ್ಯವನ್ನು ಹೊಂದಿ ಜೀವಿಸುವರು.

ಬ್ರಹ್ಮಾಂಡಪುರಾಣದಲ್ಲಿ ಹದಿನೈದನೆಯ ಅಧ್ಯಾಯವು ಸಮಾಪ್ತವು.

## ಷೋಡಶೋಽಧ್ಯಾಯಃ

**ಸೂತ ಉವಾಚ—**

**ಏವಮೇವ ನಿಸರ್ಗೋ ವೈ ವರ್ಷಾಣಾಂ ಭಾರತೇ ಶುಭೇ ।**
**ದೃಷ್ಟಃ ಪರಮತತ್ತ್ವಜ್ಞೈರ್ಭೂಯಃ ಕಿಂ ವರ್ಣಯಾಮಿ ವಃ ॥ ೧ ॥**

**ಋಷಿರುವಾಚ—**

**ಯದಿದಂ ಭಾರತಂ ವರ್ಷಂ ಯಸ್ಮಿನ್ ಸ್ವಾಯಂಭುವಾದಯಃ ।**
**ಚತುರ್ದಶೈತೇ ಮನವಃ ಪ್ರಜಾಸರ್ಗೇಽಭವನ್ಪುನಃ ॥ ೨ ॥**

**ಏತದ್ವೇದಿತುಮಿಚ್ಛಾಮಸ್ತನ್ನೋ ನಿಗದ ಸತ್ತಮ ।**
**ಏತಚ್ಛ್ರುತ್ವಾ ವಚಸ್ತೇಷಾಮಬ್ರವೀದ್ರೋಮಹರ್ಷಣಃ ॥ ೩ ॥**

**ಅತ್ರ ವೋ ವರ್ಣಯಿಷ್ಯಾಮಿ ವರ್ಷೇಽಸ್ಮಿನ್ಭಾರತೇ ಪ್ರಜಾಃ ।**
**ಇದಂ ತು ಮಧ್ಯಮಂ ಚಿತ್ರಂ ಶುಭಾಶುಭಫಲೋದಯಮ್ ॥ ೪ ॥**

---

ಸೂತಮುನಿಯು ಹೇಳಿದನು.—

೧. ಭೂಗೋಳ ತತ್ತ್ವವನ್ನು ತಿಳಿದವರು ಮಂಗಳಕರವಾದ ಈ ಭಾರತ ಭೂಮಿಯಲ್ಲಿ ವರ್ಷಗಳ ಸೃಷ್ಟಿಯನ್ನು ಹಿಂದೆ ಹೇಳಿದ ಕ್ರಮದಂತೆ ನಿರೂಪಿಸಿರುತ್ತಾರೆ. ಮತ್ತೆ ಇನ್ನಾವ ವಿಷಯವನ್ನು ಕೇಳಬೇಕೆಂದಿರುವಿರಿ ?

ಋಷಿಯು ಪ್ರಶ್ನೆ ಮಾಡಿದನು.—

೨. ಯಾವ ಭರತಭೂಮಿಯಲ್ಲಿ ಸ್ವಾಯಂಭುವ ಮೊದಲಾದ ಹದಿನಾಲ್ವರು ಮನುಗಳು ಪ್ರಜಾಸೃಷ್ಟಿಯಲ್ಲಿ ನಿರತರಾಗಿದ್ದರೋ ಆ ಭರತಭೂಮಿಯ ವಿಷಯವನ್ನು ತಿಳಿಯಲಪೇಕ್ಷಿಸುತ್ತೇವೆ.

೩. ಮುನಿವರ್ಯನೇ ! ಅದನ್ನು ಹೇಳಬೇಕು. ಎಂಬ ಅವರ ಪ್ರಶ್ನೆಯನ್ನು ಕೇಳಿ ಸೂತಮುನಿಯು, ಹೀಗೆ ಹೇಳಿದನು,

೪-೫. ಈ ಭೂಮಿಯಲ್ಲಿರುವ ಪ್ರಜೆಗಳನ್ನು ನಿಮಗೆ ವರ್ಣಿಸುವೆನು.

ಉತ್ತರಂ ಯತ್ಸಮುದ್ರಸ್ಯ ಹಿಮವದ್ದಕ್ಷಿಣಂ ಚ ಯತ್ ।
ವರ್ಷಂ ತದ್ಭಾರತಂ ನಾಮ ಯತ್ರೇಯಂ ಭಾರತೀ ಪ್ರಜಾ ॥ ೫ ॥

ಭರಣಾಚ್ಚ ಪ್ರಜಾನಾಂ ವೈ ಮನುರ್ಭರತ ಉಚ್ಯತೇ ।
ನಿರುಕ್ತವಚನಾಚ್ಚೈವಂ ವರ್ಷಂ ತದ್ಭಾರತಂ ಸ್ಮೃತಮ್ ॥ ೬ ॥

ಇತಸ್ಸ್ವರ್ಗಶ್ಚ ಮೋಕ್ಷಶ್ಚ ಮಧ್ಯಶ್ಚಾನ್ತಶ್ಚ ಗಮ್ಯತೇ ।
ನ ಖಲ್ವನ್ಯತ್ರ ಮರ್ತ್ಯಾನಾಂ ಭೂಮೌ ಕರ್ಮ ವಿಧೀಯತೇ ॥ ೭ ॥

ಭಾರತಸ್ಯಾಸ್ಯ ವರ್ಷಸ್ಯ ನವ ಭೇದಾನ್ನಿಬೋಧತ ।
ಸಮುದ್ರಾಂತರಿತಾ ಜ್ಞೇಯಾಸ್ತೇ ತ್ವಗಮ್ಯಾಃ ಪರಸ್ಪರಮ್ ॥ ೮ ॥

ಇಂದ್ರದ್ವೀಪಃ ಕಶೇರೂಮಾಂಸ್ತಾಮ್ರವರ್ಣೋ ಗಭಸ್ತಿಮಾನ್ ।
ನಾಗದ್ವೀಪಸ್ತಥಾ ಸೌಮ್ಯೋ ಗಾಂಧರ್ವಸ್ತ್ವಥ ವಾರುಣಃ ॥ ೯ ॥

---

ಸಮುದ್ರಕ್ಕೆ ಉತ್ತರದಲ್ಲಿಯೂ ಹಿಮವತ್ಪರ್ವತಕ್ಕೆ ದಕ್ಷಿಣದಲ್ಲಿಯೂ ಇರುವ ಈ ಮಧ್ಯಮ ಭೂಮಿಯು ಪ್ರಾಣಿಗಳ ಶುಭಾಶುಭ ಫಲಗಳನ್ನು ಕೊಡುವುದಾಗಿ ಭಾರತ ವರ್ಷವೆಂದು ಪ್ರಖ್ಯಾತಿಗೊಂಡಿದೆ. ಇಲ್ಲಿ ವಾಸಿಸುವ ಪ್ರಜೆಗಳೇ ಭಾರತೀಯರು.

೬. ಈ ದೇಶದ ಆದಿಪುರುಷನಾದ ಮನುವು ಪ್ರಜೆಗಳನ್ನು 'ಭರಣ' (ರಕ್ಷಣ) ಮಾಡಿದ್ದರಿಂದ ಅವನಿಗೆ ಭರತನೆಂಬ ಹೆಸರೂ ಈ ದೇಶಕ್ಕೆ ಭಾರತ ದೇಶ ವೆಂಬ ಹೆಸರೂ ಬಂದಿದೆ. ಭರತಶಬ್ದದ ಈ ಅರ್ಥವನ್ನು ನಿರುಕ್ತ ವಚನವೂ ಸಮ ರ್ಥಿಸುತ್ತದೆ.

೭. ಪ್ರಜೆಗಳು ಈ ದೇಶದಲ್ಲಿ ಮಾಡಿದ ಕರ್ಮದಿಂದಲೇ ಸ್ವರ್ಗ, ಮೋಕ್ಷ, ಸದ್ಗತಿ, ಉನ್ನತ ಪದವಿಗಳನ್ನು ಹೊಂದುವರು. ಪ್ರಪಂಚದಲ್ಲಿ ಇದನ್ನು ಬಿಟ್ಟರೆ ಉತ್ತಮ ಫಲದಾಯಕವಾದ ಕರ್ಮಾನುಷ್ಠಾನಮಾಡಲು ಬೇರೆ ಯಾವ ಭೂಮಿಯೂ ಇಲ್ಲ.

೮. ಸಮುದ್ರಗಳಿಂದ ಪ್ರತ್ಯೇಕಿಸಲ್ಪಟ್ಟು ಒಂದರಿಂದ ಮತ್ತೊಂದಕ್ಕೆ ಹೋಗಲ ಸಾಧ್ಯವಾದ ಒಂಭತ್ತು ಭಾಗಗಳು ಈ ಭಾರತ ದೇಶದಲ್ಲಿವೆ :—

೯. ಇಂದ್ರದ್ವೀಪ, ಕಶೇರೂಮಾನ್, ತಾಮ್ರವರ್ಣ, ಗಭಸ್ತಿಮಾನ್, ನಾಗ ದ್ವೀಪ, ಸೌಮ್ಯ, ಗಾಂಧರ್ವ, ವಾರುಣ—ಇವು ಎಂಟು ಭಾಗಗಳು.

ಅಯಂ ತು ನವಮಸ್ತೇಷಾಂ ದ್ವೀಪಸ್ಸಾಗರಸಂವೃತಃ ।
ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಾತ್॥
॥ ೧೦ ॥

ಆಯತೋ ಹ್ಯಾಕುಮಾರ್ಯಾ ವೈ ಚಾಗಂಗಾಪ್ರಭವಾಚ್ಚ ವೈ ।
ತಿರ್ಯಗುತ್ತರವಿಸ್ತೀರ್ಣಃ ಸಹಸ್ರಾಣಿ ನವೈವ ತು ॥ ೧೧ ॥

ದ್ವೀಪೋ ಹ್ಯುಪನಿವಿಷ್ಟೋಽಯಂ ಮ್ಲೇಚ್ಛೈರನ್ತೇಷು ಸರ್ವಶಃ ।
ಪೂರ್ವೇ ಕಿರಾತಾ ಹ್ಯಸ್ಯಾನ್ತೇ ಪಶ್ಚಿಮೇ ಯವನಾಃ ಸ್ಮೃತಾಃ ॥ ೧೨ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಭಾಗಶಃ ।
ಇಜ್ಯಾಯುಧವಣಿಜ್ಯಾಭಿರ್ವರ್ತಯನ್ತೋ ವ್ಯವಸ್ಥಿತಾಃ ॥ ೧೩ ॥

ತೇಷಾಂ ಸಂವ್ಯವಹಾರೋಽತ್ರ ವರ್ತತೇ ವೈ ಪರಸ್ಪರಮ್ ।
ಧರ್ಮಾರ್ಥಕಾಮಸಂಯುಕ್ತೋ ವರ್ಣಾನಾಂ ತು ಸ್ವಕರ್ಮಸು ॥೧೪॥

ಸಂಕಲ್ಪಃ ಪಂಚಮಾನಾಂ ಚ ಹ್ಯಾಶ್ರಮಾಣಾಂ ಯಥಾವಿಧಿ ।
ಇಹ ಸ್ವರ್ಗಾಪವರ್ಗಾರ್ಥಂ ಪ್ರವೃತ್ತಿರ್ಯೇಷು ಮಾನುಷೀ ॥ ೧೫ ॥

---

೧೦-೧೧. ನಾವು ವಾಸಿಸುತ್ತಿರುವ ಸಮುದ್ರಾವೃತವಾದ ಈ ಭೂಮಿಯೇ ಒಂಭತ್ತನೆಯ ಭಾಗವು. ಈ ದ್ವೀಪವು ದಕ್ಷಿಣ ಸಮುದ್ರದಿಂದ ಉತ್ತರಕ್ಕೆ ಸಹಸ್ರ ಯೋಜನವಿಸ್ತಾರವಾಗಿಯೂ ಕನ್ಯಾಕುಮಾರಿಯಿಂದ ಗಂಗೆಯು ಹುಟ್ಟುವ ಹಿಮವತ್ಪರ್ವತದವರೆಗೆ ಒಂಭತ್ತು ಸಾವಿರ ಯೋಜನಗಳಷ್ಟು ವಿಸ್ತಾರವಾಗಿಯೂ ಇದೆ.

೧೨. ಈ ದ್ವೀಪವು ಎಲ್ಲ ಕಡೆಯ ಗಡಿನಾಡುಗಳಲ್ಲ ಮ್ಲೇಚ್ಛರಿಂದಲೂ, ಪೂರ್ವ ದಿಕ್ಕಿನ ಕೊನೆಯಲ್ಲಿ ಕಿರಾತರಿಂದಲೂ ಪಶ್ಚಿಮದಲ್ಲಿ ಯವನರಿಂದಲೂ ಆಶ್ರಯಿಸಲ್ಪಟ್ಟಿದೆ.

೧೩. ಇಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಕ್ರಮವಾಗಿ ಯಜ್ಞ, ಧನುರ್ವಿದ್ಯೆ, ವ್ಯಾಪಾರ, ಸೇವೆಯೆಂಬ ಕರ್ಮಗಳನ್ನು ಆಚರಿಸುತ್ತಾರೆ.

೧೪-೧೫. ಈ ನಾಲ್ಕು ವರ್ಣಗಳ ಜನರೂ ಧರ್ಮ, ಅರ್ಥ, ಕಾಮ, ಎಂಬ ಪುರುಷಾರ್ಥಗಳನ್ನು ದೊರಕಿಸುವ ಸ್ವಕರ್ಮಗಳನ್ನು ಆಚರಿಸುತ್ತ ಐದನೆಯದಾದ

ಯಸ್ತ್ವಯಂ ನವಮೋ ದ್ವೀಪಸ್ತಿರ್ಯಗಾಯಾಮ ಉಚ್ಯತೇ ।
ಕೃತ್ಸ್ನಂ ಜಯತಿ ಯೋ ಹ್ಯೇನಂ ಸಮ್ರಾಡಿತ್ಯಭಿಧೀಯತೇ ॥ ೧೬ ॥

ಅಯಂ ಲೋಕಸ್ತು ವೈ ಸಂರಾಡಂತರಿಕ್ಷಂ ವಿರಾಟ್ಸ್ಮೃತಮ್ ।
ಸ್ವರಾಡಸೌ ಸ್ಮೃತೋ ಲೋಕಃ ಪುನರ್ವಕ್ಷ್ಯಾಮಿ ವಿಸ್ತರಾತ್ ॥ ೧೭ ॥

ಸಪ್ತೈವಾಸ್ಮಿನ್ಸುಪರ್ವಾಣೋ ವಿಶ್ರುತಾಃ ಕುಲಪರ್ವತಾಃ ।
ಮಹೇನ್ದ್ರೋ ಮಲಯಸ್ಸಹ್ಯಃ ಶುಕ್ತಿಮಾನೃಕ್ಷಪರ್ವತಃ ॥ ೧೮ ॥

ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ।
ತೇಷಾಂ ಸಹಸ್ರಶಶ್ಚಾನ್ಯೇ ಪರ್ವತಾಸ್ತು ಸಮೀಪಗಾಃ ॥ ೧೯ ॥

---

ಆಶ್ರಮಧರ್ಮವನ್ನೂ ಸಹ ಯಥಾವಿಧಿಯಾಗಿ ನಡೆಸಿಕೊಂಡು ಎಲ್ಲ ಪ್ರಜೆಗಳ ಧ್ಯೇಯವಾದ ಸ್ವರ್ಗಮೋಕ್ಷಗಳನ್ನು ಸಾಧಿಸುತ್ತಾರೆ.

೧೬. ಬಹು ವಿಸ್ತಾರವಾದ ಈ ಒಂಭತ್ತನೆಯ ದ್ವೀಪವನ್ನು ಸಂಪೂರ್ಣವಾಗಿ ಗೆದ್ದವನು "ಸಮ್ರಾಟ್" (=ಚಕ್ರವರ್ತಿ) ಎನಿಸಿಕೊಳ್ಳುವನು.

೧೭. ಈ ಲೋಕಕ್ಕೆ "ಸಂರಾಟ್" ಎಂದೂ, ಅಂತರಿಕ್ಷಲೋಕಕ್ಕೆ "ವಿರಾಟ್" ಎಂದೂ, ಪರಲೋಕಕ್ಕೆ "ಸ್ವರಾಟ್" ಎಂದೂ ಹೆಸರುಂಟು. ಇದರ ವಿವರಗಳನ್ನು ಮುಂದೆ ಹೇಳುವೆನು.

೧೮. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ ಎಂಬ ಏಳು ಕುಲಪರ್ವತಗಳು ಈ ದ್ವೀಪದಲ್ಲಿ ಗೆಣ್ಣುಗಳಂತೆ ಪ್ರಸಿದ್ಧವಾಗಿವೆ.

೧೯. ಈ ಕುಲಪರ್ವತಗಳ ಸುತ್ತಮುತ್ತಲೂ ಸಾರವತ್ತಾಗಿಯೂ, ವಿಸ್ತಾರವಾಗಿಯೂ, ವಿಚಿತ್ರವಾದ ತಪ್ಪಲುಗಳುಳ್ಳದಾಗಿಯೂ ಇರುವ ಸಾವಿರಾರು ಅಪ್ರಸಿದ್ಧವಾದ ಬೆಟ್ಟಗಳು ಶೋಭಿಸುತ್ತಿವೆ.

ಅವಿಜ್ಞಾತಾಃ ಸಾರವನ್ತೋ ವಿಪುಲಾಶ್ಚಿತ್ರಸಾನವಃ ।
ಮಂದರಃ ಪರ್ವತಶ್ರೇಷ್ಠೋ ವೈಹಾರೋ ದುರ್ದುರಸ್ತಥಾ ॥ ೨೦ ॥

ಕೋಲಾಹಲಃ ಸಸುರಸೋ ಮೈನಾಕೋ ವೈದ್ಯುತಸ್ತಥಾ ।
ವಾತನ್ಧಮೋ ನಾಗಗಿರಿಸ್ತಥಾ ಪಾಂಡುರಪರ್ವತಃ ॥ ೨೧ ॥

ತುಂಗಪ್ರಸ್ಥಃ ಕೃಷ್ಣಗಿರಿಗೋಧನೋ ಗಿರಿರೇವ ಚ ।
ಪುಷ್ಪಗಿರ್ಯುಜ್ಜಯನ್ತೌ ಚ ಶೈಲೋ ರೈವತಕಸ್ತಥಾ ॥ ೨೨ ॥

ಶ್ರೀಪರ್ವತಶ್ಚಿತ್ರಕೂಟಃ ಕೂಟಶೈಲೋ ಗಿರಿಸ್ತಥಾ ।
ಅನ್ಯೇ ತೇಭ್ಯೋಽಪರಿಜ್ಞಾತಾ ಹ್ರಸ್ವಾಃ ಸ್ವಲ್ಪೋಪಜೀವಿನಃ ॥ ೨೩ ॥

ತೈರ್ವಿಮಿಶ್ರಾ ಜನಪದಾ ಆರ್ಯಾ ಮ್ಲೇಚ್ಛಾಶ್ಚ ಭಾಗಶಃ ।
ಪೀಯಂತೇ ಯೈರಿಮಾ ನದ್ಯೋ ಗಂಗಾ ಸಿಂಧುಃ ಸರಸ್ವತೀ ॥ ೨೪ ॥

ಶತದ್ರುಶ್ಚಂದ್ರಭಾಗಾ ಚ ಯಮುನಾ ಸರಯುಸ್ತಥಾ ।
ಇರಾವತೀ ವಿತಸ್ತಾ ಚ ವಿಪಾಶಾ ದೇವಿಕಾ ಕುಹೂಃ ॥ ೨೫ ॥

ಗೋಮತೀ ಧೂತಪಾಪಾ ಚ ಬುದ್ಬುದಾ ಚ ದೃಷದ್ವತೀ ।
ಕೌಶಿಕೀ ತ್ರಿದಿವಾ ಚೈವ ನಿಷ್ಠೀವೀ ಗಂಡಕೀ ತಥಾ ॥ ೨೬ ॥

---

೨೦-೨೧-೨೨-೨೩. ಮಂದರ, ವೈಹಾರ, ದುರ್ದುರ, ಕೋಲಾಹಲ, ಸಸುರಸ, ಮೈನಾಕ, ವೈದ್ಯುತ, ವಾತಂಧಮ, ನಾಗಗಿರಿ, ಪಾಂಡುರ, ತುಂಗಪ್ರಸ್ಥ, ಕೃಷ್ಣಗಿರಿ, ಗೋಧನಗಿರಿ, ಪುಷ್ಪಗಿರಿ, ಉಜ್ಜಯಂತ, ರೈವತಕ, ಶ್ರೀಪರ್ವತ, ಚಿತ್ರಕೂಟ, ಕೂಟ ಶೈಲ-ಇವೇ ಮೊದಲಾಗ ಶ್ರೇಷ್ಠ ಪರ್ವತಗಳೂ ಇತರ ಚಿಕ್ಕಪರ್ವತಗಳೂ, ಇವುಗಳಿಂದ ವ್ಯಾಪ್ತವಾದ ಅನೇಕ ದೇಶಗಳೂ ಆರ್ಯರಿಗೂ ಮ್ಲೇಚ್ಛರಿಗೂ ವಾಸಭೂಮಿಗಳಾಗಿವೆ.

೨೪-೨೫-೨೬. ಆ ಜನರು ಕೆಳಗೆ ಹೇಳುವ ಪುಣ್ಯ ನದಿಗಳ ಜಲವನ್ನು ಪಾನ ಮಾಡಿ ಪೂತರಾಗುವರು –ಗಂಗಾ, ಸಿಂಧು, ಸರಸ್ವತಿ, ಶತದ್ರು, ಚಂದ್ರಭಾಗಾ, ಯಮುನಾ,ಸರಯು, ಇರಾವತೀ, ವಿತಸ್ತಾ, ವಿಪಾಶಾ, ದೇವಿಕಾ, ಕುಹೂ, ಗೋಮತೀ, ಧೂತಪಾಪಾ, ಬುದ್ಬುದಾ, ದೃಷದ್ವತೀ, ಕೌಶಿಕೀ, ತ್ರಿದಿವಾ, ನಿಷ್ಠೀವೀ, ಗಂಡಕೀ, ಚಕ್ಷು, ಲೋಹಿತಾ ಎಂಬ ನದಿಗಳು ಹಿಮವತ್ಪರ್ವತದಿಂದ ಹುಟ್ಟಿ ಹರಿಯುವುವು.

ಚಕ್ಷುರ್ಲೋಹಿತ ಇತ್ಯೇತಾ ಹಿಮವತ್ಪಾದನಿಸ್ಸೃತಾಃ ।
ವೇದಸ್ಮೃತಿರ್ವೇದವತೀ ವೃತ್ರಘ್ನೀ ಸಿಂಧುರೇವ ಚ ॥ ೨೭ ॥

ವರ್ಣಾಶಾ ನಂದನಾ ಚೈವ ಸದಾನೀರಾ ಮಹಾನದೀ ।
ಪಾಶಾ ಚರ್ಮಣ್ವತೀ ನೂಪಾ ವಿದಿಶಾ ವೇತ್ರವತ್ಯಪಿ ॥ ೨೮ ॥

ಕ್ಷಿಪ್ರಾ ಹ್ಯವಂತೀ ಚ ತಥಾ ಪಾರಿಯಾತ್ರಾಶ್ರಯಾ ಸ್ಮೃತಾಃ ।
ಶೋಣೋ ಮಹಾನದಶ್ಚೈವ ನರ್ಮದಾ ಸುರಸಾ ಕ್ರಿಯಾ ॥ ೨೯ ॥

ಮಂದಾಕಿನೀ ದಶಾರ್ಣಾ ಚ ಚಿತ್ರಕೂಟಾ ತಥೈವ ಚ ।
ತಮಸಾ ಪಿಪ್ಪಲಾ ಶ್ಯೇನಾ ಕರಮೋದಾ ಪಿಶಾಚಿಕಾ ॥ ೩೦ ॥

ಚಿತ್ರೋಪಲಾ ವಿಶಾಲಾ ಚ ವಂಜುಲಾ ವಾಸ್ತುವಾಹಿನೀ ।
ಸನೇರುಜಾ ಶುಕ್ತಿಮತೀ ಮಂಕುತೀ ತ್ರಿದಿವಾ ಕ್ರತುಃ ॥ ೩೧ ॥

ಋಕ್ಷವತ್ಸಂಪ್ರಸೂತಾಸ್ತಾ ನದ್ಯೋ ಮಣಿಜಲಾಶ್ರಿವಾಃ ।
ತಾಪೀ ಪಯೋಷ್ಣೀ ನಿರ್ವಿಂಧ್ಯಾ ಸೃಪಾ ಚ ನಿಷಧಾ ನದೀ ॥ ೩೨ ॥

ವೇಣೀ ವೈತರಣೀ ಚೈವ ಕ್ಷಿಪ್ರಾ ವಾಲಾ ಕುಮುದ್ವತೀ ।
ತೋಯಾ ಚೈವ ಮಹಾಗೌರೀ ದುರ್ಗಾ ವಾನ್ನಶಿಲಾ ತಥಾ ॥ ೩೩ ॥

---

೨೭-೨೮. ವೇದಸ್ಮೃತಿ, ವೇದವತೀ, ವೃತ್ರಘ್ನೀ, ಸಿಂಧು, ವರ್ಣಾಶಾ, ನಂದನಾ, ಸದಾನೀರಾ, ಮಹಾನದೀ, ಪಾಶಾ, ಚರ್ಮಣ್ವತೀ, ನೂಪಾ, ವಿದಿಶಾ, ವೇತ್ರವತೀ, ಕ್ಷಿಪ್ರಾ, ಅವಂತೀ, ಎಂಬ ನದಿಗಳು ಪಾರಿಯಾತ್ರಪರ್ವತದಿಂದ ಹರಿಯುವುವು.

೨೯-೩೦-೩೧. ಶೋಣ, ಮಹಾನದ, ನರ್ಮದಾ, ಸುರಸಾ, ಕ್ರಿಯಾ, ಮಂದಾಕಿನೀ, ದಶಾರ್ಣಾ, ಚಿತ್ರಕೂಟಾ, ತಮಸಾ, ಪಿಪ್ಪಲಾ, ಶ್ಯೇನಾ, ಕರಮೋದಾ, ಪಿಶಾಚಿಕಾ, ಚಿತ್ರೋಪಲಾ, ವಿಶಾಲಾ, ವಂಜುಲಾ ವಾಸ್ತುವಾಹಿನೀ, ಸನೇರುಜಾ, ಶುಕ್ತಿಮತೀ, ಮಂಕುತೀ, ತ್ರಿದಿವಾ, ಕ್ರತು—ಈ ನದಿಗಳು ಋಕ್ಷವತ್ಪರ್ವತದಿಂದ ಜನಿಸುವುವು.

೩೨-೩೩. ತಾಪಿ, ಪಯೋಷ್ಣೀ, ನಿರ್ವಿಂಧ್ಯಾ, ಸೃಪಾ, ನಿಷಧಾ, ವೇಣೀ,

ವಿಂಧ್ಯಪಾದಪ್ರಸೂತಾಸ್ತಾ ನದ್ಯಃ ಪುಣ್ಯಜಲಾಶ್ಶುಭಾಃ ।
ಗೋದಾವರೀ ಭೀಮರಥೀ ಕೃಷ್ಣವೇಣ್ಯಾಽಥ ವಂಜುಲಾ ॥ ೩೪ ॥

ತುಂಗಭದ್ರಾ ಸುಪ್ರಯೋಗಾ ಬಾಹ್ಯಾ ಕಾವೇರ್ಯಥಾಪಿ ಚ ।
ದಕ್ಷಿಣಪ್ರವಹಾ ನದ್ಯಃ ಸಹ್ಯಪಾದಾದ್ವಿನಿಸ್ಸೃತಾಃ ॥ ೩೫ ॥

ಕೃತಮಾಲಾ ತಾಮ್ರಪರ್ಣೀ ಪುಷ್ಪಜಾತ್ಯುತ್ಪಲಾವತೀ ।
ನದ್ಯೋಽಭಿಜಾತಾ ಮಲಯಾತ್ಸರ್ವಾಶ್ಶೀತಜಲಾಶ್ಶುಭಾಃ ॥ ೩೬ ॥

ತ್ರಿಸಾಮಾ ಋಷಿಕುಲ್ಯಾ ಚ ವಂಜುಲಾ ತ್ರಿದಿವಾಽಬಲಾ ।
ಲಾಙ್ಗೂಲಿನೀ ವಂಶಧರಾ ಮಹೇಂದ್ರತನಯಾಃ ಸ್ಮೃತಾಃ ॥ ೩೭ ॥

ಋಷಿಕುಲ್ಯಾ ಕುಮಾರೀ ಚ ಮಂದಗಾ ಮಂದಗಾಮಿನೀ ।
ಕೃಪಾ ಪಲಾಶಿನೀ ಚೈವ ಶುಕ್ತಿಮತ್ಪ್ರಭವಾಃ ಸ್ಮೃತಾಃ ॥ ೩೮ ॥

ತಾಸ್ತು ನದ್ಯಸ್ಸರಸ್ವತ್ಯಃ ಸರ್ವಾ ಗಂಗಾಸ್ಸಮುದ್ರಗಾಃ ।
ವಿಶ್ವಸ್ಯ ಮಾತರಸ್ಸರ್ವಾಃ ಜಗತ್ಪಾಪಹರಾಃ ಸ್ಮೃತಾಃ ॥ ೩೯ ॥

---

ವೈತರಣೀ, ಕ್ಷಿಪ್ರಾ, ವಾಲಾ, ಕುಮುದ್ವತೀ, ತೋಯಾ, ಮಹಾಗೌರೀ, ದುರ್ಗಾ, ವಾನ್ನಶಿಲಾ, ಈ ಪುಣ್ಯ ನದಿಗಳು ವಿಂಧ್ಯಪಾದದಲ್ಲಿ ಹುಟ್ಟುತ್ತವೆ.

೩೪-೩೫. ಗೋದಾವರೀ, ಭೀಮರಥೀ, ಕೃಷ್ಣವೇಣಾ, ವಂಜುಲಾ, ತುಂಗಭದ್ರಾ, ಸುಪ್ರಯೋಗಾ, ಬಾಹ್ಯಾ, ಕಾವೇರಿ,—ದಕ್ಷಿಣ ದೇಶದಲ್ಲಿ ಹರಿಯುವ ಈ ನದಿಗಳು ಸಹ್ಯಪರ್ವತದಲ್ಲಿ ಹುಟ್ಟುತ್ತವೆ.

೩೬, ಕೃತಮಾಲಾ, ತಾಮ್ರಪರ್ಣೀ, ಪುಷ್ಪಜಾತೀ, ಉತ್ಪಲಾವತೀ ಎಂಬ ನದಿಗಳು ಮಲಯಪರ್ವತದಲ್ಲಿ ಹುಟ್ಟುತ್ತವೆ.

೩೭. ತ್ರಿಸಾಮಾ, ಋಷಿಕುಲ್ಯಾ, ವಂಜುಲಾ, ತ್ರಿದಿವಾ, ಅಬಲಾ ಲಾಙ್ಗೂಲಿನೀ, ವಂಶಧರಾ—ಈ ನದಿಗಳು ಮಹೇಂದ್ರವೆಂಬ ಬೆಟ್ಟದಲ್ಲಿ ಉದ್ಭವಿಸುವುವು.

೩೮. ಋಷಿಕುಲ್ಯಾ, ಕುಮಾರೀ, ಮಂದಗಾ, ಮಂದಗಾಮಿನೀ, ಕೃಪಾ, ಪಲಾಶಿನೀ, ಈ ನದಿಗಳು ಶುಕ್ತಿಮತ್ಪರ್ವತದಲ್ಲಿ ಜನಿಸುವುವು.

೩೯. ಮೇಲೆ ಹೇಳಿರುವ ಸಮಸ್ತ ನದಿಗಳೂ ಸರಸ್ವತೀ, ಗಂಗಾ ನದಿಗಳಂತೆ

ತಾಸಾಂ ನದ್ಯುಪನದ್ಯೋಽನ್ಯಾಃ ಶತಶೋಽಥ ಸಹಸ್ರಶಃ ।
ತಾಸ್ವಿಮೇ ಕುರುಪಾಂಚಾಲಾಃ ಶಾಲ್ವಾ ಮಾದ್ರೇಯಜಾಂಗಲಾಃ ॥೪೦॥

ಶೂರಸೇನಾ ಭದ್ರಕಾರಾ ಬೋಧಾಸ್ಸಹಪಟಚ್ಚರಾಃ ।
ಮತ್ಸ್ಯಾಃ ಕುಶಲ್ಯಾಃ ಸೌಶಲ್ಯಾಃ ಕುಂತಲಾಃ ಕಾಶಿಕೋಶಲಾಃ ॥೪೧॥

ಗೋಧಾ ಭದ್ರಾಃ ಕಳಿಂಗಾಶ್ಚ ಮಾಗಧಾಶ್ಚೋತ್ಕಲೈಸ್ಸಹ ।
ಮಧ್ಯದೇಶ್ಯಾ ಜನಪದಾಃ ಪ್ರಾಯಶಸ್ತತ್ರ ಕೀರ್ತಿತಾಃ ॥ ೪೨ ॥

ಸಹ್ಯಸ್ಯ ಚೋತ್ತರಾನ್ತೇಷು ಯತ್ರ ಗೋದಾವರೀ ನದೀ ।
ಪೃಥಿವ್ಯಾಮಪಿ ಕೃತ್ಸ್ನಾಯಾಂ ಸ ಪ್ರದೇಶೋ ಮನೋರಮಃ ॥ ೪೩ ॥

ತತ್ರ ಗೋವರ್ಧನಂ ನಾಮ ಪುರಂ ರಾಮೇಣ ನಿರ್ಮಿತಮ್ ।
ರಾಮಪ್ರಿಯಾರ್ಥಂ ಸ್ವರ್ಗೀಯಾ ವೃಕ್ಷಾ ದಿವ್ಯಾಸ್ತಥೌಷಧೀಃ ॥ ೪೪ ॥

ಭರದ್ವಾಜೇನ ಮುನಿನಾ ತತ್ಪ್ರಿಯಾರ್ಥೇಽವರೋಪಿತಾಃ ।
ಅತಃ ಪುರವರೋದ್ದೇಶಸ್ತೇನ ಜಜ್ಞೇ ಮನೋರಮಃ ॥ ೪೫ ॥

---

ಪುಣ್ಯನದಿಗಳಾಗಿ ಪ್ರಪಂಚವನ್ನು ಪಾಪದಿಂದ ಉದ್ಧರಿಸುತ್ತಾ ವಿಶ್ವದ ತಾಯಿಯ ರೆನ್ನಿಸಿಕೊಂಡು ಸಮುದ್ರವನ್ನು ಸೇರುವುವು.

೪೦-೪೧-೪೨. ಇವಲ್ಲದೆ ಅನೇಕ ಉಪನದಿಗಳೂ ಸಂಖ್ಯಾತೀತವಾಗಿ ಹರಿಯು ತ್ತವೆ. ಈ ನದೀತೀರಗಳಲ್ಲಿರುವ ಕುರುಪಾಂಚಾಲ, ಶಾಲ್ವ, ಮಾದ್ರೇಯ, ಜಾಂಗಲ, ಶೂರಸೇನ, ಭದ್ರಕಾರ, ಬೋಧ, ಪಟಚ್ಚರ, ಮತ್ಸ್ಯ, ಕುರಲ್ಯ, ಸೌಶಲ್ಯ, ಕುಂತಲ, ಕಾಶಿ, ಕೋಶಲ, ಗೋಧ, ಭದ್ರ, ಕಳಿಂಗ, ಮಾಗಧ, ಉತ್ಕಲ ಎಂಬ ದೇಶಗಳನ್ನು ಮಧ್ಯದೇಶವೆಂದು ವ್ಯವಹರಿಸುವರು.

೪೩. ಗೋದಾವರೀ ನದಿಯು ಹರಿಯುವ ಸಹ್ಯಪರ್ವತದ ಉತ್ತರ ಭಾಗದಲ್ಲಿ ರುವ ಪ್ರದೇಶವು ಭೂಮಂಡಲದಲ್ಲೆಲ್ಲ ಬಹು ಸುಂದರವಾದುದು.

೪೪-೪೫. ಆ ಸ್ಥಳದಲ್ಲಿ ಶ್ರೀರಾಮನು ಗೋವರ್ಧನವೆಂಬ ಪಟ್ಟಣವನ್ನು ನಿರ್ಮಿ ಸಿರುವನು. ರಾಮನಿಗೆ ಪ್ರಿಯವಾದ ಆ ನಗರದಲ್ಲಿ ಭರದ್ವಾಜಮುನಿಗಳು ತಮ್ಮ

ಬಾಹ್ಲೀಕಾ ವಾಟಧಾನಾಶ್ಚ ಆಭೀರಾಃ ಕಾಲತೋಯಕಾಃ ।
ಅಪರಾನ್ತಾಶ್ಚ ಸುಹ್ಮಾಶ್ಚ ಪಾಂಚಾಲಾಶ್ಚರ್ಮಮಂಡಲಾಃ ॥ ೪೬ ॥

ಗಾಂಧಾರಾ ಯವನಾಶ್ಚೈವ ಸಿಂಧುಸೌವೀರಮಂಡಲಾಃ ।
ಚೀನಾಶ್ಚೈವ ತುಷಾರಾಶ್ಚ ಪಲ್ಲವಾ ಗಿರಿಗಹ್ವರಾಃ ॥ ೪೭ ॥

ಶಕಾ ಭದ್ರಾಃ ಕುಲಿನ್ದಾಶ್ಚ ಪಾರದಾ ವಿಂಧ್ಯಚೂಲಿಕಾಃ ।
ಅಭೀಷಾಹಾ ಉಲಾತಾಶ್ಚ ಕೇಕಯಾ ದಶಮಾಲಿಕಾಃ ॥ ೪೮ ॥

ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ವೈಶ್ಯಶೂದ್ರಕುಲಾನಿ ತು ।
ಕಾಂಭೋಜಾ ದರದಾಶ್ಚೈವ ಬರ್ಬರಾ ಅಂಗಲೌಹಿಕಾಃ ॥ ೪೯ ॥

ಅತ್ರಯಸ್ಸಭರದ್ವಾಜಾಃ ಪ್ರಸ್ಥಲಾಶ್ಚ ದಶೇರಕಾಃ ।
ಲಮಕಾಸ್ತಾಲಶಾಲಾಶ್ಚ ಭೂಷಿಕಾ ಈಜಿಕೈಸ್ಸಹ ॥ ೫೦ ॥

ಏತೇ ದೇಶಾ ಉದೀಚ್ಯಾ ವೈ ಪ್ರಾಚ್ಯಾನ್ದೇಶಾನ್ನಿಬೋಧತ ।
ಅಙ್ಗಾ ವಙ್ಗಾಶ್ಚೋಲಭದ್ರಾಃ ಕಿರಾತಾನಾಂ ಚ ಜಾತಯಃ ॥ ೫೧ ॥

---

ತಪಶ್ಶಕ್ತಿಯಿಂದ ದಿವ್ಯವಾದ ಗಿಡಬಳ್ಳಿಗಳನ್ನು ರಾಮನ ಮೆಚ್ಚಿಗೆಗಾಗಿ ಬೆಳೆಸಿರುವರು. ಆದ್ದರಿಂದ ಆ ಪಟ್ಟಣವು ಬಹಳ ರಮಣೀಯವಾಯಿತು.

೪೬-೪೭-೪೮-೪೯-೫೦. ಬಾಹ್ಲೀಕ, ವಾಟಧಾನ, ಆಭೀರ, ಕಾಲತೋಯಕ, ಅಪರಾಂತ, ಸುಹ್ಮ, ಪಾಂಚಾಲ, ಚರ್ಮಮಂಡಲ, ಗಾಂಧಾರ, ಯವನ, ಸಿಂಧು, ಸೌವೀರ ಮಂಡಲ, ಚೀನ, ತುಷಾರ, ಪಲ್ಲವ, ಗಿರಿಗಹ್ವರ, ಶಕ, ಭದ್ರ, ಕುಲಿಂದ, ಪಾರದ, ವಿಂಧ್ಯಚೂಲಿಕಾ, ಅಭೀಷಾಹ, ಉಲೂತ, ಕೇಕಯ, ದಶಮಾಲಿಕ, ಬ್ರಾಹ್ಮಣಮಯ, ಕ್ಷತ್ರಿಯ ಪ್ರಚುರ, ವೈಶ್ಯಮಯ, ಶೂದ್ರಮಯ, ಕಾಂಭೋಜ, ದರದ, ಬರ್ಬರ, ಅಂಗಲೌಹಿಕ, ಅತ್ರಿದೇಶ, ಭರದ್ವಾಜದೇಶ, ಪ್ರಸ್ಥಲ, ದಶೇರಕ, ಲಮಕ, ತಾಲಶಾಲ, ಭೂಷಿಕಾ, ಈಜಿಕ ಇವು ಉತ್ತರ ದಿಕ್ಕಿನಲ್ಲಿ ವ್ಯಾಖ್ಯಾತವಾದ ದೇಶಗಳು. ಮುಂದೆ ಪೂರ್ವದ ದೇಶಗಳನ್ನು ವಿವರಿಸುವೆನು.

೫೧-೫೨-೫೩-೫೪. ಅಂಗ, ವಂಗ, ಚೋಲಭದ್ರ, ಕಿರಾತನಿವಾಸ, ತೋಮರ ಹಂಸಭಂಗ, ಕಾಶ್ಮೀರ, ತಂಗಣ, ಝಿಲ್ಲಿಕ, ಆಹುಕ, ಹೂಣದರ್ವ, ಅಂಧ್ರವಾಕ, ಮುದ್ಗರಕ, ಅಂತರ್ಗಿರಿ, ಬಹಿರ್ಗಿರಿ, ಪ್ಲವಂಗವ, ಮಲದ, ಮಲವರ್ತಿಕ, ಸಮಂ

**ತೋಮರಾ ಹಂಸಭಙ್ಗಾಶ್ಚ ಕಾಶ್ಮೀರಾಸ್ತಂಗಣಾಸ್ತಥಾ ।**
**ಝಿಲ್ಲಿಕಾಶ್ಚಾಹುಕಾಶ್ಚೈವ ಹೂಣದರ್ವಾಸ್ತಥೈವ ಚ ॥ ೫೨ ॥**

**ಆನ್ಧ್ರವಾಕಾ ಮುದ್ಗರಕಾ ಅನ್ತರ್ಗಿರಿಬಹಿರ್ಗಿರಾಃ ।**
**ತತಃ ಪ್ಲವಙ್ಗವೋ ಜ್ಞೇಯೋ ಮಲದಾ ಮಲವರ್ತಿಕಾಃ ॥ ೫೩ ॥**

**ಸಮನ್ತರಾಃ ಪ್ರಾವೃಷೇಯಾ ಭಾರ್ಗವಾ ಗೋಪಪಾರ್ಥಿವಾಃ ।**
**ಪ್ರಾಗ್ಜ್ಯೋತಿಷಾಶ್ಚ ಪುಂಡ್ರಾಶ್ಚ ವಿದೇಹಾಸ್ತಾಮ್ರಲಿಪ್ತಕಾಃ ॥ ೫೪ ॥**

**ಮಲ್ಲಾ ಮಗಧಗೋನರ್ದಾಃ ಪ್ರಾಚ್ಯಾಂ ಜನಪದಾಃ ಸ್ಮೃತಾಃ ।**
**ಅಥಾಪರೇ ಜನಪದಾ ದಕ್ಷಿಣಾಪಥವಾಸಿನಃ ॥ ೫೫ ॥**

**ಪಾಣ್ಡ್ಯಾಶ್ಚ ಕೇರಲಾಶ್ಚೈವ ಚೋಲಾ ಕುಲ್ಯಾಸ್ತಥೈವ ಚ ।**
**ಸೇತುಕಾ ಮೂಷಿಕಾಶ್ಚೈವ ಕ್ಷಪಣಾ ವನವಾಸಿಕಾಃ ॥ ೫೬ ॥**

**ಮಾಹಾರಾಷ್ಟ್ರಾ ಮಹಿಷಿಕಾ ಕಾಲಿಙ್ಗಾಶ್ಚೈವ ಸರ್ವಶಃ ।**
**ಆಭೀರಾಶ್ಚ ಸಹೈಷೀಕಾ ಆಟವ್ಯಾಃ ಸರವಾಸ್ತಥಾ ॥ ೫೭ ॥**

**ಪುಲಿನ್ದಾ ವಿನ್ಧ್ಯಮೌಲೀಯಾ ವೈಧರ್ಭಾ ದಣ್ಡಕೈಸ್ಸಹ ।**
**ಪೌರಿಕಾ ಮೌಲಿಕಾಶ್ಚೈವ ಅಶ್ಮಕಾ ಭೋಗವರ್ಧನಾಃ ॥ ೫೮ ॥**

---

ತರ, ಪ್ರಾವೃಷೇಯ, ಭಾರ್ಗವ, ಗೋಪಪಾರ್ಥಿವ. ಪ್ರಾಗ್ಜ್ಯೋತಿಷ, ಪುಂಡ್ರ, ವಿದೇಹ, ತಾಮ್ರಲಿಪ್ತ, ಮಲ್ಲ, ಮಗಧ, ಗೋನರ್ದ,—ಇವು ಪೂರ್ವ ದಿಕ್ಕಿನಲ್ಲಿರುವ ದೇಶಗಳು.

೫೫-೫೬-೫೭-೫೮. ಇನ್ನು ಮುಂದೆ ಹೇಳುವ ದೇಶಗಳು ದಕ್ಷಿಣಾಪಥಕ್ಕೆ ಸೇರಿದವುಗಳಾಗಿವೆ. ಪಾಂಡ್ಯ, ಕೇರಳ, ಚೋಳ, ಕುಲ್ಯ, ಸೇತುಕ. ಮೂಷಿಕ, ಕ್ಷಪಣ, ವನವಾಸಿ, ಮಹಾರಾಷ್ಟ್ರ, ಮಹಿಷಿಕಾ, ಕಳಿಂಗ, ಆಭೀರ, ಐಷೀಕ, ಆಟವ್ಯ, ಸರವ, ಪುಳಿಂದ, ವಿಂಧ್ಯಮೌಲೀಯ, ವೈದರ್ಭ, ದಂಡ್ರಕ, ಪೌರಿಕ, ಮೌಲಿಕ, ಅಶ್ಮಕ, ಭೋಗವರ್ಧನ, ಕೊಂಕಣ, ಕುಂತಳ, ಆಂಧ್ರ, ಕುಲಿಂದ, ಅಂಗಾರ, ಮತ್ತು ಮಾರಿಷ ಎಂಬ ದೇಶಗಳು.

ಕೋಙ್ಕಣಾಃ ಕುನ್ತಲಾಶ್ಚಾನ್ಧ್ರಾಃ ಕುಲಿನ್ದಾಙ್ಗಾರಮಾರಿಷಾಃ ।
ದಾಕ್ಷಿಣಾಶ್ಚೈವ ಯೇ ದೇಶಾ ಅಪರಾನ್ತಾನ್ನಿಬೋಧತ ॥ ೫೯ ॥

ಸೂರ್ಯಾರಕಾಃ ಕಲಿವನಾ ದುರ್ಗಾಲಾಃ ಕುನ್ತಲೈಸ್ಸಹ ।
ಪೌಲೇಯಾಶ್ಚ ಕಿರಾತಾಶ್ಚ ರೂಪಕಾಸ್ತಾಪಕೈಸ್ಸಹ ॥ ೬೦ ॥

ತಥಾ ಕರೀತಯಶ್ಚೈವ ಸರ್ವೇ ಚೈವ ಕರನ್ಧರಾಃ ।
ನಾಸಿಕಾಶ್ಚೈವ ಯೇ ಚಾನ್ಯೇ ಯೇ ಚೈವಾನ್ತರನರ್ಮದಾಃ ॥ ೬೧ ॥

ಸಹಕಚ್ಛಾಃ ಸಮಾಹೇಯಾಃ ಸಹಸಾರಸ್ವತೈರಪಿ ।
ಕಚ್ಛಿಪಾಶ್ಚ ಸುರಾಷ್ಟ್ರಾಶ್ಚ ಆನರ್ತಾಶ್ಚಾರ್ಬುದೈಃ ಸಹ ॥ ೬೨ ॥

ಇತ್ಯೇತೇ ಅಪರಾಂತಾಶ್ಚ ಶೃಣುಧ್ವಂ ವಿಂಧ್ಯವಾಸಿನಃ ।
ಮಲದಾಶ್ಚ ಕರೂಷಾಶ್ಚ ಮೇಕಲಾಶ್ಚೋತ್ಕಲೈಸ್ಸಹ । ॥ ೬೩ ॥

ಉತ್ತಮಾನಾಂ ದಶಾರ್ಣಾಶ್ಚ ಭೋಜಾಃ ಕಿಷ್ಕಿನ್ಧಕೈಸ್ಸಹ ।
ತೋಶಲಾಃ ಕೋಶಲಾಶ್ಚೈವ ತ್ರೈಪುರಾ ವೈದಿಶಾಸ್ತಥಾ ॥ ೬೪ ॥

ತುರುಣ್ಡಾ ಬರ್ಬರಾಶ್ಚೈವ ಷಟ್ಪುರಾ ನೈಷಧೈಸ್ಸಹ ।
ಅನೂಪಾಸ್ತುಣ್ಡಿಕೇರಾಶ್ಚ ವೀತಿಹೋತ್ರಾ ಹ್ಯವನ್ತಯಃ ॥ ೬೫ ॥

---

೫೯. ದಕ್ಷಿಣದೇಶಗಳನ್ನು ತಿಳಿದು ಮುಂದೆ ಅಪರಾಂತ ದೇಶಗಳ ವರ್ಣನೆಯನ್ನು ಕೇಳಿರಿ.

೬೦-೬೧-೬೨. ಸೂರ್ಯಾರಕ, ಕಲಿವನ, ದುರ್ಗಾಲ, ಕುಂತಲ, ಪೌಲೇಯ, ಕಿರಾತ, ರೂಪಕ, ತಾಪಕ, ಕರೀತಿ, ಕರಂಧರ, ನಾಸಿಕಾ, ಅಂತರನರ್ಮದ, ಸಹಕಚ್ಛ, ಸಮಾಹೇಯ, ಸಾರಸ್ವತ, ಕಚ್ಛಿಪ, ಸುರಾಷ್ಟ್ರ, ಆನರ್ತ, ಅರ್ಬುದ, ಇವು ಅಪರಾಂತ ದೇಶಗಳು.

೬೩-೬೪-೬೫. ಮಲದ, ಕರೂಷ, ಮೇಕಲ, ಉತ್ಕಲ, ಉತ್ತಮದಶಾರ್ಣ, ಭೋಜ, ಕಿಷ್ಕಿಂಧಕ, ತೋಶಲ, ಕೋಶಲ, ತ್ರೈಪುರ, ವೈದಿಶ, ತುರುಂಡ, ಬರ್ಬರ, ಷಟ್ಪುರ, ನೈಷಧ, ಅನೂಪ, ತುಂಡಿಕೇರ, ವೀತಿಹೋತ್ರ, ಅವಂತಿ ಇವು ವಿಂಧ್ಯ ಪ್ರಾಂತದಲ್ಲಿರುವ ದೇಶಗಳು.

ಏತೇ ಜನಪದಾಸ್ಸರ್ವೇ ವಿನ್ಧ್ಯಪೃಷ್ಠನಿವಾಸಿನಃ ।
ಅತೋ ದೇಶಾನ್ಪ್ರವಕ್ಷ್ಯಾಮಿ ಪರ್ವತಾಶ್ರಯಿಣಶ್ಚ ಯೇ || ೬೬ ||

ನಿಹೀರಾ ಹಂಸಮಾರ್ಗಾಶ್ಚ ಕುಪಥಾಸ್ತ್ವಙ್ಗಣಾಃ ಶಕಾಃ ।
ಅಪಪ್ರಾವರಣಾಶ್ಚೈವ ಊರ್ಣಾ ದರ್ವಾಸ್ಸಹೂಹುಕಾಃ || ೬೭ ||

ತ್ರಿಗರ್ತಾ ಮಂಡಲಾಶ್ಚೈವ ಕಿರಾತಾಸ್ತಾಮರೈಸ್ಸಹ ।
ಚತ್ವಾರಿ ಭಾರತೇ ವರ್ಷೇ ಯುಗಾನಿ ಋಷಯೋಽಬ್ರುವನ್ || ೬೮ ||

ಕೃತಂ ತ್ರೇತಾಯುಗಂ ಚೈವ ದ್ವಾಪರಂ ತಿಷ್ಯಮೇವ ಚ ।
ತೇಷಾಂ ನಿಸರ್ಗಂ ವಕ್ಷ್ಯಾಮಿ ಉಪರಿಷ್ಟಾದಶೇಷತಃ || ೬೯ ||

ಇತಿ ಶ್ರೀ ಬ್ರಹ್ಮಾಣ್ಡಪುರಾಣೇ ಷೋಡಶೋಽಧ್ಯಾಯಃ

---

೬೬-೬೭. ಇದರಂತೆ ಪರ್ವತಪ್ರಾಂತಕ್ಕೆ ಸೇರಿದ ದೇಶಗಳನ್ನು ಕೇಳಿರಿ. ನಿಹೀರ, ಹಂಸಮಾರ್ಗ, ಕುಪಥ, ತಂಗಣ, ಶಕ, ಅಪಪ್ರಾವರಣ, ಊರ್ಣ, ದರ್ವ, ಹೂಹುಕ, ತ್ರಿಗರ್ತ, ಮಂಡಲ, ಕಿರಾತದೇಶ, ತಾಮರ, ಇವೇ ಮುಂತಾದುವು.

೬೮-೬೯. ಹೀಗೆ ವಿಸ್ತಾರವಾದ ಈ ಭರತಭೂಮಿಯಲ್ಲಿ ಕೃತ, ತ್ರೇತಾ, ದ್ವಾಪರ, ಕಲಿ ಎಂಬ ಯುಗಗಳು ನಡೆಯುತ್ತಿವೆ. ಇವುಗಳ ಸೃಷ್ಟಿ ವಿಷಯವನ್ನು ಮುಂದೆ ವಿವರವಾಗಿ ಹೇಳುವೆನು.

ಬ್ರಹ್ಮಾಂಡಪುರಾಣದಲ್ಲಿ ಹದಿನಾರನೆಯ ಅಧ್ಯಾಯವು ಸಮಾಪ್ತವು.

## ಸಪ್ತದಶೋಽಧ್ಯಾಯಃ

**ಋಷಯ ಊಚುಃ**
**ಯಚ್ಚ ಕಿಂಪುರುಷಂ ವರ್ಷಂ ಹರಿವರ್ಷಂ ತಥೈವ ಚ ।**
**ಆಚಕ್ಷ್ವ ನೋ ಯಥಾತತ್ತ್ವಂ ಕೀರ್ತಿತಂ ಭಾರತಂ ತ್ವಯಾ ॥ ೧ ॥**

**ಸೂತ ಉವಾಚ**
**ಶುಶ್ರೂಷಾ ಯತ್ರ ವೋ ವಿಪ್ರಾಸ್ತಚ್ಛೃಣುಧ್ವಮತನ್ದ್ರಿತಾಃ ।**
**ಪ್ಲಕ್ಷಖಣ್ಡಃ ಕಿಮ್ಪುರುಷೇ ಸುಮಹಾನ್ನನ್ದನೋಪಮಃ ॥ ೨ ॥**

**ದಶವರ್ಷಸಹಸ್ರಾಣಿ ಸ್ಥಿತಿಃ ಕಿಮ್ಪುರುಷೇ ಸ್ಮೃತಾ ।**
**ಸುವರ್ಣವರ್ಣಾಃ ಪುರುಷಾಃ ಸ್ತ್ರಿಯಶ್ಚಾಪ್ಸರಸೋಪಮಾಃ ॥ ೩ ॥**

---

ಸಮಸ್ತ ಋಷಿಗಳೂ ಕೇಳಿಕೊಂಡರು :—

೧. ಮುನಿವರ್ಯನೇ, ಭಾರತವರ್ಷದ ವಿಷಯವನ್ನು ಸಮಗ್ರವಾಗಿ ಉಪದೇಶಿಸಿರುವ ನೀನು ಅದರಂತೆ ಕಿಂಪುರುಷ ವರ್ಷ ಹರಿವರ್ಷಗಳ ವಿಷಯಗಳಲ್ಲಿ ತತ್ತ್ವವನ್ನು ಉಪದೇಶಿಸಬೇಕು

೨. ಸೂತಮುನಿಯು ಇದಕ್ಕೆ ಉತ್ತರವಿತ್ತನು.

ಮುನಿಗಳೇ, ನಿಮಗೆ ಯಾವ ವಿಷಯವನ್ನು ಕೇಳುವುದರಲ್ಲಿ ಕುತೂಹಲವಿರುವುದೋ ಅದನ್ನು ಸ್ವಲ್ಪವೂ ಆಲಸ್ಯವಿಲ್ಲದೆ ಕೇಳುವವರಾಗಿರಿ. ಕಿಂಪುರುಷ ವರ್ಷದಲ್ಲಿ ಪ್ಲಕ್ಷದ್ವೀಪದ ಒಂದುಭಾಗವು ಅತಿಯಾಗಿ ದೊಡ್ಡದಾಗಿಯೂ ಇಂದ್ರನ ನಂದನ ವನಕ್ಕೆ ಸಮನಾಗಿಯೂ ಇರುವುದು.

೩. ಕಿಂಪುರುಷ ವರ್ಷದಲ್ಲಿ ವಾಸಮಾಡುವ ಪ್ರಜೆಗಳು ಹತ್ತುಸಾವಿರ ವರ್ಷ ಆಯುಷ್ಯವುಳ್ಳವರು. ಮತ್ತು ಪುರುಷರು, ಸ್ತ್ರೀಯರು, ಭಂಗಾರದ ಬಣ್ಣದಂತೆ ಉಜ್ವಲ ಕಾಂತಿಯುಳ್ಳವರು ಆಗಿರುತ್ತಾರೆ. ಅಲ್ಲಿರುವ ಎಲ್ಲ ಸ್ತ್ರೀಯರು ಅಪ್ಸರಸ್ತ್ರೀಯರಂತೆ ಶೋಭಿಸುತ್ತಿರುವರು.

ಅನಾಮಯಾ ಅಶೋಕಾಶ್ಚ ನಿತ್ಯಂ ಮುದಿತಮಾನಸಾಃ ।
ಜಾಯನ್ತೇ ಮಾನವಾಸ್ತತ್ರ ನಿಸ್ತಪ್ತಕನಕಪ್ರಭಾಃ ॥ ೪ ॥

ವರ್ಷೇ ಕಿಮ್ಪುರುಷೇ ಪುಣ್ಯೇ ವೃಕ್ಷೋ ಮಧುವಹಃ ಶುಭಃ ।
ತಸ್ಯ ಕಿಮ್ಪುರುಷಾಃ ಸರ್ವೇಽಪಿಬನ್ ಹಿ ರಸಮುತ್ತಮಮ್ ॥ ೫ ॥

ತತಃ ಪರಂ ಕಿಂಪುರುಷೋ ಹರಿವರ್ಷಃ ಪ್ರಚಕ್ಷತೇ ।
ಮಹಾರಜತಸಂಕಾಶಾ ಜಾಯನ್ತೇ ತತ್ರ ಮಾನವಾಃ ॥ ೬ ॥

ದೇವಲೋಕಚ್ಯುತಾಃ ಸರ್ವೇ ದೇವಾನೂಕಾಶ್ಚ ಸರ್ವಶಃ ।
ಹರಿವರ್ಷೇ ನರಾಃ ಸರ್ವೇ ಪಿಬಂತೀಕ್ಷುರಸಂ ಶುಭಮ್ ॥ ೭ ॥

ಏಕಾದಶ ಸಹಸ್ರಾಣಿ ವರ್ಷಾಣಾಂ ತು ನಿರಾಮಯಾಃ ।
ಹರಿವರ್ಷೇ ತು ಜೀವನ್ತಿ ಸರ್ವೇ ಮುದಿತಮಾನಸಾಃ ॥ ೮ ॥

---

೪. ಮತ್ತು ಅಲ್ಲಿ ವಾಸಮಾಡುತ್ತಿರುವ ಮನುಷ್ಯರು ಪುಟಕ್ಕಿಟ್ಟ ಚಿನ್ನದಂತೆ ಶೋಭಿಸುತ್ತಾ ವ್ಯಾಧಿ-ಶೋಕಗಳು ಎಂದೂ ಇಲ್ಲದೇ ಸಂತುಷ್ಟಚಿತ್ತರಾಗಿಯೇ ಇರುತ್ತಾರೆ.

೫. ಪವಿತ್ರವಾದ ಈ ಕಿಂಪುರುಷ ವರ್ಷದಲ್ಲಿ ಜೇನುತುಪ್ಪವನ್ನು ವಹಿಸುವ ಶುಭವಾದ ಒಂದು ವೃಕ್ಷವಿದೆ. ಎಲ್ಲ ಕಿಂಪುರುಷರೂ ಆ ವೃಕ್ಷದ ರಸವನ್ನು ಪಾನ ಮಾಡಿರುವರು.

೬. ಈ ಕಿಂಪುರುಷ ವರ್ಷದ ಮುಂದೆ ಹರಿವರ್ಷವೆಂಬುದು ಇರುವುದಾಗಿ ಪ್ರಾಜ್ಞರು ಹೇಳುತ್ತಾರೆ. ಅಲ್ಲಿಯೂ ಎಲ್ಲ ಮನುಷ್ಯರೂ ಚಿನ್ನದಂತೆ ಪ್ರಕಾಶವುಳ್ಳವರಾಗಿಯೇ ಹುಟ್ಟುತ್ತಾರೆ.

೭. ಅಂತಹ ಹರಿವರ್ಷದಲ್ಲಿ ವಾಸಿಸುವ ಜನರೆಲ್ಲರೂ ದೇವಲೋಕದಲ್ಲಿ ಫಲವನ್ನು ಸಂಪೂರ್ಣ ಅನುಭವಿಸಿ ಚ್ಯುತರಾದ ದೇವತೆಗಳೋ ಎಂಬ ಹಾಗೆ ಸ್ಫುರಿಸುತ್ತಿರುವರು. ಅಲ್ಲಿ ಹರಿಯುವ ಕಬ್ಬಿನ ಹಾಲನ್ನು ಕುಡಿದು ಜೀವಿಸುವರು.

೮. ಅಲ್ಲಿರುವ ಪ್ರಜೆಗಳೂ ಹನ್ನೊಂದು ಸಾವಿರ ವರ್ಷಗಳ ಆಯುಃಪ್ರಮಾಣದಿಂದ ಸರ್ವರೂ ನೀರೋಗರಾಗಿ ಸಂತೋಷಚಿತ್ತದಿಂದಲೇ ಸರ್ವದಾ ಇರುವರು.

ನ ಜರಾ ಬಾಧತೇ ತತ್ರ ನ ಮ್ರಿಯನ್ತೇ ಚ ತೇಽ ಚಿರಾತ್ ।
ಮಧ್ಯಮಂ ಯನ್ಮಯಾ ಪ್ರೋಕ್ತಂ ನಾಮ್ನಾ ವರ್ಷಮಿಲಾವೃತಮ್ ॥ ೯ ॥

ನ ತತ್ರ ಸೂರ್ಯಸ್ತಪತಿ ನ ತು ಜೀರ್ಯನ್ತಿ ಮಾನವಾಃ ।
ಚಂದ್ರಸೂರ್ಯೌ ಸನಕ್ಷತ್ರೌ ನಪ್ರಕಾಶಾವಿಲಾವೃತೇ ॥ ೧೦ ॥

ಪದ್ಮಪ್ರಭಾಃ ಪದ್ಮವರ್ಣಾಃ ತಥಾ ಪದ್ಮನಿಭೇಕ್ಷಣಾಃ ।
ಪದ್ಮಪತ್ರಸುಗನ್ಧಾಶ್ಚ ಜಾಯನ್ತೇ ತತ್ರ ಮಾನವಾಃ ॥ ೧೧ ॥

ಜಂಬೂಫಲರಸಾಹಾರಾ ಅನಿಷ್ಯನ್ದಾಃ ಸುಗನ್ಧಿನಃ ।
ಮನಸ್ವಿನೋ ಭುಕ್ತಭೋಗಾಃ ಸತ್ಕರ್ಮಫಲಭೋಗಿನಃ ॥ ೧೨ ॥

ದೇವಲೋಕಚ್ಯುತಾಶ್ಚೈವ ಮಹಾರಜತವಾಸಸಃ ।
ತ್ರಯೋದಶ ಸಹಸ್ರಾಣಿ ವರ್ಷಾಣಾಂ ತೇ ನರೋತ್ತಮಾಃ ॥ ೧೩ ॥

---

೯. ಅಂತಹವರನ್ನು ಮುಪ್ಪು ಸಂಭವಿಸುವ ಭೀತಿಯಾಗಲಿ ಅಕಾಲಮೃತ್ಯುವಿನ ಭಯವಾಗಲಿ ಪೀಡಿಸುವುದಿಲ್ಲ.

೧೦. ಇಲಾವೃತವರ್ಷವೆಂಬುದಾಗಿ ಎಲ್ಲದಕ್ಕೂ ಮಧ್ಯದಲ್ಲಿರುವ ವರ್ಷದಲ್ಲಿ ಸೂರ್ಯನು ತಪಿಸುವುದಿಲ್ಲ. ಮನುಷ್ಯರಿಗೆ ಮುಪ್ಪು ಬರುವುದಿಲ್ಲ, ಮತ್ತು ಚಂದ್ರ, ಸೂರ್ಯ, ಮತ್ತು ನಕ್ಷತ್ರ ಇವುಗಳ ಪ್ರಕಾಶವೇ ಇಲ್ಲ.

೧೧. ಮತ್ತು ಅಲ್ಲಿರುವ ಜನರು ಕಾನ್ತಿಯಲ್ಲಿ, ವರ್ಣದಲ್ಲಿ, ಕಣ್ಣುಗಳಲ್ಲಿ ಮತ್ತು ಶರೀರದ ಸುವಾಸನೆಯಲ್ಲಿಯೂ ಕೂಡ, ಪದ್ಮ ಪುಷ್ಪಗಳಿಗೆ ಸಮಾನರಾಗಿ ಹುಟ್ಟುತ್ತಾರೆ.

೧೨. ನೇರಲಹಣ್ಣಿನ ರಸವನ್ನೇ ಆಹಾರವಾಗಿ ಸೇವಿಸುತ್ತಾ ಬೆವರು ಮುಂತಾದ ಕಶ್ಮಲವು ಶರೀರದಿಂದ ಸ್ರವಿಸುವ ಸ್ವಭಾವವಿಲ್ಲದೇ ಸುವಾಸನೆಯುಳ್ಳವರಾಗಿ ಸತ್ಕರ್ಮಗಳ ಫಲವನ್ನು ಅನುಭವಿಸುತ್ತಾ ಧೈರ್ಯವಂತರಾಗಿಯೂ ಸ್ವತಂತ್ರರಾಗಿಯೂ ಇರುತ್ತಾರೆ.

೧೩. ಆ ಪ್ರಜೆಗಳು ದೇವಲೋಕದಿಂದ ಚ್ಯುತರಾಗಿ ಚಿನ್ನದ ಉಡುಪುಗಳನ್ನೇ ಧರಿಸುತ್ತಾ ಶ್ರೇಷ್ಠರೆನಿಸಿಕೊಂಡು ಹದಿಮೂರು ಸಾವಿರ ವರ್ಷಗಳವರೆಗೆ ಜೀವಿಸುತ್ತಾರೆ.

ಆಯುಃ ಪ್ರಮಾಣಂ ಜೀವನ್ತಿ ಯೇ ತು ವರ್ಷ ಇಲಾವೃತೇ ।
ಮೇರೋಃ ಪ್ರತಿದಿಶಂ ಯಚ್ಚ ನವಸಾಹಸ್ರವಿಸ್ತೃತಮ್ ॥ ೧೪ ॥

ಯೋಜನಾನಾಂ ಸಹಸ್ರಾಣಿ ಷಟ್ತ್ರಿಂಶತ್ತಸ್ಯ ವಿಸ್ತರಃ ।
ಚತುರಸ್ರಂ ಸಮಂತಾಚ್ಚ ಶರಾವಾಕಾರಸಂಸ್ಥಿತಮ್ ॥ ೧೫ ॥

ಮೇರೋಃ ಪಶ್ಚಿಮಭಾಗೇ ತು ನವಸಾಹಸ್ರಸಮ್ಮಿತೇ ।
ಚತುಸ್ತ್ರಿಂಶತ್ಸಹಸ್ರಾಣಿ ಗಂಧಮಾದನಪರ್ವತಃ ॥ ೧೬ ॥

ಉದಗ್ದಕ್ಷಿಣತಶ್ಚೈವ ಆನೀಲನಿಷಧಾಯತಃ ।
ಚತ್ವಾರಿಂಶತ್ಸಹಸ್ರಾಣಿ ಪರಿವೃದ್ಧೋ ಮಹೀತಲಾತ್ ॥ ೧೭ ॥

ಸಹಸ್ರ ಮವಗಾಢಶ್ಚ ತಾವದೇವ ಚ ವಿಸ್ತೃತಃ ।
ಪೂರ್ವೇಣ ಮಾಲ್ಯವಾಞ್ಛೈಲಸ್ತತ್ಪ್ರಮಾಣಃ ಪ್ರಕೀರ್ತಿತಃ ॥ ೧೮ ॥

---

೧೪-೧೫. ಇಂತಹ ಇಲಾವೃತ ವರ್ಷವು ಮೇರುಪರ್ವತದ ಪ್ರತಿಯೊಂದು ದಿಕ್ಕಿನಲ್ಲಿಯೂ ಒಂಭತ್ತು ಸಾವಿರ ಯೋಜನ ವಿಸ್ತಾರವುಳ್ಳದ್ದಾಗಿಯೂ ತಟ್ಟೆಯ ಆಕಾರವಾಗಿ ನಾಲ್ಕು ಕಡೆಗಳಲ್ಲಿಯೂ ಸೇರಿ ಮೂವತ್ತಾರು ಸಾವಿರ ಯೋಜನ ವಿಸ್ತಾರವುಳ್ಳದ್ದಾಗಿರುವುದು.

೧೬. ಒಂಭತ್ತು ಸಾವಿರ ಯೋಜನ ಪರಿಮಾಣವುಳ್ಳ ಮೇರುಪರ್ವತದ ಪಶ್ಚಿಮ ಭಾಗದಲ್ಲಿ ಗಂಧಮಾದನವೆಂಬ ಪರ್ವತವು ಮೂವತ್ತನಾಲ್ಕು ಸಾವಿರ ಯೋಜನದ ವಿಸ್ತಾರವನ್ನು ಹೊಂದಿಕೊಂಡಿರುತ್ತದೆ.

೧೭. ಆ ಪರ್ವತವು ಉತ್ತರ ದಕ್ಷಿಣ ದಿಕ್ಕುಗಳಲ್ಲಿರುವ ನಿಷಧ ನೀಲಪರ್ವತಗಳ ವರೆಗೆ ವ್ಯಾಪಿಸಿಕೊಂಡು ಭೂಮಿಯಿಂದ ನಲವತ್ತು ಸಾವಿರ ಯೋಜನಗಳು ಎತ್ತರವಾಗಿ ಬೆಳೆದಿರುತ್ತದೆ.

೧೮. ಮತ್ತು ಅಷ್ಟೇ ಪರಿಮಾಣದಿಂದ ಭೂಮಿಯ ಒಳಗೂ ವ್ಯಾಪಿಸಿಕೊಂಡಿದ್ದಾಗಿದೆ. ಈ ಪರ್ವತಕ್ಕೆ ಅದೇ ಪರಿಮಾಣದ ಮಾಲ್ಯವಾನ್ ಎಂಬ ಪರ್ವತವು ಪೂರ್ವದಲ್ಲಿಯೂ ನೀಲಪರ್ವತವು ದಕ್ಷಿಣದಲ್ಲಿಯೂ ನಿಷಧವೆಂಬ ಪರ್ವತವು ಉತ್ತರದಲ್ಲಿಯೂ ಇರುತ್ತವೆ.

ದಕ್ಷಿಣೇನ ತು ನೀಲಶ್ಚ ನಿಷಧಶ್ಚೋತ್ತರೇಣ ತು ।
ತೇಷಾಂ ಮಧ್ಯೇ ಮಹಾಮೇರುಃ ಸ್ವೈಃ ಪ್ರಮಾಣೈಃ ಪ್ರತಿಷ್ಠಿತಃ ॥ ೧೯ ॥

ಸರ್ವೇಷಾಮೇವ ಶೈಲಾನಾಮುನಗಾಢೋ ಯಥಾ ಭವೇತ್ ।
ವಿಸ್ತರಸ್ತತ್ಪ್ರಮಾಣಃ ಸ್ಯಾದಾಯಾಮೋ ನಿಯುತಂ ಸ್ಮೃತಃ ॥ ೨೦ ॥

ವೃತ್ತಭಾವಾತ್ಸಮುದ್ರಸ್ಯ ಮಹೀಮಣ್ಡಲಭಾವತಃ ।
ಆಯಾಮಾಃ ಪರಿಹೀಯನ್ತೇ ಚತುರಸ್ರಸಮಾಃ ಸ್ಮೃತಾಃ ॥ ೨೧ ॥

ಇಲಾವೃತಂ ಚತುಷ್ಕೋಣಂ ಭಿನ್ದನ್ತೀ ಮಧ್ಯಭಾಗತಃ ।
ಪ್ರಭಿನ್ನಾಞ್ಜನಸಙ್ಕಾಶಾ ಜಮ್ಬೂರಸವತೀ ನದೀ ॥ ೨೨ ॥

ಮೇರೋಸ್ತು ದಕ್ಷಿಣೇ ಪಾರ್ಶ್ವೇ ನಿಷಧಸ್ಯೋತ್ತರೇಣ ಚ ।
ಸುದರ್ಶನೋ ನಾಮ ಮಹಾಞ್ಜಮ್ಬೂವೃಕ್ಷಃ ಸನಾತನಃ ॥ ೨೩ ॥

ನಿತ್ಯಪುಷ್ಪಫಲೋಪೇತಃ ಸಿದ್ಧಚಾರಣಸೇವಿತಃ ।
ತಸ್ಯ ನಾಮ್ನಾ ಸಮಾಖ್ಯಾತೋ ಜಮ್ಬೂದ್ವೀಪೋ ವನಸ್ಪತೇಃ ॥ ೨೪ ॥

---

೧೯-೨೦. ಈ ಪರ್ವತಗಳ ಮಧ್ಯದಲ್ಲಿ ಮಹಾ ಮೇರುಪರ್ವತವು ತನ್ನ ದೊಡ್ಡ ಪ್ರಮಾಣದಿಂದ ಪ್ರತಿಷ್ಠೆಯನ್ನು ಹೊಂದಿ ಎಲ್ಲ ಪರ್ವತಗಳನ್ನೂ ವ್ಯಾಪಿಸಿಕೊಂಡಿರುವಂತೆ ಅತಿ ವಿಸ್ತಾರವುಳ್ಳದ್ದಾಗಿಯೂ ನಿಯುತ ಯೋಜನಗಳಷ್ಟು ದೀರ್ಘವಾಗಿಯೂ ಇರುತ್ತದೆ.

೨೧. ಚತುಷ್ಕೋಣದಂತಿರುವ ಈ ಮೇರುಪರ್ವತದ ಮೂಲೆಗಳ ದೀರ್ಘ ಪರಿಮಾಣಗಳು ಸಮುದ್ರವೂ ಭೂಮಂಡಲವೂ ಗುಂಡಾಗಿರುವುದರಿಂದ ಕಡಿಮೆಯಾಗಿ ತೋರುತ್ತವೆ.

೨೨. ಚತುಷ್ಕೋಣವಾದ ಇಲಾವೃತ ವರ್ಷವನ್ನು ನಾಲ್ಕು ಭಾಗವಾಗಿ ಪ್ರತ್ಯೇಕಿಸುತ್ತಾ ಮಧ್ಯದಲ್ಲಿ ಜಂಬೂರಸದ ನದಿಯು ಕಾಡಿಗೆಯಂತೆ ಕಪ್ಪು ಬಣ್ಣವುಳ್ಳದ್ದಾಗಿ ಹರಿಯುತ್ತಿದೆ.

೨೩. ಮೇರು ಪರ್ವತಕ್ಕೆ ದಕ್ಷಿಣದಲ್ಲಿಯೂ ನಿಷಧ ಪರ್ವತಕ್ಕೆ ಉತ್ತರದಲ್ಲಿಯೂ ಸುದರ್ಶನವೆಂಬ ಒಂದು ಜಮ್ಬೂವೃಕ್ಷವು ಅನಾದಿಯಾಗಿ ಬೆಳೆದಿರುತ್ತದೆ.

೨೪. ಸಿದ್ಧರು, ಚಾರಣರು ಇವರಿಂದ ಸೇವಿಸಲ್ಪಟ್ಟ ಈ ಜಂಬೂವೃಕ್ಷವು

ಯೋಜನಾನಾಂ ಸಹಸ್ರಂ ಚ ಶತಂ ಚಾನ್ಯನ್ಮಹಾತ್ಮನಃ ।
ಉತ್ಸೇಧೋ ವೃಕ್ಷರಾಜಸ್ಯ ದಿವಂ ಸ್ಪೃಶತಿ ಸರ್ವತಃ ॥ ೨೫ ॥

ಅರತ್ನೀನಾಂ ಶತಾನ್ಯಷ್ಟೌ ಏಕಷಷ್ಟ್ಯಧಿಕಾನಿ ತು ।
ಫಲಪ್ರಮಾಣಂ ಸಂಖ್ಯಾತಮೃಷಿಭಿಸ್ತತ್ತ್ವದರ್ಶಿಭಿಃ ॥ ೨೬ ॥

ಪತಮಾನಾನಿ ತಾನ್ಯುರ್ವ್ಯಾಂ ಕುರ್ವನ್ತಿ ವಿಪುಲಂ ಸ್ವನಮ್ ।
ತಸ್ಯಾ ಜಮ್ಬ್ವಾಃ ಫಲರಸೋ ನದೀ ಭೂತ್ವಾ ಪ್ರಸರ್ಪತಿ ॥ ೨೭ ॥

ಮೇರುಂ ಪ್ರದಕ್ಷಿಣಂ ಕೃತ್ವಾ ಜಮ್ಬೂಮೂಲಂ ವಿಶತ್ಯಧಃ ।
ತಂ ಪಿಬಂತಿ ಸದಾ ಹೃಷ್ಟಾ ಜಮ್ಬೂರಸಮಿಲಾವೃತೇ ॥ ೨೮ ॥

ಜಂಬೂಫಲರಸೇ ಪೀತೇ ನ ಜರಾ ಬಾಧತೇ ತು ತಾನ್ ।
ನ ಕ್ಷುಧಾ ನ ಶ್ರಮಶ್ಚಾಪಿ ನ ಮೃತ್ಯುರ್ನ ಚ ತನ್ದ್ರಿತಮ್ ॥ ೨೯ ॥

---

ಸರ್ವಕಾಲದಲ್ಲಿಯೂ ಫಲಪುಷ್ಪಗಳಿಂದ ಅಲಂಕರಿಸಲ್ಪಟ್ಟಿದ್ದಾಗಿ ತನ್ನ ಹೆಸರಿನಿಂದಲೆ ಈ ದ್ವೀಪಕ್ಕೆ ಜಂಬೂದ್ವೀಪವೆಂಬ ಹೆಸರನ್ನು ತಂದಿರುವುದಾಗಿದೆ.

೨೫. ಇಂತಹ ಜಂಬೂವೃಕ್ಷವು ಒಂದು ಸಾವಿರದ ಒಂದುನೂರು ಯೋಜನೆಗಳಷ್ಟು ದೀರ್ಘವಾಗಿರುವುದರಿಂದ ಇದರ ಎತ್ತರವು ಸ್ವರ್ಗವನ್ನು ಮುಟ್ಟುತ್ತಿರುವಂತೆ ತೋರುತ್ತದೆ.

೨೬. ಈ ವೃಕ್ಷದ ಫಲಗಳು ಎಂಟುನೂರ ಅರವತ್ತೊಂದು ಅರತ್ನಿ ಪರಿಮಾಣದಿಂದ ಇವೆಯೆಂದು ತತ್ತ್ವಜ್ಞರು ಪರಿಮಾಣವನ್ನು ಲೆಕ್ಕಮಾಡಿ ಹೇಳುತ್ತಾರೆ.

೨೭, ಆ ಫಲಗಳು ಮರದಿಂದ ನೆಲಕ್ಕೆ ಬೀಳುವಾಗ ದೊಡ್ಡದಾದ ಶಬ್ದವಾಗುತ್ತದೆ. ಮತ್ತು ಅವುಗಳ ರಸವು ದೊಡ್ಡ ನದಿಯಾಗಿ ಹರಿಯುತ್ತದೆ.

೨೮. ಜಂಬೂರಸದ ನದಿಯು ಮೇರುಪರ್ವತಕ್ಕೆ ಪ್ರದಕ್ಷಿಣವಾಗಿ ಹರಿದು ಜಂಬೂ ಮೂಲವನ್ನೇ ಸೇರುವುದು, ಇಲಾವೃತದಲ್ಲಿ ವಾಸಿಸುವ ಜನರು ಈ ಜಂಬೂ ರಸವನ್ನು ಆನಂದದಿಂದ ಪಾನಮಾಡುತ್ತಾರೆ.

೨೯. ಜಂಬೂರಸವನ್ನು ಪಾನಮಾಡಿದವರಿಗೆ ಜರಾ, ಮರಣ, ಕ್ಷುತ್, ಪಿಪಾಸೆ ಇವುಗಳ ಪೀಡೆಯೂ ಸಾಮಾನ್ಯವಾದ ಆಲಸ್ಯವೂ ಸಹ ಇರುವುದಿಲ್ಲ.

ತತ್ರ ಜಾಮ್ಬೂನದಂ ನಾಮ ಕನಕಂ ದೇವಭೂಷಣಮ್ ।
ಇಂದ್ರಗೋಪಕಸಂಕಾಶಂ ಜಾಯತೇ ಭಾಸ್ವರಂ ತು ತತ್ ॥ ೩೦ ॥

ಸರ್ವೇಷಾಂ ವರ್ಷವೃಕ್ಷಾಣಾಂ ಶುಭಃ ಫಲರಸಃ ಸ್ಮೃತಃ ।
ಸ್ಕನ್ನಂ ಭವತಿ ತಚ್ಛುಭ್ರಂ ಕನಕಂ ದೇವಭೂಷಣಮ್ ॥ ೩೧ ॥

ತೇಷಾಂ ಮೂತ್ರಂ ಪುರೀಷಂ ಚ ದಿಕ್ಷು ಸರ್ವಾಸು ಸರ್ವಶಃ ।
ಈಶ್ವರಾನುಗ್ರಹಾದ್ಭೂಮಿರ್ಮೃತಾಂಶ್ಚ ಗ್ರಸತೇ ತು ತಾನ್ ॥ ೩೨ ॥

ರಕ್ಷಃಪಿಶಾಚಯಕ್ಷಾಶ್ಚ ಸರ್ವೇ ಹೈಮವತೇ ಸ್ಮೃತಾಃ ।
ಹೇಮಕೂಟೇತು ಗಂಧರ್ವಾ ವಿಜ್ಞೇಯಾಃ ಸಾಪ್ಸರೋಗಣಾಃ ॥ ೩೩ ॥

ಸರ್ವೇ ನಾಗಾಸ್ತು ನಿಷಧೇ ಶೇಷವಾಸುಕಿತಕ್ಷಕಾಃ ।
ಮಹಾಮೇರೌ ತ್ರಯಸ್ತ್ರಿಂಶತ್ ಕ್ರೀಡಂತೇ ಯಜ್ಞಿಯಾಃ ಸುರಾಃ ॥ ೩೪ ॥

---

೩೦. ಈ ಜಂಬೂರಸದ ನದಿಯಲ್ಲಿ ದೇವತೆಗಳಿಗೆ ಅಲಂಕಾರವನ್ನೊದಗಿಸುವ ಜಾಂಬೂನದವೆಂಬ ಚಿನ್ನವು ಇಂದ್ರಗೋಪವೆಂಬ ಕೆಂಪು ಕ್ರಿಮಿಯಂತೆ ಕೆಂಪಾಗಿ ಹೊಳೆಯುತ್ತಿದೆ.

೩೧. ಹಿಂದೆ ಹೇಳಿರುವ ಸಮಸ್ತ ವರ್ಷಗಳಲ್ಲಿ ಪ್ರಧಾನವಾಗಿದ್ದ ಆಯಾಯ ವೃಕ್ಷಗಳ ಮಂಗಳಕರವಾದ ರಸವು ಪ್ರಶಸ್ತವಾದುದು. ಆ ರಸವು ಸುರಿದು ಭೂಮಿಯ ಮೇಲೆ ಹರಿಯುವಾಗ ಶುದ್ಧವೂ ದೇವತೆಗಳಿಗೆ ಅಲಂಕಾರ ಸಾಧನವೂ ಆದ ಸುವರ್ಣ ವಾಗಿ ಪರಿಣಮಿಸುತ್ತದೆ.

೩೨. ಆಯಾಯ ಪವಿತ್ರ ವರ್ಷಗಳಲ್ಲಿ ವಾಸಮಾಡುವ ಸುಕೃತಿಗಳ ಮೂತ್ರ ಪುರೀಷಗಳನ್ನು ಸಮಸ್ತ ದಿಕ್ಕುಗಳಲ್ಲಿಯೂ ಸಮಸ್ತ ಪ್ರದೇಶಗಳಲ್ಲಿಯೂ ಈಶ್ವರಾ ನುಗ್ರಹದಿಂದ ಭೂಮಿಯು ಗ್ರಾಸಮಾಡುತ್ತದೆ. ಮತ್ತು ಮೃತರಾದ ಪ್ರಜೆಗಳನ್ನು ಭೂಮಿಯು ನುಂಗಿಹಾಕಿ ಅದೃಶ್ಯವನ್ನಾಗಿ ಮಾಡುತ್ತದೆ.

೩೩. ಹೈಮವತ ವರ್ಷದಲ್ಲಿ ರಾಕ್ಷಸ ಪಿಶಾಚ ಯಕ್ಷ ಮುಂತಾದ ಸಕಲ ಪ್ರಜೆ ಗಳು ವಾಸಮಾಡುವರು. ಹೇಮಕೂಟ ವರ್ಷದಲ್ಲಿ ಅಪ್ಸರಃ ಸ್ತ್ರೀಯರಿಂದ ಕೂಡಿದ ಗಂಧರ್ವರು ವಾಸಮಾಡುವರು.

೩೪. ವರ್ಷ ಪರ್ವತಗಳಲ್ಲಿ ಒಂದಾದ ನಿಷಧ ಪರ್ವತದಲ್ಲಿ ಶೇಷ-ವಾಸುಕಿ

ನೀಲೇ ತು ವೈದೂರ್ಯಮಯೇ ಸಿದ್ಧಾ ಬ್ರಹ್ಮರ್ಷಯೋಽಮಲಾಃ ।
ದೈತ್ಯಾನಾಂ ದಾನವಾನಾಂ ಚ ಶ್ವೇತಃ ಪರ್ವತ ಉಚ್ಯತೇ ॥ ೩೫ ॥

ಶೃಂಗವಾನ್ ಪರ್ವತಶ್ರೇಷ್ಠಃ ಪಿತೄಣಾಂ ಪ್ರತಿಸಂಚರಃ ।
ನವಸ್ವೇತೇಷು ವರ್ಷೇಷು ಯಥಾಭಾಗಂ ಸ್ಥಿತೇಷು ವೈ ॥ ೩೬ ॥

ಭೂತಾನ್ಯುಪನಿವಿಷ್ಟಾನಿ ಗತಿಮಂತಿ ಧ್ರುವಾಣಿ ಚ ।
ತೇಷಾಂ ವಿವೃದ್ಧಿರ್ಬಹುಧಾ ದೃಶ್ಯತೇ ದಿವ್ಯಮಾನುಷೀ ।
ನ ಸಂಖ್ಯಾ ಪರಿಸಂಖ್ಯಾತುಂ ಶ್ರದ್ಧೇಯಾತು ಬುಭೂಷತಾಮ್ ॥ ೩೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಸಪ್ತದಶೋಽಧ್ಯಾಯಃ

---

ಮುಂತಾದ ಸಕಲ ಸರ್ಪರೂಪರಾದ ಪ್ರಜೆಗಳು ವಾಸಮಾಡುತ್ತಾರೆ. ಮಹಾಮೇರು ಪರ್ವತದಲ್ಲಿ ಯಜ್ಞಗಳಲ್ಲಿ ಪೂಜ್ಯರಾದ ಮೂವತ್ತಮೂರು ದೇವತೆಗಳು ವಾಸ ಮಾಡುತ್ತಾರೆ.

೩೫. ವೈದೂರ್ಯ ರತ್ನಗಳಿಂದ ಉಜ್ಜ್ವಲವಾದ ನೀಲಪರ್ವತದಲ್ಲಿ ಯೋಗ ಸಿದ್ಧಿಯನ್ನು ಹೊಂದಿದ ಪಾವನರಾದ ಬ್ರಹ್ಮರ್ಷಿಗಳು ವಾಸಮಾಡುತ್ತಾರೆ. ಶ್ವೇತ ಪರ್ವತವು ದೈತ್ಯ-ದಾನವರ ವಾಸಭೂಮಿಯಾಗಿರುವುದು.

೩೬. ಶೃಂಗವಾನ್ ಎಂಬ ಪರ್ವತವು ಪಿತೃದೇವತೆಗಳ ಸಂಚಾರ ಪ್ರದೇಶವಾಗಿರುವುದು. ಈ ರೀತಿಯಾಗಿ ಆಯಾಯ ಭಾಗಗಳಲ್ಲಿ ಒಂಭತ್ತು ವರ್ಷ ಖಂಡಗಳು ಪ್ರತಿಷ್ಠಿತಗಳಾಗಿರುವುವು.

೩೭. ಆ ವರ್ಷಗಳಲ್ಲಿ ಅನೇಕ ಸ್ಥಾವರ ಮತ್ತು ಜಂಗಮ ಪ್ರಾಣಿಗಳು ಆಶ್ರಯವನ್ನು ಪಡೆದಿವೆ. ಆ ದಿವ್ಯರು ಮತ್ತು ಮಾನುಷರು ಮುಂತಾದ ಸಮಸ್ತ ಪ್ರಾಣಿಗಳು ಈ ಆಶ್ರಯ ಬಲದಿಂದ ಸರ್ವತೋಮುಖವಾದ ವೃದ್ಧಿಯನ್ನು ಹೊಂದಿರುವುವು. ಇದರ ಸಂಖ್ಯೆಯನ್ನು ಎಣಿಸಿ ನಿರ್ದೇಶಿಸುವುದು ಅಸಾಧ್ಯವು. ಆಸ್ತಿಕರಾಗಿರುವ ಜ್ಞಾನಾರ್ಥಿಯಾದವರು ನಂಬಲು ಅರ್ಹವಾಗಿರುವುದು.

ಬ್ರಹ್ಮಾಂಡ ಪುರಾಣದಲ್ಲಿ ಹದಿನೇಳನೆಯ ಅಧ್ಯಾಯವು ಸಮಾಪ್ತವು.

# ಅಷ್ಟಾದಶೋಽಧ್ಯಾಯಃ

**ಸೂತ ಉವಾಚ**

ಮಧ್ಯೇ ಹಿಮವತಃ ಪೃಷ್ಠೇ ಕೈಲಾಸೋ ನಾಮ ಪರ್ವತಃ ।
ತಸ್ಮಿನ್ನಿವಸತಿ ಶ್ರೀಮಾನ್ ಕುಬೇರಃ ಸಹ ರಾಕ್ಷಸೈಃ ॥ ೧ ॥

ಅಪ್ಸರೋಽನುಚರೋ ರಾಜಾ ಮೋದ್ಯತೇ ಹ್ಯಲಕಾಧಿಪಃ ।
ಕೈಲಾಸಪಾದಾತ್ಸಂಭೂತಂ ಪುಣ್ಯಂ ಶೀತಜಲಂ ಶುಭಮ್ ॥ ೨ ॥

ಮನ್ದಂ ನಾಮ್ನಾ ಕುಮುದ್ವತ್ತತ್ಸರಸ್ತೂದಧಿಸನ್ನಿಭಮ್ ।
ತಸ್ಮಾದ್ದಿವ್ಯಾತ್ಪ್ರಭವತಿ ನದೀ ಮನ್ದಾಕಿನೀ ಶುಭಾ ॥ ೩ ॥

ದಿವ್ಯಂ ಚ ನನ್ದನವನಂ ತಸ್ಯಾಸ್ತೀರೇ ಮಹದ್ವನಮ್ ।
ಪ್ರಾಗುತ್ತರೇಣ ಕೈಲಾಸಾದ್ದಿವ್ಯಂ ಸರ್ವೌಷಧಿಂ ಗಿರಿಮ್ ॥ ೪ ॥

ರತ್ನಧಾತುಮಯಂ ಚಿತ್ರಂ ಸಬಲಂ ಪರ್ವತಂ ಪ್ರತಿ ।
ಚನ್ದ್ರಪ್ರಭೋ ನಾಮ ಗಿರಿಃ ಸುಶುಭ್ರೋ ರತ್ನಸನ್ನಿಭಃ ॥ ೫ ॥

---

೧. ಸೂತನು ಹೇಳುತ್ತಾನೆ :—ಹಿಮವತ್ಪರ್ವತದ ಮೇಲೆ ಕೈಲಾಸವೆಂಬ ಒಂದು ಬೆಟ್ಟವಿರುವುದು. ಅಲ್ಲಿರುವ ಅಲಕಾಪುರವೆಂಬ ರಾಜಧಾನಿಯಲ್ಲಿ ರಾಕ್ಷಸರಿಂದಲೂ ಅಪ್ಸರ ಸ್ತ್ರೀಯರಿಂದಲೂ ಸೇವಿತನಾದ ಕುಬೇರನು ಆಳುತ್ತಿದ್ದನು.

೨-೩. ಕೈಲಾಸಪರ್ವತದ ತಪ್ಪಲಿನಲ್ಲಿ ಶೀತೋದಕ, ಕುಮುದಾದಿ ಪುಷ್ಪಗಳಿಂದ ಪೂರ್ಣವಾಗಿ ಸಮುದ್ರದಂತೆ ಶೋಭಿಸುವ "ಮಂದ" ಎಂಬ ಹೆಸರಿನ ಸರೋವರವಿರುವುದು. ಅದರಿಂದ ದಿವ್ಯವಾದ ಮಂದಾಕಿನೀ ನದಿಯು ಹರಿಯುವುದು.

೪-೫. ಅದರ ತೀರದಲ್ಲಿ ನಂದನವನವೆಂಬ ದೊಡ್ಡ ಅರಣ್ಯವಿರುವುದು. ಕೈಲಾಸಕ್ಕೆ ಈಶಾನ್ಯದಿಕ್ಕಿನಲ್ಲಿ ಅನೇಕ ಮೂಲಿಕೆಗಳು, ರತ್ನಗಳು, ಇವುಗಳಿಂದ ಚಿತ್ರವಾಗಿ ತೋರುವ ಸಬಲವೆಂಬ ಪರ್ವತವೂ, ಅದರ ಎದುರಾಗಿ ಚಂದ್ರಪ್ರಭವೆಂಬ ರತ್ನಮಯವಾದ ಪರ್ವತವೂ ಶೋಭಿಸುತ್ತಿವೆ.

ತಸ್ಯ ಪಾದೇ ಮಹದ್ದಿವ್ಯಂ ಸ್ವಚ್ಛೋದಂ ನಾಮ ತತ್ಸರಃ ।
ತಸ್ಮಾದ್ದಿವ್ಯಾತ್ಪ್ರಭವತಿ ಸ್ವಚ್ಛೋದಾ ನಾಮ ನಿಮ್ನಗಾ ॥ ೬ ॥

ತಸ್ಯಾಸ್ತೀರೇ ಮಹದ್ದಿವ್ಯಂ ವನಂ ಚೈತ್ರರಥಂ ಶುಭಮ್ ।
ತಸ್ಮಿನ್ಗಿರೌ ನಿವಸತಿ ಮಣಿಭದ್ರಸ್ಸಸಾನುಗಃ ॥ ೭ ॥

ಯಕ್ಷಸೇನಾಪತಿಃ ಕ್ರೂರೋ ಗುಹ್ಯಕೈಃ ಪರಿವಾರಿತಃ ।
ಪುಣ್ಯಾ ಮನ್ದಾಕಿನೀ ಚೈವ ನದೀ ಸ್ವಚ್ಛೋದಕಾ ಚ ಯಾ ॥ ೮ ॥

ಮಹೀಮಣ್ಡಲಮಧ್ಯೇನ ಪ್ರವಿಷ್ಟೇ ತೇ ಮಹೋದಧಿಮ್ ।
ಕೈಲಾಸಾದ್ದಕ್ಷಿಣೇ ಪ್ರಾಚ್ಯಾಂ ಶಿವಸತ್ವೌಷಧಿಂ ಗಿರಿಮ್ ॥ ೯ ॥

ಮನಶ್ಶಿಲಾಮಯಂ ದಿವ್ಯಂ ಚಿತ್ರಾಙ್ಗಂ ಪರ್ವತಂ ಪ್ರತಿ ।
ಲೋಹಿತೋ ಹೇಮಶೃಂಗಶ್ಚ ಗಿರಿಸೂರ್ಯಪ್ರಭೋ ಮಹಾನ್ ॥ ೧೦ ॥

ತಸ್ಯ ಪಾದೇ ಮಹದ್ದಿವ್ಯಂ ಲೋಹಿತಂ ನಾಮ ತತ್ಸರಃ ।
ತಸ್ಮಾತ್ಪುಣ್ಯಃ ಪ್ರಭವತಿ ಲೌಹಿತ್ಯಃ ಸ ನದೋ ಮಹಾನ್ ॥ ೧೧ ॥

---

೬. ಆ ಬೆಟ್ಟದ ತಪ್ಪಲಿನಲ್ಲಿ ಸ್ವಚ್ಛೋದವೆಂಬ ದಿವ್ಯವಾದ ಸರೋವರವಿದೆ. ಅದರಿಂದ ಸ್ವಚ್ಛೋದವೆಂಬ ನದಿಯು ಹುಟ್ಟುತ್ತದೆ.

೭. ಆ ನದಿಯ ತೀರದಲ್ಲಿರುವ ಚೈತ್ರರಥವೆಂಬ ವನದಲ್ಲಿ ಯಕ್ಷರ ಸೇನಾ ನಾಯಕನೂ ಅನೇಕ ಯಕ್ಷರಿಂದ ಪರಿವೃತನೂ ಆದ ಮಣಿಭದ್ರನು ವಾಸವಾಗಿರುವನು.

೮. ಈ ಮಂದಾಕಿನೀ, ಸ್ವಚ್ಛೋದ ಎಂಬ ಎರಡು ನದಿಗಳೂ ಭೂಮಂಡಲ ದಲ್ಲಿ ಹರಿದು ಮಹೋದಧಿಯನ್ನು ಸೇರುವುವು.

೯-೧೦. ಕೈಲಾಸಕ್ಕೆ ಆಗ್ನೇಯ ದಿಕ್ಕಿನಲ್ಲಿ ಮಂಗಳಕರವಾದ ಅನೇಕ ಮೂಲಿಕೆ ಗಳಿಂದಲೂ ಮಣಿಶಿಲೆ ಮುಂತಾದ ಧಾತುಗಳಿಂದಲೂ ತುಂಬಿದ ಚಿತ್ರಾಂಗವೆಂಬ ಪರ್ವತವೂ, ಅದಕ್ಕೆ ಎದುರಾಗಿ ಸೂರ್ಯನಂತೆ ಕೆಂಪಾಗಿ ಕಂಗೊಳಿಸುವ ಚಿನ್ನದ ಶಿಖರಗಳಿಂದ ರಾಜಿಸುವ ಸೂರ್ಯಪ್ರಭವೆಂಬ ದೊಡ್ಡ ಬೆಟ್ಟವೂ ಇರುವುವು.

೧೧. ಸೂರ್ಯಪ್ರಭಗಿರಿಯ ತಪ್ಪಲಿನಲ್ಲಿ ಲೌಹಿತ್ಯವೆಂಬ ನದಕ್ಕೆ ಉತ್ಪತ್ತಿಸ್ಥಾನ ವಾದ ಲೋಹಿತವೆಂಬ ಸರೋವರವಿರುವುದು.

ದೇವಾರಣ್ಯಂ ವಿಶೋಕಂ ಚ ತಸ್ಯ ತೀರೇ ಮಹದ್ವನಮ್ ।
ತಸ್ಮಿನ್ಗಿರೌ ನಿವಸತಿ ಯಕ್ಷೋ ಮಣಿಧರೋ ವಶೀ ॥ ೧೨ ॥

ಸೌಮ್ಯೈಃ ಸುಧಾರ್ಮಿಕೈಶ್ಚೈವ ಗುಹ್ಯಕೈಃ ಪರಿವಾರಿತಃ ।
ಕೈಲಾಸಾದ್ದಕ್ಷಿಣೇ ಪಾರ್ಶ್ವೇ ಕ್ರೂರಸತ್ತ್ವೌಷಧಿರ್ಗಿರಿಃ ॥ ೧೩ ॥

ವೃತ್ರಕಾಯಾತ್ಕಿಲೋತ್ಪನ್ನಮಞ್ಜನಂ ತ್ರಿಕಕುಂ ಪ್ರತಿ ।
ಸರ್ವಧಾತುಮಯಸ್ತತ್ರ ಸುಮಹಾನ್ವೈದ್ಯುತೋ ಗಿರಿಃ ॥ ೧೪ ॥

ತಸ್ಯ ಪಾದೇ ಸರಃ ಪುಣ್ಯಂ ಮಾನಸಂ ಸಿದ್ಧಸೇವಿತಮ್ ।
ತಸ್ಮಾತ್ಪ್ರಭವತೇ ಪುಣ್ಯಾ ಸರಯೂರ್ಲೋಕವಿಶ್ರುತಾ ॥ ೧೫ ॥

ತಸ್ಯಾಸ್ತೀರೇ ವನಂ ದಿವ್ಯಂ ವೈಭ್ರಾಜಮ್ ನಾಮ ವಿಶ್ರುತಮ್ ।
ಕುಬೇರಾನುಚರಸ್ತತ್ರ ಪ್ರಹೇತಿತನಯೋ ವಶೀ ॥ ೧೬ ॥

ಬ್ರಹ್ಮಪೇತೋ ನಿವಸತಿ ರಾಕ್ಷಸೋಽನನ್ತವಿಕ್ರಮಃ ।
ಅನ್ತರಿಕ್ಷಚರೈರ್ಘೋರೈರ್ಯಾತುಧಾನಶತೈರ್ವೃತಃ ॥ ೧೭ ॥

---

೧೨. ಅದರ ದಡದಲ್ಲಿ ವಿಶೋಕವೆಂಬ ದಿವ್ಯವಾದ ವನವಿದೆ. ಅಲ್ಲಿ ಶಾಂತರೂ ಧಾರ್ಮಿಕರೂ ಆದ ಯಕ್ಷರಿಗೆ ಅಧಿಪತಿಯಾದ ಮಣಿಧರನೆಂಬ ಯಕ್ಷನು ವಾಸಿಸುವನು.

೧೩, ೧೪. ಕೈಲಾಸದ ದಕ್ಷಿಣಪಾರ್ಶ್ವದಲ್ಲಿ ಕ್ರೂರಜಂತುಗಳಿಂದ ತುಂಬಿ, ವೃತ್ರಾಸುರನ ಶರೀರದಿಂದ ಹುಟ್ಟಿದ ಅಂಜನಪರ್ವತವೋ ಎಂಬಂತೆ ಕಪ್ಪಾಗಿ ಹೊಳೆಯುವ ತ್ರಿಕಕು ಎಂಬ ಪರ್ವತವೂ, ಅದಕ್ಕೆ ಎದುರಾಗಿ ವಿವಿಧ ಧಾತುಗಳಿಂದ ರಮ್ಯವಾದ ವೈದ್ಯುತವೆಂಬ ದೊಡ್ಡ ಪರ್ವತವೂ ಇರುವುವು.

೧೫. ಅದರ ಬುಡದಲ್ಲಿ ಸಿದ್ಧರಿಂದ ಸೇವಿಸಲ್ಪಡುವ ಮಾನಸವೆಂಬ ಸರೋವರವಿರುವುದು. ಲೋಕವಿಖ್ಯಾತವಾದ ಸರಯೂ ನದಿಯು ಅಲ್ಲಿ ಹುಟ್ಟುತ್ತದೆ.

೧೬-೧೭. ಅದರ ತೀರದಲ್ಲಿ ಸುಂದರವಾದ ವೈಭ್ರಾಜವೆಂಬ ವನವಿದೆ. ಅಲ್ಲಿ ಕುಬೇರನಿಗೆ ಸೇವಕನೂ, ಜಿತೇಂದ್ರಿಯನೂ, ವೇದಬಾಹ್ಯನೂ, ಬಹಳ ಪರಾಕ್ರಮಿಯೂ, ಮಾಯಾವಿಗಳಾದ ಅನೇಕ ರಾಕ್ಷಸರಿಂದ ಸೇವಿತನೂ ಆದ ಪ್ರಹೇತಿಪುತ್ರನೆಂಬ ರಾಕ್ಷಸನು ವಾಸಮಾಡುವನು.

ಅಪರೇಣ ತು ಕೈಲಾಸಾತ್ಪುಣ್ಯಸತ್ತ್ವೌಷಧಿರ್ಗಿರಿಃ ।
ಅರುಣಃ ಪರ್ವತಶ್ರೇಷ್ಠೋ ರುಕ್ಮಧಾತುಮಯಃ ಶುಭಃ ॥ ೧೮ ॥

ಭವಸ್ಯ ದಯಿತಃ ಶ್ರೀಮಾನ್ ಪರ್ವತೋ ಮೇಘಸನ್ನಿಭಃ ।
ಶಾತಕುಂಭಮಯೈಃ ಶುಭ್ರೈಃ ಶಿಲಾಜಾಲೈಸ್ಸಮಾವೃತಃ ॥ ೧೯ ॥

ಶತಸಂಖ್ಯೈಸ್ತಾಪನೀಯೈಃ ಶೃಂಗೈರ್ದಿವಮಿವೋಲ್ಲಿಖನ್ ।
ಮುಞ್ಜವಾಂಸ್ತು ಮಹಾದಿವ್ಯೋ ದುರ್ಗಶ್ಶೈಲೋ ಹಿಮಾಂಚಿತಃ ॥ ೨೦ ॥

ತಸ್ಮಿನ್ಗಿರೌ ನಿವಸತಿ ಗಿರೀಶೋ ಧೂಮ್ರಲೋಚನಃ ।
ತಸ್ಯ ಪಾದಾತ್ಪ್ರಭವತಿ ಶೈಲೋದಂ ನಾಮ ತತ್ಸರಃ ॥ ೨೧ ॥

ತಸ್ಮಾತ್ಪ್ರಭವತೇ ಪುಣ್ಯಾ ಶಿಲೋದಾ ನಾಮ ನಿಮ್ನಗಾ ।
ಸಾ ಚಕ್ಷುಃಸೀತಯೋರ್ಮಧ್ಯೇ ಪ್ರವಿಷ್ಟಾ ಲವಣೋದಧಿಮ್ ॥ ೨೨ ॥

ತಸ್ಯಾಸ್ತೀರೇ ವನಂ ದಿವ್ಯಂ ವಿಶ್ರುತಂ ಸುರಭೀತಿ ವೈ ।
ಸವ್ಯೋತ್ತರೇಣ ಕೈಲಾಸಾತ್ ಶಿವಸತ್ತ್ವೌಷಧಿರ್ಗಿರಿಃ ॥ ೨೩ ॥

ಗೌರಂ ನಾಮ ಗಿರಿಶ್ರೇಷ್ಠಂ ಹರಿತಾಲಮಯಂ ಪ್ರತಿ ।
ಹಿರಣ್ಯಶೃಂಗಸ್ಸುಮಹಾನ್ ದಿವ್ಯೋ ಮಣಿಮಯೋ ಗಿರಿಃ ॥ ೨೪ ॥

---

೧೮-೧೯-೨೦. ಕೈಲಾಸಪರ್ವತದ ಪಶ್ಚಿಮದಿಕ್ಕಿನಲ್ಲಿ ಪವಿತ್ರವಾದ ಓಷಧಿಗಳಿಂದಲೂ ಚಿನ್ನದ ಶಿಖರಗಳಿಂದಲೂ ಶೋಭಿಸುವ ಮುಂಜವಾನ್ ಎಂಬ ಹಿಮಪೂರ್ಣವಾದ ಪರ್ವತವು ತನ್ನ ಎತ್ತರವಾದ ಶಿಖರಗಳಿಂದ ಸ್ವರ್ಗವನ್ನು ಮುಟ್ಟುವಂತೆ ತೋರುತ್ತಾ ಈಶ್ವರನಿಗೆ ಬಹಳ ಪ್ರಿಯವಾದದ್ದಾಗಿದೆ.

೨೧-೨೨. ಆ ಬೆಟ್ಟದಲ್ಲಿ ಅಗ್ನಿಮಯವಾದ ಮೂರನೆಯ ಕಣ್ಣುಳ್ಳ ಈಶ್ವರನು ವಾಸಿಸುವನು. ಮತ್ತು ಆ ಬೆಟ್ಟದಲ್ಲಿಯೇ ಶೈಲೋದವೆಂಬ ಸರೋವರವಿರುವುದು. ಅದರಿಂದ ಶಿಲೋದಾ ಎಂಬ ನದಿಯು ಹುಟ್ಟಿ ಚಕ್ಷು, ಸೀತಾ—ಎಂಬ ನದಿಗಳ ಮಧ್ಯದಲ್ಲಿ ಹರಿದು ಲವಣಸಮುದ್ರವನ್ನು ಸೇರುವುದು.

೨೩-೨೪. ಆ ಶಿಲೋದಾ ನದಿಯ ದಡದಲ್ಲಿ ಸುರಭಿಯೆಂದು ಹೆಸರುವಾಸಿಯಾದ ಕಾಡಿರುವುದು. ಕೈಲಾಸಕ್ಕೆ ನೈಋತ್ಯ ದಿಕ್ಕಿನಲ್ಲಿ ಅನೇಕ ಗಿಡಮೂಲಿಕೆಗಳಿಂದಲೂ

ತಸ್ಯ ಪಾದೇ ಮಹದ್ದಿವ್ಯಂ ಶುಭಂ ಕಾಂಚನವಾಲುಕಮ್ ।
ರಮ್ಯಂ ಬಿನ್ದುಸರೋ ನಾಮ ಯತ್ರ ರಾಜಾ ಭಗೀರಥಃ ॥ ೨೫ ॥

ಗಙ್ಗಾನಿಮಿತ್ತಂ ರಾಜರ್ಷಿರುವಾಸ ಬಹುಲಾಃ ಸಮಾಃ ।
ದಿವ್ಯಂ ಯಾಸ್ಯಂತಿ ತೇ ಪೂರ್ವೇ ಗಙ್ಗಾತೋಯಪರಿಪ್ಲುತಾಃ ॥ ೨೬॥

ಮದೀಯಾ ಇತಿ ನಿಶ್ಚಿತ್ಯ ಸಮಾಹಿತಮನಾಶ್ರಿವೇ ।
ತತ್ರ ತ್ರಿಪಥಗಾ ದೇವೀ ಪ್ರಥಮಂ ತು ಪ್ರತಿಷ್ಠಿತಾ ।
ಸೋಮಪಾದಾತ್ಪ್ರಸೂತಾ ಸಾ ಸಪ್ತಧಾ ಪ್ರತಿಪದ್ಯತೇ ॥ ೨೭ ॥

ಯೂಪಾ ಮಣಿಮಯಾಸ್ತತ್ರ ವಿತತಾಶ್ಚ ಹಿರಣ್ಮಯಾಃ ।
ತತ್ರೇಷ್ಟ್ವಾ ತು ಗತಸ್ಸಿದ್ಧಿಂ ಶಕ್ರಸ್ಸರ್ವೈ ಸ್ಸುರೈಸ್ಸಹ ॥ ೨೮ ॥

ದಿವಿ ಚ್ಛಾಯಾಪಥೋ ಯಸ್ತು ಅನುನಕ್ಷತ್ರಮಣ್ಡಲಃ ।
ದೃಶ್ಯತೇ ಭಾಸ್ವರೋ ರಾತ್ರೌ ದೇವೀ ತ್ರಿಪಥಗಾ ತು ಸಾ ॥ ೨೯ ॥

---

ಅರದಳವೇ ಮುಂತಾದ ಧಾತುಗಳಿಂದಲೂ ಕೂಡಿದ ಗೌರವೆಂಬ ಪರ್ವತವೂ, ಅದಕ್ಕೆ ಎದುರಾಗಿ ಚಿನ್ನದ ಶಿಖರಗಳುಳ್ಳ ಮಣಿಮಯಪರ್ವತವೂ ಇವೆ.

೨೫-೨೬. ಈ ಮಣಿಮಯಪರ್ವತದ ತಪ್ಪಲಿನಲ್ಲಿ ಚಿನ್ನದ ಮರಳುದಿಣ್ಣೆಗಳುಳ್ಳ ರಮಣೀಯವಾದ ಬಿಂದುಸರೋವರವಿರುವುದು. ಅಲ್ಲಿ ಕಪಿಲಮುನಿಯ ಕೋಪಾಗ್ನಿಯಿಂದ ಭಸ್ಮೀಭೂತರಾದ ತನ್ನ ಪೂರ್ವಿಕರು ಗಂಗಾನದಿಯ ಪಾವನ ಜಲದಿಂದ ಪವಿತ್ರರಾಗಿ ಸದ್ಗತಿಯನ್ನೈದುವರೆಂದು ಭಾವಿಸಿ ಗಂಗಾವತರಣಕ್ಕೋಸ್ಕರ ಭಗೀರಥ ರಾಜನು ಏಕಾಗ್ರತೆಯಿಂದ ಅನೇಕಕಾಲ ತಪಸ್ಸುಮಾಡಿದನು.

೨೭. ಆ ಸ್ಥಳದಲ್ಲಿ ಆವಿರ್ಭವಿಸಿದ ಗಂಗಾನದಿಯು ಸೋಮಪಾದದಿಂದ ಹುಟ್ಟಿ ಏಳು ಪಾಲಾಗಿ ಹರಿಯುತ್ತದೆ.

೨೮. ಇಂದ್ರನು ಇತರ ದೇವತೆಗಳೊಂದಿಗೆ ಅನೇಕ ಚಿನ್ನದ ಯೂಪಸ್ತಂಭಗಳನ್ನು ನೆಟ್ಟು ಯಜ್ಞಗಳನ್ನು ಆಚರಿಸಿ ಸಿದ್ಧಿಯನ್ನು ಹೊಂದಿದ ಪವಿತ್ರ ಸ್ಥಳವೇ ಅದು.

೨೯. ಮೂರು ಲೋಕಗಳಲ್ಲಿಯೂ ಹರಿಯುವ ಗಂಗಾನದಿಯೇ ರಾತ್ರಿಯಲ್ಲಿ ನಕ್ಷತ್ರಮಂಡಲಗಳ ದಂಡೆಯಲ್ಲಿ ಪ್ರಕಾಶವಾಗಿ ಛಾಯಾಪಥರೂಪದಿಂದ ತೋರಿಬರುವುದು.

ಅನ್ತರಿಕ್ಷಂ ದಿವಂ ಚೈವ ಭಾವಯನ್ತೀ ಸುರಾಪಗಾ ।
ಭವೋತ್ತಮಾಙ್ಗೇ ಪತಿತಾ ಸಂರುದ್ಧಾ ಯೋಗಮಾಯಯಾ ॥ ೩೦ ॥

ತಸ್ಯಾ ಯೇ ಬಿನ್ದವಃ ಕೇಚಿತ್ ಕ್ರುದ್ಧಾಯಾಃ ಪತಿತಾ ಭುವಿ ।
ಕೃತಂ ತು ತೈರ್ಬಿನ್ದುಸರಸ್ತತೋ ಬಿನ್ದುಸರಃ ಸ್ಮೃತಮ್ ॥ ೩೧ ॥

ತತೋ ನಿರುದ್ಧಾ ಸಾ ದೇವೀ ಭವೇನ ಸ್ಮಯತಾ ಕಿಲ ।
ಚಿನ್ತಯಾಮಾಸ ಮನಸಾ ಶಙ್ಕರಕ್ಷೇಪಣಂ ಪ್ರತಿ ॥ ೩೨ ॥

ಭಿತ್ತ್ವಾ ವಿಶಾಮಿ ಪಾತಾಲಂ ಸ್ರೋತಸಾಽಽಗೃಹ್ಯ ಶಙ್ಕರಮ್ ।
ಜ್ಞಾತ್ವಾ ತಸ್ಯಾ ಅಭಿಪ್ರಾಯಂ ಕ್ರೂರಂ ದೇವ್ಯಾಶ್ಚಿಕೀರ್ಷಿತಮ್ ॥ ೩೩ ॥

ತಿರೋಭಾವಯಿತುಂ ಬುದ್ಧಿರಾಸೀದಙ್ಗೇಷು ತಾಂ ನದೀಮ್ ।
ತಸ್ಯಾವಲೇಪಂ ಜ್ಞಾತ್ವಾ ತು ನದ್ಯಾಃ ಕ್ರುದ್ಧಸ್ತು ಶಙ್ಕರಃ ॥ ೩೪ ॥

ನ್ಯರುಣಚ್ಚ ಶಿರಸ್ಯೇನಾಂ ವೇಗೇನ ಪತತೀಂ ಭುವಿ ।
ಏತಸ್ಮಿನ್ನೇವ ಕಾಲೇ ತು ದೃಷ್ಟ್ವಾ ರಾಜಾನಮಗ್ರತಃ ॥ ೩೫ ॥

---

೩೦. ಭೂಮ್ಯಾಕಾಶಗಳನ್ನೂ ಆಕರ್ಷಿಸುವ ಅಹಂಕಾರದಿಂದ ಹೊರಟ ಆ ಗಂಗೆಯು ಈಶ್ವರನ ಶಿರಸ್ಸಿನಲ್ಲಿ ಬಿದ್ದು ಅವನ ಯೋಗಶಕ್ತಿಯಿಂದ ತಡೆಯಲ್ಪಟ್ಟಳು.

೩೧. ಆಗ ಕುಪಿತಳಾದ ಗಂಗೆಯ ಕೆಲವು ಬಿಂದುಗಳು ಬಿದ್ದು ಸರೋವರವಾದುದರಿಂದ ಅದಕ್ಕೆ ಬಿಂದುಸರವೆಂದು ಹೆಸರು ಬಂದಿತು.

೩೨. ಈಶ್ವರನು ಗಂಗೆಯ ಈ ಅಹಂಕಾರವನ್ನು ಅಡಗಿಸಲೋಸ್ಕರ ನಗುಮುಖದಿಂದ ತನ್ನ ಜಟೆಗಳಲ್ಲಿ ಅವಳನ್ನು ಬಂಧಿಸಿದಾಗ, ಗಂಗೆಯು ಈಶ್ವರನನ್ನೂ ಕೊಚ್ಚಿಕೊಂಡು ಪಾತಾಳಲೋಕಕ್ಕೆ ಹೋಗುವೆನೆಂದು ಯೋಚಿಸಿದಳು.

೩೩-೩೪-೩೫. ಸರ್ವಜ್ಞನಾದ ಈಶ್ವರನು ಅವಳ ಈ ದುರಭಿಪ್ರಾಯವನ್ನು ತಿಳಿದು ತನ್ನ ಅಂಗದಲ್ಲಿ ಅವಳನ್ನು ಅಡಗಿಸಿಬಿಡಬೇಕೆಂದು ಚಿಂತಿಸಿದನು. ಅವಳ ಅಹಂಕಾರದಿಂದ ಕುಪಿತನಾಗಿ ಶಂಕರನು ವೇಗದಿಂದ ಭೂಲೋಕಕ್ಕೆ ಬೀಳುತ್ತಿದ್ದ ಗಂಗೆಯನ್ನು ತಲೆಯಲ್ಲಿ ದೃಢವಾಗಿ ತಡೆದುಬಿಟ್ಟನು.

ಧಮನೀಸನ್ತತಂ ಕ್ಷೀಣಂ ಕ್ಷುಧಯಾ ವ್ಯಾಕುಲೇನ್ದ್ರಿಯಮ್ ।
ಅನೇನ ತೋಷಿತಶ್ಚಾಹಂ ಗತ್ಯರ್ಥಂ ಪೂರ್ವಮೇವ ತು ॥ ೩೬ ॥

ಬುದ್ಧ್ವಾsಸ್ಯ ವರದಾನಂ ಚ ಕೋಪಂ ನಿಯುತಪಾಂಸ್ತು ಸಃ ।
ಬ್ರಹ್ಮಣೋ ವಚನಂ ಶ್ರುತ್ವಾ ಧಾರಯ ಸ್ವರ್ಣದೀಮಿತಿ ॥ ೩೭ ॥

ತತೋ ವಿಸರ್ಜಯಾಮಾಸ ಸಂರುದ್ಧಾಂ ಸ್ವೇನ ತೇಜಸಾ ।
ನದೀಂ ಭಗೀರಥಸ್ಯಾರ್ಥೇ ತಪಸೋಗ್ರೇಣ ತೋಷಿತಃ ॥ ೩೮ ॥

ತತೋ ವಿಸೃಜ್ಯಮಾನಾಯಾಃ ಸ್ರೋತಸ್ತತ್ಸಪ್ತಧಾ ಗತಮ್ ।
ತಿಸ್ರಃ ಪ್ರಾಚೀಮಭಿಮುಖಂ ಪ್ರತೀಚೀಂ ತಿಸ್ರ ಏವ ತು ॥ ೩೯ ॥

ನದ್ಯಾಃ ಸ್ರೋತಸ್ತು ಗಙ್ಗಾಯಾಃ ಪ್ರತ್ಯಪದ್ಯತ ಸಪ್ತಧಾ ।
ನಲಿನೀ ಹ್ಲಾದಿನೀ ಚೈವ ಪಾವನೀ ಚೈವ ಪ್ರಾಚ್ಯಗಾಃ ॥ ೪೦ ॥

ಸೀತಾ ಚಕ್ಷುಶ್ಚ ಸಿಂಧುಶ್ಚ ಪ್ರತೀಚೀಂ ದಿಶಮಾಸ್ಥಿತಾಃ ।
ಸಪ್ತಮೀ ತ್ವನ್ವಗಾತ್ತಾಸಾಂ ದಕ್ಷಿಣೇನ ಭಗೀರಥಮ್ ॥ ೪೧ ॥

---

೩೬-೩೭. ಈ ಸಂದರ್ಭದಲ್ಲಿ ನಾಡಿಗಳು ಮಾತ್ರ ಕಾಣುವಷ್ಟು ಕ್ಷೀಣನಾಗಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ತಪಃಕ್ಲೇಶಗಳನ್ನನುಭವಿಸುತ್ತಿದ್ದ ಭಗೀರಥ ರಾಜನನ್ನು ನೋಡಿ, ಹಿಂದೆ ಇವನು ತನಗೆ ಮಾಡಿದ ಆರಾಧನೆಯನ್ನೂ ತಾನು ಕೊಟ್ಟಿದ್ದ ವರವನ್ನೂ, ಗಂಗೆಯು ಭೂಲೋಕಕ್ಕೆ ಬೀಳುವಾಗ ಜಟೆಯಲ್ಲಿ ಅವಳನ್ನು ಧರಿಸಬೇಕೆಂಬ ಬ್ರಹ್ಮನ ಪ್ರಾರ್ಥನೆಯನ್ನೂ ನೆನೆಸಿಕೊಂಡನು.

೩೮. ಆಮೇಲೆ ಭಗೀರಥನ ಉಗ್ರ ತಪಸ್ಸಿಗೆ ಮೆಚ್ಚಿ ತನ್ನ ಯೋಗಶಕ್ತಿಯಿಂದ ತಡೆಯಲ್ಪಟ್ಟಿದ್ದ ಗಂಗೆಯನ್ನು ಅವನಿಗೋಸ್ಕರ ಬಿಟ್ಟುಕೊಟ್ಟನು.

೩೯-೪೦-೪೧. ಆಗ ಅಲ್ಲಿಂದ ಹೊರಟ ನದಿಯು ಏಳು ಕವಲುಗಳಾಗಿ ಒಡೆಯಿತು. ನಳಿನೀ, ಹ್ಲಾದಿನೀ, ಪಾವನೀ ಎಂಬ ಮೂರು ಕವಲುಗಳು ಪೂರ್ವ ದಿಕ್ಕಿಗೂ ಸೀತಾ, ಚಕ್ಷು, ಸಿಂಧು ಎಂಬ ಮೂರು ಕವಲುಗಳು ಪಶ್ಚಿಮ ದಿಕ್ಕಿಗೂ ಹರಿದುವು. ಏಳನೆಯದು ದಕ್ಷಿಣದಿಕ್ಕಿಗೆ ಭಗೀರಥನನ್ನು ಹಿಂಬಾಲಿಸಿ ಹರಿದುದರಿಂದ ಭಾಗೀರಥಿಯೆನ್ನಿಸಿಕೊಂಡು ಲವಣಸಮುದ್ರವನ್ನು ಸೇರಿದೆ.

ತಸ್ಮಾದ್ಭಾಗೀರಥೀ ಯಾ ಸಾ ಪ್ರವಿಷ್ಟಾ ಲವಣೋದಧಿಮ್ ।
ಸಪ್ತೈತಾ ಭಾವಯನ್ತೀದಂ ಹಿಮಾಹ್ವಂ ವರ್ಷಮೇವ ತು ॥ ೪೨ ॥

ಪ್ರಸೂತಾಸ್ಸಪ್ತ ನದ್ಯಸ್ತಾಃ ಶುಭಾ ಬಿನ್ದುಸರೋದ್ಭವಾಃ ।
ನಾನಾದೇಶಾನ್ಪ್ಲಾವಯನ್ತ್ಯೋ ಮ್ಲೇಚ್ಛಪ್ರಾಯಾಂಸ್ತು ಸರ್ವಶಃ ॥ ೪೩ ॥

ಉಪಗಚ್ಛನ್ತಿ ತಾಸ್ಸರ್ವಾ ಯತೋ ವರ್ಷತಿ ವಾಸವಃ ।
ಶಿಲೀನ್ಧ್ರಾನ್ಕುನ್ತಲಾಂಶ್ಚೀನಾನ್ಬರ್ಬರಾನ್ಯವನಾನ್ಧ್ರಕಾನ್ ॥ ೪೪ ॥

ಪುಷ್ಕರಾಂಶ್ಚ ಕುಲಿನ್ದಾಂಶ್ಚ ಅಙ್ಗ್ಯೋಲದ್ವಿಚರಾಶ್ಚ ಯೇ ।
ಕೃತ್ವಾ ತ್ರಿಧಾ ಸಿಂಹವನ್ತಂ ಸೀತಾಽಗಾತ್ಪಶ್ಚಿಮೋದಧಿಮ್ ॥ ೪೫ ॥

ಅಥ ಚೀನಮರೂಂಶ್ಚೈವ ತಾಲಾಂಶ್ಚಮಸಮೂಲಿಕಾನ್ ।
ಭದ್ರಾಂಸ್ತುಷಾರಾನ್ಲಾಮ್ಯಾಕಾನ್ ಬಾಹ್ಲವಾನ್ಪಾರಟಾನ್ಖಶಾನ್ ॥ ೪೬ ॥

ಏತಾನ್ಜನಪದಾಂಶ್ಚಕ್ಷುಃ ಪ್ಲಾವಯನ್ತೀ ಗತೋದಧಿಮ್ ।
ದರದಾಂಶ್ಚ ಸಕಾಶ್ಮೀರಾನ್ಗಾನ್ಧಾರಾನ್ರೌರಸಾನ್ಕುಹಾನ್ ॥ ೪೭ ॥

---

೪೨-೪೩. ಬಿಂದು ಸರೋವರದಿಂದ ಹುಟ್ಟಿದ ಏಳು ಶುಭನದಿಗಳೂ ಮಳೆ ಹೆಚ್ಚಾಗಿ ಬೀಳುವ ಮ್ಲೇಚ್ಛಪ್ರಚುರವಾದ ದೇಶಗಳನ್ನು ಪವಿತ್ರ ಮಾಡುತ್ತಾ ಸಮುದ್ರಕ್ಕೆ ಸೇರುತ್ತವೆ.

೪೪. ಆ ದೇಶಗಳು ಯಾವುವೆಂದರೆ—ಶಿಲೀಂಧ್ರ, ಕುಂತಲ, ಚೀನ, ಬರ್ಬರ, ಯವನ, ಆಂಧ್ರಕ, ಪುಷ್ಕರ, ಕುಲಿನ್ದ, ಅಙ್ಗ್ಯೋಲ, ದ್ವಿಚರ—ಇವೇ ಮುಂತಾದುವು.

೪೫. ಸೀತಾನದಿಯು ಸಿಂಹವಂತವೆಂಬ ದೇಶವನ್ನು ಮೂರಾಗಿ ಭಾಗಿಸಿ ಪಶ್ಚಿಮ ಸಮುದ್ರವನ್ನು ಸೇರಿದೆ.

೪೬. ಚಕ್ಷುರ್ನದಿಯು ಚೀನಮರು, ತಾಲ, ಮಸಮೂಲಿಕ, ಭದ್ರ, ತುಷಾರ, ಲಾಮ್ಯಾಕ, ಬಾಹ್ಲವ, ಪಾರಟ, ಖಶ ಈ ದೇಶಗಳನ್ನು ಪವಿತ್ರವನ್ನಾಗಿ ಮಾಡುತ್ತ ಸಮುದ್ರವನ್ನು ಸೇರಿದೆ.

೪೭-೪೮. ಸಿಂಧುನದಿಯು ದರದ, ಕಾಶ್ಮೀರ, ಗಾಂಧಾರ, ರೌರಸ, ಕುಹ, ಶಿವಶೈಲ, ಇಂದ್ರಪದ, ವಸತಿ, ವಿಸರ್ಜನು, ಸೈಂಧವ, ರಂಧ್ರಕರಕ, ಶಮಠ,

21

ಶಿವಶ್ಶೈಲಾನಿನ್ದ್ರಪದಾನ್ವಸತೀಶ್ಚ ವಿಸರ್ಜಯನ್ ।
ಸೈನ್ಧವಾನ್ರನ್ಧ್ರಕರಕಾಞ್ ಛಮುಠಾಧೀರರೋಹಕಾನ್ ॥ ೪೮ ॥

ಶುನಾಮುಖಾಂಶ್ಚೋರ್ಧ್ವಮರೂನ್ಸಿಂಧುರೇತಾನ್ನಿಷೇವತೇ ।
ಗಂಧರ್ವಕಿನ್ನರಾ ನ್ಯಕ್ಷಾನ್ರಕ್ಷೋವಿದ್ಯಾಧರೋರಗಾನ್ ॥ ೪೯ ॥

ಕಲಾಪಗ್ರಾಮಕಾಂಶ್ಚೈವ ಪಾರದಾಂಸ್ತದ್ಗಣಾನ್ಖಶಾನ್ ।
ಕಿರಾತಾಂಶ್ಚ ಪುಳಿನ್ದಾಂಶ್ಚ ಕುರೂನ್ಸಭರತಾನಪಿ ॥ ೫೦ ॥

ಪಞ್ಚಾಲಾನ್ಕಾಶಿಮತ್ಸ್ಯಾಂಶ್ಚ ಮಗಧಾಙ್ಗಾಂಸ್ತಥೈವ ಚ ।
ಸುಹ್ಮೋತ್ತರಾಂಶ್ಚ ವಂಗಾಂಶ್ಚ ತಾಮ್ರಲಿಪ್ತಾಂಸ್ತಥೈವ ಚ ॥ ೫೧ ॥

ಏತಾನ್ಜನಪದಾನ್ಮಾನ್ಯಾನ್ಗಂಗಾ ಭಾವಯತೇ ಶುಭಾನ್ ।
ತತಃ ಪ್ರತಿಹತಾ ವಿನ್ಧ್ಯೇತ್ರವಿಷ್ಟಾ ಲವಣೋದಧಿಮ್ ॥ ೫೨ ॥

ತತಶ್ಚ ಹ್ಲಾದಿನೀ ಪುಣ್ಯಾ ಪ್ರಾಚೀಮಭಿಮುಖಾ ಯಯೌ ।
ಪ್ಲಾವಯನ್ತ್ಯುಪಭಾಗಾಂಶ್ಚ ನೈಷಧಾಂಶ್ಚ ತ್ರಿಗರ್ತಕಾನ್ ॥ ೫೩ ॥

ಧೀವರಾನೃಷಿಕಾಂಶ್ಚೈವ ತಥಾ ನೀಲಮುಖಾನಪಿ ।
ಕೇಕರಾನೌಷ್ಟಕರ್ಣಾಂಶ್ಚ ಕಿರಾತಾನಪಿ ಚೈವ ಹಿ ॥ ೫೪ ॥

ಕಾಲೋದರಾನ್ವಿವರ್ಣಾಂಶ್ಚ ಕುಮಾರಾನ್ಸ್ವರ್ಣಭೂಮಿಕಾನ್ ।
ಆಮಣ್ಡಲಂ ಸಮುದ್ರಸ್ಯ ತಿರೋಭೂತಾಂಶ್ಚ ಪೂರ್ವತಃ ॥ ೫೫ ॥

---

ಆಭೀರ, ರೋಹಕ, ಶುನಾಮುಖ, ಊರ್ಧ್ವಮರು—ಈ ಮುಂತಾದ ದೇಶಗಳಲ್ಲಿ ಹರಿಯುತ್ತದೆ.

೪೯-೫೦-೫೧-೫೨. ಗಂಧರ್ವ, ಕಿನ್ನರ, ಯಕ್ಷ, ರಾಕ್ಷಸ, ವಿದ್ಯಾಧರ, ಉರಗ ಇವರ ದೇಶಗಳು, ಕಲಾಪ, ಗ್ರಾಮಕ, ಪಾರದ, ತದ್ಗಣ, ಖಶ, ಕಿರಾತ, ಪುಳಿಂದ, ಕುರು, ಭರತ, ಪಂಚಾಲ, ಕಾಶಿ, ಮತ್ಸ್ಯ, ಮಗಧ, ಅಂಗ, ಸುಹ್ಮೋತ್ತರ, ವಂಗ, ತಾಮ್ರಲಿಪ್ತ ಮುಂತಾದ ಎಲ್ಲ ಜನಪದಗಳನ್ನೂ ಪಾವನಮಾಡುತ್ತ ವಿಂಧ್ಯಪರ್ವತದ ಪಕ್ಕದಿಂದ ಸಮುದ್ರಕ್ಕೆ ಸೇರಿದೆ.

೫೩-೫೪-೫೫. ಹ್ಲಾದಿನೀ ಎಂಬ ಪುಣ್ಯನದಿಯು ನೈಷಧ, ತ್ರಿಗರ್ತಕ, ಧೀವರ,

ತತಸ್ತು ಪಾವನೀ ಚಾಪಿ ಪ್ರಾಚೀಮೇವ ದಿಶಂ ಯಯೌ ।
ಸುಪಥಾನ್ಪ್ಲಾವಯನ್ತೀಹ ತ್ವಿನ್ದ್ರದ್ಯುಮ್ನಸರೋಽಪಿ ಚ ॥ ೫೬ ॥

ತಥಾ ಖರಪಥಾಂಶ್ಚೈವ ವೇತ್ರಶಂಕುಪಥಾನಪಿ ।
ಮಧ್ಯತೋಜಾನಕಿಮುಥೋ ಕುಥಪ್ರಾವರಣಾನ್ಯಯೌ ॥ ೫೭ ॥

ಇನ್ದ್ರದ್ವೀಪಸಮುದ್ರಂ ತು ಪ್ರವಿಷ್ಟಾ ಲವಣೋದಧಿಮ್ ।
ತತಸ್ತು ನಲಿನೀಪ್ರಾಯಾತ್ ಪ್ರಾಚೀಮಾಶಾಂ ಜವೇನ ತು ॥ ೫೮ ॥

ತೋಮರಾನ್ಪ್ಲಾವಯನ್ತೀಹ ಹಂಸಮಾರ್ಗಾನ್ಸಹೈಹಯಾನ್ ।
ಪೂರ್ವಾನ್ದೇಶಾಂಶ್ಚ ಸೇವನ್ತೀ ಭಿತ್ತ್ವಾ ಸಾ ಬಹುಧಾ ಗಿರೀನ್ ॥ ೫೯ ॥

ಕರ್ಣಪ್ರಾವರಣಾನ್ಪ್ರಾಪ್ಯ ಸಂಗತ್ಯಾಶ್ವಮುಖಾನಪಿ ।
ಸಿಕತಾಪರ್ವತಮರುಂ ಗತ್ವಾ ವಿದ್ಯಾಧರಾನ್ಯಯೌ ॥ ೬೦ ॥

ನಗಮನ್ಡಲಮಧ್ಯೇನ ಪ್ರವಿಷ್ಟಾ ಲವಣೋದಧಿಮ್ ।
ತಾಸಾಂ ನದ್ಯುಪನದ್ಯಶ್ಚ ಶತಶೋಽಥ ಸಹಸ್ರಶಃ ॥ ೬೧ ॥

---

ಮುಷಿಕ, ನೀಲಮುಖ, ಕೇಕರ, ಔಷ್ಟಕರ್ಣ, ಕಿರಾತ, ಕಾಲೋದರ, ವಿವರ್ಣ, ಕುಮಾರ, ಸ್ವರ್ಣಭೂಮಿಯೇ ಮೊದಲಾಗಿ ಪೂರ್ವಸಮುದ್ರದವರೆಗೂ ಇರುವ ದೇಶಗಳನ್ನೂ ಪಾವನಮಾಡುತ್ತಾ ಪೂರ್ವದಿಕ್ಕಿನಲ್ಲಿ ಹರಿಯುತ್ತಿದೆ.

೫೬.-೫೭. ಪಾವನೀ ನದಿಯು ಸುಪಥಾ, ಇಂದ್ರದ್ಯುಮ್ನಸರೋವರ, ಖರಪಥ, ವೇತ್ರಶಂಕುಪಥ, ಮಧ್ಯತೋಜಾನಕಿ, ಕುಥ, ಪ್ರಾವರಣ, ಈ ಸ್ಥಲಗಳಲ್ಲಿ ಹರಿಯುತ್ತಾ ಇಂದ್ರದ್ವೀಪವೆಂಬ ಸಮುದ್ರವನ್ನು ಸೇರಿದೆ.

೫೮-೫೯-೬೦. ನಳಿನೀ ನದಿಯು ತೋಮರ, ಹಂಸಮಾರ್ಗ, ಹೈಹಯ, ಮುಂತಾದ ಪೂರ್ವ ದೇಶಗಳಲ್ಲಿ ಹರಿದು ಅನೇಕ ಬೆಟ್ಟಗಳನ್ನು ಭೇದಿಸಿಕೊಂಡು ಕರ್ಣಪ್ರಾವರಣ, ಅಶ್ವಮುಖ, ದೇಶಗಳ ಮೂಲಕ ಮಳಲು ದಿಣ್ಣೆ, ಬೆಟ್ಟ, ಮರುಭೂಮಿ, ವಿದ್ಯಾಧರವಾಸಭೂಮಿಗಳನ್ನು ಪಾವನಮಾಡುತ್ತ ಬೆಟ್ಟಗಳ ಮಧ್ಯೆ ಹಾಯ್ದು ಸಮುದ್ರಕ್ಕೆ ಸೇರುತ್ತದೆ.

೬೧. ಮೇಲೆ ಹೇಳಿದ ನದಿಗಳಿಗೆ ಅನೇಕ ನದಿಗಳೂ ಉಪನದಿಗಳೂ ಸೇರಿ ಸಾವಿರಾರು ಸಂಖ್ಯೆಯಿಂದ ಮಳೆ ಬೀಳುವ ಭೂಮಿಯಲ್ಲಿ ಹರಿಯುತ್ತವೆ.

ಉಪಗಚ್ಛನ್ತಿ ತಾಸ್ಸರ್ವಾ ಯತೋ ವರ್ಷತಿ ವಾಸವಃ ।
ವಸ್ವೌಕಸಾಯಾಸ್ತೀರೇ ತು ವನಂ ಸುರಭಿ ವಿಶ್ರುತಮ್ ॥ ೬೨ ॥

ಹಿರಣ್ಯಶೃಙ್ಗೇ ವಸತಿ ವಿದ್ವಾನ್ಕೌಬೇರಕೋ ವಶೀ ।
ಯಜ್ಞೋಪೇತಶ್ಚ ಸುಮಹಾನಮಿತೌಜಾಸ್ಸುವಿಕ್ರಮಃ ॥ ೬೩ ॥

ತತ್ರತ್ಯೈಸ್ತೈಃ ಪರಿವೃತೋ ವಿದ್ವದ್ಭಿರ್ಬ್ರಹ್ಮರಾಕ್ಷಸೈಃ ।
ಕುಬೇರಾನುಚರಾ ಹ್ಯೇತೇ ಚತ್ವಾರಸ್ತು ಸಮಾಃ ಸ್ಮೃತಾಃ ॥ ೬೪ ॥

ಏವಮೇವ ತು ವಿಜ್ಞೇಯಾ ಋದ್ಧಿಃ ಪರ್ವತವಾಸಿನಾಮ್ ।
ಪರಸ್ಪರೇಣ ದ್ವಿಗುಣಾ ಧರ್ಮತಃ ಕಾಮತೋಽರ್ಥತಃ ॥ ೬೫ ॥

ಹೇಮಕೂಟಸ್ಯ ಪೃಷ್ಠೇ ತು ವರ್ಚೋವನ್ನಾಮತಸ್ಸರಃ ।
ಮನಸ್ವಿನೀ ಪ್ರಭವತಿ ತಸ್ಮಾಜ್ಜ್ಯೋತಿಷ್ಮತೀ ಚ ಯಾ ॥ ೬೬ ॥

ಅವಗಾಢೇ ಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ।
ಸರೋ ವಿಷ್ಣುಪದಂ ನಾಮ ನಿಷಧೇ ಪರ್ವತೋತ್ತಮೇ ॥ ೬೭ ॥

---

೬೨-೬೩. ವಸ್ವೌಕಸಾ ನದೀತೀರದಲ್ಲಿ ಸುವಾಸನೆಯಾದ ಒಂದು ವನವು ಪ್ರಖ್ಯಾತವಾಗಿದೆ. ಅದರ ಸಮೀಪದಲ್ಲಿರುವ ಸುವರ್ಣಪರ್ವತದ ಶಿಖರದಲ್ಲಿ ಜಿತೇಂದ್ರಿಯನೂ ಯಜ್ಞಾದಿ ಧರ್ಮಶೀಲನೂ ಪರಾಕ್ರಮಿಯೂ ಆದ ಕೌಬೇರಕನೆಂಬೊಬ್ಬ ಜ್ಞಾನಿಯಿರುವನು.

೬೪. ಬ್ರಹ್ಮರಾಕ್ಷಸ ಜನ್ಮವನ್ನು ತಾಳಿದ ಅನೇಕ ಜ್ಞಾನಿಗಳು ಆ ಕೌಬೇರಕನನ್ನು ಸೇವಿಸುತ್ತಿರುವರು. ಈ ನಾಲ್ವರು ಕುಬೇರನ ಸೇವಕರೂ ಅನುರೂಪರಾಗಿರುವರು.

೬೫. ಹೀಗೆಯೇ ಪರ್ವತದಲ್ಲಿ ವಾಸಿಸುವ ಜನರ ಸಮಷ್ಟಿಯು ಧರ್ಮ, ಅರ್ಥ, ಕಾಮ, ಇವುಗಳಲ್ಲಿ ಒಂದಕ್ಕಿಂತ ಒಂದು ದ್ವಿಗುಣವಾಗಿ ಬೆಳೆದಿರುತ್ತದೆ.

೬೬. ಹೇಮಕೂಟಪರ್ವತದ ಶಿಖರದಲ್ಲಿ "ವರ್ಚೋವತ್" ಎಂಬ ಸರೋವರವಿದೆ. ಅದರಿಂದ ಮನಸ್ವಿನೀ ಜ್ಯೋತಿಷ್ಮತೀ ಎಂಬ ನದಿಗಳು ಉದ್ಭವಿಸಿ ಎರಡು ದಿಕ್ಕುಗಳಲ್ಲಿ ಹರಿದು ಪೂರ್ವ ಪಶ್ಚಿಮ ಸಮುದ್ರಗಳನ್ನು ಸೇರುತ್ತವೆ.

೬೭. ನಿಷಧಪರ್ವತದಲ್ಲಿರುವ ವಿಷ್ಣುಪದವೆಂಬ ಸರೋವರದಿಂದ ಗಾಂಧರ್ವೀ ನಾಕುಲೀ ಎಂಬ ಎರಡು ನದಿಗಳು ಹರಿಯುವುವು.

ತಸ್ಮಾದ್ದ್ವಯಂ ಪ್ರಭವತಿ ಗಾನ್ಧರ್ವೀ ನಾಕುಲೀ ಚ ತೇ ।
ಮೇರೋಃ ಪಾರ್ಶ್ವಾತ್ಪ್ರಭವತಿ ಹ್ರದಶ್ಚನ್ದ್ರಪ್ರಭೋ ಮಹಾನ್॥ ೬೮ ॥

ತತ್ರ ಜಾಮ್ಬೂನದೀ ಪುಣ್ಯಾ ಯಸ್ಯಾ ಜಾಮ್ಬೂನದಂ ಸ್ಮೃತಮ್ ।
ಪಯೋದನ್ತು ಸರೋ ನೀಲೇ ಸುಶುಭ್ರಂ ಪುನ್ಡರೀಕವತ್ ॥ ೬೯ ॥

ಪುನ್ಡರೀಕಾ ಪಯೋದಾ ಚ ತಸ್ಮಾನ್ನದ್ಯೌ ವಿನಿರ್ಗತೇ ।
ಶ್ವೇತಾತ್ಪ್ರವರ್ತತೇ ಪುಣ್ಯಂ ಸರಯೂರ್ಮಾನಸಾ ಧ್ರುವಮ್ ॥ ೭೦ ॥

ಜ್ಯೋತ್ಸ್ನಾ ಚ ಮೃಗಕಾಮಾ ಚ ತಸ್ಮಾದ್ದ್ವೇ ಸಮ್ಬಭೂವತುಃ ।
ಸರಃ ಕುರುಷು ವಿಖ್ಯಾತಂ ಪದ್ಮಮೀನದ್ವಿಜಾಕುಲಮ್ ॥ ೭೧ ॥

ರುದ್ರಕಾಂತಮಿತಿ ಖ್ಯಾತಂ ನಿರ್ಮಿತಂ ತದ್ಭವೇನ ತು ।
ಅನ್ಯೇ ಚಾಪ್ಯತ್ರ ವಿಖ್ಯಾತಾಃ ಪದ್ಮಮೀನದ್ವಿಜಾಕುಲಾಃ ॥ ೭೨ ॥

ನಾಮ್ನಾ ಹ್ರದಾ ಜಯಾ ನಾಮ ದ್ವಾದಶೋದಧಿಸನ್ನಿಭಾಃ ।
ತೇಭ್ಯಶ್ಶಾನ್ತಾ ಚ ಮಾಧ್ವೀ ಚ ದ್ವೇ ನದ್ಯೌ ಸಮ್ಬಭೂವತುಃ ॥ ೭೩ ॥

---

೬೮. ಮೇರು ಪರ್ವತದ ಪಕ್ಕದಲ್ಲಿ ಚಂದ್ರಪ್ರಭವೆಂಬ ಮಡುವಿರುವುದು. ಜಾಂಬೂನದವೆಂಬ ಚಿನ್ನದ ಪ್ರಾಪ್ತಿಗೆ ಕಾರಣವಾದ ಜಂಬೂನದಿಯು ಆ ಮಡುವಿನಿಂದ ಹುಟ್ಟುತ್ತದೆ.

೬೯. ನೀಲಪರ್ವತದಲ್ಲಿ ಕಮಲದಂತೆ ಸ್ವಚ್ಛವಾದ ಪಯೋದವೆಂಬ ಸರೋವರವು ಪುಂಡರೀಕಾ, ಪಯೋದಾ ಎಂಬ ನದಿಗಳ ಉತ್ಪತ್ತಿಸ್ಥಾನವಾಗಿದೆ.

೭೦. ಶ್ವೇತಪರ್ವತದಲ್ಲಿ ಸರಯೂಮಾನಸವೆಂಬ ಪವಿತ್ರವಾದ ಸರೋವರವಿರುವುದು. ಅಲ್ಲಿ ಜ್ಯೋತ್ಸ್ನಾ ಮತ್ತು ಮೃಗಕಾಮಾ ಎಂಬ ಎರಡು ನದಿಗಳು ಹುಟ್ಟುವುವು.

೭೧. ಕುರುದೇಶದಲ್ಲಿ ಈಶ್ವರನಿಂದ ನಿರ್ಮಿತವಾದ, ಕಮಲಗಳಿಗೂ ಜಲಚರಗಳಿಗೂ ಆವಾಸವಾದ, ರುದ್ರಕಾಂತವೆಂಬ ಸರೋವರವು ವಿಖ್ಯಾತವಾಗಿರುವುದು.

೭೨-೭೩. ಅಲ್ಲಿಯೇ ಪದ್ಮ, ಮೀನು, ಪಕ್ಷಿಗಳಿಂದ ಶೋಭಿಸುವ, ಸಮುದ್ರದಂತೆ ವಿಶಾಲವಾದ ಜಯ ಎಂಬ ಹೆಸರಿನ ಹನ್ನೆರಡು ಮಡುಗಳಿವೆ. ಅವುಗಳಿಂದ ಶಾಂತಾ, ಮಾಧ್ವೀ ಎಂಬ ಎರಡು ನದಿಗಳು ಹುಟ್ಟುವುವು.

ಯಾನಿ ಕಿಂಪುರುಷಾದ್ಯಾನಿ ತೇಷು ದೇವೋ ನ ವರ್ಷತಿ ।
ಉದ್ಭಿದಾನ್ಯುದಕಾನ್ಯತ್ರ ಪ್ರವಹನ್ತಿ ಸರಿದ್ವರಾಃ ॥ ೭೪ ॥

ಋಷಭೋ ದುನ್ದುಭಿಶ್ಚೈವ ಧೂಮ್ರಶ್ಚ ಸುಮಹಾಗಿರಿಃ ।
ಪೂರ್ವಾಯತೌ ಮಹಾಪರ್ವಾ ನಿಮ್ನಗಾ ಲವಣಾಮ್ಭಸಿ ॥ ೭೫ ॥

ಚನ್ದ್ರಃ ಕಾಕಸ್ತಥಾ ದ್ರೋಣಃ ಸುಮಹಾನ್ತ್ರಿಶೈಲೋಚ್ಚಯಾಃ ।
ಉದಗ್ಯಾತಾ ಉದೀಚ್ಯಾನ್ತಾ ಅವಗಾಢಾ ಮಹೋದಧಿಮ್ ॥ ೭೬ ॥

ಸೋಮಕಶ್ಚ ವರಾಹಶ್ಚ ನಾರದಶ್ಚ ಮಹೀಧರಃ ।
ಪ್ರತೀಚ್ಯಾಮಾಯತಾಸ್ತೇ ವೈ ಪ್ರವಿಷ್ಟಾ ಲವಣೋದಧಿಮ್ ॥ ೭೭ ॥

ಚಕ್ರೋ ಬಲಾಹಕಶ್ಚೈವ ಮೈನಾಕೋ ಯಶ್ಚ ಪರ್ವತಃ ।
ಆಯತಾಸ್ತೇ ಮಹಾಶೈಲಾಃ ಸಮುದ್ರಂ ದಕ್ಷಿಣಂ ಪ್ರತಿ ॥ ೭೮ ॥

ಚಕ್ರಮೈನಾಕಯೋರ್ಮಧ್ಯೇ ವಿದಿಶಂ ದಕ್ಷಿಣಾಂ ಪ್ರತಿ ।
ತತ್ರ ಸಂವರ್ತಕೋ ನಾಮ ಸೋಽಗ್ನಿಃ ಪಿಬತಿ ತಜ್ಜಲಮ್ ॥ ೭೯ ॥

---

೭೪. ಕಿಂಪುರುಷಾದಿ ಖಂಡಗಳಲ್ಲಿ ಚಿಲುಮೆಗಳಿಂದ ಉಕ್ಕಿಬಂದ ನೀರೇ ನದಿಗಳಾಗಿ ಹರಿಯುವುದರಿಂದ ಮಳೆಯ ಆವಶ್ಯಕತೆಯೇ ಇಲ್ಲವಾಗಿದೆ.

೭೫. ಋಷಭ, ದುಂದುಭಿ, ಧೂಮ್ರ ಎಂಬ ಈ ಮಹಾಪರ್ವತಗಳು ಪೂರ್ವಕ್ಕೆ ಹಬ್ಬಿ ಲವಣಸಮುದ್ರವನ್ನು ವ್ಯಾಪಿಸಿವೆ.

೭೬. ಚಂದ್ರ, ಕಾಕ, ದ್ರೋಣ, ಮೊದಲಾದ ದೊಡ್ಡ ಪರ್ವತಗಳು ಉತ್ತರ ದಿಕ್ಕಿನಲ್ಲಿ ಹಬ್ಬಿ ಸಮುದ್ರವನ್ನು ವ್ಯಾಪಿಸಿವೆ.

೭೭. ಸೋಮಕ, ವರಾಹ, ನಾರದ ಮುಂತಾದ ಬೆಟ್ಟಗಳು ಪಶ್ಚಿಮ ದಿಕ್ಕಿನಲ್ಲಿ ಸಮುದ್ರದವರೆಗೂ ವಿಶಾಲವಾಗಿ ಹಬ್ಬಿವೆ.

೭೮. ಚಕ್ರ, ಬಲಾಹಕ, ಮೈನಾಕ ಮುಂತಾದ ಪರ್ವತಗಳು ದಕ್ಷಿಣ ದಿಕ್ಕಿನಲ್ಲಿ ಸಮುದ್ರದವರೆಗೂ ವ್ಯಾಪಿಸಿವೆ.

೭೯. ಚಕ್ರ, ಮೈನಾಕ ಪರ್ವತಗಳ ನಡುವೆ ಸಂವರ್ತಕವೆಂದೂ ಬಡಬಾಗ್ನಿಯೆಂದೂ ಪ್ರಸಿದ್ಧವಾದ ಅಗ್ನಿಯು ಸಮುದ್ರದಲ್ಲಿ ವಾಸಿಸಿ ಅದನ್ನು ಶೋಷಿಸುತ್ತಿರುವುದು.

ನಾಮ್ನಾ ಸಮುದ್ರವಾಸಸ್ತು ಔರ್ವಸ್ಸ ಬಡಬಾಮುಖಃ ।
ದ್ವಾದಶೈತೇ ಪ್ರದಿಷ್ಟಾ ಹಿ ಪರ್ವತಾ ಲವಣೋದಧಿಮ್ ॥ ೮೦ ॥

ಮಹೇನ್ದ್ರಭಯವಿತ್ರಸ್ತಾಃ ಪಕ್ಷಚ್ಛೇದಭಯಾತ್ಪುರಾ ।
ಯದೇತದ್ದೃಶ್ಯತೇ ಚನ್ದ್ರೇ ಶ್ವೇತೇ ಕೃಷ್ಣಶಶಾಕೃತಿ ॥ ೮೧ ॥

ಭಾರತಸ್ಯ ತು ವರ್ಷಸ್ಯ ಭೇದಾಸ್ತೇ ನವ ಕೀರ್ತಿತಾಃ ।
ಇಹೋದಿತಸ್ಯ ದೃಶ್ಯನ್ತೇ ತಥಾಽನ್ಯೇಽನ್ಯತ್ರ ಚೋದಿತೇ ॥ ೮೨ ॥

ಉತ್ತರೋತ್ತರಮೇತೇಷಾಂ ವರ್ಷಮುದ್ದಿಶ್ಯತೇ ಗುಣೈಃ ।
ಆರೋಗ್ಯಾಯುಃಪ್ರಮಾಣಾನಾಂ ಧರ್ಮತಃ ಕಾಮತೋಽರ್ಥತಃ ॥ ೮೩ ॥

ಸಮನ್ವಿತಾನಿ ಭೂತಾನಿ ಪುಣ್ಯೈರೇತೈಸ್ತು ಭಾಗಶಃ ।
ವಸನ್ತಿ ನಾನಾಜಾತೀನಿ ತೇಷು ವರ್ಷೇಷು ತಾನಿ ವೈ ॥
ಇತ್ಯೇಷಾ ಧಾರಯನ್ತೀದಂ ಪೃಥ್ವೀ ವಿಶ್ವಂ ಜಗತ್ಸ್ಥಿತಮ್ ॥ ೮೪ ॥

ಇತಿ ಶ್ರೀ ಬ್ರಹ್ಮಾಣ್ಡಪುರಾಣೇ ಅಷ್ಟಾದಶೋಽಧ್ಯಾಯಃ

---

೮೦. ಈ ಹಿಂದೆ ಹೇಳಿದ ಹನ್ನೆರಡು ಪರ್ವತಗಳೂ ಇಂದ್ರನ ವಜ್ರಾಯುಧದ ಏಟನ್ನು ತಪಿಸಿಕೊಳ್ಳುವುದಕ್ಕಾಗಿ ಭೀತಿಯಿಂದ ಸಮುದ್ರದಲ್ಲಿ ಮುಳುಗಿವೆ.

೮೧-೮೨. ಈ ಭೂಮಿಯಲ್ಲಿ ನಿಂತು ನೋಡಿದಾಗ ಮೊಲದ ಆಕಾರವಾಗಿ ಚಂದ್ರಮಂಡಲದಲ್ಲಿ ಕಾಣುವ ಕಪ್ಪು ಬಣ್ಣದ ಕಳಂಕದಂತೆ ಇತರ ಬ್ರಹ್ಮಾಂಡವಾಸಿಗಳಿಗೆ ಭಾರತ ಭೂಮಿಯ ಒಂಭತ್ತು ಭಾಗಗಳೂ ಕಾಣುವುವು.

೮೩. ಹೀಗೆ ಖಂಡಗಳಲ್ಲಿ ಉತ್ತರೋತ್ತರ ಖಂಡವು ಆಯುಃಪ್ರಮಾಣ, ಆರೋಗ್ಯ, ಧರ್ಮ, ಅರ್ಥ, ಕಾಮ ಈ ಗುಣಗಳಿಂದ ಅತಿಶಯಿತವಾಗುತ್ತಿದೆ.

೮೪. ಸುಕೃತವನ್ನಾಚರಿಸಿದ ನಾನಾಜಾತಿಯ ಪ್ರಾಣಿಗಳು ಮೇಲಿನ ಖಂಡಗಳಲ್ಲಿ ವಾಸಿಸುತ್ತಿವೆ. ಈ ರೀತಿಯಾಗಿ ಈ ಭೂಮಾತೆಯು ಪ್ರಪಂಚಕ್ಕೆಲ್ಲ ಆಧಾರವಾದುದಾಗಿದೆ.

ಬ್ರಹ್ಮಾಂಡಪುರಾಣದಲ್ಲಿ ಹದಿನೆಂಟನೆಯ ಅಧ್ಯಾಯವು ಸಮಾಪ್ತವು.

## ಏಕೋನವಿಂಶತಿತಮೋಽಧ್ಯಾಯಃ

**ಸೂತ ಉವಾಚ**

**ಪ್ಲಕ್ಷದ್ವೀಪಂ ಪ್ರವಕ್ಷ್ಯಾಮಿ ಯಥಾವದಿಹ ಸಂಗ್ರಹಾತ್ ।**
**ಶೃಣುತೇಮಂ ಯಥಾತತ್ತ್ವಂ ಬ್ರುವತೋ ಮೇ ದ್ವಿಜೋತ್ತಮಾಃ ॥ ೧ ॥**

**ಜಂಬೂದ್ವೀಪಸ್ಯ ವಿಸ್ತಾರಾದ್ದ್ವಿಗುಣಸ್ತಸ್ಯ ವಿಸ್ತರಃ ।**
**ವಿಸ್ತಾರಾದ್ದ್ವಿಗುಣಶ್ಚಾಸ್ಯ ಪರಿಣಾಹಃ ಸಮಂತತಃ ॥ ೨ ॥**

**ತೇನಾವೃತಃ ಸಮುದ್ರೋ ವಾ ದ್ವೀಪೇನ ಲವಣೋದಕಃ ।**
**ತತ್ರ ಪುಣ್ಯಾ ಜನಪದಾಶ್ಚಿರಾನ್ನ ಮ್ರಿಯತೇ ಜನಃ ॥ ೩ ॥**

**ಕುತ ಏವ ಚ ದುರ್ಭಿಕ್ಷಂ ಜರಾವ್ಯಾಧಿಭಯಂ ಕುತಃ ।**
**ತತ್ರಾಪಿ ಪರ್ವತಾಃ ಪುಣ್ಯಾಃ ಸಪ್ತೈವ ಮಣಿಭೂಷಣಾಃ ॥ ೪ ॥**

---

೧. ಸೂತಮುನಿಯು ಹೀಗೆ ಹೇಳಿದನು. ದ್ವಿಜೋತ್ತಮರೆ! ಇನ್ನು ಮುಂದೆ ಪ್ಲಕ್ಷದ್ವೀಪವನ್ನು ಸಂಗ್ರಹವಾಗಿಯೂ ಕ್ರಮಬದ್ಧವಾಗಿಯೂ ತಿಳಿಸುವೆನು. ಅದರ ತತ್ತ್ವವನ್ನು ವಿಷಯೀಕರಿಸಿ ಹೇಳುವ ನನ್ನ ಮಾತನ್ನು ಕೇಳಿರಿ.

೨. ಹಿಂದೆ ಜಂಬೂದ್ವೀಪಕ್ಕೆ ಹೇಳಿರುದ ವಿಸ್ತಾರಕ್ಕಿಂತ ಪ್ಲಕ್ಷದ್ವೀಪದ ವಿಸ್ತಾರವು ದ್ವಿಗುಣಿತವಾದುದು. ಹಾಗೆ ಪ್ಲಕ್ಷದ್ವೀಪದ ಸುತ್ತಳತೆಯು ವಿಸ್ತಾರಪರಿಮಾಣಕ್ಕಿಂತ ದ್ವಿಗುಣಿತವಾಗಿದೆಯೆಂದು ತಿಳಿಯಬೇಕು.

೩. ಆ ಪ್ಲಕ್ಷದ್ವೀಪದಿಂದ ಲವಣಸಮುದ್ರವು ಸುತ್ತುವರಿಯಲ್ಪಟ್ಟಿರುವುದು. ಆ ದ್ವೀಪದಲ್ಲಿ ಪವಿತ್ರವಾದ ದೇಶಗಳು ಶೋಭಿಸುವುವು. ಆ ದೇಶಗಳಲ್ಲಿ ವಾಸಮಾಡುವ ಜನಗಳು ದೀರ್ಘಕಾಲದ ವರೆಗೆ ಮರಣಹೊಂದುವುದಿಲ್ಲ. ಎಲ್ಲ ಜನರೂ ದೀರ್ಘಾಯುಷ್ಯವನ್ನು ಹೊಂದಿರುವರು.

೪. ಆ ಪವಿತ್ರ ಭೂಮಿಯಲ್ಲಿ ಪಾತಕದ ಪರಿಣಾಮದಿಂದ ಅನುಭವಿಸಬೇಕಾಗಿ ಒದಗುವ ದುರ್ಭಿಕ್ಷ ಮುಪ್ಪು-ರೋಗ ಮುಂತಾದುವುಗಳ ಭೀತಿಯು ಹೇಗೆ ಉಂಟಾ

ರತ್ನಾಕರಾಸ್ತಥಾ ನದ್ಯಸ್ತಾಸಾಂ ನಾಮಾನಿ ಚ ಬ್ರುವೇ ।
ಪ್ಲಕ್ಷದ್ವೀಪಾದಿಷು ತ್ವೇಷು ಸಪ್ತ ಸಪ್ತ ತು ಪಂಚಸು ॥ ೫ ॥

ಋಜ್ವಾಯತಾಃ ಪ್ರತಿದಿಶಂ ನಿವಿಷ್ಟಾ ವರ್ಷಪರ್ವತಾಃ ।
ಪ್ಲಕ್ಷದ್ವೀಪೇ ತು ವಕ್ಷ್ಯಾಮಿ ಸಪ್ತದ್ವೀಪಾನ್ ಮಹಾಬಲಾನ್ ॥ ೬ ॥

ಗೋಮೇದಕೋಽತ್ರ ಪ್ರಥಮಃ ಪರ್ವತೋ ಮೇಘಸನ್ನಿಭಃ ।
ಖ್ಯಾಯತೇ ಯಸ್ಯ ನಾಮ್ನಾ ತು ವರ್ಷಂ ಗೋಮೇದಸಂಜ್ಞಿತಮ್ ॥ ೭ ॥

ದ್ವಿತೀಯಃ ಪರ್ವತಶ್ಚಂದ್ರಃ ಸರ್ವೌಷಧಿಸಮನ್ವಿತಃ ।
ಅಶ್ವಿಭ್ಯಾಮಮೃತಸ್ಯಾರ್ಥಮೋಷಧ್ಯೋ ಯತ್ರ ಸಂಭೃತಾಃ ॥ ೮ ॥

---

ದೀತು. ಆ ದ್ವೀಪದಲ್ಲಿಯೂ ರತ್ನಾಲಂಕಾರಗಳಿಂದ ಅಲಂಕೃತಗಳಾದ ಮತ್ತು ಪವಿತ್ರವಾದ ಏಳು ಪರ್ವತಗಳು ಇರುವುವು.

೫. ಹಾಗೆಯೇ ಅನೇಕ ರತ್ನಗಳಿಗೆ ಗಣಿಗಳಂತೆ ಇರುವ ನದಿಗಳು ಅಸಂಖ್ಯಾತವಾಗಿ ಹರಿಯುತ್ತಲಿವೆ. ಆ ನದೀ-ಪರ್ವತ ಮುಂತಾದುವುಗಳ ಹೆಸರನ್ನು ಹೇಳುವೆನು. ಕೇಳಿರಿ. ಪ್ಲಕ್ಷದ್ವೀಪ ಮುಂತಾದ ಐದು ದ್ವೀಪಗಳಲ್ಲಿಯೂ ಏಳು ವರ್ಷ ಪರ್ವತಗಳು ಇವೆ.

೬. ಆ ಪರ್ವತಗಳು ಸರಲವಾದ ಆಕಾರವುಳ್ಳವುಗಳೂ ಅತಿ ದೀರ್ಘಪರಿಮಾಣವುಳ್ಳವುಗಳೂ ಆಗಿ ಸಮಸ್ತ ದಿಕ್ಕುಗಳನ್ನು ವ್ಯಾಪಿಸಿಕೊಂಡಿವೆ. ಇಂತಹ ಪ್ಲಕ್ಷದ್ವೀಪದಲ್ಲಿರುವ ಅತಿ ವಿಶಾಲವಾದ ಏಳು ವರ್ಷಗಳನ್ನು ಹೇಳುತ್ತೇನೆ.

೭. ಈ ದ್ವೀಪದಲ್ಲಿ ನೀರುಂಡಕಾರ್ಮೋಡದಂತಿರುವ ಗೋಮೇದಕವೆಂಬುದು ಮೊದಲನೆಯ ಪರ್ವತವು. ಆ ಪರ್ವತದ ಹೆಸರಿನಿಂದ ಆ ವರ್ಷವು ಗೋಮೇದವೆಂದು ಪ್ರಖ್ಯಾತಿಯನ್ನು ಹೊಂದಿರುತ್ತದೆ. ವರ್ಷಕ್ಕೆ ಬಂದಿರುವ ಈ ಪ್ರಖ್ಯಾತಿಯು ಪರ್ವತದ ಪ್ರಾಮುಖ್ಯವನ್ನು ಸೂಚಿಸುತ್ತದೆ.

೮. ಸಕಲ ಓಷಧಿಗಳಿಂದ ತುಂಬಿರುವ ಚಂದ್ರವೆಂಬ ನಾಮಾಂಕಿತವಾದ ಪರ್ವತವು ಈ ದ್ವೀಪದ ಪರ್ವತಶ್ರೇಣಿಯಲ್ಲಿ ಎರಡನೆಯದು. ದೇವ ವೈದ್ಯರಾದ ಅಶ್ವಿನೀ ದೇವತೆಗಳು ಅಮೃತಕ್ಕೋಸ್ಕರ ಈ ಪರ್ವತದಲ್ಲಿ ಅವಶ್ಯವಾದ ಓಷಧಿಗಳನ್ನು ಸಂಗ್ರಹಿಸಿರುವರು.

ತೃತೀಯೋ ನಾರದೋ ನಾಮ ದುರ್ಗಶ್ಶೈಲೋ ಮಹೋಚ್ಛ್ರಯಃ ।
ತತ್ರಾಚಲೇ ಸಮುತ್ಪನ್ನೌ ಪೂರ್ವಂ ನಾರದಪರ್ವತೌ ॥ ೯ ॥

ಚತುರ್ಥಸ್ತತ್ರ ವೈ ಶೈಲೋ ದುಂದುಭಿರ್ನಾಮ ನಾಮತಃ ।
ಛಂದಮೃತ್ಯುಃ ಪುರಾ ತಸ್ಮಿನ್ ದುಂದುಭಿಃ ಸಾದಿತಃ ಸುರೈಃ ॥ ೧೦ ॥

ರಜ್ಜುದೋಲೋರುಕಾಮಂ ಯಃ ಶಾಲ್ಮಲಿಶ್ಚಾಸುರಾಂತಕೃತ್ ।
ಪಂಚಮಃ ಸೋಮಕೋ ನಾಮ ದೇವೈರ್ಯತ್ರಾಮೃತಂ ಪುರಾ ॥ ೧೧ ॥

ಸಂಭೃತಂ ಚಾಹೃತಂ ಚೈವ ಮಾತುರರ್ಥೇ ಗರುತ್ಮತಾ ।
ಷಷ್ಠಸ್ತು ಸುಮನಾ ನಾಮ ಸಪ್ತಮರ್ಷಭ ಉಚ್ಯತೇ ॥ ೧೨ ॥

ಹಿರಣ್ಯಾಕ್ಷೋ ವರಾಹೇಣ ತಸ್ಮಿನ್ ಶೈಲೇ ನಿಷೂದಿತಃ ।
ವೈಭ್ರಾಜಃ ಸಪ್ತಮಸ್ತತ್ರ ಭ್ರಾಜಿಷ್ಣುಃ ಸ್ಫಾಟಿಕೋ ಮಹಾನ್ ॥ ೧೩ ॥

---

೯. ಮತ್ತು ಕೋಟೆಯ ಆಕಾರವಾಗಿ ರಚಿತವಾದಂತೆ ಅತಿ ಉನ್ನತವಾದ ನಾರದ ಎಂಬ ಹೆಸರಿನ ಪರ್ವತವು ಮೂರನೆಯದಾಗಿದೆ. ಈ ಪರ್ವತದಲ್ಲಿ ಪೂರ್ವ ಕಾಲದಲ್ಲಿ ಪರ್ವತ ಮತ್ತು ನಾರದ ಎಂಬ ಇಬ್ಬರು ಮುನಿಗಳು ಜನಿಸಿದರು.

೧೦. ನಾಲ್ಕನೆಯ ಪರ್ವತವು ದುಂದುಭಿ ಎಂಬ ಹೆಸರಿನಿಂದ ಆ ದ್ವೀಪದಲ್ಲಿ ಪ್ರಖ್ಯಾತಿಯನ್ನು ಪಡೆದಿರುತ್ತದೆ, ಈ ಪರ್ವತದಲ್ಲಿ ಸ್ವೇಚ್ಛಾಮರಣವೆಂಬ ಮಹಾ ಮಹತ್ತ್ವದಿಂದ ಕೂಡಿದ ದುಂದುಭಿಯೆಂಬ ಅಸುರನನ್ನು ಪೂರ್ವದಲ್ಲಿ ದೇವತೆಗಳು ಸಂಹಾರ ಮಾಡಿರುವರು. ಆ ಅಸುರನ ಹೆಸರು ಈ ಪರ್ವತಕ್ಕೆ ಮುಖ್ಯವಾಗಿದೆ.

೧೧. ಆ ದುಂದುಭಿ ಅಸುರನು ಒಂದಾನೊಂದು ಶಾಲ್ಮಲಿ ವೃಕ್ಷದಲ್ಲಿ ರಜ್ಜುಗಳಿಂದ ದೋಲಾ ವಿಹಾರವನ್ನು ಅನುಭವಿಸುತ್ತಿರುವಾಗ ಆ ಶಾಲ್ಮಲಿ ವೃಕ್ಷವು ಅವನ ಪ್ರಾಣವಿಯೋಗಕ್ಕೆ ಕಾರಣವಾಯಿತು. ಹಾಗೆಯೇ ಸೋಮಕವೆಂಬ ನಾಮಾಂಕಿತ ಪರ್ವತವು ಐದನೆಯದಾಗಿರುತ್ತದೆ.

೧೨. ಆ ಸೋಮಕ ಪರ್ವತದಲ್ಲಿ ದೇವತೆಗಳಿಂದ ಸಂಗ್ರಹ ಮಾಡಿ ರಕ್ಷಿಸಲ್ಪಟ್ಟ ಅಮೃತವನ್ನು ಗರುಡನು ಜನನಿಗೋಸ್ಕರ ತಂದಿರುವನು. ಉತ್ತಮ ಪರ್ವತಗಳಲ್ಲಿ ಗಣನೀಯವಾದ ಸುಮನಾ ಅಥವಾ ವೃಷಭ ಎಂಬುದು ಆರನೆಯ ಪರ್ವತವು.

೧೩. ಆ ಸುಮನಾ ಎಂಬ ಪರ್ವತದಲ್ಲಿ ವರಾಹಾವತಾರಮಾಡಿದ ಮಹಾ

**ಅರ್ಚಿರ್ಭಿರ್ಭ್ರಾಜತೇ ಯಸ್ಮಾದ್ವೈಭ್ರಾಜಸ್ತೇನ ಸಂಸ್ಮೃತಃ ।**
**ತೇಷಾಂ ವರ್ಷಾಣಿ ವಕ್ಷ್ಯಾಮಿ ನಾಮತಸ್ತು ಯಥಾಕ್ರಮಮ್ ॥ ೧೪ ॥**

**ಗೋಮೇದಂ ಪ್ರಥಮಂ ವರ್ಷಂ ನಾಮ್ನಾ ಶಾಂತಭಯಂ ಸ್ಮೃತಮ್ ।**
**ಚಂದ್ರಸ್ಯ ಶಿಶಿರಂ ನಾಮ ನಾರದಸ್ಯ ಸುಖೋದಯಮ್ ॥ ೧೫ ॥**

**ಆನಂದಂ ದುಂದುಭೇರ್ವರ್ಷಂ ಸೋಮಕಸ್ಯ ಶಿವಂ ಸ್ಮೃತಮ್ ।**
**ಕ್ಷೇಮಕಂ ವೃಷಭಸ್ಯಾಪಿ ವೈಭ್ರಾಜಸ್ಯ ಧ್ರುವಂ ತಥಾ ॥ ೧೬ ॥**

**ಏತೇಷು ದೇವಗಂಧರ್ವಾಃ ಸಿದ್ಧಾಶ್ಚ ಸಹ ಚಾರಣೈಃ ।**
**ವಿಹರಂತಿ ರಮಂತೇ ಚ ದೃಶ್ಯಮಾನಾಶ್ಚ ತೈಃ ಸಹ ॥ ೧೭ ॥**

---

ವಿಷ್ಣುವಿನಿಂದ ಹಿರಣ್ಯಾಕ್ಷನೆಂಬ ಅಸುರನು ಸಂಹರಿಸಲ್ಪಟ್ಟಿರುವನು. ವೈಭ್ರಾಜ ಎಂಬುವ ಸ್ಫಟಿಕಮಣಿಮಯವಾಗಿ ಪ್ರಕಾಶಿಸುವ ಪರ್ವತವು ಏಳನೆಯದು.

೧೪. ಈ ಪರ್ವತವು ಸ್ಫಟಿಕ ಮಣಿಗಳ ಕಾಂತಿಯಿಂದ ಪ್ರಕಾಶಿಸುತ್ತಲಿರುವುದ ರಿಂದ ವೈಭ್ರಾಜವೆಂಬ ಅನ್ವರ್ಥ ಸಂಜ್ಞೆಯನ್ನು ಹೊಂದಿರುವುದು. ಈ ಸಪ್ತ ಪರ್ವತ ಗಳಿಂದ ಅಲಂಕರಿಸಲ್ಪಟ್ಟ ಸಪ್ತ ವರ್ಷಗಳ ಹೆಸರನ್ನು ಕ್ರಮವಾಗಿ ಹೇಳುವೆನು.

೧೫. ಶಾಂತಭಯವೆಂಬ ಪರ್ಯಾಯ ನಾಮವುಳ್ಳ ಗೋಮೇದವೆಂಬ ವರ್ಷವು ಮೊದಲನೆಯದು. ಚಂದ್ರ ಎಂಬ ಪರ್ವತದ ವರ್ಷವು ಶಿಶಿರ ಎಂಬ ಸಂಜ್ಞಾಂಕಿತ ದಾದುದು. ಮತ್ತು ನಾರದ ಪರ್ವತದ ವರ್ಷವು ಸುಖೋದಯವೆಂದು ಪ್ರಸಿದ್ಧಿ ಗೊಂಡಿದೆ.

೧೬. ದುಂದುಭಿ ಪರ್ವತದ ವರ್ಷವು ಆನಂದ ಎಂಬುದಾಗಿಯೂ ಸೋಮಕ ಪರ್ವತದ ವರ್ಷವು ಶಿವ ಎಂಬುದಾಗಿಯೂ ವೃಷಭ ಪರ್ವತದ ವರ್ಷವು ಕ್ಷೇಮಕ ಎಂಬುದಾಗಿಯೂ ವೈಭ್ರಾಜ ಪರ್ವತದ ವರ್ಷವು ಧ್ರುವ ಎಂಬುದಾಗಿಯೂ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿವೆ.

೧೭. ಈ ವರ್ಷ ಖಂಡಗಳಲ್ಲಿ ಸಿದ್ಧ-ಚಾರಣ-ಗಂಧರ್ವ ಮುಂತಾದ ದೇವ ಯೋನಿ ವಿಶೇಷರು ದೇವತೆಗಳಿಗೆ ಮಾತ್ರ ಪ್ರತ್ಯಕ್ಷ ಕಾಣಿಸಿಕೊಳ್ಳುವವರಾಗಿ ಪರಸ್ಪರ ವಾಗಿ ರತಿ ವಿಹಾರ ಸೌಖ್ಯಗಳನ್ನು ಅನುಭವಿಸುತ್ತಾರೆ.

ತೇಷಾಂ ನದ್ಯಸ್ತು ಸಪ್ತೈವ ಪ್ರತಿವರ್ಷಂ ಸಮುದ್ರಗಾಃ ।
ನಾಮತಸ್ತಾಃ ಪ್ರವಕ್ಷ್ಯಾಮಿ ಸಪ್ತಗಂಗಾಸ್ತಪೋಧನಾಃ ॥ ೧೮ ॥

ಅನುತಪ್ತಾ ಸುಖೀ ಚೈವ ವಿಪಾಶಾ ತ್ರಿದಿವಾ ಕ್ರಮುಃ ।
ಅಮೃತಾ ಸುಕೃತಾ ಚೈವ ಸಪ್ತ ತಾಃ ಸರಿತಾಂ ವರಾಃ ॥ ೧೯ ॥

ಅಭಿಗಚ್ಛಂತಿ ತಾ ನದ್ಯಸ್ತಾಭ್ಯಶ್ಚಾನ್ಯಾಃ ಸಹಸ್ರಶಃ ।
ಬಹೂದಕಾ ಹ್ಯೋಘವತ್ಯೋ ಯತೋ ವರ್ಷತಿ ವಾಸವಃ ॥ ೨೦ ॥

ತಾಃ ಪಿಬಂತಿ ಸದಾ ಹೃಷ್ಟಾ ನದೀರ್ಜನಪದಾಸ್ತು ತೇ ।
ಶುಭಾಃ ಶಾಂತಭಯಾಶ್ಚೈವ ಪ್ರಮುದಂ ಶೈಶಿರಾಃ ಶಿವಾಃ ॥ ೨೧ ॥

ಆನಂದಾಶ್ಚ ಸುಖಾಶ್ಚೈವ ಕ್ಷೇಮುಕಾಶ್ಚ ಧ್ರುವೈಃ ಸಹ ।
ವರ್ಣಾಶ್ರಮಾಚಾರಯುತಾಃ ಪ್ರಜಾಸ್ತೇಷ್ವವಧಿಷ್ಠಿತಾಃ ॥ ೨೨ ॥

---

೧೮. ಆ ಪ್ರತಿಯೊಂದು ಖಂಡಗಳಲ್ಲಿಯೂ ಸಮುದ್ರವನ್ನು ಸೇರುವ ಮಹಾ ನದಿಗಳು ಏಳು ಸಂಖ್ಯೆಯಿಂದ ಇವೆ. ತಪಸ್ವಿಗಳೆ! ಆಯಾಯ ವರ್ಷಗಳಲ್ಲಿ ಗಂಗೆ ಯಂತೆ ಇರುವ ಆ ಪವಿತ್ರ ನದಿಗಳ ಹೆಸರನ್ನು ಹೇಳುತ್ತೇನೆ.

೧೯. ಪುಣ್ಯ ನದಿಗಳು ಕ್ರಮವಾಗಿ ಅನುತಪ್ತಾ, ಸುಖೀ, ವಿಪಾಶಾ, ತ್ರಿದಿವಾ, ಕ್ರಮು, ಅಮೃತಾ, ಸುಕುತಾ, ಎಂಬುದಾಗಿ ಏಳು ಹೆಸರುಗಳನ್ನು ಹೊಂದಿವೆ.

೨೦. ಆ ಮಹಾನದಿಗಳಲ್ಲದೆ ಇತರ ಸಾವಿರಾರು ನದಿಗಳು ಆ ಮಹಾನದಿ ಗಳಲ್ಲಿ ಐಕ್ಯವನ್ನು ಹೊಂದುತ್ತವೆ. ಇಂದ್ರನು ಆ ನದಿಗಳ ವೇಗವಾಗಿ ಹರಿಯುವ ಜಲವನ್ನು ಯಥೇಚ್ಛವಾಗಿ ಸಂಗ್ರಹಿಸಿ ಭೂಮಿಯಲ್ಲಿ ಮಳೆಯನ್ನು ಸುರಿಸುವನು.

೨೧. ಹಿಂದೆ ಹೇಳಿರುವ ಮಂಗಳಕರವಾದ ಶಾಂತಭಯ, ಶಿಶಿರ, ಶಿವ, ಆನಂದ, ಸುಖ, ಕ್ಷೇಮುಕ, ಧ್ರುವ ಎಂಬ ದೇಶಗಳಲ್ಲಿ ವಾಸಿಸುವ ಸಕಲ ಪ್ರಜೆಗಳು ಸಂತೋಷ ದಿಂದ ಈ ನದಿಗಳ ಜಲವನ್ನು ಪಾನಮಾಡುತ್ತಾರೆ.

೨೨. ಅಲ್ಲಿರುವ ಸಮಸ್ತ ಪ್ರಜೆಗಳು ವರ್ಣಾಶ್ರಮ ಧರ್ಮವನ್ನು ಶ್ರದ್ಧೆಯಿಂದ ಆಚರಿಸುತ್ತಿರುವರು.

ಸರ್ವೇ ತ್ವರೋಗಾಃ ಸುಬಲಾಃ ಪ್ರಜಾಶ್ಚಾಮಯವರ್ಜಿತಾಃ ।
ಅವಸರ್ಪಿಣೀ ನ ತೇಷ್ವಸ್ತಿ ತಥೈವೋತ್ಸರ್ಪಿಣೀ ನ ಚ ॥ ೨೩ ॥

ನ ತತ್ರಾಸ್ತಿ ಯುಗಾವಸ್ಥಾ ಚತುರ್ಯುಗಕೃತಾ ಕ್ವಚಿತ್ ।
ತ್ರೇತಾಯುಗಸಮಃ ಕಾಲಃ ಸರ್ವದಾ ತತ್ರ ವರ್ತತೇ ॥ ೨೪ ॥

ಪ್ಲಕ್ಷದ್ವೀಪಾದಿಷು ಜ್ಞೇಯಃ ಪಂಚಸ್ವೇತೇಷು ಸರ್ವಶಃ ।
ದೇಶಸ್ಯಾನುವಿಧಾನೇನ ಕಾಲಸ್ಯಾನುವಿಧಾಃ ಸ್ಮೃತಾಃ ॥ ೨೫ ॥

ಪಂಚವರ್ಷಸಹಸ್ರಾಣಿ ತೇಷು ಜೀವಂತಿ ಮಾನವಾಃ ।
ಸುರೂಪಾಶ್ಚ ಸುವೇಷಾಶ್ಚ ಹ್ಯರೋಗಾ ಬಲಿನಸ್ತಥಾ ॥ ೨೬ ॥

---

೨೩. ತಮ್ಮ ತಮ್ಮ ಧರ್ಮವನ್ನು ಲೋಪವಿಲ್ಲದೇ ಅನುಷ್ಠಾನ ಮಾಡುತ್ತಿರುವುದರಿಂದ ಸಕಲ ಪ್ರಜೆಗಳು ರೋಗ ಮನೋವ್ಯಥೆಯಿಲ್ಲದವರೂ, ಬಲಿಷ್ಠರೂ ಆಗಿರುವರು. ಅವಸರ್ಪಿಣೀ, ಉತ್ಸರ್ಪಿಣೀ ಎಂಬ ಮಹಾಮಾರೀ ಮುಂತಾದ ಉಪದ್ರವಗಳು ಅವರಲ್ಲಿ ಇರಲಿಲ್ಲ. ರಕ್ತದ ಉಪಚಯ ಅಪಚಯಗಳಿಂದ ಉಂಟಾಗುವ ರೋಗಗಳು ಉತ್ಸರ್ಪಿಣೀ, ಅವಸರ್ಪಿಣೀ ಎಂದು ಕರೆಯಲ್ಪಡುತ್ತವೆ.

೨೪. ಧರ್ಮ ಮತ್ತು ಅಧರ್ಮಗಳ ಏರಿಳಿತಗಳಿಗೆ ಕಾರಣವಾದ ವಿಲಕ್ಷಣವಾದ ಕೃತ-ತ್ರೇತಾ-ದ್ವಾಪರ-ಕಲಿಯೆಂಬ ಚತುರ್ಯುಗಗಳ ಅವಸ್ಥೆಗಳು ಉಂಟಾಗುವುದಿಲ್ಲ. ಯಾವಾಗಲೂ ತ್ರೇತಾಯುಗಕ್ಕೆ ಸಮಾನವಾದ ಸುಖಮಯ ಕಾಲವು ಇರುತ್ತದೆ.

೨೫. ಪ್ಲಕ್ಷದ್ವೀಪ ಮುಂತಾದ ಐದು ದ್ವೀಪಗಳಲ್ಲಿ ಎಲ್ಲ ಕಡೆಯಲ್ಲಿಯೂ ದೇಶಭೇದಗಳ ವೈಲಕ್ಷಣ್ಯಕ್ಕೆ ಅನುರೂಪವಾಗಿ ಕಾಲವು ನಡೆಯುತ್ತಲಿರುವುದು. ಕಾಲಕ್ಕೆ ಸ್ವಾತಂತ್ರ್ಯವು ಇಲ್ಲ.

೨೬. ಮತ್ತು ಅಲ್ಲಿರುವ ಪ್ರಜೆಗಳು ಸುಂದರವಾದ ರೂಪ ಮತ್ತು ವೇಷಗಳುಳ್ಳವರೂ ನೀರೋಗರೂ ಮತ್ತು ಧೃಢಕಾಯರೂ ಆಗಿ ಐದು ಸಹಸ್ರ ವರ್ಷಗಳ ದೀರ್ಘಕಾಲದವರೆಗೆ ಆಯುಷ್ಮಂತರಾಗಿ ಬಾಳುವರು.

ಸುಖಮಾಯುರ್ಬಲಂ ರೂಪಮಾರೋಗ್ಯಂ ಧರ್ಮ ಏವ ಚ ।
ಪ್ಲಕ್ಷದ್ವೀಪಾದಿಷು ಜ್ಞೇಯಃ ಶಾಕದ್ವೀಪಾಂತಿಕೇಷು ವೈ ॥ ೨೭ ॥

ಪ್ಲಕ್ಷದ್ವೀಪಃ ಪೃಥುಃ ಶ್ರೀಮಾನ್ ಸರ್ವತೋ ಧನಧಾನ್ಯವಾನ್ ।
ದಿವ್ಯೌಷಧಿಫಲೋಪೇತಃ ಸರ್ವೌಷಧಿವನಸ್ಪತಿಃ ॥ ೨೮ ॥

ಆವೃತಃ ಪಶುಭಿಃ ಸರ್ವೈರ್ಗ್ರಾಮ್ಯಾರಣ್ಯೈಃ ಸಹಸ್ರಶಃ ।
ಜಂಬೂವೃಕ್ಷೇಣ ಸಂಖ್ಯಾತಃ ತಸ್ಯ ಮಧ್ಯೇ ದ್ವಿಜೋತ್ತಮಾಃ ॥ ೨೯ ॥

ಪ್ಲಕ್ಷೋ ನಾಮ ಮಹಾವೃಕ್ಷಸ್ತಸ್ಯ ನಾಮ್ನಾ ಸ ಉಚ್ಯತೇ ।
ಸ ತತ್ರ ಪೂಜ್ಯತೇ ಸ್ಥಾನೇ ಮಧ್ಯೇ ಜನಪದಸ್ಯ ಹ ॥ ೩೦ ॥

ಸ ಚಾಪೀಕ್ಷುರಸೋದೇನ ಪ್ಲಕ್ಷದ್ವೀಪಃ ಸಮಾವೃತಃ ।
ಪ್ಲಕ್ಷದ್ವೀಪಸಮೋನೈವ ವೈಪುಲ್ಯಾದ್ವಿಸ್ತರೇಣ ತು ॥ ೩೧ ॥

---

೨೭. ಪ್ಲಕ್ಷದ್ವೀಪ ಮೊದಲಾಗಿ ಶಾಕದ್ವೀಪ ಪರ್ಯಂತವಾದ ಐದು ದ್ವೀಪಗಳಲ್ಲಿ ವಾಸಿಸುವ ಪ್ರಜೆಗಳಿಗೆ ದ್ವೀಪಮಹಿಮೆಯಿಂದ ಸುಖ, ಆಯುಷ್ಯ, ಬಲ, ಸೌಂದರ್ಯ, ಆರೋಗ್ಯ, ಮತ್ತು ಧರ್ಮ ಎಂಬುವು ನೈಸರ್ಗಿಕವಾದ ಗುಣಗಳಾಗಿವೆ.

೨೮. ಅವುಗಳಲ್ಲಿ ಪ್ಲಕ್ಷದ್ವೀಪವು ಸರ್ವಪ್ರದೇಶಗಳಲ್ಲಿಯೂ ಸುಲಭವಾಗಿರುವ ಧನ, ಧಾನ್ಯ, ದಿವ್ಯವಾದ ಔಷಧಿ, ಫಲ, ಸಕಲ ವಿಧವಾದ ಔಷಧಿ ಮತ್ತು ವನಸ್ಪತಿ ಗಳ ಅತಿಶಯದಿಂದ ಪರಿಪೂರ್ಣವಾಗಿಯೂ ವಿಶಾಲವಾಗಿಯೂ ರಮ್ಯವಾದ ಕಾಂತಿ ಯಿಂದ ದರ್ಶನೀಯವಾಗಿಯೂ ಇರುವುದು.

೨೯. ದ್ವಿಜೋತ್ತಮರೆ! ಮತ್ತು ಗ್ರಾಮ್ಯ-ಅರಣ್ಯ ಜಾತಿಗೆ ಸೇರಿದ ಸಾವಿರಾರು ನಾನಾವಿಧ ಪಶುಗಳಿಂದ ವ್ಯಾಪ್ತವಾಗಿರುವುದು. ಆ ದ್ವೀಪದ ಮಧ್ಯದಲ್ಲಿ ಜಂಬೂ ದ್ವೀಪದಲ್ಲಿ ಇರುವ ಜಂಬೂವೃಕ್ಷಕ್ಕೆ ಸಮಾನವಾಗಿ ಒಂದುವೃಕ್ಷವು ಮಹತ್ತಾಗಿರುವುದು.

೩೦. ಆ ವೃಕ್ಷವು ಪ್ಲಕ್ಷವೆಂಬ ಹೆಸರಿನಿಂದ ಕರೆಯಲ್ಪಡುವುದು. ಆ ವೃಕ್ಷದ ಹೆಸರಿನಿಂದ ಸಂಪೂರ್ಣ ದ್ವೀಪವು ಪ್ಲಕ್ಷದ್ವೀಪವೆಂದು ಕರೆಯಲ್ಪಡುತ್ತಲಿದೆ. ಅಲ್ಲಿ ರುವ ಅನೇಕ ದೇಶಗಳ ಮಧ್ಯದ ಪೂಜ್ಯಸ್ಥಾನದಲ್ಲಿ ಆ ವೃಕ್ಷವು ವಿಶೇಷವಾಗಿ ಪೂಜಿಸ ಲ್ಪಡುತ್ತದೆ.

೩೧. ಇಂತಹ ಪ್ಲಕ್ಷದ್ವೀಪವು ತನಗೆ ಸಮಾನವಾದ ಸುತ್ತಳತೆ ಮತ್ತು ವಿಸ್ತಾರ

**ಇತ್യೇವ ಸನ್ನಿವೇಶೋ ವಃ ಪ್ಲಕ್ಷದ್ವೀಪಸ್ಯ ಕೀರ್ತಿತಃ ।**
**ಆನುಪೂರ್ವ್ಯಾತ್ಸಮಾಸೇನ ಶಾಲ್ಮಲಂ ತು ನಿಬೋಧತ ॥ ೩೨ ॥**

**ತತಸ್ತೃತೀಯಂ ವಕ್ಷ್ಯಾಮಿ ಶಾಲ್ಮಲಂ ದ್ವೀಪಮುತ್ತಮಮ್ ।**
**ಶಾಲ್ಮಲೇನ ಸಮುದ್ರಸ್ತು ದ್ವೀಪೇನೇಕ್ಷುರಸೋದಕಃ ॥ ೩೩ ॥**

**ಪ್ಲಕ್ಷದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ಸಮಾವೃತಃ ।**
**ತತ್ರಾಪಿ ಪರ್ವತಾಃ ಸಪ್ತ ವಿಜ್ಞೇಯಾ ರತ್ನಯೋನಯಃ ॥ ೩೪ ॥**

**ರತ್ನಾಕರಾಸ್ತಥಾ ನದ್ಯಸ್ತೇಷಾಂ ವರ್ಷೇಷು ಸಪ್ತಸು ।**
**ಪ್ರಥಮಃ ಸೂರ್ಯಸಂಕಾಶಃ ಕುಮುದೋ ನಾಮ ಪರ್ವತಃ ॥ ೩೫ ॥**

---

ಪರಿಮಾಣಗಳಿಂದ ಕೂಡಿದ ಇಕ್ಷು (ಕಬ್ಬು) ರಸವೆಂಬ ಉದಕಮಯವಾದ ಇಕ್ಷು ಸಮುದ್ರದಿಂದ ಸುತ್ತಲೂ ಆವರಿಸಲ್ಪಟ್ಟಿದೆ.

೩೨. ದ್ವಿಜೋತ್ತಮರೆ! ಹಿಂದೆ ಹೇಳಿರುವ ಕ್ರಮದಿಂದ ಪ್ಲಕ್ಷದ್ವೀಪದ ಸನ್ನಿವೇಶವನ್ನು ಹೇಳಿರುವೆನು. ಇನ್ನು ಮುಂದೆ ಅದರಂತೆ ಆನುಪೂರ್ವೀಬದ್ಧವಾಗಿಯೂ ಸಂಗ್ರಹವಾಗಿಯೂ ಶಾಲ್ಮಲದ್ವೀಪದ ವಿಷಯವಾಗಿ ಹೇಳುವ ವರ್ಣನೆಯನ್ನು ಕೇಳಿರಿ.

೩೩. ಶಾಲ್ಮಲದ್ವೀಪವು ದ್ವೀಪಗಳ ಶ್ರೇಣಿಯಲ್ಲಿ ಉತ್ತಮವಾದ ಮೂರನೆಯ ದ್ವೀಪವು. ಇದನ್ನು ಕುರಿತು ಹೇಳುವೆನು. ಈ ದ್ವೀಪದಿಂದ ಹಿಂದೆ ಪ್ಲಕ್ಷದ್ವೀಪಕ್ಕೆ ಆವರಣವಾಗಿರುವುದಾಗಿ ವರ್ಣಿಸಲ್ಪಟ್ಟ ಸಮುದ್ರವು ಸುತ್ತುವರಿಯಲ್ಪಟ್ಟಿರುವುದು.

೩೪. ಆದುದರಿಂದ ಪ್ಲಕ್ಷದ್ವೀಪದ ವಿಸ್ತಾರಕ್ಕಿಂತ ದ್ವಿಗುಣವಾದ ವಿಸ್ತಾರದಿಂದ ಈ ಶಾಲ್ಮಲ ದ್ವೀಪವು ಕೂಡಿದೆ. ಇಂತಹ ಈ ದ್ವೀಪದಲ್ಲಿ ಸಪ್ತಮಹಾಪರ್ವತಗಳು ರತ್ನವಸ್ತುಗಳ ಉತ್ಪತ್ತಿಗೆ ಕಾರಣವಾಗಿ ಇವೆಯೆಂಬುದನ್ನು ತಿಳಿಯಿರಿ.

೩೫. ಹಾಗೆಯೇ ರತ್ನಗಳ ನಿಧಿಯಿಂದ ತುಂಬಿರುವ ಅನೇಕ ನದಿಗಳು ಆ ಸಪ್ತ ಪರ್ವತಗಳಿಂದ ವಿಂಗಡಿಸಲ್ಪಟ್ಟ ಸಪ್ತವರ್ಷಗಳಲ್ಲಿ ಹರಿಯುವುವು. ಅಲ್ಲಿರುವ ಸಪ್ತ ಪರ್ವತಗಳಲ್ಲಿ ಸೂರ್ಯನಂತೆ ಥಳಥಳಿಸುವ ಕುಮುದ ಎಂಬುದು ಮೊದಲನೆಯ ಪರ್ವತವು.

ಸರ್ವಧಾತುಮಯೈಃ ಶೃಂಗೈಃ ಶಿಲಾಜಾಲಸಮಾಕುಲೈಃ ।
ದ್ವಿತೀಯಃ ಪರ್ವತಶ್ಚಾತ್ರ ಹ್ಯುತ್ತಮೋ ನಾಮ ವಿಶ್ರುತಃ ॥ ೩೬ ॥

ಹರಿತಾಲಮಯೈಃ ಶೃಂಗೈರ್ದಿವಮಾವೃತ್ಯ ತಿಷ್ಠತಿ ।
ತೃತೀಯಃ ಪರ್ವತಸ್ತತ್ರ ಬಲಾಹಕ ಇತಿ ಶ್ರುತಃ ॥ ೩೭ ॥

ಜಾತ್ಯಂಜನಮಯೈಃ ಶೃಂಗೈರ್ದಿವಮಾವೃತ್ಯ ತಿಷ್ಠತಿ ।
ಚತುರ್ಥಃ ಪರ್ವತೋ ದ್ರೋಣೋ ಯತ್ರ ಸಾ ವೈ ಮಹೌಷಧಿಃ ॥೩೮॥

ವಿಶಲ್ಯಕರಣೀ ಚೈವ ಮೃತಸಂಜೀವಿನೀ ತಥಾ ।
ಕಂಕಸ್ತು ಪಂಚಮಸ್ತತ್ರ ಪರ್ವತಃ ಸುಮಹೋದಯಃ ॥ ೩೯ ॥

ನಿತ್ಯಪುಷ್ಪಫಲೋಪೇತೋ ವೃಕ್ಷವೀರುತ್ಸಮಾವೃತಃ ।
ಷಷ್ಠಸ್ತು ಪರ್ವತಸ್ತತ್ರ ಮಹಿಷೋ ಮೇಘಸನ್ನಿಭಃ ॥ ೪೦ ॥

---

೩೬. ಇದು ನಾನಾ ವಿಧವಾದ ಗೈರಿಕಾದಿ ಧಾತುಗಳಿಂದಲೂ ಶಿಲಾಜಾಲ ದಿಂದಲೂ ಅಲಂಕರಿಸಲ್ಪಟ್ಟ ಶೃಂಗಗಳಿಂದ ಆಕಾಶವನ್ನು ವ್ಯಾಪಿಸಿಕೊಂಡಿದೆ:

೩೭. ಉತ್ತಮ ಎಂಬ ಹೆಸರಿನಿಂದ ಪ್ರಸಿದ್ಧಿಹೊಂದಿದ ಎರಡನೆಯ ಪರ್ವತವು ಹರಿತಾಲ ಧಾತುಮಯವಾದ ಶಿಖರಗಳಿಂದ ಆಕಾಶವನ್ನು ವ್ಯಾಪಿಸುವ ದೀರ್ಘಾಕಾರ ವನ್ನು ಹೊಂದಿರುವುದು.

೩೮. ಹಾಗೆ ಬಲಾಹಕ ಎಂಬ ಪ್ರಸಿದ್ಧಿಯುಳ್ಳ ಪರ್ವತವು ಉತ್ತಮವಾದ ಅಂಜನ (ಕಾಡಿಗೆ) ದಿಂದ ಕೂಡಿದ ಶೃಂಗಗಳಿಂದ ಆಕಾಶವನ್ನು ವ್ಯಾಪಿಸುತ್ತಾ ಮೂರ ನೆಯ ಪರ್ವತವಾಗಿದೆ.

೩೯. ದ್ರೋಣ ಎಂಬ ಪರ್ವತವು ಇವುಗಳಲ್ಲಿ ನಾಲ್ಕನೆಯ ಪರ್ವತವು. ಈ ಪರ್ವತದಲ್ಲಿ ಮೂರ್ಛಿತರಾದವರ ಅಸ್ತ್ರಶಲ್ಯವನ್ನು ದೂರಮಾಡುವ ಮತ್ತು ಮೃತ ರನ್ನು ಮತ್ತೆ ಬದುಕಿಸುವ ವಿಶಲ್ಯಕರಣೀ, ಮೃತಸಂಜೀವಿನೀ ಎಂಬ ಅಮೂಲ್ಯ ವಾದ ಔಷಧಿಗಳು ಲಭಿಸುವುವು.

೪೦. ಸರ್ವಕಾಲದಲ್ಲಿಯೂ ಪುಷ್ಪ-ಫಲಗಳ ಸಮೃದ್ಧಿಯಿಂದ ಕೂಡಿದ, ವಿವಿಧವಾದ ವೃಕ್ಷ-ಲತೆಗಳಿಂದ ಶೋಭಿಸಲ್ಪಟ್ಟ ಮತ್ತು ಅಧಿಕಪರಿಮಾಣದಿಂದ ಪರಿ ಪೂರ್ಣವ್ಯಾಪ್ತಿಯುಳ್ಳ ಕಂಕ ಎಂಬ ಪರ್ವತವು ಐದನೆಯದಾಗಿದೆ.

ಯಸ್ಮಿನ್ ಸೋಽಗ್ನಿರ್ನಿವಸತಿ ಮಹಿಷೋ ನಾಮ ವಾರಿಜಃ ।
ಸಪ್ತಮಃ ಪರ್ವತಸ್ತತ್ರ ಕಕುದ್ಮಾನ್ನಾಮ ಭಾಷ್ಯತೇ ॥ ೪೧ ॥

ತತ್ರ ರತ್ನಾನ್ಯನೇಕಾನಿ ಸ್ವಯಂ ರಕ್ಷತಿ ವಾಸವಃ ।
ಪ್ರಜಾಪತಿಮುಪಾದಾಯ ಪ್ರಜಾಭ್ಯೋ ವಿಧಿವತ್ ಸ್ವಯಮ್ ॥ ೪೨ ॥

ಇತ್ಯೇತೇ ಪರ್ವತಾಃ ಸಪ್ತ ಶಾಲ್ಮಲೇ ಮಣಿಭೂಷಣಾಃ ।
ತೇಷಾಂ ವರ್ಷಾಣಿ ವಕ್ಷ್ಯಾಮಿ ಸಪ್ತೈವ ತು ಶುಭಾನಿ ವೈ ॥ ೪೩ ॥

ಕುಮುದಸ್ಯ ಸ್ಮೃತಂ ಶ್ವೇತಮುತ್ತಮಸ್ಯ ಚ ಲೋಹಿತಮ್ ।
ಬಲಾಹಕಸ್ಯ ಜೀಮೂತಂ ದ್ರೋಣಸ್ಯ ಹರಿತಂ ಸ್ಮೃತಮ್ ॥ ೪೪ ॥

ಕಂಕಸ್ಯ ವೈದ್ಯುತಂ ನಾಮ ಮಹಿಷಸ್ಯ ಚ ಮಾನಸಮ್ ।
ಕಕುದಃ ಸುಪ್ರದಂ ನಾಮ ಸಪ್ತೈತಾನಿ ತು ಸಪ್ತಧಾ ॥ ೪೫ ॥

---

೪೧. ಮೇಘದಂತೆ ನೀಲವರ್ಣದಿಂದ ಹೊಳೆಯುವ ಮಹಿಷ ಎಂಬುದು ಆರನೆಯ ಗಿರಿಯು. ಅದರಲ್ಲಿ ನೀರಿನಿಂದ ಹುಟ್ಟಿದ ಮಹಿಷವೆಂಬ ಅಗ್ನಿವಿಶೇಷವು ವಾಸಮಾಡಿದೆ.

೪೨. ಆ ದ್ವೀಪದಲ್ಲಿರುವ ಸಪ್ತಮ ಪರ್ವತವು ಕಕುದ್ಮಾನ್ ಎಂದು ಕರೆಯಲ್ಪಡುತ್ತಿದೆ. ಆ ಪರ್ವತದಲ್ಲಿ ಇಂದ್ರನು ಪ್ರಜೆಗಳಿಗೋಸ್ಕರ ಪ್ರಜಾಧಿಪತ್ಯವನ್ನು ನಿರ್ವಹಿಸುವ ಪ್ರಜಾಪತಿಯ ಮೂಲಕ ಅನೇಕ ಶ್ರೇಷ್ಠ ವಸ್ತುಗಳನ್ನೂ ರತ್ನಗಳನ್ನೂ ರಕ್ಷಿಸುತ್ತಿರುವನು.

೪೩- ರತ್ನಾಭರಣಗಳಿಂದ ಕೂಡಿದ ಮೇಲೆ ಹೇಳಿದ ಸಪ್ತ ಪರ್ವತಗಳು ಶಾಲ್ಮಲದ್ವೀಪದಲ್ಲಿ ಪ್ರಸಿದ್ಧವಾದುವುಗಳಾಗಿವೆ. ಈ ಪರ್ವತಗಳಿಂದ ಗುರ್ತಿಸಲ್ಪಟ್ಟ ಮಂಗಳಕರವಾದ ಸಪ್ತ ವರ್ಷಗಳನ್ನು ಹೇಳುವೆನು.

೪೪-೪೫. ಕುಮುದ, ಉತ್ತಮ, ಬಲಾಹಕ, ದ್ರೋಣ, ಕಂಕ, ಮಹಿಷ, ಕಕುದ್ಮಾನ್ ಎಂದು ಸಪ್ತ ಪರ್ವತಗಳು ಹಿಂದೆ ಹೇಳಲ್ಪಟ್ಟಿವೆ. ಆ ಪರ್ವತಗಳನ್ನು ಸಂಬಂಧಿಸಿ ಕ್ರಮವಾಗಿ ಶ್ವೇತ, ಲೋಹಿತ, ಜೀಮೂತ, ಹರಿತ, ವೈದ್ಯುತ, ಮಾನಸ, ಸುಪ್ರದ ಎಂಬ ನಾಮಗಳಿಂದ ಅಂಕಿತವಾಗಿ ಸಪ್ತವರ್ಷಗಳು ಕಲ್ಪಿಸಲ್ಪಟ್ಟಿವೆ.

ವರ್ಷಾಣಿ ಪರ್ವತಾಶ್ಚೈವ ನದೀಸ್ತೇಷು ನಿಬೋಧತ ।
ಜ್ಯೋತಿಃ ಶಾಂತಿಸ್ತಥಾ ತುಷ್ಟಾ ಚಂದ್ರಾ ಶುಕ್ಲಾ ವಿಮೋಚನೀ ॥ ೪೬ ॥

ನಿವೃತ್ತಿಃ ಸಪ್ತಮೀ ತಾಸಾಂ ಪ್ರತಿವರ್ಷಂ ಚ ತಾಃ ಸ್ಮೃತಾಃ ।
ತಾಸಾಂ ಸಮೀಪಗಾಶ್ಚಾನ್ಯಾಃ ಶತಶೋಽಥ ಸಹಸ್ರಶಃ ॥ ೪೭ ॥

ನ ಸಂಖ್ಯಾಂ ಪರಿಸಂಖ್ಯಾತುಂ ಶಕ್ನುಯಾತ್ಕೋಽಪಿ ಮಾನವಃ ।
ಇತ್ಯೇಷ ಸನ್ನಿವೇಶೋ ವಃ ಶಾಲ್ಮಲಸ್ಯ ಪ್ರಕೀರ್ತಿತಃ ॥ ೪೮ ॥

ಪ್ಲಕ್ಷವೃಕ್ಷೇಣ ಸಂಖ್ಯಾತಸ್ತಸ್ಯ ಮಧ್ಯೇ ಮಹಾದ್ರುಮಃ ।
ಶಾಲ್ಮಲಿರ್ವಿಪುಲಸ್ಕಂಧಸ್ತಸ್ಯ ನಾಮ್ನಾ ಸ ಉಚ್ಯತೇ ॥ ೪೯ ॥

ಶಾಲ್ಮಲಸ್ತು ಸಮುದ್ರೇಣ ಸುರೋದೇನ ಸಮಾವೃತಃ ।
ವಿಸ್ತಾರಾಚ್ಛಾಲ್ಮಸ್ಯೈವ ಸಮೇನ ಚ ಸಮಂತತಃ ॥ ೫೦ ॥

---

೪೬-೪೭. ಈ ವರ್ಷಗಳನ್ನೂ ಅಲ್ಲಿರುವ ಪರ್ವತ-ನದೀ ಮುಂತಾದ ವಿಶೇಷ ಗಳನ್ನೂ ಹೇಳುವೆನು. ಕೇಳಿರಿ. ಜ್ಯೋತಿ, ಶಾಂತಿ, ತುಷ್ಟಾ, ಚಂದ್ರಾ, ಶುಕ್ಲಾ, ವಿಮೋಚನೀ, ಮತ್ತು ನಿವೃತ್ತಿ ಎಂಬ ಪವಿತ್ರವಾದ ಸಪ್ತನದಿಗಳು ಪ್ರತಿಯೊಂದು ವರ್ಷದ ಭೂಮಿಯಲ್ಲಿ ಹರಿಯುವುವು. ಇವು ಸಮುದ್ರವನ್ನು ಸೇರುವ ಮಹಾನದಿ ಗಳು, ಇವುಗಳನ್ನು ಸಂಧಿಸುವ ಅಲ್ಪ ನದಿಗಳು ನೂರಾರು ಅಥವಾ ಸಾವಿರಾರು ಸಂಖ್ಯೆಯಿಂದ ಈ ವರ್ಷಗಳಲ್ಲಿರುತ್ತವೆ.

೪೮. ಈ ಅಲ್ಪ ನದಿಗಳನ್ನು ಎಲ್ಲ ಸೇರಿಸಿ ಯಾರೊಬ್ಬ ಮಾನವನೂ ಒಟ್ಟು ಸಂಖ್ಯೆಯಿಂದ ಗಣಿಸಿ ಹೇಳಲು ಸಾಧ್ಯವಿಲ್ಲ. ಮುನಿಗಳೆ! ಹೀಗೆ ಶ್ರೋತೃಗಳಾದ ನಿಮಗೆ ಶಾಲ್ಮಲ ದ್ವೀಪದ ಸನ್ನಿವೇಶವನ್ನು ಸಂಗ್ರಹವಾಗಿ ಹೇಳಿರುವೆನು.

೪೯. ಪ್ಲಕ್ಷದ್ವೀಪದಲ್ಲಿ ವರ್ಣಿಸಿರುವ ಪ್ಲಕ್ಷವೆಂಬ ವೃಕ್ಷಕ್ಕೆ ಸಮಾನವಾದ, ವಿಸ್ತಾರವಾದ ಶಾಖೆ ಮತ್ತು ಸ್ಕಂಧಗಳಿಂದ ಕೂಡಿದ ಶಾಲ್ಮಲಿ ಎಂಬ ಮಹಾವೃಕ್ಷವು ಈ ದ್ವೀಪದಲ್ಲಿರುವುದು. ಆ ವೃಕ್ಷದ ಹೆಸರಿನಿಂದ ದ್ವೀಪಕ್ಕೆ ಶಾಲ್ಮಲದ್ವೀಪವೆಂಬ ಹೆಸರು ಬಂದಿರುವುದು.

೫೦. ಇಂತಹ ಶಾಲ್ಮಲ ದ್ವೀಪವು ತನ್ನ ಪರಿಮಾಣಕ್ಕೆ ಸಮವಾದ ವಿಸ್ತಾರ ಪರಿಮಾಣವುಳ್ಳ ಸುರಾಸಮುದ್ರದಿಂದ ಸುತ್ತಲೂ ಆವರಿಸಲ್ಪಟ್ಟಿರುವುದು.

**ಉತ್ತರೇಷು ತು ಧರ್ಮಜ್ಞಾ ದ್ವಿಪೇಷು ಶೃಣುತ ಪ್ರಜಾಃ ।**
**ಯಥಾಶ್ರುತಂ ಯಥಾನ್ಯಾಯಂ ಬ್ರುವತೋ ಮೇ ನಿಬೋಧತ ॥ ೫೧ ॥**

**ಕುಶದ್ವೀಪಂ ಪ್ರವಕ್ಷ್ಯಾಮಿ ಚತುರ್ಥಂ ತು ಸಮಾಸತಃ ।**
**ಸುರೋದಕಃ ಪರಿವೃತಃ ಕುಶದ್ವೀಪೇನ ಸರ್ವತಃ ॥ ೫೨ ॥**

**ಶಾಲ್ಮಲಸ್ಯ ತು ವಿಸ್ತಾರಾದ್ದ್ವಿಗುಣೇನ ಸಮಂತತಃ ।**
**ಸಪ್ತೈವ ಚ ಗಿರೀಂಸ್ತತ್ರ ವರ್ಣ್ಯಮಾನಾನ್ನಿಬೋಧತ ॥ ೫೩ ॥**

**ಕುಶದ್ವೀಪೇ ತು ವಿಜ್ಞೇಯಃ ಪರ್ವತೋ ವಿದ್ರುಮಶ್ಚ ಯಃ ।**
**ದ್ವೀಪಸ್ಯ ಪ್ರಥಮಸ್ತಸ್ಯ ದ್ವಿತಿಯೋ ಹೇಮಪರ್ವತಃ ॥ ೫೪ ॥**

**ತೃತೀಯೋ ದ್ಯುತಿಮಾನ್ನಾಮ ಜೀಮೂತಸದೃಶೋ ಗಿರಿಃ ।**
**ಚತುರ್ಥಃ ಪುಷ್ಪವಾನ್ನಾಮ ಪಂಚಮಸ್ತು ಕುಶೇಶಯಃ ॥ ೫೫ ॥**

---

೫೧. ಧರ್ಮವನ್ನು ಅರಿತ ಧಾರ್ಮಿಕರೆ! ಮುಂದಿನ ದ್ವೀಪಗಳಲ್ಲಿರುವ ಪ್ರಜೆಗಳ ವಿಷಯವಾಗಿ ನಾನು ಶ್ರವಣಮಾಡಿರುವಂತೆಯೂ ನ್ಯಾಯ ಸಮ್ಮತವಾಗಿರುವಂತೆಯೂ ಹೇಳುವುದನ್ನು ಕೇಳಿರಿ.

೫೨. ಶಾಲ್ಮಲ ದ್ವೀಪವು ಕಳೆದ ತರುವಾಯ ನಾಲ್ಕನೆಯದಾಗಿ ಕುಶದ್ವೀಪವಿರುವುದು. ಅದನ್ನು ಸಂಗ್ರಹವಾಗಿ ವರ್ಣಿಸುತ್ತೇನೆ. ಹಿಂದೆ ಹೇಳಿರುವ ಸುರೋದಕವನ್ನು ಸುತ್ತಲೂ ಆವರಿಸಿಕೊಂಡು ಕುಶದ್ವೀಪವಿರುವುದು.

೫೩. ಇದು ಶಾಲ್ಮಲದ್ವೀಪದ ವಿಸ್ತಾರಕ್ಕಿಂತ ದ್ವಿಗುಣವಾದ ವಿಸ್ತಾರದಿಂದ ಸುತ್ತಲೂ ವ್ಯಾಪಿಸಲ್ಪಟ್ಟಿದ್ದಾಗಿಯೂ ಮುಂದೆ ಹೇಳುವ ಸಪ್ತ ಪರ್ವತಗಳಿಂದ ಕೂಡಿರುವುದಾಗಿಯೂ ಇದೆ. ಆ ಪರ್ವತಗಳನ್ನು ಕೇಳಿರಿ.

೫೪. ಈ ಕುಶದ್ವೀಪದಲ್ಲಿ ವಿದ್ರುಮವೆಂಬ ಪರ್ವತವು ಪರ್ವತ ಶ್ರೇಣಿಯಲ್ಲಿ ಪ್ರಥಮವೆಂದು ತಿಳಿಯಬೇಕು. ಹೇಮಪರ್ವತವು ದ್ವಿತೀಯವಾದುದು.

೫೫. ಮೇಘದಂತೆ ಪ್ರಕಾಶಿಸುವ ದ್ಯುತಿಮಾನ್ ಎಂಬ ಹೆಸರಿನ ಪರ್ವತವು ಮೂರನೆಯದಾಗಿರುವುದು. ಹಾಗೆ ಪುಷ್ಪವಾನ್ ಎಂಬ ಪರ್ವತವು ನಾಲ್ಕನೆಯದಾಗಿಯೂ ಕುಶೇಶಯವೆಂಬ ಪರ್ವತವು ಐದನೆಯದಾಗಿಯೂ ಇರುವುವು.

ಷಷ್ಠೋ ಹರಿಗಿರಿರ್ನಾಮ ಸಪ್ತಮೋ ಮಂದರಃ ಸ್ಮೃತಃ ।
ಮಂದಾ ಇತಿ ಹ್ಯಪಾಂ ನಾಮ ಮಂದರೋ ದಾರಣಾದಯಮ್ ॥ ೫೬ ॥

ತೇಷಾಮಂತರವಿಷ್ಕಂಭೋ ದ್ವಿಗುಣಃ ಪ್ರವಿಭಾಗತಃ ।
ಉದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ವೇಣುಮಂಡಲಮ್ ॥ ೫೭ ॥

ತೃತೀಯಂ ವೈರಥಾಕಾರಂ ಚತುರ್ಥಂ ಲವಣಂ ಸ್ಮೃತಮ್ ।
ಪಂಚಮಂ ಧೃತಿಮದ್ವರ್ಷಂ ಷಷ್ಠಂ ವರ್ಷಂ ಪ್ರಭಾಕರಮ್ ॥ ೫೮ ॥

ಸಪ್ತಮಂ ಕಪಿಲಂ ನಾಮ ಸರ್ವೇ ತೇ ವರ್ಷಭಾವಕಾಃ ।
ಏತೇಷು ದೇವಗಂಧರ್ವಾಃ ಪ್ರಜಾಸ್ತು ಜಗದೀಶ್ವರಾಃ ॥ ೫೯ ॥

ವಿಹರಂತಿ ರಮಂತೇ ಚ ಹೃಷ್ಯಮಾಣಾಸ್ತು ಸರ್ವಶಃ ।
ನ ತೇಷು ದಸ್ಯವಃ ಸಂತಿ ಮ್ಲೇಚ್ಛಜಾತಯ ಏವ ಚ ॥ ೬೦ ॥

---

೫೬. ಮತ್ತು ಹರಿಗಿರಿ ಎಂಬುದು ಷಷ್ಠಪರ್ವತವು. ಸಪ್ತಮ ಪರ್ವತವು ಮಂದರಗಿರಿಯೆಂದು ವರ್ಣಿಸಲ್ಪಟ್ಟಿದೆ. ಮಂದಾ ಎಂಬುದು ಜಲದ ಪರ್ಯಾಯ ನಾಮವು. ಜಲವನ್ನು ದಾರಣ (ಸೀಳಿರುವುದು) ಮಾಡಿರುವುದರಿಂದ ಈ ಪರ್ವತವು ಮಂದರವೆಂದು ಪ್ರಸಿದ್ಧವಾಗಿರುವುದು.

೫೭-೫೮. ಈ ಎಲ್ಲ ಪರ್ವತಗಳ ಅಂತರದ ವಿಷ್ಕಂಭ ಪರಿಮಾಣವು ದ್ವಿಗುಣಿತ ವಾಗಿ ವಿಭಾಗ ಹೊಂದಿರುವುಗು. ಈ ದ್ವೀಪದಲ್ಲಿ ಕ್ರಮವಾಗಿ ಉದ್ಭಿದ, ವೇಣು ಮಂಡಲ, ವೈರಥ, ಲವಣ, ಧೃತಿಮತ್, ಪ್ರಭಾಕರ ಮತ್ತು ಕಪಿಲ ಎಂಬ ಸಪ್ತ ವರ್ಷಗಳು ಇರುವುವೆಂದು ಪ್ರಾಜ್ಞರಿಂದ ಸ್ಮರಿಸಲ್ಪಟ್ಟಿದೆ.

೫೯. ಹಿಂದೆ ಹೇಳಿರುವ ವರ್ಷಪರ್ವತಗಳು ಪ್ರತ್ಯೇಕವಾಗಿ ವರ್ಷಗಳನ್ನು ಕಲ್ಪಿಸಿರುವುವು. ಈ ವರ್ಷಗಳಲ್ಲಿ ಜಗದೀಶ್ವರರಾದ ದೇವ+ಮತ್ತು ಗಂಧರ್ವರು ವಾಸಮಾಡುವ ಪ್ರಜೆಗಳಾಗಿರುವರು.

೬೦. ಈ ಪ್ರಜೆಗಳು ಸರ್ವ ಪ್ರಕಾರಗಳಿಂದಲೂ ಸರ್ವಕಾಲದಲ್ಲಿಯೂ ಹರ್ಷ ಚಿತ್ತರಾಗಿ ರತಿ-ವಿಹಾರಸೌಖ್ಯವನ್ನು ಅನುಭವಿಸುವರು. ಆ ಪ್ರಜೆಗಳಲ್ಲಿ ದಸ್ಯು ಮತ್ತು ಮ್ಲೇಚ್ಛ ಮುಂತಾದ ಅಶುಭ ಪ್ರಜೆಗಳು ಸೇರಿರುವುದಿಲ್ಲ.

ಗೌರಪ್ರಾಯೋ ಜನಃ ಸರ್ವಃ ಕ್ರಮಾಚ್ಚ ಮ್ರಿಯತೇ ತಥಾ ।
ತತ್ರಾಪಿ ನದ್ಯಃ ಸಪ್ತೈವ ಧೂತಪಾಪಾ ಶಿವಾ ತಥಾ ॥ ೬೧ ॥

ಪವಿತ್ರಾ ಸಂತತಿಶ್ಚೈವ ವಿದ್ಯುದ್ದಂಭಾ ಮಹೀ ತಥಾ ।
ಅನ್ಯಾಸ್ತಾಭ್ಯೋಽಪರಿಜ್ಞಾತಾಃ ಶತಶೋಽಥ ಸಹಸ್ರಶಃ ॥ ೬೨ ॥

ಅಭಿಗಚ್ಛಂತಿ ತಾಃ ಸರ್ವಾ ಯತೋ ವರ್ಷತಿ ವಾಸವಃ ।
ಘೃತೋದೇನ ಕುಶದ್ವೀಪೋ ಬಾಹ್ಯತಃ ಪರಿವಾರಿತಃ ॥ ೬೩ ॥

ವಿಜ್ಞೇಯಃ ಸ ತು ವಿಸ್ತಾರಾತ್ಕುಶದ್ವೀಪಸಮೇನ ತು ।
ಇತ್ಯೇಷ ಸನ್ನಿವೇಶೋ ವಃ ಕುಶದ್ವೀಪಸ್ಯ ಕೀರ್ತಿತಃ ॥ ೬೪ ॥

ಕ್ರೌಂಚದ್ವೀಪಸ್ಯ ವಿಸ್ತಾರಂ ವಕ್ಷ್ಯಾಮ್ಯಹಮತಃ ಪರಮ್ ।
ಕುಶದ್ವೀಪಸ್ಯ ವಿಸ್ತಾರಾದ್ದ್ವಿಗುಣಃ ಸ ತು ವೈ ಸ್ಮೃತಃ ॥ ೬೫ ॥

---

೬೧. ಆ ಜನರು ಮಂಗಲವಾದ ಶುಭ್ರವರ್ಣದಿಂದ ಕೂಡಿದವರೂ ದೀರ್ಘವಾದ ಕಾಲಕ್ರಮದಿಂದ ಮರಣಹೊಂದುವವರೂ ಆಗಿರುವರು. ಇಲ್ಲಿ ಏಳು ಮಹಾನದಿಗಳು ಹರಿಯುವುವು.

೬೨. ಆ ನದಿಗಳು ಯಾವುವೆಂದರೆ:—ಧೂತಪಾಪಾ, ಶಿವಾ, ಪವಿತ್ರಾ, ಸಂತತಿ, ವಿದ್ಯುತ್, ದಂಭಾ, ಮಹೀ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಹೊಂದಿವೆ. ಮುಖ್ಯ ನದಿಗಳ ಹೊರತಾಗಿ ಇನ್ನೂ ಅನೇಕ ಸಂಖ್ಯೆಯ ಅಲ್ಪ ನದಿಗಳು ಈ ಮಹಾನದಿಗಳಲ್ಲಿ ಐಕ್ಯವನ್ನು ಹೊಂದುವುವು.

೬೩. ಈ ನದಿಗಳ ಜಲವನ್ನು ಇಂದ್ರನು ಸಂಗ್ರಹಿಸಿ ವೃಷ್ಟಿದಾನ ಮಾಡುವನು. ಈ ನದಿಗಳಿಂದ ಕೂಡಿರುವ ಕುಶದ್ವೀಪವು ಘೃತೋದಧಿಯಿಂದ ಬಾಹ್ಯವಲಯದ ಸುತ್ತಲೂ ಆವರಿಸಲ್ಪಟ್ಟಿರುವುದು.

೬೪, ಆವರಣವಾದ ಘೃತೋದಧಿಯು ಕುಶದ್ವೀಪದ ವಿಸ್ತಾರ ಪರಿಮಾಣದಿಂದ ಹೋಲಿಸಿದರೆ ಸಮವಿಸ್ತಾರವುಳ್ಳದ್ದಾಗಿದೆ. ಈ ರೀತಿಯಾಗಿ ಕುಶದ್ವೀಪದ ಮುಖ್ಯವಾದ ಗಿರಿ, ನದೀ ಮುಂತಾದುವುಗಳ ಸನ್ನಿವೇಶವು ವರ್ಣಿಸಲ್ಪಟ್ಟಿತು.

೬೫. ಇನ್ನು ಮುಂದೆ ಕ್ರೌಂಚದ್ವೀಪದ ವಿಸ್ತಾರವನ್ನು ಹೇಳುತ್ತೇನೆ. ಇದು ಕುಶದ್ವೀಪಕ್ಕಿಂತ ದ್ವಿಗುಣವಾದ ವಿಸ್ತಾರವನ್ನು ಹೊಂದಿಕೊಂಡಿದೆ.

ಘೃತೋದಕಸಮುದ್ರೋ ವೈ ಕ್ರೌಂಚದ್ವೀಪೇನ ಸಂವೃತಃ ।
ತಸ್ಮಿನ್ ದ್ವೀಪೇ ನಗಶ್ರೇಷ್ಠಃ ಕ್ರೌಂಚಸ್ತು ಪ್ರಥಮೋ ಗಿರಿಃ ॥ ೬೬ ॥

ಕ್ರೌಂಚಾತ್ಪರೋ ವಾಮನಕೋ ವಾಮನಾದಂಧಕಾರಕಃ ।
ಅಂಧಕಾರಾತ್ಪರಶ್ಚಾಪಿ ದಿವಾವೃನ್ನಾಮ ಪರ್ವತಃ ॥ ೬೭ ॥

ದಿವಾವೃತಃ ಪರಶ್ಚಾಪಿ ದ್ವಿವಿದೋ ಗಿರಿಸತ್ತಮಃ ।
ದ್ವಿವಿದಾತ್ಪರತಶ್ಚಾಪಿ ಪುಂಡರೀಕೋ ಮಹಾಗಿರಿಃ ॥ ೬೮ ॥

ಪುಂಡರೀಕಾತ್ಪರಶ್ಚಾಪಿ ಪ್ರೋಚ್ಯತೇ ದುಂದುಭಿಸ್ವನಃ ।
ಏತೇ ರತ್ನಮಯಾಃ ಸಪ್ತ ಕ್ರೌಂಚದ್ವೀಪಸ್ಯ ಪರ್ವತಾಃ ॥ ೬೯ ॥

ಬಹುಪುಷ್ಪಫಲೋಪೇತನಾನಾವೃಕ್ಷಲತಾವೃತಾಃ ।
ಪರಸ್ಪರೇಣ ದ್ವಿಗುಣಾ ವಿಸ್ತೃತಾ ಹರ್ಷವರ್ಧನಾಃ ॥ ೭೦ ॥

ವರ್ಷಾಣಿ ತತ್ರ ವಕ್ಷ್ಯಾಮಿ ನಾಮತಸ್ತಾನ್ನಿಬೋಧತ ।
ಕ್ರೌಂಚಸ್ಯ ಕುಶಲೋ ದೇಶೋ ವಾಮನಸ್ಯ ಮನೋನುಗಃ ॥ ೭೧ ॥

---

೬೬. ಹಿಂದೆ ಹೇಳಿರುವ ಘೃತೋದಧಿಯು ಈ ಕ್ರೌಂಚದ್ವೀಪದಿಂದ ಸುತ್ತುವರಿಯಲ್ಪಟ್ಟಿದೆ. ಇಂತಹ ಕ್ರೌಂಚದ್ವೀಪದಲ್ಲಿ ಕ್ರೌಂಚವೆಂಬ ಶ್ರೇಷ್ಠವಾದ ಒಂದು ಪರ್ವತವು ಮುಖ್ಯವಾಗಿದೆ.

೬೭-೬೮-೬೯. ಈ ಕ್ರೌಂಚ ಪರ್ವತವು ಈ ದ್ವೀಪದ ಪರ್ವತಗಳಲ್ಲಿ ಮೊದಲನೆಯದಾಗಿದೆ. ಇದರಿಂದ ಪ್ರಾರಂಭವಾಗಿ ವಾಮನಕ, ಅಂಧಕಾರಕ, ದಿವಾವೃತ್, ದ್ವಿವಿದ, ಪುಂಡರೀಕ, ದುಂದುಭಿಸ್ವನ ಪರ್ಯಂತವಾಗಿಯೂ ರತ್ನಮಯವಾಗಿ ಇರುವ ಶ್ರೇಷ್ಠವಾದ ಸಪ್ತಮಹಾಪರ್ವತಗಳು ಈ ಕ್ರೌಂಚದ್ವೀಪದಲ್ಲಿ ಇರುತ್ತವೆ.

೭೦. ಈ ಸಮಸ್ತ ಪರ್ವತಗಳು ಅನೇಕವಾದ ವಿವಿಧ ಫಲಪುಷ್ಪಗಳಿಂದ ಅಲಂಕರಿಸಲ್ಪಟ್ಟ ಅನೇಕ ವೃಕ್ಷ-ಲತೆಗಳಿಂದ ಪೂರ್ಣಗಳಾಗಿಯೂ ಒಂದಕ್ಕಿಂತ ಮತ್ತೊಂದು ಕ್ರಮವಾಗಿ ದ್ವಿಗುಣಪರಿಮಾಣದಿಂದ ಕೂಡಿದವುಗಳಾಗಿಯೂ ಮತ್ತು ಪ್ರೇಕ್ಷಕರ ಮನಸ್ಸಿಗೆ ಹರ್ಷವನ್ನು ವೃದ್ಧಿಪಡಿಸುವುವುಗಳಾಗಿಯೂ ಇವೆ.

೭೧. ಈ ಪರ್ವತಗಳಿಂದ ಕಲ್ಪಿಸಲ್ಪಟ್ಟ ಸಪ್ತ ವರ್ಷಗಳ ಹೆಸರನ್ನು ಹೇಳು

ಮನೋಽನುಗಾತ್ಪರಶ್ಚೋಽಷ್ಣಸ್ತೃತೀಯಂ ವರ್ಷಮುಚ್ಯತೇ ।
ಉಷ್ಣಾತ್ಪರಃ ಪೀವರಕಃ ಪೀವರಾದಂಧಕಾರಕಃ ॥ ೭೨ ॥

ಅಂಧಕಾರಾತ್ಪರಶ್ಚಾಪಿ ಮುನಿದೇಶಃ ಸ್ಮೃತೋ ಬುಧೈಃ ।
ಮುನಿದೇಶಾತ್ಪರಶ್ಚೈವ ಪ್ರೋಚ್ಯತೇ ದುಂದುಭಿಸ್ವನಃ ॥ ೭೩ ॥

ಸಿದ್ಧಚಾರಣಸಂಕೀರ್ಣೋ ಗೌರಪ್ರಾಯೋ ಜನಃ ಸ್ಮೃತಃ ।
ತತ್ರಾಪಿ ನದ್ಯಃ ಸಪ್ತೈವ ಪ್ರತಿವರ್ಷಂ ಸ್ಮೃತಾಃ ಶುಭಾಃ ॥ ೭೪ ॥

ಗೌರೀ ಕುಮುದ್ವತೀ ಚೈವ ಸಂಧ್ಯಾ ರಾತ್ರಿರ್ಮನೋಜವಾ ।
ಖ್ಯಾತಿಶ್ಚ ಪುಂಡರೀಕಾ ಚ ಗಂಗಾಃ ಸಪ್ತವಿಧಾಃ ಸ್ಮೃತಾಃ ॥ ೭೫ ॥

---

ವೆನು. ಅವಧಾನದಿಂದ ಕೇಳಿರಿ. ಕ್ರೌಂಚ ಪರ್ವತದ ವರ್ಷವು ಕುಶಲದೇಶವೆಂದೂ ವಾಮನ ಪರ್ವತದ ವರ್ಷವು ಮನೋಽನುಗವೆಂದೂ ಪ್ರಸಿದ್ಧವಾಗಿವೆ.

೭೨. ಹಾಗೆ ಮನೋಽನುಗ ವರ್ಷದ ಮುಂದಿರುವುದು ಉಷ್ಣ ವರ್ಷವೆಂದು ಕರೆಯಲ್ಪಡುತ್ತದೆ. ಉಷ್ಣವರ್ಷದ ಮುಂದೆ ಪೀವರಕ ವರ್ಷವೂ ಅದನ್ನು ದಾಟಿ ಅಂಧಕಾರಕವೆಂಬ ವರ್ಷವೂ ಇರುತ್ತವೆ.

೭೩- ಅಂಧಕಾರ ವರ್ಷದ ಮುಂದಿನ ವರ್ಷವು ಮುನಿದೇಶವೆಂದೂ ಆ ಮುನಿ ದೇಶದ ಮುಂದೆ ಇರುವ ವರ್ಷವು ದುಂದುಭಿಸ್ವನವೆಂದೂ ಪ್ರಾಜ್ಞರಿಂದ ಕರೆಯಲ್ಪಟ್ಟಿವೆ. ಈ ರೀತಿ ಎಲ್ಲ ದ್ವೀಪಗಳಂತೆ-ಕ್ರೌಂಚದ್ವೀಪವೂ ಸಪ್ತ ವರ್ಷಗಳಿಂದ ಭೂಷಿಸಲ್ಪಟ್ಟಿರುತ್ತದೆ.

೭೪. ಇಲ್ಲಿರುವ ಪ್ರಜೆಗಳು ಅನೇಕಮಂದಿ ಸಿದ್ಧ-ಚಾರಣರೆಂಬ ದೇವವಿಶೇಷರಿಂದ ಕೂಡಿ ಗೌರವರ್ಣದಿಂದ ಶೋಭಿತರಾಗಿರುವರು. ಇಲ್ಲಿ ಕೂಡ ಪ್ರತಿಯೊಂದು ವರ್ಷದಲ್ಲಿಯೂ ಒಂದೊಂದು ಮಹಾನದಿಯಿರುವುದರಿಂದ ಒಟ್ಟಾಗಿ ಸಪ್ತಮಹಾನದಿಗಳು ಹರಿಯುವುವು.

೭೫. ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಖ್ಯಾತಿ, ಪುಂಡರೀಕಾ, ಎಂಬ ಪವಿತ್ರ ನಾಮಾಂಕನವುಳ್ಳ ಆ ನದಿಗಳು ಕ್ರೌಂಚದ್ವೀಪದಲ್ಲಿ ಹರಿಯುವ ಸಪ್ತ ಗಂಗೆಗಳಾಗಿ ಸ್ಮರಿಸಲ್ಪಟ್ಟಿರುತ್ತವೆ.

**ತಾಸಾಂ ಸಹಸ್ರಶಶ್ಚಾನ್ಯಾ ನದ್ಯೋ ಯಾಸ್ತು ಸಮೀಪಗಾಃ ।**
**ಅಭಿಗಚ್ಛಂತಿ ತಾಃ ಸರ್ವಾ ವಿಪುಲಾಃ ಸಬಹೂದಕಾಃ ॥ ೭೬ ॥**

**ಕ್ರೌಂಚದ್ವೀಪಃ ಸಮುದ್ರೇಣ ದಧಿಮಂಡೋದಕೇನ ತು ।**
**ಆವೃತಃ ಸರ್ವತಃ ಶ್ರೀಮಾನ್ ಕ್ರೌಂಚದ್ವೀಪಸಮೇನ ತು ॥ ೭೭ ॥**

**ಪ್ಲಕ್ಷದ್ವೀಪಾದಯೋ ಹ್ಯೇತೇ ಸಮಾಸೇನ ಪ್ರಕೀರ್ತಿತಾಃ ।**
**ತೇಷಾಂ ನಿಸರ್ಗೋ ದ್ವೀಪಾನಾಮಾನುಪೂರ್ವ್ಯೇಣ ಸರ್ವಶಃ ॥ ೭೮ ॥**

**ನ ಶಕ್ಯೋ ವಿಸ್ತರಾದ್ವಕ್ತುಂ ದಿವ್ಯವರ್ಷಶತೈರಪಿ ।**
**ನಿಸರ್ಗೋ ಯಃ ಪ್ರಜಾನಾಂ ತು ಸಂಹಾರೋ ಯಶ್ಚ ತಾಸು ವೈ॥೭೯॥**

**ಶಾಕದ್ವೀಪಂ ಪ್ರವಕ್ಷ್ಯಾಮಿ ಯಥಾವದಿಹ ನಿಶ್ಚಯಾತ್ ।**
**ಶೃಣುಧ್ವಂ ತು ಯಥಾತಥ್ಯಂ ಬ್ರುವತೋ ಮೇ ಯಥಾರ್ಥವತ್ ॥ ೮೦॥**

---

೭೬. ಈ ನದಿಗಳಲ್ಲದೆ ಇತರ ಸಾವಿರಾರು ನದಿಗಳು ವಿಸ್ತಾರವಾದ ಪಾತ್ರಗಳಿಂದಲೂ ಸಮೃದ್ಧಿಯಾದ ಜಲದಿಂದಲೂ ಕೂಡಿ ಈ ಮಹಾನದಿಗಳನ್ನು ಸೇರಿ ತನ್ಮೂಲಕ ಸಮುದ್ರದಲ್ಲಿ ಹೋಗಿ ಸೇರುತ್ತವೆ.

೭೭. ಈ ರೀತಿಯಾಗಿ ಸಮೃದ್ಧಿಯಿಂದ ಕೂಡಿದ ಕ್ರೌಂಚದ್ವೀಪವು ತನಗೆ ಸಮಾನವಾದ ವಿಸ್ತಾರ ಮುಂತಾದ ಪರಿಮಾಣವುಳ್ಳ ದಧಿಮಂಡದ (ಮೊಸರಿನ ಕೆನೆ) ಸಮುದ್ರದಿಂದ ವಲಯಾಕಾರವಾಗಿ ಸುತ್ತಲ್ಪಟ್ಟಿದೆ.

೭೮. ಈ ರೀತಿಯಾಗಿ ಪ್ಲಕ್ಷದ್ವೀಪ ಮೊದಲಾದ ಸಮಸ್ತ ದ್ವೀಪಗಳು ಸಂಗ್ರಹವಾಗಿ ವರ್ಣಿಸಲ್ಪಟ್ಟಿರುತ್ತವೆ. ಆ ದ್ವೀಪಗಳ ಪ್ರತ್ಯೇಕ ಸ್ವಭಾವವನ್ನು ಸ್ವಲ್ಪವೂ ಬಿಡದಂತೆ ಎಲ್ಲವನ್ನೂ ಆನುಪೂರ್ವಿಯಿಂದ ಹೇಳುವುದು ಶಕ್ಯವಲ್ಲ.

೭೯. ಮತ್ತು ಅಲ್ಲಿರುವ ಪ್ರಜೆಗಳ ವೈಯಕ್ತಿಕವಾದ ವಿಶೇಷಗಳು ಅವರ ಸಂಹಾರಕ್ರಮದ ವೈಲಕ್ಷಣ್ಯ ಮುಂತಾದ ಈ ದ್ವೀಪಗಳ ಪ್ರತಿಯೊಂದು ಅತಿಶಯಗಳನ್ನು ದೇವಮಾನದ ನೂರಾರು ವರ್ಷಗಳಿಂದಲೂ ವಿಸ್ತಾರವಾಗಿ ಹೇಳಲಾಗುವುದಿಲ್ಲ.

೮೦. ಇನ್ನು ಮುಂದೆ ಶಾಕದ್ವೀಪದ ಸನ್ನಿವೇಶವನ್ನು ನಿಮಗೆ ಯಥಾವತ್ತಾದ

**ಕ್ರೌಂಚದ್ವೀಪಸ್ಯ ವಿಸ್ತಾರಾದ್ ದ್ವಿಗುಣಸ್ತಸ್ಯ ವಿಸ್ತರಃ ।**
**ಪರಿವಾರ್ಯ ಸಮುದ್ರಂ ಸ ದಧಿಮಂಡೋದಕಂ ಸ್ಥಿತಃ ॥ ೮೧ ॥**

**ತತ್ರ ಪುಣ್ಯಾ ಜನಪದಾಶ್ಚಿರಾತ್ತು ಮ್ರಿಯತೇ ಜನಃ ।**
**ಕುತ ಏವ ಚ ದುರ್ಭಿಕ್ಷಂ ಜರಾವ್ಯಾಧಿಭಯಂ ಕುತಃ ॥ ೮೨ ॥**

**ತತ್ರಾಪಿ ಪರ್ವತಾಃ ಶುಭ್ರಾಃ ಸಪ್ತೈವ ಮಣಿಭೂಷಣಾಃ ।**
**ರತ್ನಾಕರಾಸ್ತಥಾ ನದ್ಯಸ್ತೇಷಾಂ ನಾಮಾನಿ ಮೇ ಶೃಣು ॥ ೮೩ ॥**

**ದೇವರ್ಷಿಗಂಧರ್ವಯುತಃ ಪ್ರಥಮೋ ಮೇರುರುಚ್ಯತೇ ।**
**ಪ್ರಾಗಾಯತಃ ಸ ಸೌವರ್ಣೋ ಹ್ಯುದಯೋ ನಾಮ ಪರ್ವತಃ ॥ ೮೪ ॥**

---

ಜ್ಞಾನವು ಹುಟ್ಟುವಂತೆ ಹೇಳುವೆನು. ತತ್ತ್ವಗಳ ಪಾರಮಾರ್ಥಿಕತೆಯಿಂದ ಹೇಳುತ್ತಿರುವ ನನ್ನ ಮಾತನ್ನು ನೀವೆಲ್ಲರೂ ಕೇಳಿರಿ.

೮೧. ಈ ಶಾಕದ್ವೀಪವು ಹಿಂದೆ ಹೇಳಿರುವ ಕ್ರೌಂಚದ್ವೀಪದ ವಿಸ್ತಾರಕ್ಕೆ ಸಮಾನವಾದ ವಿಸ್ತಾರವುಳ್ಳದ್ದಾಗಿ ಕ್ರೌಂಚ ದ್ವೀಪದ ಆವರಣವಾಗಿರುವ ದಧಿಮಂಡೋದಧಿಯನ್ನು ಸುತ್ತಿಕೊಂಡಿದೆ.

೮೨. ಈ ದ್ವೀಪದ ದೇಶಗಳು ಅತ್ಯಂತ ಪವಿತ್ರವಾದುವುಗಳು ಮತ್ತು ಅಲ್ಲಿರುವ ಜನಗಳು ದೀರ್ಘವಾದ ಆಯುಷ್ಯವನ್ನು ಹೊಂದಿ ಅವಸಾನದಲ್ಲಿ ಮರಣಹೊಂದುವರು. ಹೀಗಿರುವಾಗ ದುರ್ಭಿಕ್ಷ-ಜರಾ-ವ್ಯಾಧಿ ಮುಂತಾದ ಯಾವ ದುಃಖಗಳು ಹೇಗೆ ಉಂಟಾಗುವುವು ?

೮೩. ಈ ದ್ವೀಪದಲ್ಲಿ ಶುಭ್ರವೂ ರತ್ನಮಯವೂ ಆದ ಸಪ್ತಪರ್ವತಗಳು ಮತ್ತು ರತ್ನಗಳಿಗೆ ಗಣಿಗಳಂತಿರುವ ಅನೇಕ ನದಿಗಳೂ ಪ್ರಸಿದ್ಧವಾಗಿವೆ. ಅವುಗಳ ಹೆಸರನ್ನು ಕೇಳಿರಿ.

೮೪. ದೇವ-ಋಷಿ-ಗಂಧರ್ವರಿಗೆ ಆಶ್ರಯವಾದ ಮೇರುಪರ್ವತವು ಈ ಪರ್ವತ ಶ್ರೇಣಿಯಲ್ಲಿ ಮೊದಲನೆಯದು. ಇದು ಪೂರ್ವದಿಕ್ಕಿನಲ್ಲಿ ವಿಸ್ತಾರವಾಗಿಯೂ ಸುವರ್ಣಮಯವಾಗಿಯೂ ಮತ್ತು ಉದಯಪರ್ವತವೆಂಬ ಪ್ರಸಿದ್ಧಿಯನ್ನು ಹೊಂದಿರುವುದಾಗಿಯೂ ಇದೆ.

**ವೃಷ್ಟ್ಯರ್ಥಂ ಜಲದಾಸ್ತತ್ರ ಪ್ರಭವಂತಿ ಚ ಯಾಂತಿ ಚ ।**
**ತಸ್ಯಾಪರೇಣ ಸುಮಹಾನ್ ಜಲಧಾರೋ ಮಹಾಗಿರಿಃ ॥ ೮೫ ॥**

**ಯತೋ ನಿತ್ಯಮುಪಾದತ್ತೇ ವಾಸವಃ ಪರಮಂ ಜಲಮ್ ।**
**ತತೋ ವರ್ಷಂ ಪ್ರಭವತಿ ವರ್ಷಾಕಾಲೇ ಪ್ರಜಾಸ್ವಿಹ ॥ ೮೬ ॥**

**ತಸ್ಯೋತ್ತರೇ ರೈವತಕೋ ಯತ್ರ ನಿತ್ಯಂ ಪ್ರತಿಷ್ಠಿತಮ್ ।**
**ರೇವತೀ ದಿವಿ ನಕ್ಷತ್ರಂ ಪಿತಾಮಹಕೃತೋ ವಿಧಿಃ ॥ ೮೭ ॥**

**ತಸ್ಯಾಪರೇಣ ಸುಮಹಾನ್ ಶ್ಯಾಮೋ ನಾಮ ಮಹಾಗಿರಿಃ ।**
**ತಸ್ಮಾಚ್ಛ್ಯಾಮತ್ವಮಾಪನ್ನಾಃ ಪ್ರಜಾಃ ಪೂರ್ವಮಿಮಾಃ ಕಿಲ ॥ ೮೮ ॥**

**ತಸ್ಯಾಪರೇಣ ಸುಮಹಾನ್ ರಾಜತೋಽಸ್ತಗಿರಿಃ ಸ್ಮೃತಃ ।**
**ತಸ್ಯಾಪರೇ ಚಾಂಬಿಕೇಯೋ ದುರ್ಗಶೈಲೋ ಮಹಾಗಿರಿಃ ॥ ೮೯ ॥**

---

೮೫. ಈ ಪರ್ವತದಲ್ಲಿ ಮಳೆಯನ್ನು ಸುರಿಸಲು ಮೇಘಗಳು ನೀರಿನ ಸಂಗ್ರಹ ಕ್ಕೋಸ್ಕರ ಬರುತ್ತಲೂ ಹೋಗುತ್ತಲೂ ಇರುತ್ತವೆ. ಆ ಪರ್ವತದಿಂದ ಮುಂದೆ ಜಲಧಾರವೆಂಬ ದ್ವಿತೀಯವಾದ ಮಹಾಗಿರಿಯು.

೮೬. ಇಂದ್ರನು ಈ ಜಲಧಾರಪರ್ವತದಿಂದ ಶ್ರೇಷ್ಠವಾದ ಜಲವನ್ನು ಸರ್ವ ಕಾಲದಲ್ಲಿಯೂ ಸಂಗ್ರಹಿಸುವನು. ವರ್ಷಾಕಾಲದಲ್ಲಿ ಪ್ರಜೆಗಳಿಗೆ ಈ ಜಲವು ವೃಷ್ಟಿ ರೂಪವಾಗಿ ಪರಿಣಮಿಸುವುದು.

೮೭. ಅದರ ಉತ್ತರದಿಗ್ಭಾಗದಲ್ಲಿ ರೈವತಕವೆಂಬ ಪರ್ವತವಿರುವುದು. ಆ ಪರ್ವ ತದ ಊರ್ಧ್ವಭಾಗದಲ್ಲಿ ವಿಧಿಯ ಸೃಷ್ಟಿನಿಯಮವನ್ನು ಅನುಸರಿಸಿ ರೇವತೀನಕ್ಷತ್ರವು ಸ್ಥಿತಿಯನ್ನು ಹೊಂದಿರುವುದು.

೮೮. ಅದನ್ನು ದಾಟಿ ಮುಂದುಗಡೆಯಲ್ಲಿ ಮಹತ್ತಾದ ಶ್ಯಾಮವೆಂಬ ಪರ್ವತ ವಿರುವುದು. ಆ ಪರ್ವತದ ಅವಲಂಬನದಿಂದ ಪೂರ್ವದಲ್ಲಿ ಇಲ್ಲಿದ್ದ ಪ್ರಜೆಗಳು ಶ್ಯಾಮ ವರ್ಣವನ್ನು ಹೊಂದಿದ್ದರು.

೮೯. ಆ ಶ್ಯಾಮಪರ್ವತದ ಮುಂದೆ ರಜತಮಯವಾದ ಅತ್ಯುನ್ನತ ಅಸ್ತಪರ್ವ ತವೂ ಅದನ್ನು ಮೀರಿ ಶಿಲಾಮಯದುರ್ಗದಂತಿರುವ ಅಂಬಿಕೇಯವೆಂಬ ಮಹಾ ಗಿರಿಯೂ ಇರುವುದಾಗಿ ಪ್ರಾಜ್ಞರಿಂದ ಹೇಳಲ್ಪಟ್ಟಿದೆ.

**ಅಂಬಿಕೇಯಾತ್ಪರೋ ರಮ್ಯಃ ಸರ್ವೌಷಧಿಸಮನ್ವಿತಃ ।**
**ಕೇಸರೀ ಕೇಸರಯುತೋ ಯತೋ ವಾಯುಃ ಪ್ರಜಾಪತಿಃ ॥ ೯೦ ॥**

**ಉದಯಾತ್ಪ್ರಥಮಂ ವರ್ಷಂ ಮಹತ್ತಜ್ಜಲದಂ ಸ್ಮೃತಮ್ ।**
**ದ್ವಿತೀಯಂ ಜಲಧಾರಸ್ಯ ಸುಕುಮಾರಮಿತಿ ಸ್ಮೃತಮ್ ॥ ೯೧ ॥**

**ರೈವತಸ್ಯ ತು ಕೌಮಾರಂ ಶ್ಯಾಮಸ್ಯ ಚ ಮಣೀವಕಮ್ ।**
**ಅಸ್ತಸ್ಯಾಪಿ ಶುಭಂ ವರ್ಷಂ ವಿಜ್ಞೇಯಂ ಕುಸುಮೋತ್ತರಮ್ ॥ ೯೨ ॥**

**ಅಂಬಿಕೇಯಸ್ಯ ಮೋದಾಕಂ ಕೇಸರಸ್ಯ ಮಹಾದ್ರುಮಮ್ ।**
**ದ್ವೀಪಸ್ಯ ಪರಿಮಾಣಂ ತು ಹ್ರಸ್ವದೀರ್ಘತ್ವಮೇವ ಚ ॥ ೯೩ ॥**

**ಕ್ರೌಂಚದ್ವೀಪೇನ ವಿಖ್ಯಾತಂ ತಸ್ಯ ಕೇತುರ್ಮಹಾದ್ರುಮಃ ।**
**ಶಾಕೋ ನಾಮ ಮಹೋತ್ಸೇಧಸ್ತಸ್ಯ ಪೂಜ್ಯಾ ಮಹಾನುಗಾಃ ॥ ೯೪ ॥**

---

೯೦. ಆ ಅಂಬಿಕೇಯ ಪರ್ವತದ ಅಪರಭಾಗದಲ್ಲಿ ರಮಣೀಯವೂ ಸಮಸ್ತ ಔಷಧಿಗಳಿಂದ ಪರಿಪೂರ್ಣವೂ ಆದ ಕೇಸರಿ ಎಂಬ ಪರ್ವತವು ಪ್ರತಿಷ್ಠಿತವಾಗಿರುವುದು. ಈ ಪರ್ವತದಿಂದ ಪುಷ್ಪಕೇಸರಗಳಿಂದ ಕೂಡಿದ ಪ್ರಜಾಪತಿಯ ಅವತಾರರೂಪವಾದ ವಾಯುವು ಬೀಸುತ್ತಿದೆ.

೯೧. ಹೀಗೆ ಏಳು ಪರ್ವತಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ಒಂದೊಂದು ಪರ್ವತವು ಒಂದೊಂದು ವರ್ಷ ವಿಭಾಗಕ್ಕೆ ಕಾರಣವಾಗಿದೆ. ಮೊದಲನೆಯ ಉದಯ ಪರ್ವತಕ್ಕೆ ಸಂಬಂಧಿಸಿರುವ ವರ್ಷವು ಜಲದವೆಂದು ಪ್ರಸಿದ್ಧವಾಗಿರುವುದು. ಜಲಧಾರ ವೆಂಬ ದ್ವಿತೀಯ ಪರ್ವತವನ್ನು ಸಂಬಂಧಿಸಿರುವುದು ಸುಕುಮಾರವೆಂಬ ವರ್ಷವು.

೯೨-೯೩. ಹಾಗೆ ಕೌಮಾರ ವರ್ಷವು ರೈವತಪರ್ವತವನ್ನೂ ಮಣೀವಕ ವರ್ಷವು ಶ್ಯಾಮಪರ್ವತವನ್ನೂ ಶುಭಕರವಾದ ಕುಸುಮೋತ್ತರವೆಂಬ ಪರ್ವತವು ಅಸ್ತ ಪರ್ವತವನ್ನೂ ಮೋದಾಕವೆಂಬ ವರ್ಷವು ಅಂಬಿಕೇಯಪರ್ವತವನ್ನೂ ಮಹಾದ್ರುಮವೆಂಬ ವರ್ಷವು ಕೇಸರಪರ್ವತವನ್ನೂ ಸಂಧಿಸಿರುವುದೆಂದು ತಿಳಿಯ ಬೇಕು. ಈ ದ್ವೀಪದ ಹ್ರಸ್ವ-ದೀರ್ಘ ಮುಂತಾದ ಸಮಸ್ತಪರಿಮಾಣಗಳು ಕ್ರೌಂಚ ದ್ವೀಪದ ಪರಿಮಾಣಕ್ಕೆ ತುಲ್ಯವಾಗಿರುವುವು.

೯೪. ಈ ಶಾಕದ್ವೀಪಕ್ಕೆ ಅತಿಶಯವಾದ ಉನ್ನತಿಯುಳ್ಳ ಶಾಕವೆಂಬ ಹೆಸರಿನ

ತತ್ರ ಪುಣ್ಯಾ ಜನಪದಾಶ್ಚಾತುರ್ವರ್ಣ್ಯಸಮನ್ವಿತಾಃ ।
ನದ್ಯಶ್ಚಾಪಿ ಮಹಾಪುಣ್ಯಾ ಗಂಗಾಃ ಸಪ್ತವಿಧಾಸ್ತಥಾ ॥ ೯೫ ॥

ಸುಕುಮಾರೀ ಕುಮಾರೀ ಚ ನಳಿನೀ ವೇಣುಕಾ ಚ ಯಾ ।
ಇಕ್ಷುಶ್ಚ ವೇಣುಕಾ ಚೈವ ಗಭಸ್ತಿಃ ಸಪ್ತಮೀ ತಥಾ ॥ ೯೬ ॥

ನದ್ಯಶ್ಚಾನ್ಯಾಃ ಪುಣ್ಯಜಲಾಃ ಶೀತತೋಯವಹಾಃ ಶುಭಾಃ ।
ಸಹಸ್ರಶಃ ಸಮಾಖ್ಯಾತಾ ಯತೋ ವರ್ಷತಿ ವಾಸವಃ ॥ ೯೭ ॥

ನ ತಾಸಾಂ ನಾಮಧೇಯಾನಿ ಪರಿಮಾಣಂ ತಥೈವ ಚ ।
ಶಕ್ಯಂ ವೈ ಪರಿಸಂಖ್ಯಾತುಂ ಪುಣ್ಯಾಸ್ತಾಃ ಸರಿದುತ್ತಮಾಃ ॥ ೯೮ ॥

ತಾಃ ಪಿಬಂತಿ ಸದಾ ಹೃಷ್ಟಾ ನದೀರ್ಜನಪದಾಸ್ತು ತೇ ।
ಶಾಂಶಪಾಯನ ವಿಸ್ತೀರ್ಣೋ ದ್ವೀಪೋಽಸೌ ಚಕ್ರಸಂಸ್ಥಿತಃ ॥ ೯೯ ॥

---

ಮಹಾ ವೃಕ್ಷವು ಧ್ವಜದಂತೆ ಮೆರೆಯುವುದು. ಅಲ್ಲಿಯ ಜನಸಂಘಕ್ಕೆ ಆ ವೃಕ್ಷವು ಬಹು ಪೂಜ್ಯವಾಗಿರುವುದು.

೯೫. ಆ ವರ್ಷಗಳಲ್ಲಿ ಪವಿತ್ರರೂ ಮತ್ತು ಚಾತುರ್ವರ್ಣ್ಯಕ್ಕೆ ಸಂಬಂಧಿಸಿರುವ ವರ್ಣ-ಆಶ್ರಮಧರ್ಮಗಳ ಅನುಷ್ಠಾನವಂತರೂ ಆದ ಪ್ರಜೆಗಳು ವಾಸಿಸುವ ಪವಿತ್ರ ದೇಶಗಳು ಇರುವುವು. ಹಾಗೆ ಸಪ್ತಗಂಗೆಯೆನಿಸುವ ಪವಿತ್ರವಾದ ಏಳು ನದಿಗಳು ಇರುವುವು.

೯೬. ಆ ನದಿಗಳು ಸುಕುಮಾರೀ, ಕುಮಾರೀ, ನಳಿನೀ, ವೇಣುಕಾ, ಇಕ್ಷು, ವೇಣುಕಾ, ಗಭಸ್ತಿ ಎಂದು ಪವಿತ್ರನಾಮಾಂಕಿತಗಳಾಗಿವೆ.

೯೭. ಅಲ್ಲದೆ ಇಂದ್ರನು ವೃಷ್ಟಿಪ್ರದಾನಕ್ಕೆ ಅವಶ್ಯವಾಗಿ ಸಂಗ್ರಹಿಸಬೇಕಾದುದೂ ಪವಿತ್ರವೂ, ಶೀತಲವೂ, ಮಂಗಲಪ್ರದವೂ ಆದ ಜಲಗಳಿಗೆ ದೊಡ್ಡ ಜಲಾಶಯಗಳಂತಿರುವ ಸಾವಿರಾರು ನದಿಗಳು ಅಲ್ಲಿ ಹರಿಯುತ್ತಿವೆಯೆಂದು ಹೇಳಲ್ಪಟ್ಟಿವೆ.

೯೮. ಆ ಎಲ್ಲ ನದಿಗಳ ಪ್ರತ್ಯೇಕನಾಮವನ್ನೂ ಅವುಗಳ ಪರಿಮಾಣವನ್ನೂ ಸರಿಯಾಗಿ ಎಣಿಸಿ ವರ್ಣಿಸಲು ಶಕ್ಯವಲ್ಲ. ಆದರೆ ಎಲ್ಲವೂ ಉತ್ತಮವಾದ ಪವಿತ್ರ ನದಿಗಳಾಗಿವೆ.

೯೯. ಆ ವರ್ಷಗಳ ದೇಶಗಳಲ್ಲಿ ವಾಸಿಸುವ ಸಕಲ ಪ್ರಜೆಗಳು ಸರ್ವಕಾಲದ

ನದೀಜಲೈಃ ಪ್ರತಿಚ್ಛನ್ನಃ ಪರ್ವತೈಶ್ಚಾಭ್ರಸನ್ನಿಭೈಃ ।
ಸರ್ವಧಾತುವಿಚಿತ್ರೈಶ್ಚ ಮಣಿವಿದ್ರುಮಭೂಷಿತೈಃ ॥ ೧೦೦ ॥

ನಗರೈಶ್ಚೈವ ವಿವಿಧೈಃ ಸ್ಫೀತೈರ್ಜನಪದೈರಪಿ ।
ವೃಕ್ಷೈಃ ಪುಷ್ಪಫಲೋಪೇತೈಃ ಸಮಂತಾದ್ಧನಧಾನ್ಯವಾನ್ ॥ ೧೦೧ ॥

ಕ್ಷೀರೋದೇನ ಸಮುದ್ರೇಣ ಸರ್ವತಃ ಪರಿವಾರಿತಃ ।
ಶಾಕದ್ವೀಪಸ್ಯ ವಿಸ್ತಾರಾತ್ಸಮೇನ ತು ಸಮಂತತಃ ॥ ೧೦೨ ॥

ತಸ್ಮಿನ್ ಜನಪದಾಃ ಪುಣ್ಯಾಃ ಪರ್ವತಾಃ ಸರಿತಃ ಶುಭಾಃ ।
ವರ್ಣಾಶ್ರಮಸಮಾಕೀರ್ಣಾ ದೇಶಾಸ್ತೇ ಸಪ್ತ ವೈ ಸ್ಮೃತಾಃ ॥ ೧೦೩ ॥

---

ಲ್ಲಿಯೂ ಹರ್ಷದಿಂದ ಕೂಡಿ ಆ ನದಿಗಳ ಜಲವನ್ನು ಪಾನಮಾಡುವರು. ಶಾಂಶಪಾಯನಿಯೇ ! ಚಕ್ರಾಕಾರವಾಗಿರುವ ಈ ಶಾಕದ್ವೀಪವು ಅತ್ಯಂತ ವಿಸ್ತೀರ್ಣವಾಗಿರುವುದು.

೧೦೦. ಈ ದ್ವೀಪವು ಸಾವಿರಾರು ನದಿಗಳ ಜಲದಿಂದ ಮುಚ್ಚಿಹೋದುದಾಗಿಯೂ ಮತ್ತು ಸಮಸ್ತ ಗೈರಿಕಾದಿಧಾತುಗಳಿಂದಲೂ ಅಮೂಲ್ಯವಾದ ಹವಳಗಳಿಂದಲೂ ರಮಣೀಯವಾಗಿಯೂ ಮೇಘಗಳಂತೆ ನೀಲವರ್ಣಶೋಭಿತವಾಗಿಯೂ ಇರುವುದು.

೧೦೧. ಮತ್ತು ವಿವಿಧವೂ ವಿಶಾಲವೂ ಆದ ಅನೇಕ ನಗರಗಳಿಂದಲೂ ದೇಶಗಳಿಂದಲೂ ಫಲಪುಷ್ಪಾದಿ ಸಮೃದ್ಧಿಯಿಂದ ಅಲಂಕೃತವಾದ ನಾನಾವಿಧ ವೃಕ್ಷಗಳಿಂದಲೂ ಪರಿಪೂರ್ಣವಾಗಿರುವುದಲ್ಲದೆ ಸುತ್ತಲೂ ಧನಧಾನ್ಯಗಳಿಂದ ತುಂಬಿ ಪ್ರಕಾಶಿಸುವುದು.

೧೦೨. ಈ ಶಾಕದ್ವೀಪವು ತನ್ನ ವಿಸ್ತಾರಕ್ಕೆ ತುಲ್ಯವಾದ ವಿಸ್ತಾರಪರಿಮಾಣದಿಂದ ಸುತ್ತಲೂ ವ್ಯಾಪಿಸಿಕೊಂಡಿರುವ ಕ್ಷೀರಸಮುದ್ರದಿಂದ ಮಂಡಲಾಕಾರವಾಗಿ ಸುತ್ತಲ್ಪಟ್ಟಿರುವುದು.

೧೦೩, ಇಂತಹ ದ್ವೀಪದಲ್ಲಿ ಪವಿತ್ರವಾದ ನಾನಾ ದೇಶಗಳು, ಪರ್ವತಗಳು, ಮಂಗಳಕರವಾದ ನದಿಗಳು ಇರುವುವಲ್ಲದೆ ವರ್ಣಾಶ್ರಮಧರ್ಮವನ್ನು ಆಚರಿಸುವ ಆಸ್ತಿಕಜನರಿಂದ ತುಂಬಿದ ಸಪ್ತದೇಶಗಳು ಇವೆಯೆಂದು ವಿದ್ವಾಂಸರು ಹೇಳಿರುವರು.

ನ ಸಂಕರಶ್ಚ ತೇಷ್ವಸ್ತಿ ವರ್ಣಾಶ್ರಮಕೃತಃ ಕ್ವಚಿತ್ ।
ಧರ್ಮಸ್ಯ ಚಾವ್ಯಭೀಚಾರಾದೇಕಾಂತಸುಖಿತಾಃ ಪ್ರಜಾಃ ॥ ೧೦೪ ॥

ನ ತೇಷು ಲೋಭೋ ಮಾಯಾ ವಾ ಹೀಷ್ಯಾಸೂಯಾಕೃತಃ ಕುತಃ ।
ವಿಪರ್ಯಯೋ ನ ತೇಷ್ವಸ್ತಿ ಕಾಲಾತ್ಸ್ವಾಭಾವಿಕಂ ಪರಮ್ ॥ ೧೦೫ ॥

ಕರಾವಾಪ್ತಿರ್ನ ತೇಷ್ವಸ್ತಿ ನ ದಂಡೋ ನ ಚ ದಂಡ್ಯಕಾಃ ।
ಸ್ವಧರ್ಮೇಣೈವ ಧರ್ಮಜ್ಞಾಸ್ತೇ ರಕ್ಷಂತಿ ಪರಸ್ಪರಮ್ ॥ ೧೦೬ ॥

ಏತಾವದೇವ ಶಕ್ಯಂ ವೈ ತಸ್ಮಿನ್ ದ್ವೀಪೇ ಪ್ರಭಾಷಿತುಮ್ ।
ಏತಾವದೇವ ಶ್ರೋತವ್ಯಂ ಶಾಕದ್ವೀಪನಿವಾಸಿನಾಮ್ ॥ ೧೦೭ ॥

---

೧೦೪. ಪ್ರಜೆಗಳು ಆಚರಿಸುವ ವರ್ಣಾಶ್ರಮ ಧರ್ಮಗಳಿಗೆ ಸಾಂಕರ್ಯವು ಲೇಶವಾದರೂ ಇರಲಿಲ್ಲ. ಧರ್ಮವನ್ನು ಲೋಪವಿಲ್ಲದೆ ಜಾಗರೂಕತೆಯಿಂದ ಅನುಷ್ಠಾನ ಮಾಡುತ್ತಿದ್ದುದರಿಂದ ಪ್ರಜೆಗಳು ಅವಿಚ್ಛಿನ್ನವಾದ ಸೌಖ್ಯ ಪರಂಪರೆಯನ್ನು ಅನುಭವಿಸುತ್ತಿದ್ದರು.

೧೦೫. ಅತ್ಯಾಸೆ, ವಂಚನೆ ಮುಂತಾದ ದೋಷವಾಗಲಿ, ಈರ್ಷ್ಯ, ಅಸೂಯಾ ಮುಂತಾದ ದೋಷವಾಗಲಿ ಆ ಪ್ರಜೆಗಳಲ್ಲಿ ಅವಕಾಶಹೊಂದಿರಲಿಲ್ಲ. ಕರ್ಮಕ್ಕೆ ಬದಲಾವಣೆಯಿಲ್ಲದುದರಿಂವ ಅವರ ಜೀವನ ಕ್ರಮದಲ್ಲಿ ಯಾವ ಬದಲಾವಣೆಯೂ ಇಲ್ಲದೆ ಕಾಲಾಧೀನವಾಗಿ ಸ್ವಭಾವಸಿದ್ಧವಾದ ಕ್ರಮವು ನಡೆಯುತ್ತಲಿದ್ದಿತು.

೧೦೬. ಆ ಪ್ರಜೆಗಳಿಗೆ ಒಬ್ಬ ಪ್ರಭುವು ನಿಯಾಮಕನಾಗಿದ್ದು ಅವರಿಂದ ಪೊಗದಿಯನ್ನು ತೆಗೆದುಕೊಳ್ಳುವುದು, ಅಪರಾಧಿಗಳನ್ನು ಕಂಡುಹಿಡಿಯುವುದು, ಅವರಿಗೆ ಶಿಕ್ಷೆ ವಿಧಿಸುವುದು ಇತ್ಯಾದಿ ರಾಜ್ಯಾಂಗ ಕ್ರಮವು ಯಾವುದೂ ಇಲ್ಲದೆ ಅಲ್ಲಿರುವ ಪ್ರಜೆಗಳು ಧರ್ಮಜ್ಞರಾಗಿ ಸ್ವಧರ್ಮಾಚರಣೆಯಿಂದ ಪರಸ್ಪರವಾಗಿ ರಕ್ಷಿಸುತ್ತಲಿರುವರು.

೧೦೭. ಶಾಕದ್ವೀಪದ ವಿಷಯವಾಗಿ ಇಷ್ಟುಮಾತ್ರ ಮಹತ್ತ್ವವನ್ನು ಪ್ರಶಂಸೆ ಮಾಡುವುದು ಸಾಧ್ಯವು. ಆದರೆ ಅಲ್ಲಿ ವಾಸಮಾಡುವವರ ವಿಷಯದಲ್ಲಿ ತಿಳಿಯಬೇಕಾದುದೂ ಇಷ್ಟು ಮಾತ್ರವೇ ಇರುವುದು.

ಪುಷ್ಕರಂ ಸಪ್ತಮಂ ದ್ವೀಪಂ ಪ್ರವಕ್ಷ್ಯಾಮಿ ನಿಬೋಧತ ।
ಪುಷ್ಕರೇಣ ತು ದ್ವೀಪೇನ ವೃತಃ ಕ್ಷೀರೋದಕೋ ಬಹಿಃ ॥ ೧೦೮ ॥

ಶಾಕದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ಸಮಂತತಃ ।
ಪುಷ್ಕರೇ ಪರ್ವತಃ ಶ್ರೀಮಾನೇಕ ಏವ ಮಹಾಶಿಲಃ ॥ ೧೦೯ ॥

ಚಿತ್ರೈರ್ಮಣಿಮಯೈಃ ಶೃಂಗೈಃ ಶಿಲಾಜಾಲೈಶ್ಚ ಸಮುಚ್ಛ್ರಿತಃ ।
ದ್ವೀಪಸ್ಯ ತಸ್ಯ ಪೂರ್ವಾರ್ಧೇ ಚಿತ್ರಸಾನುಃ ಸ್ಥಿತೋ ಮಹಾನ್ ॥೧೧೦॥

ಸ ಮಂಡಲಸಹಸ್ರಾಣಿ ವಿಸ್ತೀರ್ಣಃ ಪಂಚವಿಂಶತಿಃ ।
ಊರ್ಧ್ವಂ ಚೈವ ಚತುಸ್ತ್ರಿಂಶತ್ಸಹಸ್ರಾಣಿ ಮಹೀತಲಾತ್ ॥ ೧೧೧ ॥

ದ್ವೀಪಾರ್ಧಸ್ಯ ಪರಿಕ್ಷಿಪ್ತಃ ಪರ್ವತೋ ಮಾನಸೋತ್ತರಃ ।
ಸ್ಥಿತೋ ವೇಲಾಸಮೀಪೇ ತು ನವಚಂದ್ರ ಇವೋದಿತಃ ॥ ೧೧೨ ॥

---

೧೦೮. ಇನ್ನುಮುಂದೆ ಸಪ್ತಮವಾದ ಪುಷ್ಕರದ್ವೀಪದ ಅದ್ಭುತ ವಿಷಯಗಳನ್ನು ಪ್ರತಿಪಾದಿಸುವೆನು, ಕೇಳಿರಿ. ಪುಷ್ಕರದ್ವೀಪವು ಬಹಿರ್ವಲಯ ಪ್ರದೇಶದಲ್ಲಿ ಕ್ಷೀರೋದಧಿಯನ್ನು ವ್ಯಾಪಿಸಿಕೊಂಡಿರುವುದು.

೧೦೯. ಶಾಕದ್ವೀಪಕ್ಕೆ ವರ್ಣಿಸಿರುವ ವಿಸ್ತಾರಕ್ಕಿಂತ ಈ ಪುಷ್ಕರದ್ವೀಪವು ದ್ವಿಗುಣವಾದ ವಿಸ್ತಾರವನ್ನು ಹೊಂದಿ ವ್ಯಾಪಿಸಿಕೊಂಡಿದೆ. ಇಂತಹ ಪುಷ್ಕರದ್ವೀಪದಲ್ಲಿ ಮಹಾಶಿಲೆಗಳಿಂದ ಕೂಡಿ ರಮಣೀಯವಾದ ಒಂದುಮಾತ್ರ ಪರ್ವತವು ಇರುವುದು.

೧೧೦. ಈ ಪರ್ವತವು ರತ್ನಮಯವಾದ ವಿಚಿತ್ರವರ್ಣದ ಶಿಖರಗಳಿಂದಲೂ ಶಿಲೆಗಳ ಗುಂಪಿನಿಂದಲೂ ಪೂರ್ಣವಾಗಿದೆ. ಈ ದ್ವೀಪದ ಪೂರ್ವಾರ್ಧದಲ್ಲಿ ಒಂದು ದೊಡ್ಡ ವಿಚಿತ್ರವಾದ ತಪ್ಪಲು ಇರುವುದು.

೧೧೧. ಆ ಚಿತ್ರಸಾನುವು ಇಪ್ಪತ್ತೈದುಸಹಸ್ರಯೋಜನ ಪರಿಮಾಣದ ಮಂಡಲಾಕಾರದ ವಿಸ್ತಾರವುಳ್ಳದ್ದಾಗಿಯೂ ಭೂಮಿಯ ಮಟ್ಟದಿಂದ ಮೇಲುಭಾಗದಲ್ಲಿ ಮೂವತ್ತನಾಲ್ಕು ಯೋಜನ ಪರಿಮಾಣ ಉನ್ನತಿಯನ್ನು ಹೊಂದಿರುವುದಾಗಿಯೂ ಇರುತ್ತದೆ.

೧೧೨. ಚಿತ್ರಸಾನುಗಳಿಂದ ಕೂಡಿದ ಶ್ರೇಷ್ಠವಾದ ಮಾನಸವೆಂಬ ಪರ್ವತವು ದ್ವೀಪದ ಅರ್ಧವನ್ನು ಸುತ್ತಲೂ ವ್ಯಾಪಿಸಿಕೊಂಡಿರುವುದು, ಇದು ಸಮುದ್ರದ

**ಯೋಜನಾನಾಂ ಸಹಸ್ರಾಣಿ ಊರ್ಧ್ವಂ ಪಂಚಾಶದುಚ್ಛ್ರಿತಃ ।**
**ತಾವದೇವ ಚ ವಿಸ್ತೀರ್ಣಃ ಸರ್ವತಃ ಪರಿಮಂಡಲಃ ॥ ೧೧೩ ॥**

**ಸ ಏವ ದ್ವೀಪಪಶ್ಚಾರ್ಧೇ ಮಾನಸಃ ಪೃಥಿವೀಧರಃ ।**
**ಏಕ ಏವ ಮಹಾಸಾರಃ ಸನ್ನಿವೇಶೋ ದ್ವಿಧಾಕೃತಃ ॥ ೧೧೪ ॥**

**ಸ್ವಾದೂನಕೇನೋದಧಿನಾ ಸರ್ವತಃ ಪರಿವಾರಿತಃ ।**
**ಪುಷ್ಕರದ್ವೀಪವಿಸ್ತಾರಾದ್ವಿಸ್ತೀರ್ಣೋಽಸೌ ಸಮಂತತಃ ॥ ೧೧೫ ॥**

**ತಸ್ಮಿನ್ ದ್ವೀಪೇ ಸ್ಮೃತೌ ದ್ವೌ ತು ಪುಣ್ಯೌ ಜನಪದೌ ಶುಭೌ ।**
**ಅಭಿತೋ ಮಾನಸಸ್ಯಾಥ ಪರ್ವತಸ್ಯ ತು ಮಂಡಲೇ ॥ ೧೧೬ ॥**

**ಮಹಾವೀತಂ ತು ಯದ್ವರ್ಷಂ ಬಾಹ್ಯತೋ ಮಾನಸಸ್ಯ ತತ್ ।**
**ತಸ್ಯೈವಾಭ್ಯಂತರೇಣಾಪಿ ಧಾತಕೀಖಂಡಮುಚ್ಯತೇ ॥ ೧೧೭ ॥**

---

ತೀರಭೂಮಿಯಲ್ಲಿರುವುದರಿಂದ ಸಮುದ್ರದಿಂದ ಹುಟ್ಟುತ್ತಲಿರುವ ಬಾಲಚಂದ್ರನಂತೆ ಇರುವುದು.

೧೧೩. ಈ ಪರ್ವತವು ತನ್ನ ಊರ್ಧ್ವಭಾಗದಲ್ಲಿ ಐವತ್ತುಸಾವಿರ ಯೋಜನದ ಔನ್ನತ್ಯ ಪರಿಮಾಣವನ್ನೂ ಅದರಷ್ಟೇ ವಿಸ್ತಾರವನ್ನೂ ಕೂಡ ಹೊಂದಿ ವರ್ತುಲಾಕಾರವಾಗಿ ಪ್ರತಿಷ್ಠಿತವಾಗಿರುವುದು.

೧೧೪. ಆ ಮಾನಸವೆಂಬ ಪರ್ವತವು ದ್ವೀಪದ ಪಶ್ಚಿಮ ಭಾಗವನ್ನು ವ್ಯಾಪಿಸಿರುವುದು. ಹೀಗೆ ಆ ಪರ್ವತದ ಪರಿಪೂರ್ಣವಾದ ಮತ್ತು ಮಹಾಸಾರವತ್ತಾದ ಒಂದು ಸನ್ನಿವೇಶವು ಎರಡಾಗಿ ವಿಂಗಡಿಸಲ್ಪಟ್ಟಿರುವುದು.

೧೧೫. ಈ ಪುಷ್ಕರದ್ವೀಪವು ತನ್ನ ವಿಸ್ತಾರ ತುಲ್ಯವಾದ ವಿಸ್ತಾರ ಪರಿಮಾಣವುಳ್ಳ ಸ್ವಾದೂದಕ ಸಮುದ್ರದಿಂದ ಸುತ್ತುವರಿಯಲ್ಪಟ್ಟಿರುವುದು.

೧೧೬. ಆ ದ್ವೀಪದಲ್ಲಿ ಮಾನಸವೆಂಬ ಪರ್ವತದ ವಲಯ ಭೂಮಿಯಲ್ಲಿ ಎರಡು ಪಾರ್ಶ್ವಗಳಲ್ಲಿಯೂ ಪವಿತ್ರವೂ ಭವ್ಯವೂ ಆದ ಎರಡು ಮುಖ್ಯ ದೇಶಗಳು ಇರುತ್ತವೆ.

೧೧೭. ಅವುಗಳಲ್ಲಿ ಮಾನಸಪರ್ವತದ ಬಾಹ್ಯವಲಯದಲ್ಲಿ ಮಹಾವೀತವೆಂ

**ದಶವರ್ಷಸಹಸ್ರಾಣಿ ತತ್ರ ಜೀವಂತಿ ಮಾನವಾಃ !**
**ಅರೋಗಾಃ ಸುಖಬಾಹುಲ್ಯಾ ಮಾನಸೀಂ ಸಿದ್ಧಿಮಾಸ್ಥಿತಾಃ ॥ ೧೧೮ ॥**

**ಸಮಮಾಯುಶ್ಚ ರೂಪಂ ಚ ತಸ್ಮಿನ್ ವರ್ಷದ್ವಯೇ ಸ್ಮೃತಮ್ ।**
**ಅಧಮೋತ್ತಮಾ ನ ತೇಷ್ವಸ್ತಿ ತುಲ್ಯಾಸ್ತೇ ರೂಪಶೀಲತಃ ॥ ೧೧೯ ॥**

**ನ ತತ್ರ ದಸ್ಯುರ್ದಮಕೋ ನೇರ್ಷ್ಯಾಸೂಯಾ ಭಯಂ ತಥಾ !**
**ನಿಗ್ರಹೋ ನ ಚ ದಂಡೋಽಸ್ತಿ ನ ಲೋಭೋ ನ ಪರಿಗ್ರಹಃ ॥ ೧೨೦ ॥**

**ಸತ್ಯಾನೃತಂ ನ ತತ್ರಾಸ್ತಿ ಧರ್ಮಾಧರ್ಮೌ ತಥೈವ ಚ !**
**ವರ್ಣಾಶ್ರಮೌ ವಾ ವಾರ್ತಾ ವಾ ಪಾಶುಪಾಲ್ಯಂ ವಣಿಕ್ಪಥಃ ॥ ೧೨೧ ॥**

---

ಬುದು ಒಂದು ವರ್ಷವು. ಹಾಗೆ ಆ ಪರ್ವತದ ಅಂತರ ಪ್ರದೇಶದಲ್ಲಿ ಧಾತಕೀಖಂಡ ವೆಂಬುದು ಮತ್ತೊಂದು ವರ್ಷವು. ಹೀಗೆ ಎರಡು ದೇಶಗಳು ಅಲ್ಲಿ ಪ್ರಸಿದ್ಧವಾದುವು.

೧೧೮. ಆ ದೇಶವಾಸಿಗಳಾದ ಮಾನವರು ನೀರೋಗರಾಗಿ ಅತಿಶಯವಾದ ಸೌಖ್ಯವನ್ನು ಅನುಭವಿಸುತ್ತ ಮಾನಸಸಿದ್ಧಿಯಿಂದ ಕೂಡಿ ಹತ್ತುಸಾವಿರ ವರ್ಷಗಳ ಕಾಲ ದೀರ್ಘಾಯುಷ್ಯವನ್ನು ಹೊಂದಿರುವರು.

೧೧೯. ಆ ಮಾನವರ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಇರುವ ರೂಪ, ಆಯುಷ್ಯಗಳು ತುಲ್ಯವಾಗಿವೆ. ಆದುದರಿಂದ ರೂಪ, ಶೀಲ ಮುಂತಾದ ಯಾವ ಗುಣಗಳಿಂದಲೂ ಆ ಪ್ರಜೆಗಳಲ್ಲಿ ಅಧಮ, ಉತ್ತಮರೆಂಬ ತಾರತಮ್ಯಕ್ಕೆ ಅವಕಾಶ ವಿಲ್ಲದೇ ತುಲ್ಯರಾಗಿದ್ದರು.

೧೨೦. ಅಲ್ಲಿ ಅಪರಾಧಿ, ಶಿಕ್ಷಕ, ಈರ್ಷ್ಯೆ, ಅಸೂಯಾ, ಭಯ, ನಿಗ್ರಹ, ಶಿಕ್ಷಾ, ಲೋಭ, ದರೋಡೆ ಮುಂತಾದ ಹೇಯ ದೋಷಗಳು ಒಂದಾದರೂ ಇರ ಲಿಲ್ಲ.

೧೨೧. ಹಾಗೆ ಸತ್ಯ-ಅನೃತ, ಧರ್ಮ-ಅಧರ್ಮ ಮುಂತಾದ ಕರ್ತವ್ಯ ಅಥವಾ ಪರಿತ್ಯಾಜ್ಯಗಳಾದ ನಿಯಮಬದ್ಧವಾದ ಕರ್ಮಗಳೂ ಮತ್ತು ವರ್ಣ, ಆಶ್ರಮ, ಜೀವ ನೋದ್ಯೋಗ, ಪಶುಪಾಲನ, ವೈಶ್ಯವೃತ್ತಿ ಮುಂತಾದುವುಗಳೂ ಯಾವುದೊಂದು ಕೂಡ ಕರ್ತವ್ಯಕರ್ಮವು ಇಲ್ಲ.

ತ್ರಯೀವಿದ್ಯಾ ದಂಡನೀತಿಃ ಶುಶ್ರೂಷಾ ಶಿಲ್ಪಮೇವ ಚ ।
ವರ್ಷದ್ವಯೇ ಸರ್ವಮೇತತ್ಪುಷ್ಕರಸ್ಯ ನ ವಿದ್ಯತೇ ॥ ೧೨೨ ॥

ನ ತತ್ರ ವರ್ಷಂ ನದ್ಯೋ ವಾ ಶೀತೋಷ್ಣಂ ವಾಪಿ ವಿದ್ಯತೇ ।
ಉದ್ಭಿದಾನ್ಯುದಕಾನ್ಯತ್ರ ಗಿರಿಪ್ರಸ್ರವಣಾನಿ ಚ ॥ ೧೨೩ ॥

ಉತ್ತರಾಣಾಂ ಕುರೂಣಾಂ ಚ ತುಲ್ಯಕಾಲೋ ಜನಸ್ತಥಾ ।
ಸರ್ವರ್ತುಸುಸುಖಸ್ತತ್ರ ಜರಾಕ್ರಮವಿವರ್ಜಿತಃ ॥ ೧೨೪ ॥

ಇತ್ಯೇಷ ಧಾತಕೀಖಂಡೇ ಮಹಾವೀತೇ ತಥೈವ ಚ ।
ಆನುಪೂರ್ವ್ಯಾದ್ದ್ವಿಧಿಃ ಕೃತ್ಸ್ನಃ ಪುಷ್ಕರಸ್ಯ ಪ್ರಕೀರ್ತಿತಃ ॥ ೧೨೫ ॥

ಸ್ವಾದೂದಕೇನೋದಧಿನಾ ಪುಷ್ಕರಃ ಪರಿವಾರಿತಃ ।
ವಿಸ್ತಾರಾನ್ಮಂಡಲಾಚ್ಚೈವ ಪುಷ್ಕರಸ್ಯ ಸಮೇನ ತು ॥ ೧೨೬ ॥

---

೧೨೨. ವೇದಾಧ್ಯಯನ, ದಂಡನೀತಿ, ಸೇವಾವೃತ್ತಿ, ಶಿಲ್ಪಕರ್ಮ ಮುಂತಾದ ಶ್ರಮಸಾಧ್ಯವಾದ ಕರ್ಮಗಳು ಈ ಪುಷ್ಕರದ್ವೀಪದ ಎರಡು ವರ್ಷಗಳಲ್ಲಿ ಕರ್ತವ್ಯಗಳಾಗಿರುವುದಿಲ್ಲ.

೧೨೩. ಅಲ್ಲಿ ವೃಷ್ಟಿ-ಶೀತ-ಉಷ್ಣವೆಂಬ ವಿಭಕ್ತವಾದ ವಸ್ತು ಯಾವುದೂ ಇಲ್ಲ. ಅಲ್ಲಿ ಜಲಾಶಯಗಳಿಲ್ಲದ್ದರಿಂದ ಪರ್ವತ ಝರಿಗಳಿಂದ ಹರಿಯುವ ಮತ್ತು ಭೂಮಿಯ ಉದ್ಗಮದಿಂದ ಹುಟ್ಟಿದ ಜಲವು ಉಪಯೋಗಾರ್ಹವಾಗಿದೆ.

೧೨೪. ಉತ್ತರ ಕುರು ಎಂದು ಪ್ರಸಿದ್ಧವಾದ ದೇಶಗಳಿಗೆ ಈ ಭೂಮಿಯು ಆಧಾರವಾಮದು. ಇಲ್ಲಿ ವಾಸಿಸುವ ಜನರು ತುಲ್ಯವಾದ ಆಯುಃಪರಿಮಾಣವುಳ್ಳವರಾಗಿರುವರು. ಮತ್ತು ಸರ್ವ ಋತುಗಳ ಸೌಖ್ಯವನ್ನು ಸರ್ವ ಕಾಲದಲ್ಲಿಯೂ ಅನುಭವಿಸುತ್ತ ಮುಪ್ಪು ಸಾವುಗಳ ಪೀಡೆಯಿಲ್ಲದೆ ಇರುವರು.

೧೨೫. ಈ ರೀತಿಯಾಗಿ ಪುಷ್ಕರದ್ವೀಪಕ್ಕೆ ಸೇರಿದ ಧಾತಕೀಖಂಡ ಮತ್ತು ಮಹಾವೀತವೆಂಬ ಎರಡು ವರ್ಷಗಳ ಸಂಪೂರ್ಣ ಸನ್ನಿವೇಶವನ್ನು ಆನುಪೂರ್ವೀ ಕ್ರಮದಿಂದ ಹೇಳಿರುವೆನು.

೧೨೬. ಸುತ್ತಳತೆ ಮತ್ತು ವಿಸ್ತಾರಗಳಿಂದ ಪುಷ್ಕರದ್ವೀಪಕ್ಕೆ ತುಲ್ಯವಾದ

**ಏವಂ ದ್ವೀಪಾಃ ಸಮುದ್ರೈಸ್ತು ಸಪ್ತ ಸಪ್ತಭಿರಾವೃತಾಃ ।**
**ದ್ವೀಪಸ್ಯಾನನ್ತರೋ ಯಸ್ತು ಸಾಮುದ್ರಸ್ತತ್ಸಮಸ್ತು ಸಃ ॥ ೧೨೭ ॥**

**ಏವಂ ದ್ವೀಪಸಮುದ್ರಾಣಾಂ ವೃದ್ಧಿರ್ಜ್ಞೇಯಾ ಪರಸ್ಪರಾತ್ ।**
**ಅಪಾಂ ಚೈವ ಸಮುದ್ರೇಕಾತ್ ಸಾಮುದ್ರ ಇತಿ ಸಂಜ್ಞಿತಃ ॥ ೧೨೮ ॥**

**ವಿಂಶತಿರ್ನಿವಸಂತ್ಯಸ್ಮಿನ್ ಪ್ರಜಾ ಯಸ್ಮಾಚ್ಚತುರ್ವಿಧಾಃ ।**
**ತಸ್ಮಾದ್ವರ್ಷಮಿತಿ ಪ್ರೋಕ್ತಂ ಪ್ರಜಾನಾಂ ಸುಖದಂ ಯತಃ ॥ ೧೨೯ ॥**

**ಋಷ ಇತ್ಯೇಷ ರಮಣೇ ವೃಷಶಕ್ತಿಪ್ರಬಂಧನೇ ।**
**ರತಿಪ್ರಬಂಧನಾತ್ಸಿದ್ಧಂ ವರ್ಷಂ ತತ್ತೇಷು ತೇಷ ವೈ ॥ ೧೩೦ ॥**

---

ಸ್ವಾದೂದಕದಿಂದ ಕೂಡಿದ ಸಮುದ್ರವು ಈ ಪುಷ್ಕರದ್ವೀಪವನ್ನು ಸುತ್ತಲೂ ಆವರಿಸಿ ಕೊಂಡಿರುವುದು.

೧೨೭. ಈ ರೀತಿಯಾಗಿ ಸಪ್ತದ್ವೀಪಗಳೂ ಕ್ರಮವಾಗಿ ಸಪ್ತಸಮುದ್ರಗಳಿಂದ ಸುತ್ತಲ್ಪಟ್ಟಿರುವುವು. ಒಂದು ದ್ವೀಪ ಕಳೆದಕೂಡಲೆ ಇರುವ ಸಮುದ್ರವು ಆ ದ್ವೀಪಕ್ಕೆ ತುಲ್ಯವಾದ ಪರಿಮಾಣವನ್ನು ಹೊಂದಿರುವುದು.

೧೨೮. ಈ ರೀತಿಯಾಗಿ ದ್ವೀಪ ಮತ್ತು ಅದರ ಸುತ್ತಲೂ ಇರುವ ಸಮುದ್ರ ಇವೆರಡೂ ಮುಂದೆಮುಂದೆ ದ್ವಿಗುಣಿತವಾಗಿ ಸಪ್ತದ್ವೀಪಗಳೂ ಸಪ್ತಸಮುದ್ರಗಳೂ ಒಂದಕ್ಕಿಂತ ಮತ್ತೊಂದು ವೃದ್ಧಿಯನ್ನು ಹೊಂದಿರುವುದು. ಜಲರಾಶಿಯು ಉಕ್ಕಿ ಬರುವ ನಿಮಿತ್ತದಿಂದ "ಸಮುದ್ರೇಕ" = ಉಕ್ಕಿಬರುವುದು ಎಂಬ ಅರ್ಥಗರ್ಭಿತವಾಗಿ ಸಮುದ್ರಕ್ಕೆ ಸಮುದ್ರವೆಂಬ ಹೆಸರು ಬಂದಿರುವುದು.

೧೨೯. ಹಾಗೆ ಜರಾಯುಜ ಮುಂತಾದ ನಾಲ್ಕುವಿಧವಾದ ಪ್ರಜೆಗಳು ವಾಸ-ಪ್ರವೇಶಗಳನ್ನು ಮಾಡುತ್ತ ಇರುವುದರಿಂದ ಅವರ ವಾಸ-ಪ್ರವೇಶಗಳಿಗೆ ಆಧಾರವಾದ ದೇಶವನ್ನು ಆ ಕ್ರಿಯೆಯನ್ನು ಬೋಧಿಸುವ "ವಿಶ್" ಅಥವಾ "ವಸ್" ಧಾತುವಿ ನಿಂದ ರೂಪಹೊಂದಿದ ವರ್ಷಶಬ್ದದಿಂದ ಕರೆಯುವರು. ಇದು ಪ್ರಜೆಗಳ ಸುಖ ಸಾಧನವಾಗಿರುವುದು.

೧೩೦. ಮತ್ತು "ಋಷ" ಎಂಬುದು ರತಿ ಸೌಖ್ಯವೆಂಬ ಅರ್ಥದಲ್ಲಿ ಒಂದು ಧಾತುವು ಇರುವುದು. "ವೃಷ" ಎಂದು ಶಕ್ತಿಯನ್ನು ಕೂಡಿಹಾಕುವುದು ಎಂಬ

ಶುಕ್ಲಪಕ್ಷೇ ಚಂದ್ರವೃದ್ಧ್ಯಾ ಸಮುದ್ರಃ ಪೂರ್ಯತೇ ಸದಾ ।
ಪ್ರಕ್ಷೀಯಮಾಣೇ ಬಹುಲೇ ಕ್ಷೀಯತೇಽಸ್ತಮಿತೇ ಖಗೇ ॥ ೧೩೧ ॥

ಆಪೂರ್ಯಮಾಣೋ ಹ್ಯುದಧಿಃ ಸ್ವತ ಏವಾಭಿಪೂರ್ಯತೇ ।
ತಥೋಪಕ್ಷೀಯಮಾಣೇಽಪಿ ಸ್ವಾತ್ಮನ್ಯೇವಾವಕೃಷ್ಯತೇ ॥ ೧೩೨ ॥

ಉಖಾಸ್ಥಮಗ್ನಿಸಂಯೋಗಾದುದ್ರಿಕ್ತಂ ದೃಶ್ಯತೇ ಯಥಾ ।
ಮಹೋದಧಿಗತಂ ತೋಯಂ ಸ್ವತ ಉದ್ರಿಚ್ಯತೇ ತಥಾ ॥ ೧೩೩ ॥

ಅನ್ಯೂನಾನತಿರಿಕ್ತಾಶ್ಚ ವರ್ಧಂತ್ಯಾಪೋ ಹ್ರಸಂತಿ ಚ ।
ಉದಯಾಸ್ತಮಯೋಸ್ತ್ವಿಂದೌ ಪಕ್ಷಯೋಃ ಶುಕ್ಲಕೃಷ್ಣಯೋ ॥ ೧೩೪ ॥

---

ಅರ್ಥದಲ್ಲಿ ಮತ್ತೊಂದು ಧಾತುವು ಇರುವುದು. ಈ ಧಾತುಗಳಿಂದ ರೂಪಹೊಂದಿದ "ವರ್ಷ" ಎಂಬ ನಾಮವು ಆ ದೇಶಗಳಿಗೆ ರತಿಸೌಖ್ಯವನ್ನು ಅನುಭವಿಸುವ ಶಕ್ತಿ ಪ್ರದಾನಮಾಡುವ ಒಂದು ವಿಶೇಷ ಮಹಿಮೆಯನ್ನು ಸೂಚಿಸುವುದು.

೧೩೧. ಶುಕ್ಲಪಕ್ಷದಲ್ಲಿ ಚಂದ್ರನು ವೃದ್ಧಿಯಾದ ಹಾಗೆ ಸಮುದ್ರವು ತುಂಬಿ ಕೊಂಡು ಉಕ್ಕಿಬುವುದು. ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷಯಿಸುವುದನ್ನೂ ಅಸ್ತಮಯ ಹೊಂದುವುದನ್ನೂ ಅನುಸರಿಸಿ ಸಮುದ್ರವು ಇಳಿಮುಖವಾಗುವುದು.

೧೩೨. ಚಂದ್ರನ ವೃದ್ಧಿಯಿಂದ ತುಂಬಿ ಉಕ್ಕುತ್ತಲಿರುವ ಸಮುದ್ರವು ತನ್ನಿಂದಲೇ ತಾನು ಅಭಿವೃದ್ಧಿಯನ್ನು ಹೊಂದುವುದು. ಹಾಗೆ ಕ್ಷಯಿಸುತ್ತಿರುವಾಗ ತನ್ನಲ್ಲಿಯೇ ತಾನು ಸಂಕೋಚವನ್ನು ಹೊಂದುವುದು. ಸಮುದ್ರದ ವೃದ್ಧಿಯಲ್ಲಿ ಬೇರೊಂದರ ಜಲರಾಶಿಯು ಇಲ್ಲಿ ಬಂದು ಸೇರುವುದಾಗಲಿ ಕ್ಷಯದಲ್ಲಿ ತನ್ನ ಜಲವು ಇಲ್ಲಿಂದ ಬೇರೊಂದುಕಡೆ ಹೋಗುವುದಾಗಲಿ ಇಲ್ಲ.

೧೩೩. ಒಲೆಯಮೇಲೆ ಇರಿಸಿದ ಕ್ಷೀರಾದಿ ಪದಾರ್ಥವು ಅಗ್ನಿಯ ತಾಪದಿಂದ ಹೇಗೆ ಮೇಲಕ್ಕೆ ಉಕ್ಕಿ ಬರುವುದೋ ಹಾಗೆಯೇ ಸಮುದ್ರದಲ್ಲಿರುವ ಜಲರಾಶಿಯು ಉಕ್ಕಿಬರುವುದು.

೧೩೪. ಶುಕ್ಲ-ಕೃಷ್ಣ ಪಕ್ಷಗಳಲ್ಲಿ ಚಂದ್ರನಿಗೆ ಸಂಭವಿಸುವ ಉದಯ-ಅಸ್ತಮಯಗಳಿಂದ ಸಮುದ್ರದ ಜಲರಾಶಿಯು ನ್ಯೂನವೂ ಅಧಿಕವೂ ಆಗದಂತೆ ಏರಿಳಿತಗಳನ್ನು ಹೊಂದುವುದು.

**ಕ್ಷಯವೃದ್ಧತ್ವಮುದಧೇಃ ಸೋಮವೃದ್ಧಿಕ್ಷಯಾತ್ ಪುನಃ ।**
**ದಶೋತ್ತರಾಣಿ ಪಂಚೈವ ಹ್ಯಂಗುಲಾನಿ ಶತಾನಿ ಚ ॥ ೧೩೫ ॥**

**ಅಪಾಂ ವೃದ್ಧಿಃ ಕ್ಷಯೋ ದೃಷ್ಟಃ ಸಾಮುದ್ರೀಣಾಂ ತು ಪರ್ವಸು ।**
**ದ್ವಿರಾಪ್ಯತ್ವಾತ್ ಸ್ಮೃತಾ ದ್ವೀಪಾಃ ಸರ್ವತಶ್ಚೋದಕಾವೃತಾಃ ॥ ೧೩೬ ॥**

**ಉದಕಸ್ಯಾಯನಂ ಯಸ್ಮಾತ್ ತಸ್ಮಾದುದಧಿರುಚ್ಯತೇ ।**
**ಅಪರ್ವಾಣಸ್ತು ಗಿರಯಃ ಪರ್ವಭಿಃ ಪರ್ವತಾಃ ಸ್ಮೃತಾಃ ॥ ೧೩೭ ॥**

**ಪ್ಲಕ್ಷದ್ವೀಪೇ ತು ಗೋಮೇದಃ ಪರ್ವತಸ್ತೇನ ಚೋಚ್ಯತೇ ।**
**ಶಾಲ್ಮಲಿಃ ಶಾಲ್ಮಲೇ ದ್ವೀಪೇ ಪೂಜ್ಯತೇ ಸುಮಹಾವ್ರತೈಃ ॥ ೧೩೮ ॥**

**ಕುಶದ್ವೀಪೇ ಕುಶಸ್ತಂಬಸ್ತಸ್ಯ ನಾಮ್ನಾ ಸ ಉಚ್ಯತೇ ।**
**ಕ್ರೌಂಚದ್ವೀಪೇ ಗಿರಿಃ ಕ್ರೌಂಚೋ ಮಧ್ಯೇ ಜನಪದಸ್ಯ ಹ ॥ ೧೩೯ ॥**

---

೧೩೫. ಹೀಗೆ ಚಂದ್ರನ ವೃದ್ಧಿ ಕ್ಷಯಗಳಿಂದ ಸಮುದ್ರಕ್ಕೆ ಸಂಭವಿಸುವ ವೃದ್ಧಿ ಕ್ಷಯಗಳು ಐದುನೂರಹತ್ತು ಅಂಗುಲ ಪರಿಮಾಣದಿಂದ ಪರಿಮಿತಗಳಾಗಿವೆ.

೧೩೬. ಸಮುದ್ರದ ಜಲಗಳಿಗೆ ಪೂರ್ಣಿಮಾ, ಅಮಾವಾಸ್ಯಾರೂಪವಾದ ಪರ್ವ ಕಾಲದಲ್ಲಿ ವೃದ್ಧಿ ಮತ್ತು ಕ್ಷಯಗಳು ನಮಗೆ ಗೋಚರವಾಗುತ್ತವೆ. ಸಮುದ್ರದಿಂದ ಆವೃತವಾದ ನಡು ಭೂಮಿಯನ್ನು " ದ್ವಿಃ = ಎರಡು ಭಾಗದಲ್ಲಿ ಅಪ್ = ನೀರಿನಿಂದ ಕೂಡಿದ್ದು " ಎಂಬ ಅರ್ಥವನ್ನು ಸೂಚಿಸುವ ದ್ವೀಪ ಶಬ್ದದಿಂದ ಕರೆಯುವರು.

೧೩೭. ಜಲರಾಶಿಗೆ ಮುಖ್ಯವಾದ ಆಧಾರವಾದ್ದರಿಂದ " ಉದ = ನೀರಿಗೆ, ಧಿ=ಆಧಾರ " ಎಂಬ ಅರ್ಥವನ್ನು ಕೊಡುವ ಉದಧಿಶಬ್ದದಿಂದ ಸಮುದ್ರವನ್ನು ಕರೆಯುತ್ತಾರೆ. ಪರ್ವಗಳಿಂದ ರಹಿತಗಳಾಗಿದ್ದ ಗಿರಿಗಳನ್ನು ಅನಂತರದಲ್ಲಿ ಹುಟ್ಟಿದ ಪರ್ವಗಳಿಂದ ಪರ್ವತವೆಂದು ಕರೆದರು.

೧೩೮. ಪ್ಲಕ್ಷ ದ್ವೀಪದಲ್ಲಿ ಗೋಮೇದವೆಂಬ ಪರ್ವತವು ಪ್ರಧಾನವಾದುದರಿಂದ ಆ ಪರ್ವತದ ಹೆಸರಿನಿಂದಲೂ ದ್ವೀಪವು ಪ್ರಸಿದ್ಧಿಹೊಂದಿದೆ. ಶಾಲ್ಮಲದ್ವೀಪದಲ್ಲಿ ಶಾಲ್ಮಲಿ ಎಂಬ ವೃಕ್ಷವು ನಿಯಮವಂತರಾದ ಧಾರ್ಮಿಕ ಜನರಿಂದ ಪೂಜಿಸಲ್ಪಡುತ್ತದೆ

೧೩೯. ಕುಶದ್ವೀಪದಲ್ಲಿ ದರ್ಭೆಗಳ ಸಂಹತಿಯು ಪ್ರಧಾನವಾಗಿರುವುದರಿಂದ

ಶಾಕದ್ವೀಪೇ ದ್ರುಮಃ ಶಾಕಸ್ತಸ್ಯ ನಾಮ್ನಾ ಸ ಉಚ್ಯತೇ ।
ನ್ಯಗ್ರೋಧಃ ಪುಷ್ಕರದ್ವೀಪೇ ತತ್ರತ್ಯೈಃ ಸ ನಮಸ್ಕೃತಃ ॥ ೧೪೦ ॥

ಮಹಾದೇವಃ ಪೂಜ್ಯತೇ ತು ಬ್ರಹ್ಮಾ ತ್ರಿಭುವನೇಶ್ವರಃ ।
ತಸ್ಮಿನ್ನಿವಸತಿ ಬಹ್ಮಾ ಸಾಧ್ಯೈಃ ಸಾರ್ಧಂ ಪ್ರಜಾಪತಿಃ ॥ ೧೪೧ ॥

ಉಪಾಸತೇ ತತ್ರ ದೇವಾಸ್ತ್ರಯಸ್ತ್ರಿಂಶನ್ಮಹರ್ಷಿಭಿಃ ।
ಸ ತತ್ರ ಪೂಜ್ಯತೇ ಚೈವ ದೇವೈರ್ದೇವೋತ್ತಮೋತ್ತಮಃ ॥ ೧೪೨ ॥

ಜಂಬೂದ್ವೀಪಾತ್ಪ್ರವರ್ತಂತೇ ರತ್ನಾನಿ ವಿವಿಧಾನಿ ಚ ।
ದ್ವೀಪೇಷು ತೇಷು ಸರ್ವೇಷು ಪ್ರಜಾನಾಂ ಕ್ರಮತಸ್ತು ವೈ ॥ ೧೪೩ ॥

ಸರ್ವಶೋ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ ।
ಆರೋಗ್ಯಾಯುಃ ಪ್ರಮಾಣಾಭ್ಯಾಂ ಪ್ರಮಾಣಂ ದ್ವಿಗುಣಂ ತತಃ ॥೧೪೪॥

---

ದ್ವೀಪವು ಆ ಹೆಸರನ್ನು ಹೊಂದಿರುವುದು, ಕ್ರೌಂಚದ್ವೀಪದಲ್ಲಿ ಕ್ರೌಂಚವೆಂಬ ಪರ್ವತವು ಆ ದ್ವೀಪದ ದೇಶಗಳ ನಡುವೆ ಇರುವುದು.

೧೪೦. ಶಾಕದ್ವೀಪದಲ್ಲಿ ಶಾಕವೆಂಬ ವೃಕ್ಷವು ತನ್ನ ಹೆಸರಿನಿಂದ ದ್ವೀಪಕ್ಕೆ ಪ್ರಸಿದ್ಧಿಯನ್ನು ಕೊಟ್ಟಿರುವುದು. ಪುಷ್ಕರದ್ವೀಪದಲ್ಲಿ ನ್ಯಗ್ರೋಧವೆಂಬ ವೃಕ್ಷವು ಆ ದ್ವೀಪವಾಸಿಗಳಿಂದ ಸತ್ಕರಿಸಲ್ಪಟ್ಟಿರುವುದು.

೧೪೧. ಈ ಪುಷ್ಕರದ್ವೀಪದಲ್ಲಿ ಲೋಕತ್ರಯಾಧಿಪತಿಯೂ ದೇವೋತ್ತಮನೂ ಪ್ರಜೆಗಳ ಪತಿಯೂ ಆದ ಬ್ರಹ್ಮದೇವನು ಅನೇಕ ಸಾಧ್ಯರೆಂಬ ದೇವತೆಗಳೊಡನೆ ವಾಸಮಾಡುತ್ತಿರುವನು.

೧೪೨. ಉತ್ತಮರಾದ ದೇವತೆಗಳಲ್ಲೆಲ್ಲ ಉತ್ತಮನಾದ ಆ ಬ್ರಹ್ಮದೇವನನ್ನು ಅನೇಕ ಮಹರ್ಷಿಸಂಘದೊಡನೆ ಮೂವತ್ತುಮೂರು ದೇವತೆಗಳು ಉಪಾಸನಾ-ಪೂಜಾಸತ್ಕಾರಾದಿಗಳಿಂದ ಆರಾಧಿಸುವರು.

೧೪೩. ಜಂಬೂದ್ವೀಪ ಮೊದಲುಗೊಂಡು ವಿವಿಧವಾದ ಅಮೂಲ್ಯರತ್ನಗಳು ಆ ಸರ್ವದ್ವೀಪಗಳಲ್ಲಿಯೂ ಪ್ರಜೆಗಳಿಗೆ ಕ್ರಮವಾಗಿ ತಮ್ಮ ದೇಶಮಹಿಮೆಗೆ ಅನುರೂಪವಾಗಿ ದೊರಕುವುವು.

೧೪೪. ಆಯಾಯ ದ್ವೀಪವಾಸಿಗಳಾದ ಪ್ರಜೆಗಳು ಆಚರಿಸುವ ಬ್ರಹ್ಮಚರ್ಯ

**ಏತಸ್ಮಿನ್ ಪುಷ್ಕರದ್ವೀಪೇ ಯದುಕ್ತಂ ವರ್ಷಕದ್ವಯಮ್ ।**
**ಗೋಪಾಯತಿ ಪ್ರಜಾಸ್ತತ್ರ ಸ್ವಯಂಭೂರ್ಜಡಪಂಡಿತಾಃ ॥ ೧೪೫ ॥**

**ಈಶ್ವರೋ ದಂಡಮುದ್ಯಮ್ಯ ಬ್ರಹ್ಮಾ ತ್ರಿಭುವನೇಶ್ವರಃ ।**
**ಸ ವಿಷ್ಣೋಃ ಸಚಿವೋ ದೇವಃ ಸ ಪಿತಾ ಸ ಪಿತಾಮಹಃ ॥ ೧೪೬ ॥**

**ಭೋಜನಂ ಚಾಪ್ರಯತ್ನೇನ ತತ್ರ ಸ್ವಯಮುಪಸ್ಥಿತಮ್ ।**
**ಷಡ್ರಸಂ ಸುಮಹಾವೀರ್ಯಂ ಭುಂಜತೇ ತು ಪ್ರಜಾಃ ಸದಾ ॥ ೧೪೭ ॥**

**ಪರೇಣ ಪುಷ್ಕರಸ್ಯಾರ್ಧೇ ಆವೃತ್ಯಾವಸ್ಥಿತೋ ಮಹಾನ್ ।**
**ಸ್ವಾದೂದಕಃ ಸಮುದ್ರಸ್ತು ಸಮಂತಾತ್ಪರಿವೇಷ್ಟ್ಯ ತಮ್ ॥ ೧೪೮ ॥**

**ಪರೇಣ ತಸ್ಯ ಮಹತೀ ದೃಶ್ಯತೇ ಲೋಕಸಂಸ್ಥಿತಿಃ ।**
**ಕಾಂಚನೀ ದ್ವಿಗುಣಾ ಭೂಮಿಃ ಸರ್ವಾ ಹ್ಯೇಕಶಿಲೋಪಮಾ ॥ ೧೪೯ ॥**

---

ಇಂದ್ರಿಯನಿಗ್ರಹಗಳೆಂಬ ಸಾಧನಗಳ ತಾರತಮ್ಯದಿಂದ ಉತ್ತರೋತ್ತರ ದ್ವೀಪಗಳಲ್ಲಿ ಆರೋಗ್ಯ ಮತ್ತು ಆಯುಃಷ್ಯಗಳ ಪರಿಮಾಣವು ದ್ವಿಗುಣವಾಗುತ್ತ ಬಂದಿದೆ.

೧೪೫. ಕಡೆಯದಾದ ಪುಷ್ಕರದ್ವೀಪದಲ್ಲಿರುವುದಾಗಿ ಹೇಳಿರುವ ಎರಡು ವರ್ಷಗಳಲ್ಲಿ ಸ್ವಯಂಭುರೂಪವಾದ ಬ್ರಹ್ಮದೇವನು ಬ್ರಹ್ಮಚರ್ಯಾದ್ಯನುಷ್ಠಾನಪರತೆಯಿಂದ ಜಡರೂ ದೇವೋತ್ತಮನ ಮಹಿಮೆಯನ್ನರಿತಿರುವುದರಿಂದ ಪಂಡಿತರೂ ಆದ ಪ್ರಜೆಗಳನ್ನು ರಕ್ಷಿಸುತ್ತಾನೆ.

೧೪೬. ಲೋಕಕ್ರಿಯಾಧಿಪತಿಯಾದ ಬ್ರಹ್ಮದೇವನು ದಂಡವನ್ನು ಧರಿಸಿ ಈಶ್ವರರೂಪನಾಗಿಯೂ ಸ್ಥಿತಿಕಾರ್ಯವನ್ನು ಮಾಡುವ ವಿಷ್ಣುವಿಗೆ ಸಹಾಯಕನಾಗಿಯೂ ಇದ್ದು ಸರ್ವರಿಗೂ ಪಿತೃಸ್ವರೂಪನೂ ಪಿತಾಮಹಸ್ವರೂಪನೂ ಆಗಿರುವನು.

೧೪೭. ಅಲ್ಲಿರುವ ಪ್ರಜೆಗಳಿಗೆ ಅಯತ್ನಸಿದ್ಧವಾಗಿ ಷಡ್ರಸೋಪೇತವೂ ಮಹಾವೀರ್ಯವನ್ನು ಕೊಡುವ ಸಾರವತ್ತಾಗಿಯೂ ಇರುವ ಮಿಷ್ಟಾನ್ನಭೋಜನವು ತಾನಾಗಿ ಒದಗುವುದು. ಅದನ್ನು ಸಂತೋಷದಿಂದ ಆ ಪ್ರಜೆಗಳು ಯಾವಾಗಲೂ ಭುಂಜಿಸುವರು.

೧೪೮. ಪುಷ್ಕರದ್ವೀಪದ ಅಪರಾರ್ಧದಲ್ಲಿ ಅದನ್ನು ಆವರಿಸಿ ಪ್ರತಿಷ್ಠಿತವಾದ ಸ್ವಾದೂದಕದಿಂದ ಕೂಡಿದ ಮಹಾ ಸಮುದ್ರವು ಸುತ್ತಲೂ ಆ ದ್ವೀಪವನ್ನು ಮುಚ್ಚಿಕೊಂಡಿರುವುದು.

೧೪೯. ಆ ಸಮುದ್ರವು ಅಪರತೀರದಲ್ಲಿ ವಿಶಾಲವಾದ ಲೋಕಸ್ಥಿತಿಗೆ ಕಾರಣ

ತಸ್ಯಾಪರೇಣ ಶೈಲಶ್ಚ ಪರ್ಯಾಸಾತ್ಪರಿಮಂಡಲಃ
ಪ್ರಕಾಶಶ್ಚಾಪ್ರಕಾಶಶ್ಚ ಲೋಕಾಲೋಕಃ ಸ ಉಚ್ಯತೇ ॥ ೧೫೦ ॥

ಆಲೋಕಸ್ತಸ್ಯ ಚಾರ್ವಾಕ್ತು ನಿರಾಲೋಕಸ್ತತಃ ಪರಮ್ ।
ಯೋಜನಾನಾಂ ಸಹಸ್ರಾಣಿ ದಶ ತಸ್ಯೋಚ್ಛ್ರಯಃ ಸ್ಮೃತಃ ॥ ೧೫೧ ॥

ತಾವಾಂಶ್ಚ ವಿಸ್ತರಸ್ತಸ್ಯ ಪೃಥಿವ್ಯಾಂ ಕಾಮಗಶ್ಚ ಸಃ ।
ಆಲೋಕೋ ಲೋಕವೃತ್ತಿಸ್ಥೋ ನಿರಾಲೋಕೋ ಹ್ಯಲೌಕಿಕಃ ॥೧೫೨॥

ಲೋಕಾರ್ಥೇ ಸಂಮಿತಾ ಲೋಕಾ ನಿರಾಲೋಕಾಸ್ತು ಬಾಹ್ಯತಃ ।
ಲೋಕವಿಸ್ತಾರಮಾತ್ರಂ ತು ಹ್ಯಲೋಕಃ ಸರ್ವತೋ ಬಹಿಃ ॥ ೧೫೩ ॥

---

ವಾದ, ಸುವರ್ಣಮಯವಾದ, ಎಲ್ಲ ಒಂದೇ ಶಿಲಾಮಯವಾಗಿ ಭಾಸವಾಗುವ ಮತ್ತು ಆ ಸಮುದ್ರದ ದ್ವಿಗುಣಪರಿಮಾಣವುಳ್ಳ ಭೂಮಿಯು ಕಾಣುವುದು.

೧೫೦. ಆ ಭೂಮಿಯ ಬಹಿರ್ಭಾಗದಲ್ಲಿ ಒಂದು ಪರ್ವತವು ಭೂಮಿಯ ಪರಿಮಾಣಕ್ಕೆ ತಕ್ಕಂತೆ ಸುತ್ತಲೂ ವರ್ತುಲಾಕಾರವಾಗಿ ವ್ಯಾಪಿಸಿಕೊಂಡಿದೆ. ಅದನ್ನು ಪ್ರಕಾಶ-ಅಪ್ರಕಾಶಸ್ವರೂಪವುಳ್ಳ ಲೋಕಾಲೋಕಪರ್ವತವೆಂದು ಕರೆಯುವರು.

೧೫೧. ಆ ಲೋಕಾಲೋಕಪರ್ವತವು ಆಲೋಕ ಮತ್ತು ಲೋಕ ಎಂದರೆ ಬೆಳಕು ಕತ್ತಲೆಗಳೆಂಬ ವಿಲಕ್ಷಣವಾದ ಸ್ವರೂಪವುಳ್ಳದ್ದು, ಆ ಪರ್ವತದ ಈ ಕಡೆಯ ಭಾಗದಲ್ಲಿ ಎಲ್ಲ ಆಲೋಕವು ವ್ಯಾಪಿಸಿರುವುದು. ಆಚೆಯ ಭಾಗವು ನಿರಾಲೋಕವಾಗಿದೆ. ಆ ಪರ್ವತದ ಔನ್ನತ್ಯ ಹತ್ತುಸಾವಿರಯೋಜನ ಪರಿಮಾಣವುಳ್ಳದ್ದಾಗಿದೆ.

೧೫೨. ಅದರ ವಿಸ್ತಾರವು ಅಷ್ಟೇ ಪರಿಮಾಣದಿಂದ ಕೂಡಿದೆ. ಆ ಪರ್ವತವು ಪೃಥಿವಿಯಲ್ಲಿ ಕಾಮರೂಪವಾಗಿರುವುದು, ಅದರ ಆಲೋಕಸ್ವರೂಪವು ಲೋಕದ ವರ್ತನಕ್ಕೆ ಅನುರೂಪವಾಗಿದೆ, ನಿರಾಲೋಕಸ್ವರೂಪವು ಅಲೌಕಿಕಭಾವದಿಂದ ಕೂಡಿದೆ.

೧೫೩. ಲೋಕಗಳಿಗೋಸ್ಕರ ಆಲೋಕಸ್ವಭಾವವು ಇದರಲ್ಲಿ ಅಂತರ್ಗತವಾಗಿರುವುದಾಗಿಯೂ ನಿರಾಲೋಕಸ್ವಭಾವವು ಬಾಹ್ಯಪ್ರದೇಶಗಳಲ್ಲಿ ವೇದ್ಯವಾಗಿಯೂ ಇದೆ. ಲೋಕಗಳ ವಿಸ್ತಾರದಷ್ಟು ಅಲೋಕಭಾವವು ಹೊರಗಡೆಯಲ್ಲಿ ಸರ್ವಸ್ಥಳಗಳನ್ನು ಆಕ್ರಮಿಸಿದೆ.

ಪರಿಚ್ಛಿನ್ನಃ ಸಮಂತಾಚ್ಚ ಉದಕೇನಾವೃತಸ್ತು ಸಃ ।
ಆಲೋಕಾತ್ಪರತಶ್ಚಾಪಿ ಹ್ಯಂಡಮಾವೃತ್ಯ ತಿಷ್ಠತಿ ॥ ೧೫೪ ॥

ಅಂಡಸ್ಯಾಸ್ತ್ವಸ್ಮಿನ್ನಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ ।
ಭೂರ್ಲೋಕೋಽಥ ಭುವರ್ಲೋಕಃ ಸ್ವರ್ಲೋಕೋಽಥ ಮಹಸ್ತಥಾ ॥ ೧೫೫ ॥

ಜನಸ್ತಪಸ್ತಥಾ ಸತ್ಯಮೇತಾವಾನ್ ಲೋಕಸಂಗ್ರಹಃ ।
ಏತಾವಾನೇವ ವಿಜ್ಞೇಯೋ ಲೋಕಾಂತಶ್ಚೈವ ಯಃ ಪರಃ ॥ ೧೫೬ ॥

ಕುಂಭಸ್ಥಾಯಿಾ ಭವೇದ್ಯಾದೃಕ್ಪ್ರತೀಚ್ಯಾಂ ದಿಶಿ ಚಂದ್ರಮಾಃ ।
ಆದಿತಃ ಶುಕ್ಲಪಕ್ಷಸ್ಯ ವಪುಶ್ಚಾಂಡಸ್ಯ ತದ್ವಿಧಮ್ ॥ ೧೫೭ ॥

ಆಂಡಾನಾಮಿಾದೃಶಾನಾಂ ತು ಕೋಟ್ಯೋ ಜ್ಞೇಯಾಃ ಸಹಸ್ರಶಃ ।
ತಿರ್ಯಗೂರ್ಧ್ವಮಧೋ ವಾಪಿ ಕಾರಣಸ್ಯಾವ್ಯಯಾತ್ಮನಃ ॥ ೧೫೮ ॥

---

೧೫೪. ಇದು ಸುತ್ತಲೂ ನೀರಿನಿಂದ ಆವರಿಸಲ್ಪಟ್ಟಿರುವುದರಿಂದ ಪರಿಚ್ಛಿನ್ನ ವಾಗಿದೆ. ಆಲೋಕದ ಪರಭಾಗದಲ್ಲಿಯೂ ಈ ಬ್ರಹ್ಮಾಂಡವನ್ನು ಮುಚ್ಚಿಕೊಂಡಿರುವುದು.

೧೫೫-೧೫೬. ಈ ಬ್ರಹ್ಮಾಂಡದಲ್ಲಿ ಸಕಲಲೋಕಗಳೂ ಸಪ್ತದ್ವೀಪಗಳಿಂದ ಕೂಡಿದ ಸಂಪೂರ್ಣಪೃಥಿವಿಯೂ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ ಜನೋಲೋಕ, ತಪೋಲೋಕ, ಸತ್ಯಲೋಕ ಎಂಬ ಏಳು ಲೋಕಗಳೂ ಅಂತರ್ಗತವಾಗಿವೆ. ನಾವು ಅರಿತುಕೊಳ್ಳಬೇಕಾದ ಲೋಕಗಳ ಸಂಗ್ರಹವು ಇಷ್ಟೇ ಆಗಿದೆ. ಇದರ ಮುಂದೆ ಇನ್ನಾವಲೋಕಗಳ ಅಂತಪ್ರದೇಶವೂ ಅಗಮ್ಯವಾಗಿರುವುದು.

೧೫೭. ಶುಕ್ಲಪಕ್ಷದ ಆದಿಯಲ್ಲಿ ಪಶ್ಚಿಮದಿಕ್ಕಿನಲ್ಲಿ ಉದಯಿಸಿದ ಚಂದ್ರಬಿಂಬದ ಕುಂಭಾಕಾರದ ಸೂಕ್ಷ್ಮವಾದ ಸ್ಥಿತಿಯು ಹೇಗೆ ಕಾಣಿಸುವುದೋ ಅದರಂತೆ ಸೂತ್ರಾತ್ಮನೆಂದು ಕರೆಯಲ್ಪಡುವ ಈ ಬ್ರಹ್ಮಾಂಡಸ್ವರೂಪದ ಸ್ಥಿತಿಯು ಅತ್ಯಂತ ಸೂಕ್ಷ್ಮವಾದುದು.

೧೫೮. ಇಲ್ಲಿ ವರ್ಣಿಸಲ್ಪಟ್ಟ ಒಂದು ಬ್ರಹ್ಮಾಂಡದ ಬಗೆಯಿಂದ ಅನೇಕಕೋಟಿ ಸಂಖ್ಯೆಯ ಬ್ರಹ್ಮಾಂಡಗಳು ಸಕಲಕಾರಣನೂ ಅವ್ಯಯಸ್ವರೂಪನೂ ಆದ ಪರಮಾತ್ಮನಿಂದ ಹುಟ್ಟಿ ಊರ್ಧ್ವ ಅಧೋಭಾಗಗಳಲ್ಲಿ ವ್ಯಾಪಿಸಿಕೊಂಡಿವೆ.

ಧರಣ್ಯೈಃ ಪ್ರಾಕೃತೈಸ್ತತ್ತದಾವೃತಂ ಪ್ರತಿ ಸಪ್ತಭಿಃ ।
ದಶಾಧಿಕ್ಯೇನ ಚಾನ್ಯೋನ್ಯಂ ಧಾರಯಂತಿ ಪರಸ್ಪರಮ್ ॥ ೧೫೯ ॥

ಪರಸ್ಪರಾವೃತಾಃ ಸರ್ವ ಉತ್ಪನ್ನಾಶ್ಚ ಪರಸ್ಪರಮ್ ।
ಅಂಡಸ್ಯಾಸ್ಯ ಸಮಂತಾತ್ತು ಸನ್ನಿವಿಷ್ಟೋ ಘನೋದಧಿಃ ॥ ೧೬೦ ॥

ಸಮಂತಾತ್ತು ಘನೋದೇನ ಧಾರ್ಯಮಾಣಃ ಸ ತಿಷ್ಠತಿ ।
ಬಾಹ್ಯತೋ ಘನತೋಯಸ್ಯ ತಿರ್ಯಗೂರ್ಧ್ವಂ ತು ಮಂಡಲಮ್ ॥ ೧೬೧ ॥

ಧಾರ್ಯಮಾಣಂ ಸಮಂತಾತ್ತು ತಿಷ್ಠತೇ ಯತ್ತು ತೇಜಸಾ ।
ಅಯೋಗೋಲನಿಭೋ ವಹ್ನಿಃ ಸಮಂತಾನ್ಮಂಡಲಾಕೃತಿಃ ॥ ೧೬೨ ॥

ಸಮಂತಾದ್ಘನವಾತೇನ ಧಾರ್ಯಮಾಣಃ ಸ ತಿಷ್ಠತಿ ।
ಘನವಾತಂ ತಥಾಽಽಕಾಶೋ ಧಾರಯನ್ ಖಲು ತಿಷ್ಠತಿ ॥ ೧೬೩ ॥

---

೧೫೯. ಅನೇಕಕೋಟಿ ಬ್ರಹ್ಮಾಂಡಗಳು ಮೂಲ ಪ್ರಕೃತಿಯಿಂದ ಹುಟ್ಟಿ ಮಹತ್ತತ್ತ್ವ, ಅಹಂಕಾರ, ಪಂಚತನ್ಮಾತ್ರಗಳೆಂಬ ಏಳು ಸಂತತವಾದ ಧಾರಕವಸ್ತುಗಳಿಂದ ಆವರಿಸಲ್ಪಟ್ಟವುಗಳಾಗಿ ಪರಸ್ಪರ ದಶಗುಣ ಆಧಿಕ್ಯವನ್ನು ಹೊಂದಿ ಅನ್ಯೋನ್ಯ ಅವಲಂಬನದಿಂದ ಧರಿಸಲ್ಪಟ್ಟಿವೆ.

೧೬೦. ಒಂದರಿಂದ ಮತ್ತೊಂದು ಆವೃತವಾಗಿಯೂ ಪರಸ್ಪರವಾಗಿ ಉತ್ಪನ್ನವಾಗಿಯೂ ಈ ಸಮಸ್ತ ಬ್ರಹ್ಮಾಂಡಗಳು ಸ್ಥಿತಿಯನ್ನು ಹೊಂದಿವೆ. ಈ ಬ್ರಹ್ಮಾಂಡದ ಸುತ್ತಲೂ ಘನೋದಧಿಯೆಂಬ ಸಮುದ್ರವು ಪ್ರತಿಷ್ಠಿತವಾಗಿದೆ.

೧೬೧. ಈ ಸಮುದ್ರವು ಘನಭಾವಹೊಂದಿದ ನೀರಿನಿಂದ ಸುತ್ತಲೂ ಧರಿಸಲ್ಪಟ್ಟಿರುವುದು. ಅಂತಹ ಘನವಾದ ಜಲರಾಶಿಯ ಮಂಡಲವು ಬ್ರಹ್ಮಾಂಡದ ಬಹಿರ್ಭಾಗದಲ್ಲಿ ತಿರ್ಯಕ್-ಊರ್ಧ್ವಪ್ರದೇಶಗಳಲ್ಲಿ ವ್ಯಾಪಿಸಿದೆ.

೧೬೨. ಮತ್ತು ತೇಜೋವಿಶೇಷದಿಂದ ಕೆಂಪಾಗಿ ಕಾಯಿಸಿರುವ ಉಕ್ಕಿನ ಗುಂಡಿನಂತೆ ಮಂಡಲಾಕಾರವಾಗಿರುವ ಅಗ್ನಿಯು ಆ ಘನೋದಕವನ್ನು ಧರಿಸಿಕೊಂಡಿದೆ.

೧೬೩. ಆ ಅಗ್ನಿಯು ಘನವಾತದಿಂದ ಸುತ್ತಲೂ ಧರಿಸಲ್ಪಡುವುದಾಗಿ ಇರುವುದು. ಈ ಘನವಾತವನ್ನು ಅದರ ಸುತ್ತಲೂ ವ್ಯಾಪಿಸಿರುವ ಆಕಾಶವು ಧರಿಸಿಕೊಂಡಿರುವುದು.

**ಭೂತಾದಿಶ್ಚ ತಥಾಕಾಶಂ ಭೂತಾದಿಶ್ಚಾಪ್ಯಸೌ ಮಹಾನ್ ।**
**ಮಹಾಂಶ್ಚ ಸೋಽಪ್ಯನಂತೇನ ಹ್ಯವ್ಯಕ್ತೇನ ತು ಧಾರ್ಯತೇ ॥ ೧೬೪ ॥**

**ಅನಂತಮಪರಿವ್ಯಕ್ತಂ ದಶಧಾ ಸೂಕ್ಷ್ಮಮೇವ ಚ ।**
**ಅನಂತಮಕೃತಾತ್ಮಾನಮನಾದಿನಿಧನಂ ಚ ಯತ್ ॥ ೧೬೫ ॥**

**ಅನಿತ್ಯಂ ಪರತೋ ಘೋರಮನಾಲಂಬಮನಾಮಯಮ್ ।**
**ನೈಕಯೋಜನಸಾಹಸ್ರಂ ವಿಪ್ರಕೃಷ್ಟಮನಾವೃತಮ್ ॥ ೧೬೬ ॥**

**ತಮ ಏವ ನಿರಾಲೋಕಮಮರ್ಯಾದಮದೈಶಿಕಮ್ ।**
**ದೇವಾನಾಮಪ್ಯವಿದಿತಂ ವ್ಯವಹಾರವಿವರ್ಜಿತಮ್ ॥ ೧೬೭ ॥**

---

೧೬೪. ಭೂತಾದಿ ಎಂಬ ತತ್ತ್ವವು ಆ ಆಕಾಶತತ್ತ್ವವನ್ನೂ ಮಹಾನ್ ಎಂಬ ತತ್ತ್ವವು ಆ ಭೂತಾದಿಯನ್ನೂ ಧರಿಸಿಕೊಂಡಿರುವುವು. ಆ ಮಹತ್ತತ್ತ್ವವು ಉತ್ಪತ್ತಿ ನಾಶಗಳಿಲ್ಲದ ಅವ್ಯಕ್ತವೆಂಬ ತತ್ತ್ವದಿಂದ ಧರಿಸಲ್ಪಟ್ಟಿರುವುದು.

೧೬೫. ಭೂತಾದಿಯನ್ನು ಆವರಿಸಿಕೊಂಡಿರುವ ತತ್ತ್ವವು ಅಪರಿಚ್ಛಿನ್ನವೂ ಅವ್ಯಾಕೃತವೂ ಕರ್ಮ-ಜ್ಞಾನೇಂದ್ರಿಯಗಳ ಶಕ್ತಿರೂಪದಿಂದ ಹತ್ತು ವಿಧವಾದ ಸೂಕ್ಷ್ಮಭಾವವನ್ನುಳ್ಳದ್ದೂ ತನ್ನ ಸ್ವರೂಪಕ್ಕೆ ಆತ್ಮಲಾಭ ಮತ್ತು ಚ್ಯುತಿಗಳಿಲ್ಲದ್ದರಿಂದ ಉತ್ಪತ್ತಿ ನಾಶಗಳಿಲ್ಲದ್ದೂ ಆಗಿರುವುದು.

೧೬೬. ಪರಮಸೂಕ್ಷ್ಮವಾದ್ದರಿಂದ ಅಗಮ್ಯವಾದ ಈ ತತ್ತ್ವವನ್ನು ಮಹಾತಮಸ್ಸು ಎಂದು ಕರೆಯುವರು. ಆದರೆ ದೀಪಾದಿ ಜ್ಯೋತಿಯಿಂದ ನಶಿಸುವ ಸಾಮಾನ್ಯ ತಮಸ್ಸಿಗಿಂತ ಅತ್ಯಂತ ವಿಲಕ್ಷಣವಾದುದು. ಪ್ರಾಕೃತ ವಸ್ತುಗಳ ಎಲ್ಲಿಯಲ್ಲಿರುವುದೂ ವಿಕಾರಾವಸ್ಥೆಯಲ್ಲಿ ಇಲ್ಲದಂತೆ ತೋರುವುದೂ ಆದ್ದರಿಂದ ಅನಿತ್ಯವೂ, ಶಾಂತವೂ, ನಿರಾಧಾರವೂ, ಸಕಲಬಾಧಾರಹಿತವೂ, ಅನೇಕ ಸಹಸ್ರ ಯೋಜನ ವಿಸ್ತಾರ ವ್ಯಾಪ್ತಿಯುಳ್ಳದ್ದೂ ಮತ್ತು ತನಗೆ ಮತ್ತೊಂದರ ಆವರಣವಿಲ್ಲದ್ದೂ ಆಗಿದೆ.

೧೬೭. ಇಂತಹ ಪ್ರಕೃತಿರೂಪವಾದ ತಮಸ್ಸು ಅಪ್ರಕಾಶವಾದ ಸೂಕ್ಷ್ಮವಸ್ತುವಾದುದರಿಂದ ದೇವತೆಗಳಿಗೆ ಕೂಡ ಅಗಮ್ಯವಾಗಿದೆ. ಮತ್ತು ಕಾಲ-ದೇಶಗಳ ಎಲ್ಲೆಯಿಲ್ಲದಿರುವುದೂ ಸಕಲ ಪ್ರಾಣಿಗಳ ವ್ಯವಹಾರಾತೀತವೂ ಆಗಿರುವುದು.

ತಮುಸೋಽಂತೇ ಚ ವಿಖ್ಯಾತಮಾಕಾಶಾಂತೇ ಹ್ಯಭಾಸ್ವರಮ್ ।
ಮರ್ಯಾದಾಯಾಮನಂತಸ್ಯ ದೇವಸ್ಯಾಯತನಂ ಮಹತ್ ॥ ೧೬೮ ॥

ತ್ರಿದಶಾನಾಮಗಮ್ಯಂ ತತ್ ಸ್ಥಾನಂ ದಿವ್ಯಮಿತಿ ಶ್ರುತಿಃ ।
ಮಹತೋ ದೇವದೇವಸ್ಯ ಮರ್ಯಾದಾ ಯಾ ವ್ಯವಸ್ಥಿತಾಃ ॥ ೧೬೯ ॥

ಚಂದ್ರಾದಿತ್ಯಾವಧಸ್ತಾತ್ತು ಯೇ ಲೋಕಾಃ ಪ್ರಥಿತಾ ಬುಧೈಃ ।
ತೇ ಲೋಕಾ ಇತ್ಯಭಿಹಿತಾ ಜಗತಶ್ಚ ನ ಸಂಶಯಃ ॥ ೧೭೦ ॥

ರಸಾತಲತಲಾಃ ಸಪ್ತ ಸಪ್ತೈವೋರ್ಧ್ವತಲಾಶ್ಚ ಯೇ ।
ಸಪ್ತಸ್ಕಂಧಾಸ್ತಥಾ ವಾಯೋಃ ಸ ಬ್ರಹ್ಮಸದಸಾ ದ್ವಿಜಾಃ ॥ ೧೭೧ ॥

ಆಪಾತಾಲಾದ್ದಿವಂ ಯಾವದತ್ರ ಪಂಚವಿಧಾ ಗತಿಃ ।
ಪ್ರಮಾಣಮೇತಜ್ಜಗತ ಏಷ ಸಂಸಾರಸಾಗರಃ ॥ ೧೭೨ ॥

---

೧೬೮. ಇಂತಹ ತಮುಸ್ಸೆಂಬ ತತ್ತ್ವದ ಅಂತದಲ್ಲಿ ಅಪರಿಚ್ಛಿನ್ನನಾದ ದೇವನ ಆವಾಸಸ್ಥಾನವು ಸಾಮಾನ್ಯಜನರ ದರ್ಶನಕ್ಕೆ ಅಗೋಚರವಾಗುವುದಾಗಿ ಎಲ್ಲೆಯಂತೆ ಇರುವುದು.

೧೬೯. ಆ ದೇವತಾ ಸ್ಥಾನವನ್ನು ದೇವತೆಗಳಿಗೂ ಅಗಮ್ಯವಾದುದೆಂದು ಶ್ರುತಿಯು ವರ್ಣಿಸುವುದು. ಆ ಸ್ಥಾನದಲ್ಲಿ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣವಾದ ಪರಮಾತ್ಮ ತತ್ತ್ವದ ಮರ್ಯಾದೆಗಳು ವ್ಯವಸ್ಥಿತಗಳಾಗಿವೆ.

೧೭೦. ಚಂದ್ರ-ಆದಿತ್ಯ ಮೊದಲಾದ ತೇಜೋಮಂಡಲಕ್ಕೆ ಕೆಳಭಾಗದಲ್ಲಿ ಕಾಣಿಸುವ ಲೋಕಗಳನ್ನು ಜಗತ್ತಿನಲ್ಲಿ ಲೋಕಗಳೆಂದು ವ್ಯವಹರಿಸುವರು. ಈ ವಿಷಯದಲ್ಲಿ ಸಂದೇಹವಿಲ್ಲ.

೧೭೧. ದ್ವಿಜರೆ! ಈ ಜಗನ್ಮಂಡಲದಲ್ಲಿ ರಸಾತಲದವರೆಗಿರುವ ಸಪ್ತಪಾತಾಲ ಲೋಕಗಳೂ ಹಾಗೆಯೇ ಭೂಃ ಮುಂತಾದ ಏಳು ಊರ್ಧ್ವಲೋಕಗಳೂ ಮತ್ತು ಸಪ್ತ ಸ್ಕಂಧಗಳಿಂದ ಕೂಡಿದ ವಾಯು ಮಂಡಲವೂ, ಬ್ರಹ್ಮಲೋಕಗಳೂ ಸೇರಿ ಕೊಂಡಿವೆ.

೧೭೨. ಈ ಕೆಳಗಿರುವ ಪಾತಾಲಲೋಕದ ಮೊದಲುಗೊಂಡು ಊರ್ಧ್ವ ಲೋಕದವರೆಗಿರುವ ಭುವನ ಸನ್ನಿವೇಶವನ್ನು ಪ್ರತ್ಯಕ್ಷ-ಅನುಮಾನ-ಉಪಮಾನ-

**ಅನಾದ್ಯಂತಾ ವ್ರಜಂತ್ಯೇವ ನೈಕಜಾತಿಸಮುದ್ಭವಾಃ ।**
**ವಿಚಿತ್ರಾ ಜಗತಃ ಸಾ ವೈ ಪ್ರಕೃತಿರ್ಬ್ರಹ್ಮಣಃ ಸ್ಥಿತಾ ॥ ೧೭೩ ॥**

**ಯಚ್ಚೇಹ ದೈವಿಕಂ ವಾಥ ನಿಸರ್ಗಂ ಬಹುವಿಸ್ತರಃ ।**
**ಅತೀಂದ್ರಿಯೈರ್ಮಹಾಭಾಗ್ಯೈಃ ಸಿದ್ಧೈರಪಿ ನ ಲಕ್ಷಿತಃ ॥ ೧೭೪ ॥**

**ಪೃಥಿವ್ಯಂಬ್ವಗ್ನಿವಾಯೂನಾಂ ನಭಸಸ್ತಮಸಸ್ತಥಾ ।**
**ಮಾನಸಸ್ಯ ತು ದೇಹಸ್ಯ ಅನಂತಸ್ಯ ದ್ವಿಜೋತ್ತಮಾಃ ॥ ೧೭೫ ॥**

**ಕ್ಷಯೋ ವಾ ಪರಿಣಾಮೋ ವಾ ಅಂತೋ ವಾಪಿ ನ ವಿದ್ಯತೇ ।**
**ಅನಂತ ಏಷ ಸರ್ವತ್ರ ಏವಂ ಜ್ಞಾನೇಷು ಪಠ್ಯತೇ ॥ ೧೭೬ ॥**

---

ಶಬ್ದ-ಅರ್ಥಾಪತ್ತಿ ಎಂಬ ಐದು ಪ್ರಮಾಣಗಳಿಂದ ತಿಳಿಯಬಹುದಾದ್ದರಿಂದ ಪಂಚ ವಿಧವಾದ ಗತಿಯು ಇರುವುದು. ಇದು ಸಂಸಾರ ಸಾಗರವೆಂದು ಕರೆಯಲ್ಪಡುವುದು.

೧೭೩. ಹಿಂದೆ ಹೇಳಿರುವ ಸನ್ನಿವೇಶಗಳಲ್ಲಿ ಪ್ರತಿಯೊಂದು ತತ್ತ್ವವೂ ಪ್ರಕೃತಿ ಲಯಾಂತವಾಗಿ ಇರುವುದರಿಂದ ಆ ಪ್ರಕೃತಿಯು ಆದಿ-ಅಂತಗಳಿಂದ ರಹಿತವಾಗಿಯೂ ಇರುವುದು. ಪ್ರಕೃತಿ ಲಯ ಸಮಯದಲ್ಲಿ ಅನೇಕ ಜಾತಿಯಿಂದ ಉತ್ಪನ್ನವಾದ ತತ್ತ್ವಗಳೂ ಅಲ್ಲಿ ಸೇರುತ್ತವೆ.

೧೭೪. ತಮಸ್ಸಿನ ಅಂತದಲ್ಲಿ ಇರುವ ದೈವಿಕ ಸನ್ನಿವೇಶವು ಅಸಂಕುಚಿತವಾದ ಪರಮ ವಿಸ್ತಾರವುಳ್ಳದ್ದು. ಆದರೆ ಅತೀಂದ್ರಿಯ ವಸ್ತುಗಳನ್ನು ಕಾಣುವ ಅಷ್ಟೈಶ್ವರ್ಯಸಿದ್ಧಿಯುಳ್ಳ ಮಹಾತ್ಮರಾದ ಯೋಗಿಗಳೂ ಆ ಸ್ಥಾನವನ್ನು ನೋಡಲಾರರು. ಅಂತಹ ಗಂಭೀರವಾದ ಸ್ಥಾನವು.

೧೭೫-೧೭೬. ದ್ವಿಜೋತ್ತಮರೇ! ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ, ತಮಸ್ಸು ಮುಂತಾದುವು ವ್ಯಾಪಕನಾದ ಪರಮಾತ್ಮನ ಮಾನಸದೇಹಾಕಾರವು. ಈ ಸಂಕಲ್ಪಮಾತ್ರದಿಂದ ಸಿದ್ಧಿಸಿರುವ ಮಾನಸ ದೇಹಕ್ಕೆ ಉತ್ಪತ್ತಿ, ನಾಶ, ಪರಿಣಾಮ, ವ್ಯಾಪ್ತಿಯ ಅವಧಿ ಇವುಗಳು ಯಾವುವೂ ಇಲ್ಲ. ಆದುದರಿಂದ ಆ ದೇಹವು ಅನಂತವೆಂದು ಭಾವಿಸಬೇಕು. ಹೀಗೆ ಪರಮಾತ್ಮ ಜ್ಞಾನಮಾರ್ಗವನ್ನು ಬೋಧಿಸುವ ಪ್ರಮಾಣಗಳಲ್ಲಿ ಬೋಧಿಸಲ್ಪಟ್ಟಿದೆ.

ತಸ್ಯ ಚೋಕ್ತಂ ಮಯಾ ಪೂರ್ವಂ ತಸ್ಮಿನ್ ನಾಮಾನುಕೀರ್ತನೇ ।
ಯಃ ಪದ್ಮನಾಭನಾಮ್ನಾ ತು ತತ್ ಕಾರ್ತ್ಸ್ನ್ಯೇನ ಚ ಕೀರ್ತಿತಃ॥ ೧೭೭ ॥

ಸ ಏವ ಸರ್ವತ್ರ ಗತಃ ಸರ್ವಸ್ಥಾನೇಷು ಪೂಜ್ಯತೇ ।
ಭೂಮೌ ರಸಾತಲೇ ಚೈವ ಆಕಾಶೇ ಪವನೇಽನಲೇ ॥ ೧೭೮ ॥

ಅರ್ಣವೇಷು ಚ ಸರ್ವೇಷು ದಿವಿ ಚೈವ ನ ಸಂಶಯಃ ।
ತಥಾ ತಮಸಿ ವಿಜ್ಞೇಯ ಏಷ ಏವ ಮಹಾದ್ಯುತಿಃ ॥ ೧೭೯ ॥

ಅನೇಕಧಾ ವಿಭಕ್ತಾಂಗೋ ಮಹಾಯೋಗೀ ಜನಾರ್ದನಃ ।
ಸರ್ವಲೋಕೇಷು ಲೋಕೇಶ ಇಜ್ಯತೇ ಬಹುಧಾ ಪ್ರಭುಃ ॥ ೧೮೦ ॥

ಏವಂ ಪರಸ್ಪರೋತ್ಪನ್ನಾ ಧಾರ್ಯಂತೇ ಚ ಪರಸ್ಪರಮ್ ।
ಆಧಾರಾಧೇಯಭಾವೇನ ವಿಕಾರಾಸ್ತೇಽವಿಕಾರಿಣಃ ॥ ೧೮೧ ॥

---

೧೭೭. ಆ ಪೃಥಿವ್ಯಾದಿ ಜಗತ್ತಿನ ವಿಸ್ತಾರವು ಆಯಾಯ ಹೆಸರಿನಿಂದ ನನ್ನಿಂದ ಹೇಳಲ್ಪಟ್ಟಿದೆ. ಇದೆಲ್ಲವೂ ವಿಶ್ವರೂಪನಾದ ಬ್ರಹ್ಮನ ಅಂಶಿಕರೂಪಗಳು. ಪದ್ಮನಾಭ ನೆಂಬ ಹೆಸರು ಸಂಪೂರ್ಣವಾದ ಪರಮಾತ್ಮಾಕೃತಿಯನ್ನು ಬೋಧಿಸುವುದು.

೧೭೮. ಆ ಪರಮಾತ್ಮನು ಭೂಮಿ, ರಸಾತಲ, ಆಕಾಶ, ವಾಯು, ಅಗ್ನಿ ಮುಂತಾದ ಸರ್ವ ಪ್ರದೇಶಗಳನ್ನೂ ವ್ಯಾಪಿಸಿಕೊಂಡಿರುವನು. ಸಕಲಪೂಜ್ಯಸ್ಥಾನಗ ಳಲ್ಲಿಯೂ ಪರಮಾರ್ಥವಾಗಿ ಪೂಜ್ಯನು ಅವನೇ ಆಗಿರುವನು.

೧೭೯. ಮತ್ತು ಸಕಲ ಸಮುದ್ರ, ದ್ಯುಲೋಕ ಇವುಗಳಲ್ಲಿಯೂ ವ್ಯಾಪಿಸಿ ಪೂಜ್ಯನಾಗಿರುವನು. ಹೀಗೆ ಪರಮಾತ್ಮನು ಸರ್ವಭಾಗಗಳಲ್ಲಿಯೂ ಏಕರೂಪನೆಂಬುದ ರಲ್ಲಿ ಸಂಶಯವಿಲ್ಲ. ಹಾಗೆಯೇ ಮಹಾತಮೋರೂಪದಲ್ಲಿ ಕೂಡ ತಮಸ್ಸಿಗೆ ಪ್ರೇರೇಪಕ ನಾಗಿರುವುದರಿಂದ ಮಹಾ ಪ್ರಕಾಶವಾಗಿರುವನು.

೧೮೦. ಮಹಾ ಯೋಗಿಯಾದ ಜನಾರ್ದನನೆಂಬ ಕೀರ್ತನೀಯ ನಾಮಾಂಕಿತ ನಾದ ಪರಮಾತ್ಮನು ಅನೇಕರೂಪದಿಂದ ವಿಭಾಗಿಸಿದ ಆಕಾರವುಳ್ಳವನಾಗಿ ಸರ್ವ ಲೋಕಗಳಲ್ಲಿ ಆಯಾಯ ರೂಪವಿಶೇಷದಿಂದ ಪೂಜಿಸಲ್ಪಡುವನು.

೧೮೧. ಹೀಗೆ ಅವಿಕಾರಿಯಾದ ಪರಮಾತ್ಮನಿಂದ ಪೃಥಿವೀ ಮುಂತಾದ ವಿಕಾರ ವಸ್ತುಗಳು ಉತ್ಪತ್ತಿ ಮುಂತಾದ ವಿಕಾರಾವಸ್ಥೆಯಲ್ಲಿ ಪರಸ್ಪರ ಆಲಂಬನವನ್ನು

ಪೃಥ್ವ್ಯಾದಯೋ ವಿಕಾರಾಸ್ತೇ ಪರಿಚ್ಛಿನ್ನಾಃ ಪರಸ್ಪರಮ್ ।
ಪರಸ್ಪರಾಧಿಕಾಶ್ಚೈವ ಪ್ರವಿಷ್ಟಾಸ್ತೇ ಪರಸ್ಪರಮ್ ॥ ೧೮೨ ॥

ಯಸ್ಮಾತ್ಸೃಷ್ಟಾಸ್ತು ತೇಽನ್ಯೋಽನ್ಯಂ ತಸ್ಮಾತ್ ಸ್ಥೈರ್ಯಮುಪಾಗತಾಃ।
ಪ್ರಾಗಾಸನ್ನ ವಿಶೇಷಾಸ್ತು ವಿಶೇಷೋಽನ್ಯವಿಶೇಷಣಾತ್ ॥ ೧೮೩ ॥

ಪೃಥಿವ್ಯಾಂ ವಿಸ್ತೃತಾಶ್ಚೈವ ಪರಿಚ್ಛಿನ್ನಾಸ್ತ್ರಯಸ್ತು ತೇ ।
ಗುಣೋಪಚಯಸಾರೇಣ ಪರಿಚ್ಛೇದೋ ವಿಶೇಷತಃ ॥ ೧೮೪ ॥

ವಿಶೇಷಾಣಾಂ ಪರಿಚ್ಛೇದಃ ಸೌಕ್ಷ್ಮ್ಯಾನ್ನೇಹ ವಿಭಾವ್ಯತೇ ।
ಭೂತೇಭ್ಯಃ ಪರತಸ್ತೇಭ್ಯೋ ವ್ಯಾಲೋಕಾ ಸಾ ಧರಾ ಸ್ಮೃತಾ ॥೧೮೫॥

---

ಹೊಂದಿಕೊಂಡು ಒಂದಕ್ಕೆ ಒಂದು ಆಧಾರ ಮತ್ತು ಆಧೇಯವೆಂಬ ಭಾವದಿಂದ ಇರುವಂತೆ ಧರಿಸಲ್ಪಟ್ಟಿರುವುವು.

೧೮೨ ಪೃಥ್ವೀ ಮುಂತಾದ ಭೂತ ಸಂಘರೂಪವಾದ ವಿಕಾರಗಳು ಪರಸ್ಪರ ವಾಗಿ ಪರಿಚ್ಛೇದವನ್ನು ಹೊಂದಿಕೊಂಡು ಪರಸ್ಪರ ಆಧಿಕ್ಯದಿಂದಲೂ ಪರಸ್ಪರಾನು ಪ್ರವೇಶದಿಂದಲೂ ಕೂಡಿವೆ.

೧೮೩. ಆ ವಿಕಾರಗಳು ಸೂಕ್ಷ್ಮರೂಪದಲ್ಲಿರುವಾಗ ಯಾವ ವಿಶೇಷವು ಅವು ಗಳಲ್ಲಿರಲಿಲ್ಲ. ಇತರ ವಿಕಾರಾಂಶದ ವೈಶಿಷ್ಟ್ಯದಿಂದ ಪರಸ್ಪರ ವಿಶೇಷವನ್ನು ಹೊಂದಿ ಅನ್ಯೋನ್ಯವಾಗಿ ಸೃಷ್ಟಿಸಲ್ಪಟ್ಟವುಗಳಾಗಿ ಎಲ್ಲ ವಿಕಾರಗಳೂ ಸ್ಥೈರ್ಯವನ್ನು ಹೊಂದಿವೆ.

೧೮೪. ಪೃಥಿವೀ, ಜಲ, ತೇಜಸ್ಸು ಎಂಬ ಮೂರು ಮೂರ್ತ ಭೂತಗಳು ಪರಿಚ್ಛಿನ್ನಗಳಾಗಿವೆ. ಇವುಗಳಿಗೆ ಗುಣಗಳ ಉಪಚಯ (ಆಧಿಕ್ಯ) ವೆಂಬ ನಿಮಿತ್ತದಿಂದ ಪರಸ್ಪರ ವಿಶೇಷವಾದ ಪರಿಚ್ಛೇದವು ಉಂಟಾಗಿರುವುದು.

೧೮೫. ಮಿಕ್ಕ ವಸ್ತು ವಿಶೇಷಗಳ ಪರಿಚ್ಛೇದವು ಅತಿ ಸೂಕ್ಷ್ಮವಾದ್ದರಿಂದ ತೋರುವುದಿಲ್ಲ. ಈ ಭೂತಗಳಿಂದ ಆಚೆಯ ಭಾಗದಲ್ಲಿ ಇರುವ ನಿರಾಲೋಕವಾದ ಆಧಾರವನ್ನು ಧರಾ ಎಂದು ಕರೆಯಬಹುದು.

ಭೂತಾನ್ಯಾಲೋಕ ಆಕಾಶೇ ಪರಿಚ್ಛಿನ್ನಾನಿ ಸರ್ವಶಃ ।
ಪಾತ್ರೇ ಮಹತಿ ಪಾತ್ರಾಣಿ ಯಥೈವಾಂತರ್ಗತಾನಿ ತು ॥ ೧೮೬ ॥

ಭವಂತ್ಯನ್ಯೋನ್ಯಹೀನಾನಿ ಪರಸ್ಪರಸಮಾಶ್ರಯಾತ್ ।
ತಥಾ ಹ್ಯಾಲೋಕ ಆಕಾಶೇ ಭೇದಾಸ್ತ್ವಂತರ್ಗತಾ ಮತಾಃ ॥ ೧೮೭ ॥

ಕೃತ್ಸ್ನಾನ್ಯೇತಾನಿ ಚತ್ವಾರಿ ಹ್ಯನ್ಯೋನ್ಯಸ್ಯಾಧಿಕಾನಿ ತು ।
ಯಾವದೇತಾನಿ ಭೂತಾನಿ ತಾವದುತ್ಪತ್ತಿರುಚ್ಯತೇ ॥ ೧೮೮ ॥

ತಂತೂನಾಮಿವ ಸಂತಾನೋ ಭೂತೇಷ್ವಂತರ್ಗತೋ ಮತಃ ।
ಪ್ರತ್ಯಾಖ್ಯಾಯ ತು ಭೂತಾನಿ ಕಾರ್ಯೋತ್ಪತ್ತಿರ್ನ ವಿದ್ಯತೇ ॥ ೧೮೯ ॥

ತಸ್ಮಾತ್ಪರಿಮಿತಾ ಭೇದಾಃ ಸ್ಮೃತಾಃ ಕಾರ್ಯಾತ್ಮಕಾಸ್ತು ತೇ ।
ಕಾರಣಾತ್ಮಕಾಸ್ತಥೈವ ಸ್ಯುರ್ಭೇದಾ ಯೇ ಮಹದಾದಯಃ ॥ ೧೯೦ ॥

---

೧೮೬. ಈ ಭೂತಗಳು ಪ್ರಕಾಶರೂಪವಾದ ಭೂತಾಕಾಶದಲ್ಲಿ ಪರಿಚ್ಛೇದವನ್ನು ಹೊಂದಿಕೊಂಡಿವೆ. ಪಂಚಭೂತಗಳಲ್ಲಿ ಆಕಾಶವೆಂಬುದು ವ್ಯಾಪಕವಾದುದು, ಮತ್ತು ಎಲ್ಲಕ್ಕಿಂತ ಸೂಕ್ಷ್ಮ ಆಕಾರವುಳ್ಳದ್ದು. ದೊಡ್ಡ ಪಾತ್ರೆಗಳಲ್ಲಿ ಚಿಕ್ಕಚಿಕ್ಕ ಪಾತ್ರೆಗಳು ಹಿಡಿಸುವಂತೆ ಪೃಥಿವ್ಯಾದಿ ಭೂತಗಳು ಆಕಾಶದಲ್ಲಿ ಅಂತರ್ಗತವಾಗಿವೆ.

೧೮೭. ಅವುಗಳಲ್ಲಿ ಪರಸ್ಪರಾಶ್ರಯ ಬಲದಿಂದ ಒಂದಕ್ಕಿಂತ ಒಂದು ಹೀನ ಪರಿಮಾಣವಾದ್ದರಿಂದ ಆಲೋಕಾಕಾಶ (ಭೂತಾಕಾಶ) ದಲ್ಲಿ ಸಕಲ ಭೇದ ವಸ್ತುಗಳೂ ಅಂತರ್ಗತವಾಗಿರುವುವು.

೧೮೮. ಪೃಥಿವೀ ಮುಂತಾದ ಸಂಪೂರ್ಣವಾದ ನಾಲ್ಕು ಭೂತಗಳು ಒಂದಕ್ಕಿಂತ ಮತ್ತೊಂದು ಅಧಿಕ ಭಾವದಿಂದ ಇರುವುವಾದ್ದರಿಂದ ಎದುವರೆಗೆ ಈ ಭೂತಗಳು ಇರುವುವೋ ಅದುವರೆಗೆ ವಿಕಾರಗಳ ಉತ್ಪತ್ತಿಯಾಗುವುದು, ಎಂದು ಹೇಳಲ್ಪಡುತ್ತದೆ.

೧೮೯. ವಸ್ತ್ರದಲ್ಲಿ ಅನೇಕ ತಂತುಗಳ ವಿಸ್ತಾರವು ಐಕ್ಯವನ್ನು ಹೊಂದಿರುವಂತೆ ಭೂತಗಳು ಒಂದು ಮತ್ತೊಂದರಲ್ಲಿ ಪ್ರವೇಶವನ್ನು ಹೊಂದಿವೆ. ಈ ಭೂತಗಳನ್ನು ನಿರಾಕರಿಸಿದರೆ ವಿಕಾರಗಳ ಉತ್ಪತ್ತಿಯು ನಡೆಯುವುದಿಲ್ಲ.

೧೯೦. ಆದುದರಿಂದ ಕಾರ್ಯರೂಪವಾಗಿ ಹುಟ್ಟಿರುವ ವಿಕಾರಭೇದಗಳು

ಇತ್ಯೇಷ ಸನ್ನಿವೇಶೋ ವೈ ಮಯಾ ಪ್ರೋಕ್ತೋ ವಿಭಾಗಶಃ ।
ಸಪ್ತದ್ವೀಪಸಮುದ್ರಾಢ್ಯೋ ಯಾಥಾತಥ್ಯೇನ ವೈ ದ್ವಿಜಾಃ ॥ ೧೯೧ ॥

ವಿಸ್ತರಾನ್ಮಂಡಲಾಚ್ಚೈವ ಪ್ರಸಂಖ್ಯಾನೇನ ಚೈವ ಹಿ ।
ವೈಶ್ವರೂಪಪ್ರಧಾನಸ್ಯ ಪರಿಣಾಮ್ಯೈಕದೇಶಿಕಃ ॥ ೧೯೨ ॥

ಅಧಿಷ್ಠಿತಂ ಭಗವತಾ ಯಸ್ಯ ಸರ್ವಮಿದಂ ಜಗತ್ ।
ಏವಂ ಭೂತಗಣಾಃ ಸಪ್ತ ಸನ್ನಿವಿಷ್ಟಾಃ ಪರಸ್ಪರಮ್ ॥ ೧೯೩ ॥

ಏತಾವಾನ್ ಸನ್ನಿವೇಶಸ್ತು ಮಯಾ ಶಕ್ಯಃ ಪ್ರಭಾಷಿತುಮ್ ।
ಏತಾವದೇವ ಶ್ರೋತವ್ಯಂ ಸನ್ನಿವೇಶೇ ತು ಪಾರ್ಥಿವೇ ॥ ೧೯೪ ॥

---

ಪರಿಮಿತಿಯನ್ನು ಹೊಂದಿವೆ. ಹಾಗೆಯೇ ಮಹತ್ತತ್ತ್ವ ಮುಂತಾದ ಪ್ರಕೃತಿ ವಿಕೃತಿ ರೂಪವಾದ ತತ್ತ್ವಗಳು ಕಾರಣ ರೂಪವನ್ನೂ ಹೊಂದಿವೆ.

೧೯೧. ದ್ವಿಜರೆ! ಸಪ್ತದ್ವೀಪ ಮತ್ತು ಸಪ್ತ ಸಮುದ್ರಗಳಿಂದ ಕೂಡಿದ ಈ ಬ್ರಹ್ಮಾಂಡ ಸನ್ನಿವೇಶವನ್ನು ಅದರ ನಿಜಸ್ವರೂಪದಿಂದ ನಿಮಗೆ ಹೇಳಿರುವೆನು.

೧೯೨. ಬ್ರಹ್ಮಾಂಡವನ್ನು ನಾನು ಉಪದೇಶಿಸುವಾಗ ಅದರ, ವಿಸ್ತಾರ, ಮಂಡಲ ವಾದ ಆಕಾರ, ಮತ್ತು ಪರಿಮಾಣ ಸಂಖ್ಯಾ ಇವೆಲ್ಲವನ್ನೂ ಗರ್ಭೀಕರಿಸಿ ವಿಸ್ತಾರ ವಾಗಿ ಹೇಳಿರುವೆನು. ಇವೆಲ್ಲವೂ ವಿಶ್ವರೂಪದಿಂದ ಪರಿಣಾಮಹೊಂದುವ ಪ್ರಧಾನದ ಏಕದೇಶದ ಪರಿಣಾಮವಾಗಿರುವುದು.

೧೯೩. ಯಾವ ಪರಮಾತ್ಮನ ಲೀಲಾಜಾಲ ರೂಪವಾಗಿ ಈ ಜಗತ್ತು ಸ್ಥಿತಿ ಯನ್ನು ಹೊಂದಿರುವುದೋ ಆ ಪರಮಾತ್ಮನು ಜಗತ್ತನ್ನು ವ್ಯಾಪಿಸಿರುವನು. ಹೀಗೆ ಮಹತ್ತತ್ತ್ವ-ಅಹಂಕಾರಗಳಿಂದ ಕೂಡಿ ಏಳು ಭೂತಗಳು ಪರಸ್ಪರವಾದ ಸನ್ನಿವೇಶ ವಿಶೇಷಗಳನ್ನು ಹೊಂದಿರುವುವು.

೧೯೪. ಬ್ರಹ್ಮಾಂಡದ ಸನ್ನಿವೇಶವನ್ನು ಇಷ್ಟು ಮಾತ್ರ ನನ್ನಿಂದ ಉಪದೇಶ ಮಾಡಲು ಸಾಧ್ಯವು. ಈ ಪೃಥಿವೀ ಸನ್ನಿವೇಶದ ಜಿಜ್ಞಾಸುಗಳು ಈ ವಿಷಯದಲ್ಲಿ ಕೇಳಬೇಕಾದುದೂ ಇಷ್ಟೇ ಆಗಿದೆ.

24

**ಸಪ್ತ ಪ್ರಕೃತಯಸ್ತ್ವೇತಾ ಧಾರಯಂತಿ ಪರಸ್ಪರಮ್ ।**
**ತಾಸ್ತ್ವಹಂ ಪರಿಮಾಣೇನ ನ ಸಂಖ್ಯಾತುಮಿಹೋತ್ಸಹೇ ॥ ೧೯೫ ॥**

**ಅಸಂಖ್ಯಾತಾಃ ಪ್ರಕೃತಯಸ್ತಿರ್ಯಗೂರ್ಧ್ವಮಧಸ್ತಥಾ ।**
**ತಾರಕಾಸನ್ನಿವೇಶಶ್ಚ ಯಾವದ್ದಿವ್ಯಾನುಮಂಡಲಮ್ ॥ ೧೯೬ ॥**

**ಪರ್ಯಾಯಸನ್ನಿವೇಶಸ್ತು ಭೂಮೇಸ್ತದನುಮಂಡಲಃ ।**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ಪೃಥಿವ್ಯಾ ವೈ ವಿಚಕ್ಷಣಾಃ ॥ ೧೯೭ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಏಕೋನವಿಂಶತಿತಮೋಽಧ್ಯಾಯಃ**

---

೧೯೫. ಹಿಂದೆ ಹೇಳಿದಂತೆ ಅವ್ಯಕ್ತ ತತ್ತ್ವದಿಂದ ಹುಟ್ಟಿದ ಮಹತ್ತತ್ತ್ವ, ಅಹಂಕಾರ, ಪಂಚಭೂತ ತನ್ಮಾತ್ರಗಳೆಂಬ ಸಪ್ತಪ್ರಕೃತಿಗಳು ಅನ್ಯೋನ್ಯವಾಗಿ ಸ್ಥಿತಿಯನ್ನು ಹೊಂದುವುವು. ಅವುಗಳನ್ನು ಪರಿಮಾಣದಿಂದ ಎಣಿಸಲು ನಾನು ಕುತೂಹಲಶಾಲಿಯಾಗಿಲ್ಲ.

೧೯೬-೧೯೭. ಈ ಪ್ರಕೃತಿಗಳು ಗಣನಾತೀತವಾದ್ದರಿಂದ ಅಸಂಖ್ಯಾತಗಳಾಗಿವೆ. ಇವು ಊರ್ಧ್ವಭಾಗ ಅಧೋಭಾಗ ತಿರ್ಯಗ್ಭಾಗ ಮುಂತಾದ ಸಕಲ ದೇಶಗಳನ್ನು ವ್ಯಾಪಿಸಿಕೊಂಡಿವೆ. ಇದು ಪಾರ್ಥಿವ ಸನ್ನಿವೇಶವು. ಪ್ರಾಜ್ಞರೆ! ದ್ಯುಲೋಕದ ಮಂಡಲವನ್ನು ಅನುಸರಿಸಿ ತಾರಕೆ (ನಕ್ಷತ್ರ) ಗಳ ಸನ್ನಿವೇಶವೂ ಭೂಮಿಯ ಮಂಡಲವನ್ನು ಅನುಸರಿಸಿ ಪರ್ಯಾಯ ಸನ್ನಿವೇಶವೂ ಇರುವುವು. ಈ ಪೃಥಿವಿಯ ನಿರೂಪಣವನ್ನು ಸಮಾಪ್ತಿಗೊಳಿಸಿ ಆ ವಿಷಯಗಳನ್ನು ಉಪದೇಶಿಸವೆನು.

ಬ್ರಹ್ಮಾಂಡಪುರಾಣದಲ್ಲಿ ಹತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವು.

# ವಿಂಶತಿತಮೋಽಧ್ಯಾಯಃ

**ಸೂತ ಉವಾಚ**

**ಅಧಃ ಪ್ರಮಾಣಮೂರ್ಧ್ವಂ ಚ ವಕ್ಷ್ಯಮಾಣಂ ನಿಬೋಧತ ।**
**ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ ॥ ೧ ॥**

**ಅನಂತಾ ಧಾತವೋ ಹ್ಯೇತೇ ವ್ಯಾಪಕಾಸ್ತು ಪ್ರಕೀರ್ತಿತಾಃ ।**
**ಜನನೀ ಸರ್ವಭೂತಾನಾಂ ಸರ್ವಸತ್ತ್ವಧರಾ ಧರಾ ॥ ೨ ॥**

**ನಾನಾಜನಪದಾಕೀರ್ಣಾ ನಾನಾಧಿಷ್ಠಾನಪತ್ತನಾ ।**
**ನಾನಾನದನದೀಶೈಲಾ ನೈಕಜಾತಿಸಮಾಕುಲಾ ॥ ೩ ॥**

**ಅನಂತಾ ಗೀಯತೇ ದೇವೀ ಪೃಥಿವೀ ಬಹುವಿಸ್ತರಾ ।**
**ನದೀನದಸಮುದ್ರಸ್ಥಾಸ್ತಥಾ ಕ್ಷುದ್ರಾಶ್ರಯಸ್ಥಿತಾಃ ॥ ೪ ॥**

---

ಸೂತಮುನಿಯು ಹೇಳಿದನು.

೧. ಅಧೋಲೋಕದ ಮತ್ತು ಊರ್ಧ್ವಲೋಕದ ಪ್ರಮಾಣವಿಷಯದಲ್ಲಿ ನಾನು ಮುಂದೆ ಹೇಳುವ ವಾಕ್ಯಗಳನ್ನು ಕೇಳಿರಿ. ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ ಎಂಬ ಪಂಚಮಹಾಭೂತಗಳು ಹಿಂದೆ ಹೇಳಲ್ಪಟ್ಟಿರುವುವು.

೨. ಈ ಪಂಚಮಹಾಭೂತಗಳು ಅಂತವಿಲ್ಲದಷ್ಟು ವ್ಯಾಪಕಗಳಾಗಿಯೂ ಧಾತುಗಳೆಂದೂ ಕೀರ್ತಿಸಲ್ಪಟ್ಟಿವೆ. ಇವುಗಳಲ್ಲಿ ಸರ್ವಪ್ರಾಣಿಗಳಿಗೆ ಜನನಿಯಾಗಿರುವುದು ಸರ್ವಸತ್ತ್ವಗಳಿಂದ ಕೂಡಿದ ಧರೆಯು.

೩. ಈ ಧರೆಯು ಅನೇಕ ಜನಪದಗಳಿಂದಲೂ, ಅನೇಕ ರಾಜಧಾನಿ ಮತ್ತು ಪಟ್ಟಣಗಳಿಂದಲೂ, ಅನೇಕ ನದ-ನದೀ-ಪರ್ವತಗಳಿಂದಲೂ ಮತ್ತು ಅನೇಕ ಜಾತಿಯ ಸನ್ನಿವೇಶಗಳಿಂದಲೂ ಕೂಡಿರುವುದು.

೪-೫. ಹೀಗೆ ಬಹಳ ವಿಸ್ತಾರದಿಂದ ಕೂಡಿದ ಅನಂತವಾದ ಪೃಥಿವಿಯನ್ನು ಭೂದೇವಿ ಮಾತೆಯೆಂದು ಭಕ್ತರು ಸ್ತುತಿಸುವರು, ಇದು ಪೃಥಿವಿಯ ಮಹಿಮೆಯು. ಹೀಗೆ ನದೀ-ನದ-ಸಮುದ್ರಾಕಾರದಿಂದಲೂ, ಅನೇಕ ಕ್ಷುದ್ರಪ್ರಾಣಿಗಳ ಆವಾಸ

ಪರ್ವತಾಕಾಶಸಂಸ್ಥಾಶ್ಚ ಅಂತರ್ಭೂಮಿಗತಾಶ್ಚ ಯಾಃ ।
ಆಪೋಽನಂತಾ ಹಿ ವಿಜ್ಞೇಯಾಸ್ತಥಾಽಗ್ನಿಃ ಸರ್ವಲೋಕಗಃ ॥ ೫ ॥

ಅನಂತಃ ಪಠ್ಯತೇ ಚೈವ ವ್ಯಾಪಕಃ ಸರ್ವಸಂಭವಃ ।
ತಥಾಕಾಶಮನಾಲೇಖ್ಯಂ ರಮ್ಯಂ ನಾನಾಶ್ರಯಂ ಸ್ಮೃತಮ್ ॥ ೬ ॥

ಅನಂತಂ ಪಠ್ಯತೇ ಚೈವ ವಾಯುಶ್ಚಾಕಾಶಸಂಭವಃ ।
ಆಪಃ ಪೃಥಿವ್ಯಾಮುದಕೇ ಪೃಥಿವ್ಯುಪರಿ ಸಂಸ್ಥಿತಾ ॥ ೭ ॥

ಆಕಾಶಶ್ಚಾಪರಮಥ ಪುನರ್ಭೂಮಿಃ ಪುನರ್ಜಲಮ್ ।
ಏವಂ ಮತಮನಂತಸ್ಯ ಭೌತಿಕಸ್ಯ ನ ವಿದ್ಯತೇ ॥ ೮ ॥

ಪರಸ್ಪರೈಃ ಸೋಪಚಿತಾ ಭೂಮಿಶ್ಚೈವ ನಿಬೋಧತ ।
ಭೂಮಿರ್ಜಲಮಥಾಕಾಶಮಿತಿ ಯಾ ಯಾ ಪರಂಪರಾ ॥ ೯ ॥

---

ದಿಂದಲೂ ಕೂಡಿ ಇರುವ ಜಲಗಳು ಪರ್ವತ-ಆಕಾಶ ಮತ್ತು ಭೂಮಿಯ ಒಳಭಾಗ ಮುಂತಾದ ವಿವಿಧ ದೇಶಗಳನ್ನು ವ್ಯಾಪಿಸಿವೆ. ಆದ್ದರಿಂದ ಜಲಗಳು ಅನಂತವೆಂದು ಹೇಳಲ್ಪಡುತ್ತವೆ. ಅದರಂತೆ ಅಗ್ನಿಯು ಅನಂತಸ್ವರೂಪವಾಗಿ ಸರ್ವಲೋಕಗಳನ್ನು ವ್ಯಾಪಿಸಿದೆ.

೬. ಸರ್ವಕ್ಕೂ ಕಾರಣವೂ ಅನಂತವೂ ಮತ್ತು ವ್ಯಾಪಕವೂ ಎಂದು ಅಗ್ನಿಯನ್ನು ತತ್ತ್ವವಾದಿಗಳು ಹೇಳುವರು. ಆಕಾಶವು ರಮ್ಯವಾಗಿ ನಾನಾ ವಸ್ತುಗಳಿಗೆ ಆಶ್ರಯವನ್ನು ಕೊಡುತ್ತಾ ಗುರುತಿಸಲು ಅಶಕ್ಯವಾಗಿದೆ.

೭. ಈ ಆಕಾಶವು ಅನಂತವಾದುದು. ವಾಯುವು ಇಂತಹ ಆಕಾಶದಿಂದ ಹುಟ್ಟಿದೆ. ಭೂಮಿಯ ಆಧಾರದಲ್ಲಿ ಜಲವೂ ಆ ಜಲದ ಆಧಾರದಲ್ಲಿ ಭೂಮಿಯೂ ಇರುವುವು.

೮. ಈ ಭೂಮಿ, ಜಲಗಳ ಜೊತೆಗೆ ಆಕಾಶವೂ ಸೇರಿದೆ. ಆಕಾಶತತ್ತ್ವ, ಮತ್ತೆ ಭೂಮಿ, ಮತ್ತೆ ಜಲ ಹೀಗೆಯೇ ಒಂದಾದ ಮೇಲೊಂದು ಕ್ರಮದಿಂದ ಲೋಕ ಸನ್ನಿವೇಶದಲ್ಲಿ ಭೂತಗಳು ಸೇರಿಕೊಂಡಿವೆ. ಹೀಗೆ ಅನಂತವಾದ ಭೌತಿಕದ ವಿಸ್ತಾರಕ್ಕೆ ಅಳತೆಯು ಇಲ್ಲ.

೯. ಭೂಮಿ, ಆಕಾಶ ಮತ್ತು ಜಲಗಳೆಂಬ ಕಾರಣ ಪರಂಪರೆಯು ಪರಸ್ಪರ

**ಸ್ಥಿತಿರೇಷಾ ತು ವಿಖ್ಯಾತಾ ಸಪ್ತಮೇಽಸ್ಮಿನ್ ರಸಾತಲೇ ।**
**ದಶಯೋಜನಸಾಹಸ್ರಮೇಕಂ ಭೌಮಂ ರಸಾತಲಮ್ ॥ ೧೦ ॥**

**ಸಾಧುಭಿಃ ಪರಿಸಂಖ್ಯಾತಮೇಕೈಕೇನೈವ ವಿಸ್ತರಮ್ ।**
**ಪ್ರಥಮಂ ತ್ವತಲಂ ನಾಮ ಸುತಲಂ ತು ತತಃ ಪರಮ್ ॥ ೧೧ ॥**

**ತತಸ್ತಲಾತಲಂ ವಿದ್ಯಾದತಲಂ ಬಹುವಿಸ್ತರಮ್ ।**
**ತತೋಽರ್ವಾಕ್ಚ ತಲಂ ನಾಮ ಪರತಶ್ಚ ರಸಾತಲಮ್ ॥ ೧೨ ॥**

**ಏತೇಷಾಮಪ್ಯಧೋಭಾಗೇ ಪಾತಾಲಂ ಸಪ್ತಮಂ ಸ್ಮೃತಮ್ ।**
**ಕೃಷ್ಣಭೌಮಶ್ಚ ಪ್ರಥಮೋ ಭೂಮಿಭಾಗಃ ಪ್ರಕೀರ್ತಿತಃ ॥ ೧೩ ॥**

**ಪಾಂಡುಭೂಮಿರ್ದ್ವಿತೀಯಸ್ತು ತೃತೀಯೋ ನೀಲಮೃತ್ತಿಕಃ ।**
**ಪೀತಭೌಮಶ್ಚತುರ್ಥಸ್ತು ಪಂಚಮಃ ಶರ್ಕರಾಮಯಃ ॥ ೧೪ ॥**

---

ಮೇಲನದಿಂದ ಉಪಚಯವನ್ನು ಹೊಂದಿರುವುದು. ಈ ಭೂಮಿಯು ಹಾಗೆ ಪರಸ್ಪರ ಮೇಲನದಿಂದ ಈ ಸ್ಥೂಲಾಕಾರವನ್ನು ಹೊಂದಿರುವುದೆಂದು ತಿಳಿಯಿರಿ.

೧೦. ಅಧೋಲೋಕಗಳಲ್ಲಿ ಏಳನೆಯದಾದ ರಸಾತಲದಲ್ಲಿ ಕಂಡ ಭೂಮಿ, ಆಕಾಶ, ಜಲಗಳೆಂಬ ಕಾರಣ ಪರಂಪರೆಯ ಸ್ಥಿತಿಯು ಸಮಾನವಾದುದು. ಭೂಮಿಯ ಅಧೋಭಾಗದ ರಸಾತಲ ಲೋಕವು ಒಂದು ಹತ್ತು ಸಾವಿರ ಯೋಜನ ಪರಿಮಾಣ ವನ್ನು ಹೊಂದಿದೆ.

೧೧. ಆ ಸಪ್ತಾಧೋಲೋಕಗಳು ಒಂದಕ್ಕಿಂತ ಮತ್ತೊಂದು ಅತಿಶಯವಾದ ವಿಸ್ತಾರದಿಂದ ಇರುತ್ತವೆಯೆಂದು ಸಾಧುಗಳಿಂದ ಎಣಿಸಲ್ಪಟ್ಟಿವೆ. ಅವುಗಳಲ್ಲಿ ಅತಲ ವೆಂಬುದು, ಮೊದಲನೆಯದು. ಸುತಲವು ದ್ವಿತೀಯವು.

೧೨. ತಲಾತಲ, ಬಹು ವಿಸ್ತಾರವಾದ ವಿತಲ, ತಲ, ರಸಾತಲಗಳನ್ನು ಕ್ರಮ ವಾಗಿ ತೃತೀಯ ಚತುರ್ಥ ಪಂಚಮ ಷಷ್ಠ ಅಧೋಲೋಕಗಳೆಂದು ತಿಳಿಯಬೇಕು.

೧೩. ಈ ಎಲ್ಲವುಗಳಿಗಿಂತ ಅಧೋಭಾಗದಲ್ಲಿ ಸಪ್ತಮವಾದ ಪಾತಾಲಲೋಕವು ಇರುವುದು. ಇವುಗಳಲ್ಲಿ ಮೊದಲನೆಯ ಲೋಕದ ಭೂಮಿಯು ಕಪ್ಪುಬಣ್ಣದಿಂದ ಪ್ರಕಾಶಿಸುವುದು.

೧೪. ದ್ವಿತೀಯ ಲೋಕದ ಭೂಮಿ ಭಾಗವು ಬಿಳಿಯ ಮೃತ್ತಿಕೆಯಿಂದಲೂ

**ಷಷ್ಠಃ ಶಿಲಾಮಯೋ ಜ್ಞೇಯಃ ಸೌವರ್ಣಃ ಸಪ್ತಮಃ ಸ್ಮೃತಃ ।**
**ಪ್ರಥಮೇಽಸ್ಮಿಂಸ್ತಲೇ ಖ್ಯಾತಮಸುರೇಂದ್ರಸ್ಯ ಮನ್ದಿರಮ್ ॥ ೧೫ ॥**

**ನಮುಚೇರಿಂದ್ರಶತ್ರೋಶ್ಚ ಮಹಾನಾದಸ್ಯ ಚಾಲಯಮ್ ।**
**ಪುರಂ ಚ ಶಂಕುಕರ್ಣಸ್ಯ ಕಬಂಧಸ್ಯ ಚ ಮಂದಿರಮ್ ॥ ೧೬ ॥**

**ನಿಷ್ಕುಲಾದಸ್ಯ ಚ ಪುರಂ ಪ್ರಹೃಷ್ಟಜನಸಂಕುಲಮ್ ।**
**ರಾಕ್ಷಸಸ್ಯ ಚ ಭೀಮಸ್ಯ ಶೂಲದಂತಸ್ಯ ಚಾಲಯಮ್ ॥ ೧೭ ॥**

**ಲೋಹಿತಾಕ್ಷಕಲಿಂಗಾನಾಂ ನಗರಂ ಶ್ವಾಪದಸ್ಯ ಚ ।**
**ಧನಂಜಯಸ್ಯ ಚ ಪುರಂ ನಾಗೇಂದ್ರಸ್ಯ ಮಹಾತ್ಮನಃ ॥ ೧೮ ॥**

**ಕಾಲಿಯಸ್ಯ ಚ ನಾಗಸ್ಯ ನಗರಂ ಕೌಶಿಕಸ್ಯ ಚ ।**
**ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾನ್ ॥ ೧೯ ॥**

---

ತೃತೀಯ, ಚತುರ್ಥ ಪಂಚಮಲೋಕಗಳ ಭೂಭಾಗವು ಕ್ರಮವಾಗಿ ನೀಲ, ಪೀತ, ವರ್ಣಗಳಿಂದಲೂ ಚಿಕ್ಕ ಕಲ್ಲುಗಳಿಂದಲೂ ತುಂಬಿರುವುವು.

೧೫. ಆರನೆಯ ಪಾತಾಲಲೋಕವು ಶಿಲಾಮಯವೆಂದೂ ಏಳನೆಯದು ಸುವರ್ಣಮಯವೆಂದೂ ಪ್ರಾಜ್ಞರಿಂದ ಹೇಳಲ್ಪಟ್ಟಿವೆ. ಇವುಗಳಲಿ ಮೊದಲನೆಯ ತಲವೆಂಬ ಲೋಕದಲ್ಲಿ ರಾಕ್ಷಸೇಂದ್ರನ ಭವನವು ಪ್ರಖ್ಯಾತವಾಗಿರುವುದು.

೧೬. ನಮುಚಿ, ಇಂದ್ರಶತ್ರು, ಮಹಾನಾದ, ಶಂಕುಕರ್ಣ, ಮತ್ತು ಕಬಂಧ ಎಂಬ ಗಣ್ಯರಾದ ಮಹಾರಾಕ್ಷಸರ ಗೃಹಗಳು ಈ ಪ್ರಥಮಲೋಕದಲ್ಲಿ ಇರುವುವು,

೧೭. ನಿಷ್ಕುಲಾದ ಎಂಬ ರಾಕ್ಷಸನಿಗೆ ಅಧೀನವಾದ ಸಂತುಷ್ಟರಾದ ಪ್ರಜೆಗಳಿಂದ ವ್ಯಾಪ್ತವಾದನಗರವೂ, ಭೀಮ, ಶೂಲದಂತ ಎಂಬ ರಾಕ್ಷಸರ ಮಂದಿರಗಳೂ ಇಲ್ಲಿ ಶೋಭಿಸುತ್ತಲಿರುವುವು.

೧೮. ಮತ್ತು ಅನೇಕ ರಾಕ್ಷಸರು ಈ ಲೋಕಗಳಲ್ಲಿ ಒಂದೊಂದು ನಗರವನ್ನ ಆಳುತ್ತಿರುವರು. ಆ ನಗರಗಳಲ್ಲಿ ಲೋಹಿತಾಕ್ಷ, ಕಲಿಂಗ, ಶ್ವಾಪದ, ಧನಂಜಯ, ಮತ್ತು ನಾಗೇಂದ್ರರೆಂಬ ವೀರ ರಾಕ್ಷಸರ ನಗರಗಳು ಸೇರಿಕೊಂಡಿವೆ.

೧೯. ಕಾಲಿಯ ಮತ್ತು ಕೌಶಿಕವೆಂಬ ನಾಗಗಳ ನಗರಗಳು ಕೂಡ ಇಲ್ಲಿ ಸೇರಿ

ತಲೇ ಜ್ಞೇಯಾನಿ ಪ್ರಥಮೇ ಕೃಷ್ಣಭೌಮೇ ನ ಸಂಶಯಃ ।
ದ್ವಿತೀಯೇ ಸುತಲೇ ವಿಪ್ರಾ ದೈತ್ಯೇಂದ್ರಸ್ಯ ಚ ರಕ್ಷಸಃ ॥ ೨೦ ॥

ಮಹಾಜಂಭಸ್ಯ ತು ತಥಾ ನಗರಂ ಪ್ರಥಮಸ್ಯ ತು ।
ಹಯಗ್ರೀವಸ್ಯ ಕೃಷ್ಣಸ್ಯ ನಿಕುಂಭಸ್ಯ ಚ ಮಂದಿರಮ್ ॥ ೨೧ ॥

ಶಂಖಾಖ್ಯಸ್ಯ ಚ ದೈತ್ಯಸ್ಯ ನಗರಂ ಗೋಮುಖಸ್ಯ ಚ ।
ರಾಕ್ಷಸಸ್ಯ ಚ ನೀಲಸ್ಯ ಮೇಘಸ್ಯ ಕಥನಸ್ಯ ಚ ॥ ೨೨ ॥

ಆಲಯಂ ಕುಕುಪಾದಸ್ಯ ಮಹೋಷ್ಣೀಷಸ್ಯ ಚಾಲಯಮ್ ।
ಕಂಬಲಸ್ಯ ಚ ನಾಗಸ್ಯ ಪುರಮಶ್ವತರಸ್ಯ ಚ ॥ ೨೩ ॥

ಕದ್ರೂಪುತ್ರಸ್ಯ ಚ ಪುರಂ ತಕ್ಷಕಸ್ಯ ಮಹಾತ್ಮನಃ ।
ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಮ್ ॥ ೨೪ ॥

---

ಕೊಂಡಿವೆ. ಈ ರೀತಿಯಾಗಿ ನಾಗ-ದಾನವ-ರಾಕ್ಷಸರೆಂಬ ವಿವಿಧ ಪಂಗಡದವರ ನಗರಗಳು ಅಸಂಖ್ಯಾತಗಳಾಗಿವೆ.

೨೦. ಇವುಗಳೆಲ್ಲ ಕೃಷ್ಣಭೂಮಿಯಿಂದ ಶೋಭಿಸುವ ತಲವೆಂಬ ಮೊದಲನೆಯ ಲೋಕದಲ್ಲಿ ಇರುವುವೆಂದು ತಿಳಿಯಬೇಕು. ದ್ವಿತೀಯವಾದ ಸುತಲದಲ್ಲಿ ರಾಕ್ಷಸೇಂದ್ರನ ನಗರವು ಒಂದು ಪ್ರಖ್ಯಾತವಾಗಿರುವುದು ಸರಿಯಷ್ಟೆ.

೨೧. ಹಾಗೆ ಮಹಾಜಂಭ, ಪ್ರಥಮ, ಹಯಗ್ರೀವ, ಕೃಷ್ಣ, ನಿಕುಂಭ ಇವರುಗಳು ಆಳುವ ನಗರಗಳೂ ಮತ್ತು ಇವರು ವಾಸಮಾಡುವ ಮಹಾಭವನಗಳೂ ಇವೆ.

೨೨. ಶಂಖ, ಗೋಮುಖ, ನೀಲ, ಮೇಘ, ಕಥನ ಮುಂತಾದ ರಾಕ್ಷಸರು ಈ ಲೋಕದಲ್ಲಿ ನಗರಗಳನ್ನು ಕಲ್ಪಿಸಿಕೊಂಡಿರುವರು.

೨೩. ಕುಕುಪಾದನೆಂಬ ರಾಕ್ಷಸನ ಮಂದಿರವೂ ಮಹೋಷ್ಣೀಷನ ಮಂದಿರವೂ ಕಂಬಲ ಅಶ್ವತರ ಎಂಬ ನಾಗಗಳ ಪುರಗಳೂ ಇಲ್ಲಿ ಪ್ರಕಾಶಿಸುತ್ತಲಿವೆ.

೨೪. ಮತ್ತು ಕದ್ರೂ ಪುತ್ರ, ತಕ್ಷಕ ಮುಂತಾದ ಪ್ರಸಿದ್ಧರಾದ ನಾಗೇಂದ್ರರು ಈ ಲೋಕದ ಪುರಗಳಿಗೆ ಅಧೀಶರಾಗಿರುವರು. ಹೀಗೆ ನಾಗ-ದಾನವ-ರಾಕ್ಷಸರೆಂಬ ವಿವಿಧ ಪ್ರಜೆಗಳ ಆವಾಸಗಳು ಇಲ್ಲ ಸೇರಿವೆ.

ದ್ವಿತೀಯೇಽಸ್ಮಿನ್ ತಲೇ ವಿಪ್ರಾಃ ಪಾಂಡುಭೌಮೋ ನ ಸಂಶಯಃ ।
ತೃತೀಯೇ ತು ತಲೇ ಖ್ಯಾತಂ ಪ್ರಹ್ಲಾದಸ್ಯ ಮಹಾತ್ಮನಃ ॥ ೨೫ ॥

ಅನುಹ್ರಾದಸ್ಯ ಚ ಪುರಂ ಪುರಮಗ್ನಿಮುಖಸ್ಯ ಚ ।
ತಾರಕಾಖ್ಯಸ್ಯ ಚ ಪುರಂ ಪುರಂ ತ್ರಿಶಿರಸಸ್ತಥಾ ॥ ೨೬ ॥

ಶಿಶುಮಾರಸ್ಯ ಚ ಪುರಂ ತ್ರಿಪುರಸ್ಯ ತಥಾ ಪುರಮ್ ।
ಪುರಂಜನಸ್ಯ ದೈತ್ಯಸ್ಯ ಹೃಷ್ಟಪುಷ್ಟಜನಾಕುಲಮ್ ॥ ೨೭ ॥

ಚ್ಯವನಸ್ಯ ತು ವಿಜ್ಞೇಯಂ ರಾಕ್ಷಸಸ್ಯ ಚ ಮಂದಿರಮ್ ।
ರಾಕ್ಷಸೇಂದ್ರಸ್ಯ ಚ ಪುರಂ ಕುಂಭಿಲಸ್ಯ ಖರಸ್ಯ ಚ ॥ ೨೮ ॥

ವಿರಾಧಸ್ಯ ಚ ಕ್ರೂರಸ್ಯ ಪುರಮುಲ್ಕಾಮುಖಸ್ಯ ಚ ।
ಹೇಮಕಸ್ಯ ಚ ನಾಗಸ್ಯ ತಥಾ ಪಾಂಡುರಕಸ್ಯ ಚ ॥ ೨೯ ॥

ಮಣಿನಾಗಸ್ಯ ಚ ಪುರಂ ಕಪಿಲಸ್ಯ ಚ ಮಂದಿರಮ್ ।
ನಂದಕಸ್ಯೋರಗಪತೇರ್ವಿಶಾಲಾಕ್ಷಸ್ಯ ಮಂದಿರಮ್ ॥ ೩೦ ॥

---

೨೫. ವಿಪ್ರರೆ! ಇವುಗಳಿಗೆ ಬಿಳಿಯ ಮೃತ್ತಿಕೆಯಿಂದ ಕೂಡಿದ ದ್ವಿತೀಯವಾದ ಸುತಲವೆಂಬ ಲೋಕವು ಆಧಾರವಾಗಿದೆ. ಈ ವಿಷಯವು ನಿಸ್ಸಂದೇಹವಾದುದು. ತೃತೀಯ ಲೋಕದಲ್ಲಿ ಮಹಾತ್ಮನಾದ ಪ್ರಹ್ಲಾದನ ನಗರವು ಖ್ಯಾತಿಯನ್ನು ಹೊಂದಿದೆ.

೨೬. ಅನುಹ್ರಾದ, ಅಗ್ನಿಮುಖ, ತಾರಕ, ತ್ರಿಶಿರಸ್ಸು ಎಂಬುವರು ಪ್ರಸಿದ್ಧರಾದ ರಾಕ್ಷಸೋತ್ತಮರು ಅವರ ನಗರಗಳು ಈ ತೃತೀಯ ಲೋಕದಲ್ಲಿ ಸೇರಿಕೊಂಡಿವೆ.

೨೭. ಶಿಶುಮಾರ, ತ್ರಿಪುರ, ಪುರಂಜನ ಮುಂತಾದ ರಾಕ್ಷಸರು ಶಾಸನಮಾಡುವ ಹೃಷ್ಟ-ಪುಷ್ಟ ಜನರಿಂದ ಶೋಭಿಸುವ ನಗರಗಳು ಇಲ್ಲಿ ರಾಜಿಸುವುವು.

೨೮. ಚ್ಯವನನೆಂಬ ರಾಕ್ಷಸನ ಮಂದಿರವೂ, ರಾಕ್ಷಸೇಂದ್ರ, ಕುಂಭಿಲ, ಖರ ಎಂಬುವರ ನಗರಗಳೂ ತೃತೀಯ ಲೋಕದ ನಗರ ಶ್ರೇಣಿಗೆ ಸೇರಿವೆ.

೨೯. ವಿರಾಧ, ಕ್ರೂರ, ಉಲ್ಕಾಮುಖರೆಂಬ ರಾಕ್ಷಸರ ನಗರಗಳೂ ಹೇಮಕ, ಪಾಂಡುರಕ ನಾಗಗಳ ಪುರಗಳೂ ಸಹ ಇಲ್ಲಿ ರಾಜಿಸುತ್ತವೆ.

೩೦. ಮತ್ತು ಈ ಲೋಕದಲ್ಲಿ ಮಣಿನಾಗ, ಕಪಿಲ, ನಂದಕ, ಉರಗಪತಿ,

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಮ್ ।
ತೃತೀಯೇಽಸ್ಮಿಂಸ್ತಲೇ ವಿಪ್ರಾ ನೀಲಭೌಮೇ ನ ಸಂಶಯಃ ॥ ೩೧ ॥

ಚತುರ್ಥೇ ದೈತ್ಯಸಿಹ್ಮಸ್ಯ ಕಾಲನೇಮೇರ್ಮಹಾತ್ಮನಃ ।
ಗಜಕರ್ಣಸ್ಯ ಚ ಪುರಂ ನಗರಂ ಕುಂಜರಸ್ಯ ಚ ॥ ೩೨ ॥

ರಾಕ್ಷಸೇಂದ್ರಸ್ಯ ಚ ಪುರಂ ಸುಮಾಲೇರ್ಬಹುವಿಸ್ತರಮ್ ।
ಮುಂಜಸ್ಯ ಲೋಕನಾಥಸ್ಯ ವೃಕವಕ್ತ್ರಸ್ಯ ಚಾಲಯಮ್ ॥ ೩೩ ॥

ಬಹುಯೋಜನವಿಸ್ತೀರ್ಣಂ ಬಹುಪಕ್ಷಿಸಮಾಕುಲಮ್ ।
ನಗರಂ ವೈನತೇಯಸ್ಯ ಚತುರ್ಥೇಽಸ್ಮಿನ್ ರಸಾತಲೇ ॥ ೩೪ ॥

ಪಂಚಮೇ ಶರ್ಕರಾಭೌಮೇ ಬಹುಯೋಜನವಿಸ್ತರಮ್ ।
ವಿರೋಚನಸ್ಯ ನಗರಂ ದೈತ್ಯಸಿಹ್ಮಸ್ಯ ಧೀಮತಃ ॥ ೩೫ ॥

---

ವಿಶಾಲಾಕ್ಷ ಎಂಬ ನಾಗಗಳು ನಗರಗಳನ್ನು ಮತ್ತು ಮಂದಿರಗಳನ್ನು ನಿರ್ಮಿಸಿಕೊಂಡಿರುವರು.

೩೧. ವಿಪ್ರರೆ! ನೀಲ ಭೂಮಿಯಿಂದ ಕೂಡಿದ ಈ ತೃತೀಯ ಪಾತಾಳಲೋಕದಲ್ಲಿ ಈ ರೀತಿಯಾಗಿ ಅಸಂಖ್ಯಾತಗಳಾದ ನಾಗ-ದಾನವ-ರಾಕ್ಷಸರ ಪುರಗಳು ಶೋಭಿಸುವುವು. ಇದರಲ್ಲಿ ಸಂಶಯವಿಲ್ಲ.

೩೨. ಚತುರ್ಥ ಲೋಕದಲ್ಲಿ ದೈತ್ಯಸಿಹ್ಮ, ಮಹಾತ್ಮನಾದ ಕಾಲನೇಮಿ, ಗಜಕರ್ಣ, ಕುಂಜರ ಎಂಬ ಪ್ರಸಿದ್ಧ ರಾಕ್ಷಸರ ಪುರಗಳು ಇವೆ.

೩೩. ರಾಕ್ಷಸೇಂದ್ರನಾದ ಸುಮಾಲಿಯೆಂಬುವನ ಅನೇಕ ವಿಸ್ತಾರವಿಂದ ಕೂಡಿದ ನಗರವೂ ಮುಂಜ, ಲೋಕನಾದ, ವೃಕವಕ್ತ್ರ ಎಂಬ ರಾಕ್ಷಸರ ಮಂದಿರಗಳೂ ಇಲ್ಲಿ ಸೇರಿವೆ,

೩೪. ಅನೇಕ ಯೋಜನ ಪರಿಮಾಣ ವಿಸ್ತಾರವುಳ್ಳ ಮತ್ತು ನಾನಾಜಾತಿಯ ಪಕ್ಷಿವೃಂದದಿಂದ ತುಂಬಿರುವ ವೈನತೇಯನ ನಗರವು ಈ ನಾಲ್ಕನೆಯ ರಸಾತಲದಲ್ಲಿ ಶೋಭಿಸುವುದು.

೩೫. ಪಂಚಮರಸಾತಲ ಲೋಕದ ಭೂಮಿಯು ಚಿಕ್ಕ ಕಲ್ಲು ರಾಶಿಯಿಂದ

ನೈರ್ಋತಸ್ಯಾಗ್ನಿಜಿಹ್ವಸ್ಯ ಹಿರಣ್ಯಾಕ್ಷಸ್ಯ ಚಾಲಯಮ್ ।
ಪುರಂ ಚ ವಿದ್ಯುಜ್ಜಿಹ್ವಸ್ಯ ರಾಕ್ಷಸೇಂದ್ರಸ್ಯ ಧೀಮತಃ ॥ ೩೬ ॥

ಮಹಾಮೇಘಸ್ಯ ಚ ಪುರಂ ರಾಕ್ಷಸೇಂದ್ರಸ್ಯ ಮಾಲಿನಃ ।
ಕಿರ್ಮೀರಸ್ಯ ಚ ನಾಗಸ್ಯ ಸ್ವಸ್ತಿಕಸ್ಯ ಜಯಸ್ಯ ಚ ॥ ೩೭ ॥

ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಮ್ ।
ಪಂಚಮೇಽಸ್ಮಿಂಸ್ತಲೇ ಜ್ಞೇಯಂ ಶರ್ಕರಾನಿಚಯೇ ಸದಾ ॥ ೩೮ ॥

ಷಷ್ಠೇ ತಲೇ ದೈತ್ಯಪತೇಃ ಕೇಸರೇರ್ನಗರೋತ್ತಮಮ್ ।
ಸುಪರ್ವಣಃ ಪುಲೋಮ್ನಶ್ಚ ನಗರಂ ಮಹಿಷಸ್ಯ ಚ ॥ ೩೯ ॥

ರಾಕ್ಷಸೇಂದ್ರಸ್ಯ ಚ ಪುರಂ ಸುರೋಷಸ್ಯ ಮಹಾತ್ಮನಃ ।
ತತ್ರಾಸ್ತೇ ಸುರಮಾಪುತ್ರಃ ಶತಶೀರ್ಷೋ ಮುದಾ ಯುತಃ ॥ ೪೦ ॥

---

ಪೂರ್ಣವಾದುದು. ಅಲ್ಲಿ ದೈತ್ಯಸಿಂಹನೂ, ಪ್ರಾಜ್ಞನೂ ಆದ ವಿರೋಚನನ ನಗರವು ಅನೇಕ ಯೋಜನ ಪರಿಮಾಣದಿಂದ ವ್ಯಾಪ್ತವಾಗಿದೆ.

೩೬. ನೈರ್ಋತ, ಅಗ್ನಿಜಿಹ್ವ ಹಿರಣ್ಯಾಕ್ಷರೆಂಬ ರಾಕ್ಷಸರ ಆಲಯಗಳೂ, ಬುದ್ಧಿಶಾಲಿಯಾದ ವಿದ್ಯುಜ್ಜಿಹ್ವನೆಂಬ ರಾಕ್ಷಸೇಂದ್ರನ ನಗರವೂ ಈ ಪಂಚಮಲೋಕದಲ್ಲಿ ಶೋಭಿಸುವುವು.

೩೭. ಮಹಾಮೇಘ, ರಾಕ್ಷಸೇಂದ್ರನಾದ ಮಾಲಿ, ಎಂಬ ರಾಕ್ಷಸರೂ ಕಿರ್ಮೀರ, ಸ್ವಸ್ತಿಕ, ಜಯ ಎಂಬ ನಾಗೇಂದ್ರರೂ ಸಹ ಈ ಲೋಕದಲ್ಲಿ ನಗರಗಳನ್ನು ಕಲ್ಪಿಸಿಕೊಂಡಿರುವರು.

೩೮. ಈ ರೀತಿಯಾಗಿ ಶರ್ಕರಾ (ಚಿಕ್ಕಕಲ್ಲು) ಮಯವಾದ ಈ ಪಂಚಮಲೋಕದಲ್ಲಿ ನಾಗ-ದಾನವ-ರಾಕ್ಷಸರ ಸಾವಿರಾರು ಪುರಗಳು ಇವೆ ಎಂದು ತಿಳಿಯಬೇಕು.

೩೯. ಆರನೆಯ ರಸಾತಲ ಲೋಕದಲ್ಲಿ ದೈತ್ಯಾಧಿಪತಿಯಾದ ಕೇಸರಿಯ ಶ್ರೇಷ್ಠವಾದ ಪುರವೂ ಸುಪರ್ವ, ಪುಲೋಮ, ಮಹಿಷರೆಂಬ ರಾಕ್ಷಸರ ನಗರಗಳೂ ಇವೆ.

೪೦. ರಾಕ್ಷಸಶ್ರೇಷ್ಠನೂ ಮಹಾತ್ಮನೂ ಆದ ಸುರೋಷನೆಂಬುವನ ಪುರವು

**ಮಹೇಂದ್ರಸ್ಯ ಸಖಾ ಶ್ರೀಮಾನ್ ವಾಸುಕಿರ್ನಾಮ ನಾಗರಾಟ್ ।**
**ಏವಂ ಪುರಸಹಸ್ರಾಣಿ ನಾಗದಾನವರಕ್ಷಸಾಮ್ ॥ ೪೧ ॥**

**ಷಷ್ಠೇ ತಲೇऽಸ್ಮಿನ್ ವಿಖ್ಯಾತೇ ಶಿಲಾಭೌಮೇ ರಸಾತಲೇ ।**
**ಸಪ್ತಮೇ ತು ತಲೇ ಜ್ಞೇಯಂ ಪಾತಾಲೇ ಸರ್ವಪಶ್ಚಿಮೇ ॥ ೪೨ ॥**

**ಪುರಂ ಬಲೇಃ ಪ್ರಮುದಿತಂ ನರನಾರೀಗಣಾಕುಲಮ್ ।**
**ಅಸುರಾಶೀವಿಷೈಃ ಪೂರ್ಣಂ ಸುಖಿತೈರ್ದೇವಶತ್ರುಭಿಃ ॥ ೪೩ ॥**

**ಮುಚುಕುಂದಸ್ಯ ದೈತ್ಯಸ್ಯ ತತ್ರೈವ ನಗರಂ ಮಹತ್ ।**
**ಅನೇಕೈರ್ದಿತಿಪುತ್ರಾಣಾಂ ಸಮುದೀರ್ಣೈರ್ಮಹಾಪುರೈಃ ॥ ೪೪ ॥**

**ತಥೈವ ನಾಗನಗರೈರ್ದ್ಯುತಿಮದ್ಭಿಃ ಸಹಸ್ರಶಃ ।**
**ದೈತ್ಯಾನಾಂ ದಾನವಾನಾಂ ಚ ಸಮುದೀರ್ಣೈರ್ಮಹಾಪುರೈಃ ॥ ೪೫ ॥**

---

ಈ ಶ್ರೇಣಿಯಲ್ಲಿ ಒಂದಾಗಿರುವುದು. ಅಲ್ಲಿ ಇಂದ್ರನ ಮಿತ್ರನೂ ಲಕ್ಷ್ಮೀಸಂಪನ್ನನೂ ಸಹಸ್ರ ಶಿರಗಳಿಂದ ಕೂಡಿದವನೂ ಮತ್ತು ಸುರಮೆಯ ಪುತ್ರನೂ ಆದ ವಾಸುಕಿ ಎಂಬ ಸರ್ಪರಾಜನು ವಾಸಮಾಡುವನು.

೪೧. ಈ ರೀತಿಯಾಗಿ ನಾಗ-ದಾನವ-ರಾಕ್ಷಸರೆಂಬ ವಿವಿಧ ಪ್ರಜೆಗಳ ನಗರಗಳು ಶಿಲಾಮಯ ಭೂಮಿಯಿಂದ ಕೂಡಿರುವ ಈ ವಿಖ್ಯಾತವಾದ ಷಷ್ಠ ರಸಾತಲ ಲೋಕದಲ್ಲಿ ಇರುವುವು.

೪೨. ಸಪ್ತ ಪಾತಾಲ ಲೋಕಗಳಲ್ಲಿ ಎಲ್ಲವುಗಳಿಗಿಂತಲೂ ಕಡೆಯದಾದ ಪಾತಾಲವೆಂಬ ಸಂಜ್ಞೆಯನ್ನು ಹೊಂದಿದ ಲೋಕವು ಏಳನೆಯದಾಗಿರುವುದು.

೪೩. ಈ ಲೋಕದಲ್ಲಿ ರಾಕ್ಷಸೇಂದ್ರನಾದ ಬಲಿ ಚಕ್ರವರ್ತಿಯ ನಗರವು ನರನಾರಿಯರ ಗಣದಿಂದ ಶೋಭಿಸುವುದೂ, ಬಹು ಆನಂದ ಮಗ್ನರಾದ ಮತ್ತು ದೇವಶತ್ರುಗಳಾದ ಅಸುರರಿಂದಲೂ ಸರ್ಪಗಳಿಂದಲೂ ಪೂರ್ಣವಾದುದೂ ಆಗಿದೆ.

೪೪. ಮುಚುಕುಂದನೆಂಬ ದೈತ್ಯನ ವಿಶಾಲವಾದ ನಗರವು ಅನೇಕ ದಿತಿಪುತ್ರರ ಸಮೃದ್ಧಿ ಅತಿಶಯಗಳಿಂದ ಕೂಡಿದ ಮಹಾ ನಗರಗಳ ಜೊತೆಯಲ್ಲಿ ಸೇರಿದೆ.

೪೫. ಹಾಗೆಯೇ ಕಾಂತಿಯಿಂದ ಮೆರೆಯುವ ಸಾವಿರಾರು ನಾಗರಾಜರ ನಗರಗಳಿಂದಲೂ ದೈತ್ಯ, ದಾನವರ ಸಮೃದ್ಧ ಮಹಾ ನಗರಗಳಿಂದಲೂ ಈ ಲೋಕವು ಪೂರ್ಣವಾಗಿರುವುದು.

ಉದೀರ್ಣೈ ರಾಕ್ಷಸಾವಾಸೈರನೇಕೈಶ್ಚ ಸಮಾಕುಲಮ್ ।
ಪಾತಾಲಾಂತೇ ಚ ವಿಪ್ರೇಂದ್ರಾ ವಿಸ್ತೀರ್ಣೇ ಬಹುಯೋಜನೇ ॥ ೪೬ ॥

ಆಸ್ತೇ ರಕ್ತಾರವಿಂದಾಕ್ಷೋ ಮಹಾತ್ಮಾ ಹ್ಯಜರಾಮರಃ ।
ಧೌತಶಂಖೋದರವಪುರ್ನೀಲವಾಸಾ ಮಹಾಬಲಃ ॥ ೪೭ ॥

ವಿಶಾಲಭೋಗೋ ದ್ಯುತಿಮಾಂಶ್ಚಿತ್ರಮಾಲ್ಯಧರೋ ಬಲೀ ।
ರುಕ್ಮಶೃಂಗಾವದಾತೇನ ದೀಪ್ತಾಸ್ಯೇನ ವಿರಾಜತಾ ॥ ೪೮ ॥

ಪ್ರಭುರ್ಮುಖಸಹಸ್ರೇಣ ಶೋಭತೇ ಚೈಕಕುಂಡಲೀ ।
ಸ ಜಿಹ್ವಾಮಾಲಯಾ ದೀಪ್ತೋ ಲೋಲಜ್ವಾಲಾನಲಾರ್ಚಿಷಾ ॥ ೪೯ ॥

---

೪೬. ಮತ್ತು ಉದ್ರಿಕ್ತವಾದ ಅನೇಕ ರಾಕ್ಷಸ ಮಂದಿರಗಳಿಂದ ತುಂಬಿಕೊಂಡಿರುವುದು. ದ್ವಿಜೋತ್ತಮರೆ! ಇಂತಹ ಪಾತಾಲ ಲೋಕದ ಅಂತವು ಬಹುಯೋಜನ ವಿಸ್ತಾರವಾಗಿರುವುದು.

೪೭. ಈ ಅಂತದಲ್ಲಿ ಸರ್ಪರಾಜನಾದ ಆದಿಶೇಷನು ವಾಸಮಾಡಿರುವನು. ಆ ಆದಿಶೇಷನು ಕೆಂಪು ಕಮಲದಂತೆ ಶೋಭಿಸುವ ಕಣ್ಣುಗಳುಳ್ಳವನೂ ಮಹಾತ್ಮನೂ ಜರಾಮರಣವರ್ಜಿತನೂ ಪರಿಶುದ್ಧವಾದ ಶಂಖದ ಮಧ್ಯಭಾಗದಂತೆ ಶುಭ್ರವಾದ ದೇಹವುಳ್ಳವನೂ, ನೀಲವರ್ಣದ ವಸ್ತ್ರವನ್ನು ಧರಿಸಿದವನೂ ಮತ್ತು ಮಹಾಬಲಿಷ್ಠನೂ ಆಗಿರುವನು.

೪೮. ಮತ್ತು ಆ ಆದಿಶೇಷನು ಇಲ್ಲಿ ವರ್ಣಿಸುವ ಅನೇಕ ಗುಣಗಳಿಂದ ಅಲಂಕೃತವಾಗಿರುವನು. ಯಾವುವೆಂದರೆ :—ಥಳಥಳಿಸುವ ಕಾಂತಿ, ವಿಚಿತ್ರವಾದ ಮಾಲ್ಯ, ಮಹಾಬಲ, ಸುವರ್ಣ ಶೃಂಗದಂತೆ ಶುಭ್ರವಾಗಿ ಹೊಳೆಯುವ ದೀಪ್ತವಾದ ಮುಖ ಇವುಗಳಿಂದ ಕೂಡಿರುವನು.

೪೯. ಸಹಸ್ರ ಮುಖಗಳು, ಅಮೂಲ್ಯವಾದ ಕುಂಡಲ, ಅಗ್ನಿಜ್ವಾಲೆಯಿಂಪ ಉರಿಯುತ್ತಿರುವ ನಾಲಿಗೆಗಳ ಪಂಕ್ತಿ ಇವುಗಳಿಂದ ಆ ಪ್ರಭುವಾದ ಸರ್ಪರಾಜನು ಪ್ರಕಾಶಿಸುವನು.

ಜ್ವಾಲಾಮಾಲಾಪರಿಕ್ಷಿಪ್ತಃ ಕೈಲಾಸ ಇವ ಲಕ್ಷ್ಯತೇ ।
ಸ ತು ನೇತ್ರಸಹಸ್ರೇಣ ದ್ವಿಗುಣೇನ ವಿರಾಜತಾ ॥ ೫೦ ॥

ಬಾಲಸೂರ್ಯಾಭಿತಾಮ್ರೇಣ ಶರೀರಸ್ನಿಗ್ಧಪಾಂಡುನಾ ।
ತಸ್ಯ ಕುಂದೇಂದುವರ್ಣಸ್ಯ ನೇತ್ರಮಾಲಾ ವಿರಾಜತೇ ॥ ೫೧ ॥

ತರುಣಾದಿತ್ಯಮಾಲೇವ ಶ್ವೇತಪರ್ವತಮೂರ್ಧನಿ ।
ವಿಕರಾಲೋಚ್ಛ್ರಿತತನುರ್ಲಕ್ಷ್ಯತೇ ಶಯನಾಸನೇ ॥ ೫೨ ॥

ವಿಸ್ತೀರ್ಣ ಇವ ಮೇದಿನ್ಯಾಂ ಸಹಸ್ರಶಿಖರೋ ಗಿರಿಃ ।
ಮಹಾನಾಗೈರ್ಮಹಾಭೋಗೈರ್ಮಹಾವಿಜ್ಞೈರ್ಮಹಾತ್ಮಭಿಃ ॥ ೫೩ ॥

ಉಪಾಸ್ಯತೇ ಮಹಾತೇಜಾ ಮಹಾನಾಗಪತಿಃ ಸ್ವಯಮ್ ।
ಸ ರಾಜಾ ಸರ್ವನಾಗಾನಾಂ ಶೇಷೋಽನಂತೋ ಮಹಾದ್ಯುತಿಃ ॥ ೫೪ ॥

---

೫೦. ಉದಯಿಸುತ್ತಿರುವ ಬಾಲಸೂರ್ಯನಂತೆ ಕೆಂಪಾಗಿ ಪ್ರಕಾಶಿಸುವ ದ್ವಿಸಹಸ್ರನೇತ್ರಗಳು ಸ್ನಿಗ್ಧವಾದ ಶುಕ್ಲವರ್ಣದ ದೇಹದಲ್ಲಿರುವುದರಿಂದ ಆದಿಶೇಷನು ಅಗ್ನಿಜ್ವಾಲೆಗಳಿಂದ ಸುತ್ತುವರಿಯಲ್ಪಟ್ಟಿದ್ದ ರಜತಮಯ ಕೈಲಾಸಪರ್ವತದಂತೆ ಶೋಭಿಸುವನು.

೫೧. ಮಲ್ಲಿಗೆ, ಚಂದ್ರಬಿಂಬ ಇವುಗಳಂತೆ ಸ್ವಚ್ಛವಾದ ಶುಭ್ರವರ್ಣದಿಂದ ಶೋಭಿಸುವ ಆದಿಶೇಷನ ಶರೀರದಲ್ಲಿ ಕೆಂಪುವರ್ಣದ ನೇತ್ರಪಂಕ್ತಿಯು ಬಿಳಿಯ ಪರ್ವತದ ಶಿಖರದಲ್ಲಿ ಬಾಲಸೂರ್ಯರ ಪಂಕ್ತಿಯಂತೆ ಪ್ರಕಾಶಿಸುತ್ತಲಿದೆ.

೫೨. ಶಯನರೂಪವಾದ ದೀರ್ಘಾಸನದಲ್ಲಿ ವಿಸ್ತಾರ ಔನ್ನತ್ಯದಿಂದ ಭಾರಿ ಪ್ರಮಾಣದಿಂದ ಪ್ರಕಾಶಿಸುವ ಆದಿಶೇಷನ ದೇಹವು ಭೂಮಿಯಲ್ಲಿ ಸಹಸ್ರ ಶಿಖರಗಳಿಂದ ಕೂಡಿದ ವಿಶಾಲವಾದ ಪರ್ವತದಂತೆ ತೋರುತ್ತಿದೆ.

೫೩. ಅಂತಹ ಆದಿಶೇಷನ ಸುತ್ತಲೂ ಮಹಾಜ್ಞಾನಿಗಳೂ ಮಹಾತ್ಮರೂ ಆದ ವಿಶಾಲ ದೇಹದಿಂದ ಕೂಡಿದ ಅನೇಕ ನಾಗೇಂದ್ರರು ಮಹಾ ತೇಜಸ್ವಿಯಾದ ನಾಗರಾಜನಾದ ಭಗವಂತನನ್ನು ಉಪಾಸನೆ ಮಾಡುತ್ತಿರುವರು.

೫೪. ಮಹಾಕಾಂತಿಜಾಲದಿಂದ ಆವೃತನಾಗಿರುವ ಆ ಅನಂತ ರೂಪಿಯಾದ ಆದಿಶೇಷನು ಸರ್ವ ಸರ್ಪಗಳಿಗೆ ಅಧಿಪತಿಯಾಗಿರುವನು.

**ಸಾ ವೈಷ್ಣವೀ ವ್ಯವಹೃತಿರ್ಮರ್ಯಾದಾ ಯಾ ವ್ಯವಸ್ಥಿತಾ ।**
**ಸಪ್ತೈವಮೇತೇ ಕಥಿತಾ ವ್ಯವಹಾರ್ಯಾ ರಸಾತಲಾಃ ॥ ೫೫ ॥**

**ದೇವಾಸುರಮಹಾನಾಗರಾಕ್ಷಸಾಧ್ಯುಷಿತಾಃ ಸದಾ ।**
**ಅತಃ ಪರಮನಾಲೋಕಮಗಮ್ಯಂ ಸಿದ್ಧಸಾಧುಭಿಃ ॥ ೫೬ ॥**

**ದೇವಾನಾಮಪ್ಯವಿದಿತಂ ವ್ಯವಹಾರವಿವಕ್ಷಯಾ ।**
**ಪೃಥ್ವ್ಯಂಬುವಹ್ನಿವಾಯೂನಾಂ ನಭಸಶ್ಚ ದ್ವಿಜೋತ್ತಮಾಃ ॥ ೫೭ ॥**

**ಮಹತ್ತ್ವಮೃಷಿಭಿಶ್ಚೈವಂ ವರ್ಣ್ಯತೇ ನಾತ್ರ ಸಂಶಯಃ ।**
**ಅತ ಊರ್ಧ್ವಂ ಪ್ರವಕ್ಷ್ಯಾಮಿ ಸೂರ್ಯಾಚಂದ್ರಮಸೋರ್ಗತಿಮ್ ॥ ೫೮ ॥**

**ಇತಿ ಶ್ರೀಬ್ರಹ್ಮಾಂಡಪುರಾಣೇ ವಿಂಶತಿತಮೋಽಧ್ಯಾಯಃ**

---

೫೫-೫೬. ಸಮಸ್ತ ಬ್ರಹ್ಮಾಂಡವನ್ನು ಧರಿಸಲು ವಿಷ್ಣುಪರಮಾತ್ಮನಿಂದ ಕಲ್ಪಿಸಲ್ಪಟ್ಟ ವ್ಯವಸ್ಥಿತವಾದ ಎಲ್ಲೆಯೆಂದು ಪ್ರಾಜ್ಞರಿಂದ ವ್ಯವಹರಿಸಲ್ಪಟ್ಟಿರುವುದು. ಈ ರೀತಿಯಿಂದ ನಿರಂತರವಾಗಿ ದೇವ-ಅಸುರ-ನಾಗ-ರಾಕ್ಷಸರು ನೆಲೆಸಿರುವ ವ್ಯವಹಾರಗೋಚರವಾದ ಸಪ್ತರಸಾತಲ ಲೋಕಗಳನ್ನು ನಿಮಗೆ ಹೇಳಿರುವೆನು. ಅಲ್ಲಿಂದ ಮುಂದೆ ಸಿದ್ಧರಿಂದಲೂ ಸಾಧುಗಳಿಂದಲೂ ಅಗಮ್ಯವಾದ ಸನ್ನಿವೇಶವು ಊಹಿಸಲು ಕೂಡ ಅಶಕ್ಯವಾದುದು, ಅಲ್ಲದೆ ವ್ಯವಹಾರದ ಮಾರ್ಗದಲ್ಲಿ ದೇವತೆಗಳಿಗೂ ವಿದಿತವಲ್ಲ.

೫೭-೫೮. ದ್ವಿಜೋತ್ತಮರೆ! ಪೃಥಿವೀ. ಜಲ, ಅಗ್ನಿ, ವಾಯು, ಮತ್ತು ಆಕಾಶಗಳೆಂಬ ಪಂಚಭೂತಗಳ ಮಹತ್ತ್ವವು ಋಷಿಗಳಿಂದ ಈ ರೀತಿಯಾಗಿ ವರ್ಣಿಸಲ್ಪಟ್ಟಿರುವುದು. ಈ ವಿಷಯದಲ್ಲಿ ಸಂದೇಹಕ್ಕೆ ಅವಕಾಶವಿಲ್ಲ. ಮುಂದೆ ಸೂರ್ಯ ಮತ್ತು ಚಂದ್ರರ ಗತಿ ವಿಶೇಷವನ್ನು ವರ್ಣಿಸುವೆನು.

ಬ್ರಹ್ಮಾಂಡ ಪುರಾಣದಲ್ಲಿ ಇಪ್ಪತ್ತನೆಯ ಅಧ್ಯಾಯವು ಸಮಾಪ್ತವು.

## ಏಕವಿಂಶತಿತಮೋಽಧ್ಯಾಯಃ

**ಸೂತ ಉವಾಚ**

**ಸೂರ್ಯಾಚಂದ್ರಮಸಾವೇತೌ ಭ್ರಮತೋ ಯಾವದೇವ ತು ।**
**ಪ್ರಕಾಶೈಸ್ತು ಪ್ರಭಾಭಿಸ್ತೌ ಮಂಡಲಾಭ್ಯಾಂ ಸಮುಚ್ಛ್ರಿತೌ ॥ ೧ ॥**

**ಸಪ್ತಾನಾಂ ತು ಸಮುದ್ರಾಣಾಂ ದ್ವೀಪಾನಾಂ ಸ ತು ವಿಸ್ತರಃ ।**
**ವಿಸ್ತರಾರ್ಧೇ ಪೃಥಿವ್ಯಾಸ್ತು ಭವೇದನ್ಯತ್ರ ಬಾಹ್ಯತಃ ॥ ೨ ॥**

**ಪರ್ಯಾಸಪರಿಮಾಣಂ ತು ಚಂದ್ರಾದಿತ್ಯೌ ಪ್ರಕಾಶತಃ ।**
**ಪರ್ಯಾಸಾತ್ಪಾರಿಮಾಣ್ಯೇನ ಭೂಮೇಸ್ತುಲ್ಯಂ ದಿವಂ ಸ್ಮೃತಮ್॥ ೩ ॥**

**ಅವತಿ ತ್ರೀನಿಮಾಂಲ್ಲೋಕಾನ್ ಯಸ್ಮಾತ್ಸೂರ್ಯಃ ಪರಿಭ್ರಮನ್ ।**
**ಅವಿಧಾತುಃ ಪ್ರಕಾಶಾಖ್ಯೋ ಹ್ಯವನಾತ್ಸ ರವಿಃ ಸ್ಮೃತಃ ॥ ೪ ॥**

---

ಸೂತಮುನಿಯು ಇಂತೆಂದನು :—

೧. ಕಾಂತಿ, ಮತ್ತು ತೇಜಃಕಿರಣಗಳಿಂದ ಕೂಡಿದ ಉನ್ನತವಾದ ಮಂಡಲಗಳಿಂದ ಶೋಭಿಸುವ ಚಂದ್ರ ಸೂರ್ಯರು ವಿಶಾಲವಾದ ಭೂಮಿಯ ವಿಸ್ತಾರವನ್ನೆಲ್ಲ ಸುತ್ತುತ್ತಲಿರುವರು.

೨. ಸಪ್ತಸಮುದ್ರಗಳು ಮತ್ತು ಸಪ್ತ ದ್ವೀಪಗಳ ವಿಸ್ತಾರವು ಪೃಥಿವಿಯಲ್ಲಿ ಅರ್ಧಭಾಗವನ್ನೆಲ್ಲ ವ್ಯಾಪಿಸಿರುವುದರಿಂದ ಸಮುದ್ರ ದ್ವೀಪಗಳಿಂದ ಬಾಹ್ಯವಾಗಿ ಮತ್ತೆ ಅರ್ಧಭೂಮಂಡಲಭಾಗವು ಇರುವುದು.

೩. ಚಂದ್ರ ಸೂರ್ಯರು ಈ ಭೂಮಿಯನ್ನು ಸುತ್ತುತ್ತ ತಮಗೆ ಅಭಿಮುಖವಾದ ಭಾಗವನ್ನು ಪ್ರಕಾಶಪಡಿಸುವರು. ಪ್ರಕಾಶವಾಗುವ ಭಾಗದ ಪರಿಮಾಣವನ್ನು ಪರ್ಯಾಸ ಪರಿಮಾಣವೆಂದು ಕರೆಯುವರು. ಆ ಪರ್ಯಾಸ ಪರಿಮಾಣದಿಂದ ಭೂಮಿಯೂ ದ್ಯುಲೋಕವೂ ಸಮಪರಿಮಾಣವಾಗಿರುವುವು.

೪. ಸೂರ್ಯನಿಗೆ ರವಿ ಎಂಬ ಪವಿತ್ರನಾಮವಿರುವುದು. ಅದು ಪ್ರಕಾಶವೆಂಬ ಅರ್ಥವನ್ನು ಬೋಧಿಸುವ "ಅವಿ" ಎಂಬ ಧಾತುವಿನಿಂದ ರೂಪಹೊಂದಿರುವುದು.

**ಅತಃ ಪರಂ ಪ್ರವಕ್ಷ್ಯಾಮಿ ಪ್ರಮಾಣಂ ಚಂದ್ರಸೂರ್ಯಯೋಃ ।**
**ಮಹಿತತ್ವಾನ್ಮಹೀಶಬ್ದೋಽಹ್ಯಸ್ಮಿನ್ ವರ್ಷೇ ನಿಪಾತ್ಯತೇ ॥ ೫ ॥**

**ಅಸ್ಯ ಭಾರತವರ್ಷಸ್ಯ ವಿಷ್ಕಂಭಾತ್ತುಲ್ಯವಿಸ್ತೃತಮ್ ।**
**ಮಂಡಲಂ ಭಾಸ್ಕರಸ್ಯಾಥ ಯೋಜನಾನಿ ನಿಬೋಧತ ॥ ೬ ॥**

**ನವಯೋಜನಸಾಹಸ್ರೋ ವಿಸ್ತಾರೋ ಭಾಸ್ಕರಸ್ಯ ತು ।**
**ವಿಸ್ತಾರಾತ್ತ್ರಿಗುಣಶ್ಚಾಸ್ಯ ಪರಿಣಾಹಸ್ತು ಮಂಡಲೇ ॥ ೭ ॥**

**ವಿಷ್ಕಂಭಮಂಡಲಾಚ್ಚೈವ ಭಾಸ್ಕರಾದ್ದ್ವಿಗುಣಃ ಶಶೀ ।**
**ಅಥ ಪೃಥಿವ್ಯಾ ವಕ್ಷ್ಯಾಮಿ ಪ್ರಮಾಣಂ ಯೋಜನೈಃ ಸಹ ॥ ೮ ॥**

**ಸಪ್ತದ್ವೀಪಸಮುದ್ರಾಯಾ ವಿಸ್ತಾರೋ ಮಂಡಲಂ ಚ ಯತ್ ।**
**ಇತ್ಯೇತದಿಹ ಸಂಖ್ಯಾತಂ ಪುರಾಣೇ ಪರಿಮಾಣತಃ ॥ ೯ ॥**

---

ಸೂರ್ಯನು ಪರಿಭ್ರಮಿಸುತ್ತಾ ತ್ರಿಲೋಕಗಳನ್ನು ಪ್ರಕಾಶಪಡಿಸುತ್ತಲಿರುವುದರಿಂದ " ರವಿ " ಎಂಬ ಅನ್ವರ್ಥವಾದ ಸಂಜ್ಞೆಯನ್ನು ಹೊಂದಿರುವನು.

೫. ಇನ್ನು ಮುಂದೆ ಚಂದ್ರಸೂರ್ಯರ ಮಂಡಲದ ಪರಿಮಾಣವನ್ನು ಹೇಳುವೆನು. ನಾವು ವಾಸಿಸುವ ಈ ವರ್ಷಕ್ಕೆ ಮಹೀ ಎಂಬ ಸಂಜ್ಞೆಯು ವಿಶಾಲ, ಪೂಜ್ಯವೆಂಬ ಅರ್ಥಾನುಸಾರದಿಂದ ಬಂದಿರುವುದು.

೬. ಈ ಭಾರತ ವರ್ಷದ ಸಮಷ್ಟಿ ಪರಿಮಾಣಕ್ಕೆ ತುಲ್ಯವಾಗಿ ಸೂರ್ಯ ಮಂಡಲದ ವಿಷ್ಕಂಭ ಪರಿಮಾಣವಿರುವುದು. ಅದರ ಯೋಜನ ಪರಿಮಾಣವನ್ನು ಕೇಳಿರಿ.

೭. ಸೂರ್ಯಮಂಡಲದ ವಿಸ್ತಾರವು ಒಂಭತ್ತು ಯೋಜನ ಪರಿಮಾಣದಿಂದ ಕೂಡಿರುವುದು. ಮತ್ತು ಸುತ್ತಳತೆಯೆಂಬ ಪರಿಣಾಹಪ್ರಮಾಣವು ವಿಸಾರಕ್ಕಿಂತ ತ್ರಿಗುಣಿತವಾಗಿದೆ.

೮. ಸೂರ್ಯಮಂಡಲದ ವಿಷ್ಕಂಭ ಪರಿಮಾಣಕ್ಕಿಂತ ಚಂದ್ರಮಂಡಲವು ದ್ವಿಗುಣವಾದ ಪರಿಮಾಣವುಳ್ಳದ್ದಾಗಿದೆ. ಇನ್ನು ಮುಂದೆ ಯೋಜನ ಸಂಖ್ಯೆಯಿಂದ ಸಕಲ ಭೂಮಂಡಲದ ಪ್ರಮಾಣವನ್ನು ಹೇಳುವೆನು.

೯. ಸಪ್ತ ದ್ವೀಪಗಳಿಂದಲೂ ಮತ್ತು ಸಪ್ತ ಸಮುದ್ರಗಳಿಂದಲೂ ಅಳೆಯಲ್ಪ

**ತದ್ವಕ್ಷ್ಯಾಮಿ ಸಮಾಖ್ಯಾಯ ಸಾಂಪ್ರತೈರಭಿಮಾನಿಭಿಃ ।**
**ಅಭಿಮಾನಿನೋ ವ್ಯತೀತಾ ಯೇ ತುಲ್ಯಾಸ್ತೇ ಸಾಂಪ್ರತೈಸ್ತ್ವಿಹ॥ ೧೦ ॥**

**ದೇವಾ ಯೇ ವೈ ವ್ಯತೀತಾಸ್ತು ರೂಪೈರ್ನಾಮಭಿರೇವ ಚ ।**
**ತಸ್ಮಾತ್ತು ಸಾಂಪ್ರತೈರ್ದೇವೈರ್ವಕ್ಷ್ಯಾಮಿ ವಸುಧಾತಲಮ್ ॥ ೧೧ ॥**

**ದಿವಸ್ತು ಸನ್ನಿವೇಶಂ ವೈ ಸಾಂಪ್ರತೈರೇವ ಕೃತ್ಸ್ನಶಃ ।**
**ಶತಾರ್ಧಕೋಟಿವಿಸ್ತಾರಾ ಪೃಥಿವೀ ಕೃತ್ಸ್ನಶಃ ಸ್ಮೃತಾ ॥ ೧೨ ॥**

**ತಸ್ಯಾ ಊರ್ಧ್ವಪ್ರಮಾಣೇನ ಮೇರೋರ್ಯಾವತ್ತು ಸಂಸ್ಥಿತಿಃ ।**
**ಪೃಥಿವ್ಯಾ ಹ್ಯರ್ಧವಿಸ್ತಾರೋ ಯೋಜನಾಗ್ರಾತ್ತ್ರ ಕೀರ್ತಿತಾಃ ॥ ೧೩ ॥**

---

ಟ್ಟಿರುವ (ಪರಿಚ್ಛಿನ್ನವಾದ) ವಿಸ್ತಾರ ಭಾಗದಿಂದ ಶೋಭಿತವಾದ ಪೃಥಿವಿಯನ್ನು ಪುರಾಣಜ್ಞರು ಪರಿಮಾಣದಿಂದ ಗಣನೆಮಾಡಿ ಭೂಮಂಡಲವೆಂದು ನಿರ್ಣಯಿಸಿ ರುವರು.

೧೦. ಆ ವರ್ತಮಾನಕಾಲದಲ್ಲಿರುವ ಆಯಾಯ ಅಭಿಮಾನಿ ಪುರುಷರಿಂದ ಕೂಡಿ ಆ ಭೂಮಂಡಲವನ್ನು ವಿವರಿಸಿ ಹೇಳುವೆನು. ಹಿಂದೆ ಕಳೆದುಹೋಗಿರುವ ಅಭಿಮಾನಿ ಪುರುಷರು ಈಗಿರುವ ಅಭಿಮಾನಿಗಳಿಗೆ ತುಲ್ಯರೇ ಆಗಿದ್ದರು.

೧೧. ವಿವಿಧ ನಾಮ-ರೂಪಗಳನ್ನು ಹೊಂದಿ ದೇವಾಧಿಕಾರಸ್ಥಾನದಲ್ಲಿ ಅತೀತರಾಗಿರುವ ದೇವತೆಗಳಿಗೆ ಹೋಲಿಸಿ ಈಗಿನ ನಾಮರೂಪಗಳಿಂದ ಕೂಡಿದ ದೇವತೆಗಳೊಂದಿಗೆ ಭೂಗೋಳವನ್ನು ಉಪದೇಶಿಸುವೆನು.

೧೨. ಹಾಗೆಯೇ ಅಧಿಕಾರವನ್ನು ಹೊಂದಿರುವ ವರ್ತಮಾನ ಪ್ರಭುಗಳಿಂದ ಕೂಡಿದ ದ್ಯುಲೋಕದ ಸನ್ನಿವೇಶವನ್ನೂ ಸಂಪೂರ್ಣವಾಗಿ ಹೇಳುವೆನು. ಸಂಪೂರ್ಣ ಪೃಥಿವಿಯು ಐವತ್ತು ಕೋಟಿಯೋಜನ ವಿಸ್ತಾರವುಳ್ಳದ್ದಾಗಿದೆ.

೧೩. ಮೇರುಪರ್ವತದ ಶಿಖರದ ಮೇಲು ಭಾಗದಲ್ಲಿ ಪೃಥಿವಿಯು ವ್ಯಾಪಿಸಿ ರುವ ಪ್ರದೇಶದ ಪರಿಮಾಣವು ಸಾರ್ಧಯೋಜನ ವಿಸ್ತಾರವೆಂದು ಹೇಳಲ್ಪಟ್ಟಿದೆ. ಮೇರು ಪರ್ವತದ ಪ್ರತಿಯೊಂದು ದಿಕ್ಕಿನಲ್ಲಿಯೂ ವ್ಯಾಪಿಸಿರುವ ಪ್ರದೇಶವು ಒಂದು ಕೋಟಿ ಪರಿಮಾಣದಿಂದ ಕೂಡಿರುವುದು.

ಮೇರೋರ್ಮಧ್ಯಾತ್ಪ್ರತಿದಿಶಂ ಕೋಟಿರೇಕಾ ತು ಸಾ ಸ್ಮೃತಾ।
ತಥಾ ಶತಸಹಸ್ರಾಣಾಮೇಕೋನನವತಿಃ ಪುನಃ ॥ ೧೪ ॥

ಪಂಚಾಶತ್ತು ಸಹಸ್ರಾಣಿ ಪೃಥಿವ್ಯರ್ಧಸ್ಯ ಮಂಡಲಮ್।
ಗಣಿತಂ ಯೋಜನಾಗ್ರಾತ್ತು ಕೋಟ್ಯಸ್ತ್ವೇಕಾದಶ ಸ್ಮೃತಾಃ ॥ ೧೫ ॥

ತಥಾ ಶತಸಹಸ್ರಾಣಿ ಸಪ್ತತ್ರಿಂಶಾಧಿಕಾನಿ ತು।
ಇತ್ಯೇತದಿಹ ಸಂಖ್ಯಾತಂ ಪೃಥಿವ್ಯಂತಸ್ಯ ಮಂಡಲಮ್ ॥ ೧೬ ॥

ತಾರಕಾಸನ್ನಿವೇಶಸ್ಯ ದಿವಿ ಯಾವಚ್ಚ ಮಂಡಲಮ್।
ಪರ್ಯಾಸಸನ್ನಿವೇಶಶ್ಚ ಭೂಮೇರ್ಯಾವತ್ತು ಮಂಡಲಮ್ ॥ ೧೭ ॥

ಪರ್ಯಾಸಪರಿಮಾಣೇನ ಭೂಮೇಸ್ತುಲ್ಯಂ ದಿವಂ ಸ್ಮೃತಮ್।
ಸಪ್ತಾನಾಮಪಿ ದ್ವೀಪಾನಾಮೇತತ್ಸ್ಥಾನಂ ಪ್ರಕೀರ್ತಿತಮ್ ॥ ೧೮ ॥

೧೪-೧೫. ಮತ್ತು ಪೃಥಿವಿಯ ಗೋಳದ ಅರ್ಧಭಾಗವು ಎರಡು ಲಕ್ಷದ ಮೂವತ್ತೊಂಭತ್ತು ಸಹಸ್ರಯೋಜನ ವಿಸ್ತಾರವನ್ನು ಹೊಂದಿವೆಯೆಂದು ಗಣಿತ ಬಲದಿಂದ ಪ್ರಾಜ್ಞರು ಕಂಡುಹಿಡಿದಿರುವರು. ಸಕಲ ದಿಕ್ಕುಗಳಲ್ಲಿಯೂ ವ್ಯಾಪಿಸಿರುವ ಪೃಥಿವೀ ಮಂಡಲದ ಒಟ್ಟು ಪರಿಮಾಣವು ಹನ್ನೊಂದು ಕೋಟಿ ಸಂಖ್ಯೆಯಿಂದಿರುವುದು.

೧೬. ಮತ್ತು ಪೃಥಿವೀ ಮಂಡಲದ ಅಂತಭಾಗದ ಪರಿಮಾಣವು ಒಂದು ಲಕ್ಷದ ಮೂವತ್ತೇಳು ಸಾವಿರ ಸಂಖ್ಯೆಯಿಂದಿರುವುದು, ಎಂಬುದಾಗಿ ಪೃಥಿವಿಯ ಪೂರ್ತಿ ಪರಿಮಾಣವನ್ನು ಶಾಸ್ತ್ರದಲ್ಲಿ ಗಣಿಸಿರುವರು.

೧೭. ಆಕಾಶದಲ್ಲಿರುವ ನಕ್ಷತ್ರಮಂಡಲ ಸನ್ನಿವೇಶವು ಯಾವ ಪರಿಮಾಣದಿಂದಿರುವುದೋ ಅದರ ಪ್ರತಿಬಿಂಬದಂತೆ ಅದಕ್ಕೆ ಸಮಾನ ಪರಿಮಾಣವು ಭೂಮಿಯ ಮಂಡಲಕ್ಕೂ ಇರುವುದಾಗಿದೆ. ಆದುದರಿಂದ ಒಂದರಿಂದ ಸಮಾನವಾದ ಮತ್ತೊಂದು ಪರಿಮಾಣವು ಪರ್ಯಾಸವೆಂದು ಪ್ರಸಿದ್ಧವಾಗಿರುವುದರಿಂದ ಭೂಮಂಡಲವು ಪರ್ಯಾಸ ಸನ್ನಿವೇಶವನ್ನು ಹೊಂದಿರುವುದು.

೧೮. ಆ ಪರ್ಯಾಸ ಪರಿಮಾಣದಿಂದ ಭೂಮಿಗೆ ತುಲ್ಯವಾಗಿ ದ್ಯುಮಂಡಲವು ಇರುವುದು. ಇಂತಹ ಭೂಮಂಡಲವು ಸಪ್ತ ದ್ವೀಪಗಳಿಗೆ ಸ್ಥಾನವಾಗಿರುವುದು.

**ಪರ್ಯಾಯಪರಿಮಾಣೇನ ಮಂಡಲಾನುಗತೇನ ಚ ।**
**ಉಪರ್ಯುಪರಿ ಲೋಕಾನಾಂ ಛತ್ರವತ್ಪರಿಮಂಡಲಮ್ ॥ ೧೯ ॥**

**ಸಂಸ್ಥಿತಿರ್ವಿಹಿತಾ ಸರ್ವಾ ಯೇಷು ತಿಷ್ಠಂತಿ ಜಂತವಃ ।**
**ಏತದಂಡಕಪಾಲಸ್ಯ ಪ್ರಮಾಣಂ ಪರಿಕೀರ್ತಿತಮ್ ॥ ೨೦ ॥**

**ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ ।**
**ಭೂರ್ಲೋಕಶ್ಚ ಭುವರ್ಲೋಕಸ್ತೃತೀಯಃ ಸ್ವರಿತಿ ಸ್ಮೃತಃ ॥ ೨೧ ॥**

**ಮಹರ್ಲೋಕೋ ಜನಶ್ಚೈವ ತಪಃ ಸತ್ಯಂ ಚ ಸಪ್ತಮಮ್ ।**
**ಏತೇ ಸಪ್ತ ಕೃತಾ ಲೋಕಾಶ್ಛತ್ರಾಕಾರಾ ವ್ಯವಸ್ಥಿತಾಃ ॥ ೨೨ ॥**

---

೧೯. ಈ ಸಮಸ್ತ ಬ್ರಹ್ಮಾಂಡದಲ್ಲಿ ಇರುವ ಸಮಸ್ತ ಲೋಕಗಳು ಮಂಡಲಾಕಾರವನ್ನು ಅನುಸರಿಸಿ ಪರ್ಯಾಯ ಪರಿಮಾಣದಿಂದ ಛತ್ರದ ಆಕಾರವನ್ನು ಧರಿಸಿ ಒಂದರ ಮೇಲುಭಾಗದಲ್ಲಿ ಮತ್ತೊಂದು ಲೋಕವೆಂಬ ಕ್ರಮದಿಂದ ಮಂಡಲಾಕಾರದಿಂದ ಇರುತ್ತವೆ.

೨೦. ಸಮಸ್ತ ವಿಧದ ಜಂತುಗಳ ವಾಸಕ್ಕೆ ಆಧಾರ ಭೂಮಿಯಾದ ವಿಧಿನಿರ್ಮಿತವಾದ ಈ ಸಂಸ್ಥಾನವನ್ನು ಬ್ರಹ್ಮಾಂಡಕಪಾಲದ ಪರಿಮಾಣವನ್ನಾಗಿ ಹೇಳುವರು. ಮೇಲೆ ವಿವರಿಸಿರುವ ಸಪ್ತ ದ್ವೀಪಗಳಿಂದ ಪರಿಪೂರ್ಣವಾದ ಭೂಮಿಯೂ ಪ್ರತ್ಯಕ್ಷಸಿದ್ಧವಾದ ಈ ಲೋಕಗಳೂ ಭೂಲೋಕ, ಭುವರ್ಲೋಕ, ಮತ್ತು ಮೂರನೆಯದಾದ ಸ್ವರ್ಲೋಕವೂ ಕೂಡ ಬ್ರಹ್ಮಾಂಡದಲ್ಲಿ ಅಂತರ್ಗತವಾಗಿವೆ.

೨೧. ಮತ್ತು ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸಪ್ತಮವಾದ ಸತ್ಯಲೋಕವೂ ಸೇರಿ ಹಿಂದೆ ಹೇಳಿದ ಭೂರ್ಲೋಕಾದಿ ಸಪ್ತಲೋಕಗಳೂ ಛತ್ರದ ಆಕಾರದಂತೆ ನಿಂತಿವೆ.

೨೨. ಪ್ರತಿಯೊಂದು ಲೋಕಗಳೂ ಸೂಕ್ಷ್ಮವಾದ ತಮ್ಮ ತಮ್ಮ ಆವರಣಗಳಿಂದ ಧರಿಸಲ್ಪಡುತ್ತ, ಒಂದಕ್ಕಿಂತ ದಶಗುಣ ಅಧಿಕ ಭಾಗದಿಂದ ಕೂಡಿದ ಪ್ರಕೃತಿಗಳಿಂದ ಸಂಪೂರ್ಣವಾಗಿವೆ.

**ಸ್ವಕೈರಾವರಣೈಃ ಸೂಕ್ಷ್ಮೈರ್ಧಾರ್ಯಮಾಣಾಃ ಪೃಥಕ್ ಪೃಥಕ್ ।**
**ದಶಭಾಗಾಧಿಕಾಭಿಶ್ಚ ತಾಭಿಃ ಪ್ರಕೃತಿಭಿರ್ಬಹಿಃ ॥ ೨೩ ॥**

**ಪೂರ್ಯಮಾಣಾ ವಿಶೇಷೈಶ್ಚ ಸಮುತ್ಪನ್ನೈಃ ಪರಸ್ಪರಾತ್ ।**
**ಅಸ್ಯಾಂಡಸ್ಯ ಸಮಂತಾಚ್ಚ ಸನ್ನಿವಿಷ್ಟೋ ಘನೋದಧಿಃ ॥ ೨೪ ॥**

**ಪೃಥಿವ್ಯಾ ಮಂಡಲಂ ಕೃತ್ಸ್ನಂ ಘನತೋಯೇನ ಧಾರ್ಯತೇ ।**
**ಘನೋದಧಿಃ ಪರೇಣಾಥ ಧಾರ್ಯತೇ ಘನತೇಜಸಾ ॥ ೨೫ ॥**

**ಬಾಹ್ಯತೋ ಘನತೇಜಶ್ಚ ತಿರ್ಯಗೂರ್ಧ್ವಂ ತು ಮಂಡಲಮ್ ।**
**ಸಮಂತಾದ್ಘನವಾತೇನ ಧಾರ್ಯಮಾಣಂ ಪ್ರತಿಷ್ಠಿತಮ್ ॥ ೨೬ ॥**

**ಘನವಾತಂ ತಥಾಕಾಶಮಾಕಾಶಂ ಚ ಮಹಾತ್ಮನಾ ।**
**ಭೂತಾದಿನಾ ವೃತಂ ಸರ್ವಂ ಭೂತಾದಿರ್ಮಹತಾ ವೃತಃ ॥ ೨೭ ॥**

---

೨೩-೨೪. ಮತ್ತು ಪರಸ್ಪರವಾಗಿ ಭೇದವನ್ನು ತೋರ್ಪಡಿಸುವ ಅಸಾಧಾರಣ ಧರ್ಮಗಳಿಂದ ಪರಿಪೂರ್ಣವಾಗಿವೆ. ಲೋಕಮಯವಾದ ಈ ಬ್ರಹ್ಮಾಂಡದ ಹೊರ ವಲಯವಲ್ಲಿ ಸುತ್ತಲೂ ಘನೋದಧಿಯು ಸ್ಥಿತಿಯನ್ನು ಹೊಂದಿದೆ.

೨೫. ಪಂಚಭೂತಗಳಲ್ಲಿ ಒಂದಾದ ಪೃಥಿವಿಯ ಸಂಪೂರ್ಣ ಮಂಡಲವು ಘನೋದಧಿಯೆಂಬ ವಿಶಾಲವಾದ ಜಲರಾಶಿಯಿಂದ ಧರಿಸಲ್ಪಟ್ಟಿದೆ. ಅಂತಹ ಘನೋದಧಿಯು ಅದರ ಸುತ್ತಲೂ ಇರುವ ಘನತೇಜಸ್ಸಿನಿಂದ ವ್ಯಾಪಿಸಲ್ಪಟ್ಟಿದೆ.

೨೬. ಘನತೇಜಸ್ಸು ಜಲರಾಶಿಯ ಬಾಹ್ಯ ಮತ್ತು ಅಂತರ ಪ್ರದೇಶಗಳಲ್ಲ ಮಂಡಲಾಕಾರವಾಗಿರುವುದು. ಅಂತಹ ತೇಜೋಮಂಡಲವು ಘನವಾದ ವಾತಮಂಡಲದಿಂದ ಆವರಿಸಿ ಧರಿಸಲ್ಪಟ್ಟಿರುವುದು.

೨೭. ಘನವಾತಮಂಡಲವು ಮಹಾಕಾಶದಿಂದಲೂ, ಮಹಾಕಾಶವು ಅದಕ್ಕಿಂತಲೂ ವ್ಯಾಪಕವಾದ ಭೂತಾದಿ (ಅಹಂಕಾರ) ತತ್ತ್ವದಿಂದಲೂ, ಭೂತಾದಿ ತತ್ತ್ವವು ಮಹತ್ತತ್ತ್ವದಿಂದಲೂ ಆವರಿಸಲ್ಪಟ್ಟಿರುವುದು.

ವೃತೋ ಮಹಾನನಂತೇನ ಪ್ರಧಾನೇನಾವ್ಯಯಾತ್ಮನಾ ।
ಪುರಾಣಿ ಲೋಕಪಾಲಾನಾಂ ಪ್ರವಕ್ಷ್ಯಾಮಿ ಯಥಾಕ್ರಮಮ್ ॥ ೨೮ ॥

ಜ್ಯೋತಿರ್ಗಣಪ್ರಚಾರಸ್ಯ ಪ್ರಮಾಣಪರಿಸಿದ್ಧಯೇ ।
ಮೇರೋಃ ಪ್ರಾಚ್ಯಾಂ ದಿಶಿ ತಥಾ ಮಾನಸಸ್ಯೈವ ಮೂರ್ಧನಿ ॥ ೨೯ ॥

ವಸ್ವೌಕಸಾರಾ ಮಾಹೇಂದ್ರೀ ಪುರೀ ಹೇಮಪರಿಷ್ಕೃತಾ ।
ದಕ್ಷಿಣೇನ ಪುನರ್ಮೇರೋರ್ಮಾನಸಸ್ಯೈವ ಮೂರ್ಧನಿ ॥ ೩೦ ॥

ವೈವಸ್ವತೋ ನಿವಸತಿ ಯಮಃ ಸಂಯಮನೇ ಪುರೇ ।
ಪ್ರತೀಚ್ಯಾಂ ತು ಪುನರ್ಮೇರೋರ್ಮಾನಸಸ್ಯೈವ ಮೂರ್ಧನಿ ॥ ೩೧ ॥

ಸುಖಾ ನಾಮ ಪುರೀ ರಮ್ಯಾ ವರುಣಸ್ಯಾಪಿ ಧೀಮತಃ ।
ವರುಣೋ ಯಾದಸಾಂ ನಾಥಸ್ಸುಖಾಖ್ಯೇ ವಸತೇ ಪುರೇ ॥ ೩೨ ॥

---

೨೮. ಮಹತ್ತತ್ತ್ವವು ಆದ್ಯಂತರಹಿತವೂ, ವ್ಯಾಪಕವೂ ಆದ ಪ್ರಧಾನದಿಂದ ಆವರಿಸಲ್ಪಟ್ಟಿರುವುದು. ಇನ್ನು ಮುಂದೆ ಲೋಕಪಾಲಕರ ನಗರಗಳನ್ನು ಆಯಾಯ ವಿಶೇಷಗಳೊಂದಿಗೆ ಕ್ರಮವಾಗಿ ವಿವರಿಸುವೆನು.

೨೯. ಲೋಕಪಾಲಕರ ನಗರಸನ್ನಿವೇಶವನ್ನು ವರ್ಣಿಸುವುದು ತೇಜೋ ಮಂಡಲದ ಪ್ರಚಾರದ ಪರಿಮಾಣವನ್ನು ತಿಳಿಸಲು ಉಪಯೋಗವಾಗುವುದು.

೩೦. ಮೇರುಪರ್ವತದ ಪೂರ್ವಭಾಗದಲ್ಲಿರುವ ಮಾನಸಪರ್ವತದ ಶಿಖರದಲ್ಲಿ ಸುವರ್ಣದಿಂದ ಅಲಂಕರಿಸಲ್ಪಟ್ಟ, ಧನಸಮೃದ್ಧಿಗೆ ಮುಖ್ಯ ಗಣಿಯಂತೆ ಇರುವ, ಮತ್ತು ಇಂದ್ರನ ಆಧಿಪತ್ಯಕ್ಕೆ ಒಳಪಟ್ಟಿರುವ ನಗರಿಯು ಇರುವುದು.

೩೧-೩೨. ಅದೇ ರೀತಿಯಲ್ಲಿ ಮೇರುಪರ್ವತದ ದಕ್ಷಿಣ ದಿಕ್ಕಿನಲ್ಲಿರುವ ಮಾನಸ ಪರ್ವತ ಶಿಖರದಲ್ಲಿರುವ ಸಂಯಮನವೆಂಬ ಹೆಸರಿನ ನಗರದಲ್ಲಿ ಸೂರ್ಯ ಪುತ್ರನಾದ ಯಮದೇವನು ವಾಸಮಾಡುತ್ತಲಿರುವನು. ಮತ್ತು ಮೇರುಪರ್ವತದ ಪಶ್ಚಿಮಭಾಗ ದಲ್ಲಿರುವ ಮಾನಸಪರ್ವತದ ಅಗ್ರದಲ್ಲಿ ರಮಣೀಯವೂ ಪ್ರಾಜ್ಞನಾದ ವರುಣದೇವನ ವಾಸಭೂಮಿಯೂ ಆದ ಸುಖಾ ಎಂಬ ಒಂದು ನಗರಿಯು ಇರುವುದು. ಆ ಸುಖಾ ಎಂಬ ನಗರದಲ್ಲಿ ಜಲಜಂತುಗಳಿಗೆ ಅಧಿಪತಿಯಾದ ವರುಣದೇವನು ವಾಸಮಾಡುತ್ತ ಲಿರುವನು.

ದಿಶ್ಯುತ್ತರಸ್ಯಾಂ ಮೇರೋಸ್ತು ಮಾನಸಸ್ಯೈವ ಮೂರ್ಧನಿ ।
ತುಲ್ಯಾ ಮಹೇಂದ್ರಪುರ್ಯಾಸ್ತು ಸೋಮಸ್ಯಾಪಿ ವಿಭಾ ಪುರೀ ॥ ೩೩ ॥

ಮಾನಸೋತ್ತರಪೃಷ್ಠೇ ತು ಲೋಕಪಾಲಾಶ್ಚತುರ್ದಿಶಮ್ ।
ಸ್ಥಿತಾ ಧರ್ಮವ್ಯವಸ್ಥಾರ್ಥಂ ಲೋಕಸಂರಕ್ಷಣಾಯ ಚ ॥ ೩೪ ॥

ಲೋಕಪಾಲೋಪರಿಷ್ಟಾತ್ತು ಸರ್ವತೋ ದಕ್ಷಿಣಾಯನೇ ।
ಕಾಷ್ಠಾಗತಸ್ಯ ಸೂರ್ಯಸ್ಯ ಗತಿರ್ಯಾ ತಾಂ ನಿಬೋಧತ ॥ ೩೫ ॥

ದಕ್ಷಿಣೋಪಕ್ರಮೇ ಸೂರ್ಯಃ ಕ್ಷಿಪ್ತೇಷುರಿವ ಸರ್ಪತಿ ।
ಜ್ಯೋತಿಷಾಂ ಚಕ್ರಮಾದಾಯ ಸತತಂ ಪರಿಗಚ್ಛತಿ ॥ ೩೬ ॥

ಮಧ್ಯಗಶ್ಚಾಮರಾವತ್ಯಾಂ ಯದಾ ಭವತಿ ಭಾಸ್ಕರಃ ।
ವೈವಸ್ವತೇ ಸಂಯಮನೇ ಉದಯಸ್ತತ್ರ ದೃಶ್ಯತೇ ॥ ೩೭ ॥

---

೩೩. ಸುಮೇರು ಪರ್ವತದ ಉತ್ತರ ಭಾಗದಲ್ಲಿ ಮಾನಸಪರ್ವತದ ಶಿಖರದಲ್ಲಿ ಯಕ್ಷರಾಜನಾದ ಕುಬೇರ (ಸೋಮ) ನ ವಿಭಾ ಎಂಬ ನಗರವು ಇಂದ್ರನ ಅಮರಾವತಿಯಂತೆ ಸಮೃದ್ಧಿಯಿಂದ ಕೂಡಿರುವುದು.

೩೪. ಈ ರೀತಿಯಾಗಿ ಮಾನಸಪರ್ವತದ ಮೇಲುಭಾಗದ ಪಾರ್ಶ್ವದಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಜನ ಲೋಕಪಾಲಕರು ಧರ್ಮವನ್ನು ಮತ್ತು ಲೋಕಗಳನ್ನು ರಕ್ಷಿಸುವುದಕ್ಕಾಗಿ ಲೋಕಪಾಲಾಧಿಕಾರವನ್ನು ಹೊಂದಿರುವರು.

೩೫. ದಕ್ಷಿಣಾಯನದ ಸಮಯವನ್ನು ಪ್ರಾರಂಭಿಸಿ ಎಲ್ಲ ಲೋಕಪಾಲಕರ ಸ್ಥಾನಕ್ಕಿಂತಲೂ ಊರ್ಧ್ವಭಾಗದಲ್ಲಿ ದಿಗಂತವನ್ನು ಹೊಂದಿ ಸೂರ್ಯನು ಸಂಚಾರಮಾಡುವ ಕ್ರಮವನ್ನು ತಿಳಿಯಿರಿ.

೩೬. ದಕ್ಷಿಣ ದಿಕ್ಕಿನಲ್ಲಿ ಉಪಕ್ರಮಿಸಿ ಸೂರ್ಯನು ಗುರಿಯನ್ನು ಉದ್ದೇಶಿಸಿ ವೇಗದಿಂದ ಪ್ರಯೋಗಮಾಡಿರುವ ಬಾಣದಂತೆ ಸಮಸ್ತ ಚಕ್ರಾಕಾರವಾದ ತೇಜೋಗಣವನ್ನು ತನ್ನ ಅಧೀನಪಡಿಸಿಕೊಂಡು ವೇಗದಿಂದ ಯಾವಾಗಲೂ ಭ್ರಮಿಸುತ್ತಲಿರುವನು.

೩೭. ಹೀಗೆ ಸಂಚರಿಸುತ್ತಲಿರುವ ಸೂರ್ಯನು ಅಮರಾವತಿಯೆಂಬ ಇಂದ್ರನ

**ಸುಖಾಯಾಮರ್ಧರಾತ್ರಂ ಸ್ಯಾತ್ ವಿಭಾಯಾಮಸ್ತಮೇತಿ ಚ ।**
**ವೈವಸ್ವತೇ ಸಂಯಮನೇ ಮಧ್ಯಗಃ ಸ್ಯಾದ್ರವಿರ್ಯದಾ ॥**
**ಸುಖಾಯಾಮಥ ವಾರುಣ್ಯಾಮುತ್ತಿಷ್ಠನ್ ಸ ತು ದೃಶ್ಯತೇ ॥ ೩೮ ॥**

**ವಿಭಾಯಾಮರ್ಧರಾತ್ರಂ ಸ್ಯಾತ್ ಮಾಹೇಂದ್ರ್ಯಾಮಸ್ತಮೇತಿ ಚ ।**
**ಯದಾ ದಕ್ಷಿಣಪೂರ್ವೇಷಾಮಪರಾಹ್ಣೋ ವಿಧೀಯತೇ ॥ ೩೯ ॥**

**ದಕ್ಷಿಣಾಪರದೇಶ್ಯಾನಾಂ ಪೂರ್ವಾಹ್ಣಃ ಪರಿಕೀರ್ತಿತಃ ।**
**ತೇಷಾಮಪರರಾತ್ರಶ್ಚ ಯೇ ಜನಾ ಉತ್ತರಾಪರೇ ॥ ೪೦ ॥**

**ದೇಶಾ ಉತ್ತರಪೂರ್ವಾ ಯೇ ಪೂರ್ವರಾತ್ರಸ್ತು ತಾನ್ ಪ್ರತಿ**
**ಏವಮೇವೋತ್ತರೇಷ್ವರ್ಕೋ ಭುವನೇಷು ವಿರಾಜತೇ ॥ ೪೧ ॥**

---

ನಗರದಲ್ಲಿ ಬಂದು ಮಧ್ಯಾಹ್ನ ಸೂರ್ಯನಂತೆ ಕಾಣಿಸುವ ಸಮಯದಲ್ಲಿ ಸೂರ್ಯ ಪುತ್ರನಾದ ಯಮದೇವನ ಸಂಯಮನ ನಗರದಲ್ಲಿ ಉದಯವು ಕಾಣಿಸುವುದು.

೩೮. ಮತ್ತು ಆಗ ಸುಖಾ ಎಂಬ ಪಶ್ಚಿಮ ದಿಕ್ಕಿನಲ್ಲಿರುವ ವರುಣನ ನಗರ ದಲ್ಲಿ ಅರ್ಧ ರಾತ್ರ ಸಮಯವೂ ವಿಭಾ ಎಂಬ ಉತ್ತರ ದಿಕ್ಕಿನಲ್ಲಿರುವ ಸೋಮರಾಜನ ನಗರದಲ್ಲಿ ಅಸ್ತಮಯವೂ ಕಾಣಿಸುವುದು. ಅದೇ ಕ್ರಮದಿಂದ ವೈವಸ್ವತರಾಜನ ಸಂಯಮನ ನಗರದಲ್ಲಿ ದಿನಮಧ್ಯವನ್ನು ಹೊಂದಲಾಗಿ ವರುಣನ ಸುಖಾನಗರದಲ್ಲಿ ಉದಯಿಸುವಂತೆ ಕಾಣುವನು.

೩೯. ಮತ್ತು ವಿಭಾನಗರದಲ್ಲಿ ಅರ್ಧರಾತ್ರ ಸಮಯವೂ ಮಹೇಂದ್ರನಗರದಲ್ಲಿ ಅಸ್ತಮಯ ಸಮಯವೂ ಕಾಣಿಸುವುವು. ಹಾಗೆಯೇ ಸೂರ್ಯನು ಸಂಚರಿಸುವಾಗ ದಕ್ಷಿಣಪೂರ್ವಗಳ ಮಧ್ಯ ದೇಶದಲ್ಲಿ ಒಂದು ಸಲ ಅಪರಾಹ್ಣ ಸಮಯವು ಪ್ರಾಪ್ತ ವಾಗುವುದು.

೪೦. ಆಗ ಅದಕ್ಕೆ ಪಾರ್ಶ್ವ ಭಾಗವಾದ ದಕ್ಷಿಣ ಪಶ್ಚಿಮ ದಿಕ್ಕುಗಳ ಮಧ್ಯ ಭಾಗಗಳಲ್ಲಿ ಪೂರ್ವಾಹ್ಣವು ಕಾಣಿಸುವುದು. ಹಾಗೆಯೇ ಉತ್ತರ ಪಶ್ಚಿಮ ದಿಕ್ಕುಗಳ ಮಧ್ಯವಾಸಿಗಳಿಗೆ ಅಪರ ರಾತ್ರಿ ಸಮಯವು ಕಾಣಿಸುವುದು.

೪೧. ಉತ್ತರ ಪೂರ್ವದಿಕ್ಕುಗಳ ನಡುವೆ ಇರುವ ದೇಶವಾಸಿಗಳಿಗೆ ಪೂರ್ವ

ಸುಖಾಯಾಮಥ ವಾರುಣ್ಯಾಂ ಮಧ್ಯಾಹ್ನೇ ಚಾರ್ಯಮಾ ಯದಾ ।
ವಿಭಾಯಾಂ ಸೋಮಪುರ್ಯಾಂ ವಾ ಉತ್ತಿಷ್ಠತಿ ವಿಭಾವಸುಃ ॥ ೪೨ ॥

ರಾತ್ರ್ಯರ್ಧಂ ಚಾಮರಾವತ್ಯಾಮಸ್ತಮೇತಿ ಯಮಸ್ಯ ಚ ।
ಸೋಮಪುರ್ಯಾಂ ವಿಭಾಯಾಂ ತು ಮಧ್ಯಾಹ್ನೇ ಸ್ಯಾದ್ದಿವಾಕರಃ ॥ ೪೩॥

ಮಹೇಂದ್ರಸ್ಯಾಮರಾವತ್ಯಾಂ ಸೂರ್ಯ ಉತ್ತಿಷ್ಠತೇ ತದಾ ।
ಅರ್ಧರಾತ್ರಂ ಸಂಯಮನೇ ವಾರುಣ್ಯಾಮಸ್ತಮೇತಿ ಚ ॥ ೪೪ ॥

ಸ ಶೀಘ್ರಮೇವ ಪರ್ಯೇತಿ ಭಾಸ್ಕರೋಽಲಾತಚಕ್ರವತ್ ।
ಭ್ರಮನ್ ವೈ ಭ್ರಮಮಾಣಾನಿ ಋಕ್ಷಾಣಿ ಚರತೇ ರವಿಃ ॥ ೪೫ ॥

ಏವಂ ಚತುರ್ಷು ಪಾರ್ಶ್ವೇಷು ದಕ್ಷಿಣಾಂ ತೇನ ಸರ್ಪತಿ ।
ಉದಯಾಸ್ತಮಯೇ ಚಾಸಾವುತ್ತಿಷ್ಠತಿ ಪುನಃ ಪುನಃ ॥ ೪೬ ॥

---

ರಾತ್ರಿಯಂತೆ ಕಾಣಿಸುವುದು. ಹೀಗೆ ಉತ್ತರೋತ್ತರ ಭಾವದಿಂದಿರುವ ಸಕಲ ಭುವನ ಗಳಲ್ಲಿಯೂ ಸೂರ್ಯನು ಪ್ರಕಾಶಿಸುವನು.

೪೨. ವರುಣರಾಜನ ಸುಖಾ ರಾಜಧಾನಿಯಲ್ಲಿ ಸೂರ್ಯನು ಮಧ್ಯಾಹ್ನಾವಸ್ಥೆ ಯನ್ನು ಹೊಂದಿರಲು ವಿಭಾ ನಗರದಲ್ಲಿ ಉದಯಿಸುವಂತೆ ತೋರುವನು.

೪೩. ಆಗ ಅಮರಾವತೀ ದೇಶನಿವಾಸಿಗಳಿಗೆ ಅರ್ಧರಾತ್ರ ಸಮಯವೂ ಯಮ ನಗರವಾಸಿಗಳಿಗೆ ಅಸ್ತಸಮಯವೂ ತೋರುವುವು. ಒಂದು ಸಮಯದಲ್ಲಿ ಸೂರ್ಯನು ಸೋಮರಾಜನ ವಿಭಾನಗರದಲ್ಲಿ ದಿನಮಧ್ಯವನ್ನು ಹೊಂದುವನು.

೪೪. ಆಗ ಇಂದ್ರನ ಅಮರಾವತಿಯಲ್ಲಿ ಸೂರ್ಯನು ಉದಯಿಸುತ್ತಿರು ವಂತೆಯೂ ಸಂಯಮನದಲ್ಲಿ ಅರ್ಧರಾತ್ರಿಯ ಸಮಯವು ಬಂದಿರುವಂತೆಯೂ ವರುಣನ ಪಶ್ಚಿಮ ದಿಕ್ಕಿನಲ್ಲಿ ಅಸ್ತಮಯವನ್ನು ಹೊಂದುವಂತೆಯೂ ತೋರುವುದು.

೪೫. ಹೀಗೆ ಮಂಡಲಾಕಾರವಾಗಿ ಸುತ್ತಿಸಲ್ಪಟ್ಟ ಕೊಳ್ಳಿಯಂತೆ ತೇಜೋಮಯ ನಾಗಿ ತೋರುವ ಸೂರ್ಯನು ಭ್ರಮಣಮಾಡುತ್ತಲಿದ್ದ ನಕ್ಷತ್ರಗಳನ್ನು ಸುತ್ತಿಕೊಂಡು ವೇಗವಾಗಿ ಭ್ರಮಿಸುತ್ತ ಸಂಚರಿಸುವನು.

೪೬. ಸೂರ್ಯನು ಮೇಲೆ ಹೇಳಿರುವಂತೆ ದಕ್ಷಿಣ ಭಾಗದಿಂದ ಪ್ರಾರಂಭಿಸಿ

ಪೂರ್ವಾಹ್ಣೇ ಚಾಪರಾಹ್ಣೇ ಚ ದ್ವೌ ದ್ವೌ ದೇವಾಲಯೌ ತು ಸಃ ।
ತಪತ್ಯರ್ಕಶ್ಚ ಮಧ್ಯಾಹ್ನೇ ತೈರೇವ ಚ ಸ್ವರಶ್ಮಿಭಿಃ ॥ ೪೭ ॥

ಉದಿತೋ ವರ್ಧಮಾನಾಭಿರಾಮಧ್ಯಾಹ್ನಂ ತಪನ್ ರವಿಃ ।
ಅತಃ ಪರಂ ಹ್ರಸಂತೀಭಿರ್ಗೋಭಿರಸ್ತಂ ನಿಗಚ್ಛತಿ ॥ ೪೮ ॥

ಉದಯಾಸ್ತಮಯಾಭ್ಯಾಂ ಚ ಸ್ಮೃತೇ ಪೂರ್ವಾಪರೇ ದಿಶೌ ।
ಯಾವತ್ಪುರಸ್ತಾತ್ತಪತಿ ತಾವತ್ಪೃಷ್ಠೇಽಥ ಪಾರ್ಶ್ವಯೋಃ ॥ ೪೯ ॥

ಯತ್ರೋದ್ಯನ್ ದೃಶ್ಯತೇ ಸೂರ್ಯಸ್ತೇಷಾಂ ಸ ಉದಯಃ ಸ್ಮೃತಃ ।
ಪ್ರಣಾಶಂ ಗಚ್ಛತೇ ಯತ್ರ ತೇಷಾಮಸ್ತಃ ಸ ಉಚ್ಯತೇ ॥ ೫೦ ॥

---

ನಾಲ್ಕು ಪಾರ್ಶ್ವಗಳಲ್ಲಿಯೂ ಸಂಚರಿಸುತ್ತಿರುವನು. ಆದರೆ ಅಸ್ತಮಯವನ್ನೂ ಪುನಃ ಪುನಃ ಉದಯವನ್ನೂ ಹೊಂದುತ್ತಲಿರುವಂತೆ ಆಯಾಯ ದೇಶದ ಪ್ರಜೆಗಳಿಗೆ ತೋರಿ ಬರುವನು.

೪೭. ತನ್ನ ಸಂಚಾರಕಾಲದಲ್ಲಿ ಉದಯದಿಂದ ಅಸ್ತದವರೆಗೆ ಸಂಭವಿಸುವ ಪೂರ್ವಾಹ್ಣ, ಅಪರಾಹ್ಣಗಳಲ್ಲಿ ಎರಡು ಲೋಕಪಾಲಕರ ಆಲಯಗಳನ್ನು ತನ್ನ ಕಿರಣಗಳ ಪುಂಜದಿಂದ ತಪಿಸಿ ಮಧ್ಯಾಹ್ನದಲ್ಲಿ ಅದೇ ತನ್ನ ಕಿರಣಗಳಿಂದ ಮತ್ತೊಂದು ಲೋಕಪಾಲ ನಗರವನ್ನು ತಪಿಸುತ್ತಿರುವನು.

೪೮. ಉದಯದಿಂದ ಮೊದಲಾಗಿ ಮಧ್ಯಾಹ್ನದವರೆಗೆ ವೃದ್ಧಿ ಹೊಂದುತ್ತಲಿರುವ ಕಿರಣಗಳಿಂದ ತಪಿಸುತ್ತಲೂ ಮಧ್ಯಾಹ್ನದಿಂದ ಸಾಯಾಹ್ನದವರೆಗೆ ಕ್ರಮವಾಗಿ ಹ್ರಾಸವನ್ನು ಹೊಂದುತ್ತಲೂ ಕಡೆಗೆ ಅಸ್ತಮಯವನ್ನು ಹೊಂದುವನು.

೪೯. ಈ ಸೂರ್ಯನ ಉದಯ-ಮತ್ತು ಅಸ್ತಗಳ ಚಿಹ್ನದಿಂದ ಪೂರ್ವಪಶ್ಚಿಮಗಳೆಂದು ಎರಡು ದಿಕ್ಕುಗಳು ವಿಭಾಗವನ್ನು ಹೊಂದಿವೆ. ಯಾವಾಗ ಮುಂಭಾಗದಲ್ಲಿ ಉದಯಿಸಿ ತಪಿಸುವನೋ ಆಗ ಮುಂಭಾಗವನ್ನು ಪೂರ್ವದಿಕ್ಕೆಂತಲೂ, ಹಿಂಭಾಗ ಮತ್ತು ಪಾರ್ಶ್ವಗಳಲ್ಲಿರುವ ದಿಕ್ಕುಗಳನ್ನು ಪಶ್ಚಿಮ ಹಾಗು ದಕ್ಷಿಣೋತ್ತರಗಳೆಂತಲೂ ತಿಳಿಯಬೇಕು.

೫೦. ಯಾವ ಸ್ಥಳದಲ್ಲಿ ಸೂರ್ಯನು ಉದಯಿಸುತ್ತಿರುವಂತೆ ತೋರುವನೋ ಆ ಭಾಗವು ಉದಯಪರ್ವತವೆಂದು ಸ್ಮರಿಸಲ್ಪಟ್ಟಿದೆ. ಸೂರ್ಯನು ಕಣ್ಣಿಗೆ ಕಾಣದಂತೆ ಅದರ್ಶನವನ್ನು ಹೊಂದುವ ದೇಶವು ಅಸ್ತಾಚಲವೆಂದು ಕರೆಯಲ್ಪಡುವುದು.

ಸರ್ವೇಷಾಮುತ್ತರೇ ಮೇರುರ್ಲೋಕಾಲೋಕಶ್ಚ ದಕ್ಷಿಣೇ ।
ವಿದೂರಭಾವಾದರ್ಕಸ್ಯ ಭೂಮಿಲೇಖಾವೃತಸ್ಯ ಚ ॥ ೫೧ ॥

ಲೀಯಂತೇ ರಶ್ಮಯೋ ಯಸ್ಮಾತ್ತೇನ ರಾತ್ರೌ ನ ದೃಶ್ಯತೇ ।
ಗ್ರಹನಕ್ಷತ್ರಸೋಮಾನಾಂ ದರ್ಶನಂ ಭಾಸ್ಕರಸ್ಯ ಚ ॥ ೫೨ ॥

ಉಚ್ಛ್ರಯಸ್ಯ ಪ್ರಮಾಣೇನ ಜ್ಞೇಯಮಸ್ತಮಥೋದಯಮ್ ।
ಶುಕ್ಲಚ್ಛಾಯೋಽಗ್ನಿರಾಪಶ್ಚ ಕೃಷ್ಣಚ್ಛಾಯಾ ಚ ಮೇದಿನೀ ॥ ೫೩ ॥

ವಿದೂರಭಾವಾದರ್ಕಸ್ಯ ಹ್ಯುದ್ಯತೋಽಪಿ ವಿರಶ್ಮಿತಾ ।
ರಕ್ತಭಾವೋ ವಿರಶ್ಮಿತ್ವಾದ್ರಕ್ತತ್ವಾಚ್ಚಾಪ್ಯನುಷ್ಣತಾ ॥ ೫೪ ॥

ಲೇಖಾಯಾಮಾಸ್ಥಿತಃ ಸೂರ್ಯೋ ಯತ್ರ ಯತ್ರ ಚ ದೃಶ್ಯತೇ ।
ಊರ್ಧ್ವಂ ಶತಸಹಸ್ರಂ ತು ಯೋಜನಾನಾಂ ಸ ದೃಶ್ಯತೇ ॥ ೫೫ ॥

---

೫೧. ಸಮಸ್ತ ವರ್ಷಗಳಿಗೆ ಉತ್ತರದಲ್ಲಿ ಮೇರುಪರ್ವತವೂ ದಕ್ಷಿಣದಲ್ಲಿ ಲೋಕಾಲೋಕಪರ್ವತವೂ ಇರುವುದು. ಸೂರ್ಯನು ತನ್ನ ಗತಿವಶದಿಂದ ಭೂಮಿಯ ಲೇಖೆಯಿಂದ ಆವೃತನಾಗಿ ಒಂದೊಂದು ವೇಳೆಯಲ್ಲಿ ಬಹುದೂರವರ್ತಿ ಯಾಗುವನು.

೫೨. ಆಗ ಸೂರ್ಯನ ಕಿರಣಗಳು ದೂರತ್ವದೋಷದಿಂದ ಲಯಹೊಂದು ವುವು. ಆದುದರಿಂದ ರಾತ್ರಿಯಲ್ಲಿ ಸೂರ್ಯನು ಕಾಣಿಸುವುದಿಲ್ಲ. ಸೂರ್ಯನಂತೆ ಇತರ ಗ್ರಹ, ನಕ್ಷತ್ರ, ಚಂದ್ರರಿಗೂ ಕೂಡ ಉದಯಾಸ್ತಮಯಗಳು ಸಂಭವಿಸುವುವು.

೫೩. ಅದರ ತೇಜೋಮಂಡಲವು ಸುತ್ತುತ್ತಲಿರುವಾಗ ಅದರ ಆರೋಹಣ ಅವರೋಹಣಗಳಲ್ಲಿ ಆಗುವ ಔನ್ನತ್ಯದ ತಾರತಮ್ಯ ಪರಿಮಾಣದಿಂದ ಆ ಉದಯಾಸ್ತ ಮಯಗಳು ಕಾಣಿಸುವುವು. ಸೂರ್ಯನಂತೆ ಅಗ್ನಿ ಮತ್ತು ಜಲಗಳು ಶುಕ್ಲಕಾಂತಿ ಯಿಂದ ಪ್ರಕಾಶಿಸುವುವು. ಭೂಮಿಯು ಕಪ್ಪಾದ ಕಾಂತಿಯುಳ್ಳದ್ದಾಗಿದೆ.

೫೪. ಸೂರ್ಯನು ಉದಯಿಸುತ್ತಿರುವಾಗ ಬಹುದೂರವಿರುವುದರಿಂದ ಕಿರಣ ಗಳು ಅಲ್ಪವಾಗಿರುವುವು. ಮತ್ತು ರಶ್ಮಿಗಳ ನ್ಯೂನತೆಯಿಂದ ರಕ್ತವರ್ಣವೂ, ಆ ರಕ್ತವರ್ಣದ ಸಂಬಂಧದಿಂದ ಉಷ್ಣತಾಪದ ನ್ಯೂನತೆಯೂ ಉಂಟಾಗುವುವು.

೫೫. ಸೂರ್ಯನ ಗತಿಯ ಮಾರ್ಗವನ್ನು ಅವಲಂಬಿಸಿ ಲೇಖೆಗಳಲ್ಲಿರುವಾಗ

**ಪ್ರಭಾ ಹಿ ಸೌರೀ ಪಾದೇನ ಹ್ಯಸ್ತಂ ಗಚ್ಛತಿ ಭಾಸ್ಕರೇ ।**
**ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ಪ್ರಕಾಶತೇ ॥ ೫೬ ॥**

**ಉದಿತೇ ಹಿ ಪುನಃ ಸೂರ್ಯೇ ಹ್ಯೌಷ್ಣ್ಯಮಾಗ್ನೇಯಮಾವಿಶೇತ್ ।**
**ಸಂಯುಕ್ತೋ ವಹ್ನಿನಾ ಸೂರ್ಯಸ್ತಪತೇ ತು ತತೋ ದಿವಾ ॥ ೫೭ ॥**

**ಪ್ರಾಕಾಶ್ಯಂ ಚ ತಥೌಷ್ಣ್ಯಂ ಚ ಸೌರಾಗ್ನೇಯೇ ಚ ತೇಜಸೀ ।**
**ಪರಸ್ಪರಾನುಪ್ರವೇಶಾತ್ ದೀಪ್ಯೇತೇ ತು ದಿವಾನಿಶಮ್ ॥ ೫೮ ॥**

**ಉತ್ತರೇ ಚೈವ ಭೂಮ್ಯರ್ಧೇ ತಥಾ ತಸ್ಮಿಂಶ್ಚ ದಕ್ಷಿಣೇ ।**
**ಉತ್ತಿಷ್ಠತಿ ತಥಾ ಸೂರ್ಯೇ ರಾತ್ರಿರಾವಿಶತೇ ತ್ವಪಃ ॥ ೫೯ ॥**

---

ಎಲ್ಲೆಲ್ಲಿ ಸೂರ್ಯಬಿಂಬವು ಪ್ರತ್ಯಕ್ಷ ಗೋಚರವಾದರೂ ಒಂದು ಲಕ್ಷಯೋಜನಾಗ್ರದಲ್ಲಿಯೇ ಕಾಣಿಸುವುದು.

೫೬. ಇಂತಹ ಸೂರ್ಯನ ಪ್ರಭೆಯು ಸೂರ್ಯಾಸ್ತಮಯ ಸಮಯದ ಮೊದಲುಗೊಂಡು ರಾತ್ರಿಯಲ್ಲಿ ತನ್ನ ಪಾದಾಂಶದಿಂದ ಅಗ್ನಿಯನ್ನು ಪ್ರವೇಶಿಸುವುದು. ಆದುದರಿಂದ ಅಗ್ನಿಯು ರಾತ್ರಿವೇಳೆಯಲ್ಲಿ ಬಹಳ ದೂರದಿಂದಲೂ ಕಾಣಿಸುವುದು.

೫೭. ಮತ್ತೆ ಸೂರ್ಯನು ಉದಯಿಸಿದ ಕೂಡಲೆ ಅಗ್ನಿಯ ಉಷ್ಣಗುಣವು ಸೂರ್ಯನಲ್ಲಿ ಪ್ರವೇಶಮಾಡುವುದು. ಆಗ ಸೂರ್ಯನು ಅಗ್ನಿಯಿಂದ ಸಂಯುಕ್ತನಾಗಿ ಹಗಲಿನಲ್ಲಿ ಉಷ್ಣಗುಣದಿಂದಲೂ ತಪಿಸುವನು.

೫೮. ಸೂರ್ಯನಲ್ಲಿ ಪ್ರಕಾಶಗುಣವೂ, ಅಗ್ನಿಯಲ್ಲಿ ಉಷ್ಣಗುಣವೂ ಅಸಾಧಾರಣವಾದ ತೇಜೋರೂಪದಿಂದ ಇರುವುವು. ಈ ಎರಡು ಅಂಶಗಳೂ ಸೇರಿಕೊಂಡು ಹಗಲು ಮತ್ತು ರಾತ್ರಿಯವೇಳೆಗಳಲ್ಲಿ ಸೂರ್ಯ ಮತ್ತು ಅಗ್ನಿ ರೂಪವಾದ ತೇಜಸ್ಸುಗಳು ಬೆಳಗುವುವು. ಸೂರ್ಯನಲ್ಲಿ ಅಗ್ನಿಯ ಅಂಶವೂ ಅಗ್ನಿಯಲ್ಲಿ ಸೂರ್ಯನ ಅಂಶವೂ ಇರುವುದರಿಂದ ಯಾವಾಗಲೂ ಎರಡು ಅಂಶಗಳ ಗುಣಾನುಭವವೂ ಉಂಟಾಗುವುದು.

೫೯. ಭೂಮಿಗೋಳದ ಉತ್ತರಾರ್ಧದಲ್ಲಿಯಾಗಲಿ ಸೂರ್ಯನು ಉದಯಿಸುತ್ತಲಿರುವಾಗ ದಕ್ಷಿಣಾರ್ಧದಲ್ಲಿ ರಾತ್ರಿಯು ನೀರನ್ನು ಪ್ರವೇಶಿಸುವುದು. ಹಾಗೆಯೇ ದಕ್ಷಿಣಾರ್ಧದಲ್ಲಿ ಸೂರ್ಯನ ಉದಯವಾದರೆ ಮತ್ತೊಂದು ಅರ್ಧಭಾಗದಲ್ಲಿ ರಾತ್ರಿಯು ಜಲಾಂತರ್ಗತವಾಗುವುದು.

**ತಸ್ಮಾಚ್ಛೀತಾ ಭವಂತ್ಯಾಪೋ ದಿವಾ ರಾತ್ರಿಪ್ರವೇಶನಾತ್ ।**
**ಅಸ್ತಂ ಯಾತಿ ಪುನಃ ಸೂರ್ಯೇ ದಿನಮಾವಿಶತೇ ತ್ವಪಃ ॥ ೬೦ ॥**

**ತಸ್ಮಾದುಷ್ಣಾ ಭವಂತ್ಯಾಪೋ ನಕ್ತಮಹ್ನಃ ಪ್ರವೇಶನಾತ್ ।**
**ಏತೇನ ಕ್ರಮಯೋಗೇನ ಭೂಮ್ಯರ್ಧೇ ದಕ್ಷಿಣೋತ್ತರೇ ॥ ೬೧ ॥**

**ಉದಯಾಸ್ತಮನೇಽರ್ಕಸ್ಯ ಅಹೋರಾತ್ರಂ ವಿಶತ್ಯಪಃ ।**
**ದಿನಂ ಸೂರ್ಯಪ್ರಕಾಶಾಖ್ಯಂ ತಾಮಸೀ ರಾತ್ರಿರುಚ್ಯತೇ ॥ ೬೨ ॥**

**ತಸ್ಮಾದ್ವ್ಯವಸ್ಥಿತಾ ರಾತ್ರಿಃ ಸೂರ್ಯಾಪೇಕ್ಷಮಹಃ ಸ್ಮೃತಮ್ ।**
**ಏವಂ ಪುಷ್ಕರಮಧ್ಯೇನ ಯದಾ ಸರ್ಪತಿ ಭಾಸ್ಕರಃ ॥ ೬೩ ॥**

**ಅಂಶಾಂಶಕಂ ತು ಮೇದಿನ್ಯಾಂ ಮುಹೂರ್ತೇನೈವ ಗಚ್ಛತಿ ।**
**ಯೋಜನಾಗ್ರಾನ್ಮುಹೂರ್ತಸ್ಯ ಇಹ ಸಂಖ್ಯಾಂ ನಿಬೋಧತ ॥ ೬೪ ॥**

---

೬೦. ರಾತ್ರಿಯು ನೀರನ್ನು ಪ್ರವೇಶಮಾಡಿರುವುದರಿಂದ ನೀರು ಹಗಲಿನಲ್ಲಿ ತಣ್ಣಗಿರುವುದು. ಸೂರ್ಯನು ಅಸ್ತಮಯ ಹೊಂದಲಾಗಿ ಹಗಲು ಸಮಯವು ನೀರನ್ನು ಪ್ರವೇಶಿಸುವುದು.

೬೧. ರಾತ್ರಿಕಾಲದಲ್ಲಿ ಅಹಸ್ಸು ಜಲವನ್ನು ಪ್ರವೇಶಮಾಡಿರುವುದರಿಂದ ಜಲವು ಉಷ್ಣವಾಗಿರುವುದು. ಭೂಮಿಯ ದಕ್ಷಿಣ ಮತ್ತು ಉತ್ತರಾರ್ಧಗಳಲ್ಲಿ ಈ ಕ್ರಮ ದಿಂದ ಸೂರ್ಯನ ಉದಯಾಸ್ತಗಳು ಸಂಭವಿಸುವುವು.

೬೨. ಹೀಗೆ ಸೂರ್ಯನ ಉದಯ ಮತ್ತು ಅಸ್ತಗಳನ್ನು ಅನುಸರಿಸಿ ರಾತ್ರಿ ಮತ್ತು ಅಹಸ್ಸು, ನೀರನ್ನು ಪ್ರವೇಶಿಸುವುವು. ದಿನವು ಸೂರ್ಯನ ಪ್ರಕಾಶದಿಂದ ಬೆಳಗುತ್ತಲಿರುವುದರಿಂದ ಸೂರ್ಯನ ಪ್ರಕಾಶಮಯವಾದುದು. ರಾತ್ರಿಯು ಅಪ್ರ ಕಾಶಮಯವಾದ ತಮೋಮಯವಾದುದು.

೬೩. ಆದ್ದರಿಂದ ಸೂರ್ಯನ ಅಸ್ತಮಯದಲ್ಲಿ ರಾತ್ರಿಯು ಸ್ಥಿತಿಯನ್ನು ಹೊಂದುವುದು. ಸೂರ್ಯನು ಉದಯಿಸಿರುವಾಗ ಅವನ ಅಪೇಕ್ಷೆಯಿಂದ ಕೂಡಿ ಅಹಃಕಾಲವು ಸ್ಥಿತಿಯನ್ನು ಹೊಂದುವುದು. ಹೀಗೆ ಆಕಾಶದ ಮಧ್ಯಮಾರ್ಗದಿಂದ ಸೂರ್ಯನು ಸಂಚರಿಸುವನು.

೬೪. ಭೂಮಿ ಮಂಡಲದ ದೃಷ್ಟಿಯಿಂದ ಸೂರ್ಯನ ಒಂದು ಅಂಶದಿಂದ ಮತ್ತೊಂದು ಅಂಶಕದ ಸಂಚಾರವು ಮುಹೂರ್ತಪರಿಮಾಣ ಕ್ರಮದಿಂದ ಆಗುವುದು.

ಪೂರ್ಣೇ ಶತಸಹಸ್ರಾಣಾಮೇಕತ್ರಿಂಶಾಧಿಕಂ ಸ್ಮೃತಮ್ ।
ಪಂಚಾಶತ್ತು ತಥಾನ್ಯಾನಿ ಸಹಸ್ರಾಣ್ಯಧಿಕಾನಿ ಚ ॥ ೬೫ ॥

ಮೌಹೂರ್ತಿಕೀ ಗತಿರ್ಹ್ಯೇಷಾ ಸೂರ್ಯಸ್ಯ ತು ವಿಧೀಯತೇ ।
ಏತೇನ ಗತಿಯೋಗೇನ ಯದಾ ಕಾಷ್ಠಾಂ ತು ದಕ್ಷಿಣಾಮ್ ॥ ೬೬ ॥

ಪರ್ಯಾಗಚ್ಛೇತ್ಪತಂಗೋಽಸೌ ಮಧ್ಯೇ ಕಾಷ್ಠಾಂತಮೇವ ಹಿ ।
ಮಧ್ಯೇನ ಪುಷ್ಕರಸ್ಯಾಥ ಭ್ರಮತೇ ದಕ್ಷಿಣಾಯನೇ ॥ ೬೭ ॥

ಮಾನಸೋತ್ತರಶೈಲೇ ತು ಅಂತರೇ ವಿಷುವಂ ಚ ತತ್ ।
ಸರ್ಪತೇ ದಕ್ಷಿಣಾಯಾಂ ತು ಕಾಷ್ಠಾಯಾಂ ವೈ ನಿಬೋಧತ ॥ ೬೮ ॥

ನವಕೋಟ್ಯಃ ಪ್ರಸಂಖ್ಯಾತಾ ಯೋಜನೈಃ ಪರಿಮಂಡಲಮ್ ।
ತಥಾ ಶತಸಹಸ್ರಾಣಿ ಚತ್ವಾರಿಂಶಚ್ಚ ಪಂಚ ಚ ॥ ೬೯ ॥

---

ಅಂತಹ ಮುಹೂರ್ತ ಸಮಯವನ್ನು ಗೊತ್ತುಮಾಡುವ ಸೂರ್ಯಸಂಚಾರದ ಉಪಾಧಿಯ ಪರಿಮಾಣವನ್ನು ಹೇಳುವೆನು, ಕೇಳಿರಿ.

೬೫. ಒಂದು ಲಕ್ಷದ ಎಂಭತ್ತೊಂದುಸಾವಿರ ಪರಿಮಾಣವು ಆ ಉಪಾಧಿಯನ್ನು ಆವರಿಸಿರುವುದು.

೬೬. ಸೂರ್ಯನಿಗೆ ಮುಹೂರ್ತಕಾಲದಿಂದ ಪರಿಚ್ಛಿನ್ನವಾದ ಗತಿಯು ಈ ರೀತಿಯಾಗಿ ಶಾಸ್ತ್ರಜ್ಞರಿಂದ ವಿಧಿಸಲ್ಪಟ್ಟಿದೆ. ಈ ಗತಿವಿಶೇಷದಿಂದ ಸೂರ್ಯನು ಒಂದು ವೇಳೆಯಲ್ಲಿ ದಕ್ಷಿಣದಿಕ್ಕನ್ನು ಹೊಂದುವನು.

೬೭. ಸೂರ್ಯನು ದಕ್ಷಿಣಾಯನದಲ್ಲಿ ಆಕಾಶಮಧ್ಯದಲ್ಲಿ ಸಂಚರಿಸುತ್ತ ದಕ್ಷಿಣ ದಿಕ್ಕಿನ ಆದಿ, ಮಧ್ಯ, ಮತ್ತು ಅಂತಭಾಗಗಳನ್ನು ಪ್ರವೇಶಿಸಿ ಭ್ರಮಿಸುತ್ತಲಿರುವನು.

೬೮. ದಕ್ಷಿಣಾಯನದಲ್ಲಿ ಸಂಚರಿಸುವಾಗ ಮಾನಸೋತ್ತರಪರ್ವತದ ಅಂತರದಲ್ಲಿ ಇರುವ ವಿಷುವ ಮಂಡಲವನ್ನು ಸಂಕ್ರಮಿಸುವನು. ಈ ಸಂಚಾರಮಾರ್ಗದ ಪರಿಮಾಣ ಮುಂತಾದುವುಗಳನ್ನು ಕೇಳಿರಿ.

೬೯. ಸೂರ್ಯನು ಸಂಚರಿಸುವ ಪ್ರದೇಶದ ಮಂಡಲಾಕಾರದ ಪರಿಮಾಣವು ಒಂಭತ್ತುಕೋಟಿ ಒಂದುಲಕ್ಷ ನಲವತ್ತೈದು ಯೋಜನಗಳಿಂದ ಪರಿಮಿತವಾಗಿರುವುದು.

ಅಹೋರಾತ್ರಾತ್ಪತಂಗಸ್ಯ ಗತಿರೇಷಾ ವಿಧೀಯತೇ ।
ದಕ್ಷಿಣಾದ್ವಿನಿವೃತ್ತೋಽಸೌ ವಿಷುವಸ್ಥೋ ಯದಾ ರವಿಃ ॥ ೭೦ ॥

ಕ್ಷೀರೋದಸ್ಯ ಸಮುದ್ರಸ್ಯೋತ್ತರತಶ್ಚಾದಿತಶ್ಚರನ್ ।
ಮಂಡಲಂ ವಿಷುವತ್ತಸ್ಯ ಯೋಜನೈಸ್ತನ್ನಿಬೋಧತ ॥ ೭೧ ॥

ತಿಸ್ರಃ ಕೋಟ್ಯಸ್ತು ಸಂಖ್ಯಾತಾ ವಿಷುವಸ್ಯಾಪಿ ಮಂಡಲಮ್ ।
ತಥಾ ಶತಸಹಸ್ರಾಣಾಮಶೀತ್ಯೇಕಾಧಿಕಾ ಪುನಃ ॥ ೭೨ ॥

ಶ್ರವಣೇ ಚೋತ್ತರಾಷಾಢೇ ಚಿತ್ರಭಾನುರ್ಯದಾ ಭವೇತ್ ।
ಶಾಕದ್ವೀಪಸ್ಯ ಷಷ್ಠಸ್ಯ ಉತ್ತರಾತೋ ದಿಶಶ್ಚರನ್ ॥ ೭೩ ॥

ಉತ್ತರಾಯಾಃ ಪ್ರಮಾಣಂ ಚ ಕಾಷ್ಠಾಯಾ ಮಂಡಲಸ್ಯ ಚ ।
ಯೋಜನಾಗ್ರಾತ್ಪ್ರಸಂಖ್ಯಾತಾ ಕೋಟಿರೇಕಾ ತು ಸಾ ದ್ವಿಜಾಃ ॥ ೭೪ ॥

ಅಶೀತಿರ್ನಿಯುತಾನೀಹ ಯೋಜನಾನಾಂ ತಥೈವ ಚ ।
ಅಷ್ಟಪಂಚಾಶತಂ ಚೈವ ಯೋಜನಾನ್ಯಧಿಕಾನಿ ತು ॥ ೭೫ ॥

---

೭೦. ಒಂದು ರಾತ್ರಿ ಮತ್ತು ಹಗಲು ಸೂರ್ಯನು ಸಂಚರಿಸುವ ಗತಿಯು ಈ ಪರಿಮಾಣದಿಂದ ಇರುವುದೆಂದು ಶಾಸ್ತ್ರಗಳಿಂದ ವಿಧಿಸಲ್ಪಟ್ಟಿದೆ. ದಕ್ಷಿಣದಿಕ್ಕಿನಿಂದ ದಕ್ಷಿಣಾಯನ ಸಮಾಪ್ತಿ ಸಮಯದಲ್ಲಿ ಹಿಂತಿರುಗಿ ವಿಷುವದಲ್ಲಿ ಸೂರ್ಯನಿರುವನು.

೭೧. ಆಗ ಕ್ಷೀರಸಮುದ್ರದ ಉತ್ತರದ ಆದಿಭಾಗದಲ್ಲಿ ಸಂಚರಿಸುತ್ತಿರುವನು. ವಿಷುವಮಂಡಲದ ಪರಿಮಾಣವನ್ನು ಹೇಳುವೆನು, ಕೇಳಿರಿ.

೭೨. ವಿಷುವಮಂಡಲದ ಪರಿಮಾಣವು ಮೂರುಕೋಟಿ ಒಂದುಲಕ್ಷ ಎಂಭತ್ತೊಂದು ಸಹಸ್ರ ಯೋಜನಗಳಿಂದ ಪರಿಮಿತವಾಗಿರುವುದು.

೭೩. ಶ್ರವಣ, ಉತ್ತರಾಷಾಢಾ ಎಂಬ ಮಹಾನಕ್ಷತ್ರಗಳಲ್ಲಿ ಸೂರ್ಯನು ಇರುವಾಗ ಆರನೆಯದಾದ ಶಾಕದ್ವೀಪದ ಉತ್ತರದಿಕ್ಕುಗಳಲ್ಲಿ ಸಂಚರಿಸುವನು.

೭೪-೭೫. ದ್ವಿಜರೆ! ಉತ್ತರದಿಕ್ಕಿನ ಮತ್ತು ಅಲ್ಲಿ ಸೂರ್ಯಸಂಚಾರ ಪ್ರದೇಶದ ಮಂಡಲವು ಒಂದುಕೋಟಿ ಎಂಭತ್ತುಸಾವಿರ ಐವತ್ತೆಂಟುಯೋಜನ ಪರಿಮಾಣವೆಂದು ಗಣಿಸಲ್ಪಟ್ಟಿರುವುದು.

ನಾಗವೀಥ್ಯುತ್ತರಾವೀಥೀ ಹ್ಯಜವೀಥೀ ಚ ದಕ್ಷಿಣಾ ।
ಮೂಲಂ ಚೈವ ತಥಾಷಾಢೇ ತ್ವಜವೀಥ್ಯುದಯಾಸ್ತ್ರಯಃ ॥ ೭೬ ॥

ಅಶ್ವಿನೀ ಕೃತ್ತಿಕಾ ಯಾಮ್ಯಂ ನಾಗವಿಥ್ಯುದಯಾಸ್ತ್ರಯಃ ।
ಕಾಷ್ಠಯೋರಂತರಂ ಯಚ್ಚ ತದ್ವಕ್ಷ್ಯೇ ಯೋಜನೈಃ ಪುನಃ ॥ ೭೭ ॥

ಏತಚ್ಛತಸಹಸ್ರಾಣಾಮಷ್ಟಾಭಿಶ್ಚೋತ್ತರಂ ಶತಮ್ ।
ತ್ರಯಃ ಶತಾಧಿಕಾಶ್ಚಾನ್ಯೇ ತ್ರಯಸ್ತ್ರಿಂಶಚ್ಚ ಯೋಜನೈಃ ॥ ೭೮ ॥

ಕಾಷ್ಠಯೋರಂತರಂ ಹ್ಯೇತದ್ಯೋಜನಾಗ್ರಾತ್ಪ್ರಕೀರ್ತಿತಮ್ ।
ಕಾಷ್ಠಯೋರ್ಲೇಖಯೋಶ್ಚೈವ ಹ್ಯಂತರಂ ದಕ್ಷಿಣೋತ್ತರೇ ॥ ೭೯ ॥

ತೇಽನ್ವದವಕ್ಷ್ಯೇ ಪ್ರಸಂಖ್ಯಾಯ ಯೋಜನೈಸ್ತನ್ನಿಬೋಧತ ।
ಏಕೈಕಮಂತರಂ ತಸ್ಯ ನಿಯುತಾನ್ಯೇಕಸಪ್ತತಿಃ ॥ ೮೦ ॥

---

೭೬. ಮತ್ತು ಸೂರ್ಯಸಂಚಾರಮಾರ್ಗದಲ್ಲಿ ನಾಗವೀಥೀ, ಮತ್ತು ಅಜ ವೀಥೀ ಎಂದು ವೀಥೀ ದ್ವಯವು ಇರವುದು. ಅವುಗಳಲ್ಲಿ ಮೂಲ, ಪೂರ್ವಾಷಾಢಾ ಉತ್ತರಾಷಾಢಾ ನಕ್ಷತ್ರಗಳು ಅಜವೀಥಿಯ ಉದಯನಕ್ಷತ್ರಗಳಾಗಿವೆ.

೭೭. ಅಶ್ವಿನೀ, ಭರಣೀ ಮತ್ತು ಕೃತ್ತಿಕಾನಕ್ಷತ್ರಗಳು ನಾಗವೀಥಿಯ ಮೂರು ಉದಯನಕ್ಷತ್ರಗಳು. ಇನ್ನು ಮುಂದೆ ದಿಕ್ಕುಗಳ ಅಂತರಭಾಗವನ್ನು ಯೋಜನ ಪರಿಮಾಣಗಳಿಂದ ವಿಂಗಡಿಸಿ ಹೇಳುವೆನು, ಕೇಳಿರಿ.

೭೮. ಕಾಷ್ಠೆಗಳ ಅಂತರವು ಒಂದುಲಕ್ಷ ಒಂದುಸಾವಿರ ಒಂದುನೂರ ಮೂವತ್ತ ಮೂರು ಯೋಜನ ಪರಿಮಾಣವಿರುವುದೆಂದು ತಿಳಿಯಬೇಕು.

೭೯. ಹೀಗೆ ಯೋಜನಾಗ್ರಪರಿಮಾಣವುಳ್ಳ (ಕಾಷ್ಠಾ) ದಿಕ್ಕುಗಳ ಅಂತರವು ಈ ರೀತಿಯಾಗಿ ಬೋಧಿಸಲ್ಪಟ್ಟಿದೆ. ಕಾಷ್ಠಾ ಮತ್ತು ಲೇಖೆಗಳ ದಕ್ಷಿಣ ಮತ್ತು ಉತ್ತರ ಗಳಲ್ಲಿ ಅಂತರವು ಅನೇಕ ಪರಿಮಾಣದಿಂದ ಕೂಡಿರುವುದು.

೮೦. ಅದನ್ನು ಯೋಜನ ಪರಿಮಾಣದಿಂದ ಗಣನೆಮಾಡಿ ಹೇಳುವೆನು ಕೇಳಿರಿ: -ಒಂದೊಂದು ಅಂತರವೂ ಒಂದು ಪಯುತ ಎಪ್ಪತ್ತೊಂದು ಸಹಸ್ರ ಪರಿಮಾಣವುಳ್ಳದ್ದಾಗಿದೆ.

**ಸಹಸ್ರಾಣ್ಯತಿರಿಕ್ತಾಶ್ಚ ತತೋಽನ್ಯಾ ಪಂಚಸಪ್ತತಿಃ ।**
**ಲೇಖಯೋಃ ಕಾಷ್ಠಯೋಶ್ಚೈವ ಬಾಹ್ಯಾಭ್ಯಂತರಯೋಃ ಸ್ಮೃತಮ್ ॥ ೮೧ ॥**

**ಅಭ್ಯಂತರಂ ತು ಪರ್ಯೇತಿ ಮಂಡಲಾನ್ಯುತ್ತರಾಯಣೇ ।**
**ಬಾಹ್ಯತೋ ದಕ್ಷಿಣೇ ಚೈವ ಸತತಂ ತು ಯಥಾಕ್ರಮಮ್ ॥ ೮೨ ॥**

**ಮಂಡಲಾನಾಂ ಶತಂ ಪೂರ್ಣಂ ತ್ರ್ಯಶೀತ್ಯಧಿಕಮುತ್ತರಮ್ ।**
**ಚರತೇ ದಕ್ಷಿಣೇ ಚಾಪಿ ತಾವದೇವ ವಿಭಾವಸುಃ ॥ ೮೩ ॥**

**ಪ್ರಮಾಣಂ ಮಂಡಲಸ್ಯಾಥ ಯೋಜನಾಗ್ರಂ ನಿಬೋಧತ ।**
**ಯೋಜನಾನಾಂ ಸಹಸ್ರಾಣಿ ಸಪ್ತಾದಶ ಸಮಾಸತಃ ॥ ೮೪ ॥**

**ಶತೇ ದ್ವೇ ಪುನರಪ್ಯನ್ಯೇ ಯೋಜನಾನಾಂ ಪ್ರಕೀರ್ತಿತೇ ।**
**ಏಕವಿಂಶತಿಭಿಶ್ಚೈವ ಯೋಜನೈರಧಿಕೈರ್ಹಿ ತೇ ॥ ೮೫ ॥**

---

೮೧. ಲೇಖಾ, ಮತ್ತು ಕಾಷ್ಠಾಗಳ ಬಾಹ್ಯಾಭ್ಯಂತರ ಪ್ರದೇಶಗಳಲ್ಲಿ ಇರುವ ಪರಮಾಣವು ಎಪ್ಪತ್ತೈದು ಸಂಖ್ಯೆಯಿಂದ ಕೂಡಿದೆ.

೮೨. ಸೂರ್ಯನು ಯಾವಾಗಲೂ ಉತ್ತರಾಯಣದಲ್ಲಿ ಅಭ್ಯಂತರ ಪ್ರದೇಶ ದಲ್ಲಿಯೂ ದಕ್ಷಿಣಾಯನದಲ್ಲಿ ಬಾಹ್ಯಪ್ರದೇಶದಲ್ಲಿಯೂ ಕ್ರಮವನ್ನನುಸರಿಸಿ ಮಂಡಲಾ ಕಾರವಾಗಿ ಭ್ರಮಣಮಾಡುದನು.

೮೩. ಮತ್ತು ಸೂರ್ಯನು ಒಂದನೂರ ಎಪ್ಪತ್ತಮೂರು ಮಂಡಲಗಳನ್ನು ಉತ್ತರಾಯಣದಲ್ಲಿ ಸಂಚರಿಸುವನು. ದಕ್ಷಿಣಾಯದಲ್ಲಿಯೂ ಅಷ್ಟೇ ಮಂಡಲಗಳಿನ್ನು ಸುತ್ತುವನು.

೮೪-೮೫. ಈ ಮಂಡಲದ ಪರಿಮಾಣವನ್ನು ಯೋಜನ ಸಂಖ್ಯೆಯಿಂದ ಹೇಳು ವೆನು, ಕೇಳಿರಿ. ಸಂಗ್ರಹವಾಗಿ ಆ ಪರಿಮಾಣವನ್ನು ಬೋಧಿಸುವುದಾದರೆ ಹದಿನೇಳು ಸಹಸ್ರ ಯೋಜನಗಳೂ, ಎರಡುನೂರು ಯೋಜನಗಳೂ ಮತ್ತು ಇಪ್ಪತ್ತೊಂದು ಯೋಜನಗಳೂ ಸೇರಿ ಹದಿನೇಳು ಸಾವಿರದ ಇನ್ನೂರ ಇಪ್ಪತ್ತೊಂದು ಯೋಜನಗ ಳೆಂದು ಹೇಳಬಹುದಾಗಿದೆ.

ಏತತ್ಪ್ರಮಾಣಮಾಖ್ಯಾತಂ ಯೋಜನೈರ್ಮಂಡಲಸ್ಯ ಚ ।
ವಿಷ್ಕಂಭೋ ಮಂಡಲಸ್ಯಾಥ ತಿರ್ಯಕ್ ಸ ತು ವಿಧೀಯತೇ ॥ ೮೬ ॥

ಪ್ರತ್ಯಹಂ ಚರತೇ ತಾನಿ ಸೂರ್ಯೋ ವೈ ಮಂಡಲಕ್ರಮಾತ್ ।
ಕುಲಾಲಚಕ್ರಪರ್ಯಂತೋ ಯಥಾ ಚಕ್ರಂ ನಿವರ್ತತೇ ॥ ೮೭ ॥

ದಕ್ಷಿಣಪ್ರಕ್ರಮೇ ಸೂರ್ಯಸ್ತಥಾ ಶೀಘ್ರಂ ಪ್ರವರ್ತತೇ ।
ತಸ್ಮಾತ್ಪ್ರಕೃಷ್ಟಾಂ ಭೂಮಿಂ ತು ಕಾಲೇನಾಲ್ಪೇನ ಗಚ್ಛತಿ ॥ ೮೮ ॥

ಸೂರ್ಯೋ ದ್ವಾದಶಭಿಃ ಶೈಘ್ರ್ಯಾನ್ಮುಹೂರ್ತೈರ್ದಕ್ಷಿಣಾಯನೇ ।
ತ್ರಯೋದಶಾರ್ಧಮೃಕ್ಷಾಣಾಮಹ್ನಾ ತು ಚರತೇ ರವಿಃ ॥ ೮೯ ॥

ಮುಹೂರ್ತೈಸ್ತಾವದೃಕ್ಷಾಣಿ ನಕ್ತಮಷ್ಟಾದಶೈಶ್ಚರನ್ ।
ಕುಲಾಲಚಕ್ರಮಧ್ಯೇ ತು ಯಥಾಮಂದಂ ಪ್ರಸರ್ಪತಿ ॥ ೯೦ ॥

---

೮೬. ಹೀಗೆ ಯೋಜನ ಸಂಖ್ಯೆಯಿಂದ ಸೂರ್ಯಮಂಡಲದ ಪರಿಮಾಣವು ಹೇಳಲ್ಪಟ್ಟಿತು. ಮಂಡಲದ ವಿಷ್ಕಂಭ ಪರಿಮಾಣವು ಒಂದು ಅಗ್ರದಿಂದ ಸರಳವಾಗಿ ಮತ್ತೊಂದು ಅಗ್ರದವರೆಗೆ ಇರುವ ಪರಿಮಿತಿಯು. ಇದನ್ನು ಅಡ್ಡಲಾಗಿ ಗಣಿಸ ಬಹುದು.

೮೭. ಸೂರ್ಯನು ಪ್ರತಿದಿನವೂ ಮಂಡಲಕ್ರಮದಿಂದ ಕುಂಬಾರನ ಚಕ್ರವು ಗಡಿಗೆಯನ್ನು ನಿರ್ಮಿಸುವಾಗ ವೇಗವಾಗಿ ತಿರುಗುವಂತೆ ಮಂಡಲಾಕಾರವಾಗಿ ಸುತ್ತುವನು.

೮೮. ದಕ್ಷಿಣ ದಿಕ್ಕಿನಲ್ಲಿ ಸಂಚರಿಸುವಾಗ ಸೂರ್ಯನು ಬಲುಬೇಗ ಪ್ರವರ್ತಿಸು ವುದರಿಂದ ಅಧಿಕವಾದ ಭೂಭಾಗವನ್ನು ಅಲ್ಪಕಾಲದಿಂದಲೇ ಸುತ್ತುವನು.

೮೯. ಸೂರ್ಯನು ಹಗಲಿನಲ್ಲಿ ಪ್ರತಿಯೊಂದು ನಕ್ಷತ್ರಗಳನ್ನೂ ಸಂಕ್ರಮಿಸಿ ಹದಿಮೂರೂವರೆ ದಿನಗಳಿಂದ ಶೀಘ್ರವಾಗಿ ಸುತ್ತುವನು.

೯೦. ಹಾಗೆಯೇ ರಾತ್ರಿಯ ಕಾಲದಲ್ಲಿ ಆ ನಕ್ಷತ್ರಗಳನ್ನು ಹದಿನೆಂಟು ಮುಹೂರ್ತ ಕಾಲಗಳಿಂದ ಸುತ್ತುತ್ತಾ ಕುಂಬಾರನ ಚಕ್ರದ ಮಧ್ಯ (ನಾಭಿ) ಭಾಗ ದಂತೆ ಮಂದವಾದ ಗತಿಯುಳ್ಳವನಾಗುವನು.

**ತಥೋದಗಯನೇ ಸೂರ್ಯಃ ಸರ್ಪತೇ ಮಂದವಿಕ್ರಮಃ।**
**ತಸ್ಮಾದ್ದೀರ್ಘೇಣ ಕಾಲೇನ ಭೂಮಿಂ ಸ್ವಲ್ಪಾಂ ನಿಗಚ್ಛತಿ ॥ ೯೧ ॥**

**ಅಷ್ಟಾದಶಮುಹೂರ್ತಂ ತು ಉತ್ತರಾಯಣಪಶ್ಚಿಮಮ್।**
**ಅಹೋ ಭವತಿ ತಚ್ಚಾಪಿ ಚರತೇ ಮಂದವಿಕ್ರಮಃ ॥ ೯೨ ॥**

**ತ್ರಯೋದಶಾರ್ಧಂ ಮಾಂದ್ಯೇನ ತ್ವೃಕ್ಷಾಣಾಂ ಚರತೇ ರವಿಃ।**
**ಮುಹೂರ್ತೈಸ್ತಾವದೃಕ್ಷಾಣಿ ನಕ್ತಂ ದ್ವಾದಶಭಿಶ್ಚರನ್ ॥ ೯೩ ॥**

**ತತೋ ಮಂದತರಂ ನಾಭ್ಯಾಂ ಚಕ್ರಂ ಭ್ರಮತಿ ವೈ ಯಥಾ।**
**ಮೃತ್ಪಿಂಡ ಇವ ಮಧ್ಯಸ್ಥೋ ಧ್ರುವೋ ಭ್ರಮತಿ ವೈ ತಥಾ ॥ ೯೪ ॥**

**ತ್ರಿಂಶನ್ಮುಹೂರ್ತಾನೇವಾಹುರಹೋರಾತ್ರಂ ಧ್ರುವೋ ಭ್ರಮನ್।**
**ಉಭಯೋಃ ಕಾಷ್ಠಯೋರ್ಮಧ್ಯೇ ಭ್ರಮತೇ ಮಂಡಲಾನಿ ತು॥ ೯೫ ॥**

---

೯೧. ಹಾಗೆಯೇ ಉತ್ತರಾಯಣ ಸಮಯದಲ್ಲಿ ಮಂದವಾದ ಗತಿಯನ್ನು ಅವಲಂಬಿಸಿ ಸಂಚರಿಸುವನಾದುದರಿಂದ ದೀರ್ಘವಾದ ಕಾಲದಿಂದ ಅಲ್ಪ ಭೂಭಾಗ ವನ್ನು ಸುತ್ತುವನು.

೯೨. ಉತ್ತರಾಯಣದ ದಿನಮಾನವು ಹದಿನೆಂಟು ಮುಹೂರ್ತ ಕಾಲದ ವರೆಗೆ ದೀರ್ಘವಾಗಿರುವುದು. ಆ ದಿನವನ್ನು ಮಂದಗತಿಯಿಂದ ಸೂರ್ಯನು ಸಂಚರಿಸುವನು.

೯೩. ರಾತ್ರಿಕಾಲದಲ್ಲಿ ಗತಿಯು ಮಂದತ್ವದಿಂದ ನಕ್ಷತ್ರ ಸ್ಥಾನವನ್ನು ಹದಿಮೂರೂವರೆ ಮುಹೂರ್ತ ಕಾಲದಿಂದ ಮಂದವಾಗಿ ಸಂಚರಿಸುವನು.

೯೪. ಕುಂಬಾರನ ಚಕ್ರದ ನಾಭಿಸ್ಥಾನದಲ್ಲಿಟ್ಟಿರುವ, ಗಡಿಗೆಯ ಆಕಾರವನ್ನು ಹೊಂದುವ ಮೃತ್‌ಪಿಂಡವು ಅತಿಶಯವಾದ ಮಂದಗತಿಯಿಂದ ಸುತ್ತುವಂತೆ ತೇಜಶ್ಚಕ್ರದ ಮಧ್ಯದಲ್ಲಿರುವ ಧ್ರುವಮಂಡಲವು ಹೆಚ್ಚು ಮಂದಗತಿಯಿಂದ ಸುತ್ತುವುದು.

೯೫. ಈ ಧ್ರುವಮಂಡಲವು ಹಗಲು ಮತ್ತು ರಾತ್ರಿ ಸಮಯಗಳಲ್ಲಿ ಸೇರಿ ಮೂವತ್ತು ಮುಹೂರ್ತಗಳ ಕಾಲದಿಂದ ಭ್ರಮಿಸುತ್ತಾ ಅಹೋರಾತ್ರವೃತ್ತದಲ್ಲಿ ಸಕಲ ಮಂಡಲಗಳನ್ನೂ ಭ್ರಮಿಸುವುದು.

ಕುಲಾಲಚಕ್ರನಾಭಿಶ್ಚ ಯಥಾ ತತ್ರೈವ ವರ್ತತೇ ।
ಧ್ರುವಸ್ತಥಾ ಹಿ ವಿಜ್ಞೇಯಸ್ತತ್ರೈವ ಪರಿವರ್ತತೇ ॥ ೯೬ ॥

ಉಭಯೋಃ ಕಾಷ್ಠಯೋರ್ಮಧ್ಯೇ ಭ್ರಮತೇ ಮಂಡಲಾನಿ ಸಃ ।
ದಿವಾ ನಕ್ತಂ ಚ ಸೂರ್ಯಸ್ಯ ಮಂದಾ ಶೀಘ್ರಂ ಚ ವೈ ಗತಿಃ ॥ ೯೭ ॥

ಉತ್ತರಪ್ರಕ್ರಮೇ ಚಾಪಿ ದಿವಾ ಮಂದಾ ಗತಿಸ್ತಥಾ ।
ತಥೈವ ಚ ಪುನರ್ನಕ್ತಂ ಶೀಘ್ರಾ ಸೂರ್ಯಸ್ಯ ವೈ ಗತಿಃ ॥ ೯೮ ॥

ದಕ್ಷಿಣಪ್ರಕ್ರಮೇಣೈವ ದಿವಾ ಶೀಘ್ರಂ ವಿಧೀಯತೇ ।
ಗತಿಃ ಸೂರ್ಯಸ್ಯ ನಕ್ತಂ ಚ ಮಂದಾ ಚೈವ ಗತಿಸ್ತಥಾ ॥ ೯೯ ॥

ಏವಂ ಗತಿವಿಶೇಷೇಣ ವಿಭಜನ್ ರಾತ್ರ್ಯಹಾನಿ ತು ।
ತದಾಪಿ ಸಂಚರನ್ ಮಾರ್ಗಂ ಸಮೇನ ವಿಷಮೇಣ ಚ ॥ ೧೦೦ ॥

---

೯೬. ಕುಂಬಾರನ ಚಕ್ರದಲ್ಲಿ ನಾಭಿ ಎಂಬ ಮಧ್ಯಭಾಗವು ಚಕ್ರದಲ್ಲಿ ಅಂತರ್ಗತವಾಗಿ ಅಲ್ಲಿಯೇ ಭ್ರಮಿಸುತ್ತಿರುವಂತೆ ತೇಜಶ್ಚಕ್ರದಲ್ಲಿ ಅಂತರ್ಗತವಾದ ಧ್ರುವಮಂಡಲವು ಅಲ್ಲಿಯೇ ಭ್ರಮಿಸುತ್ತಿರ.ವಂತೆ ಭಾವಿಸಬೇಕು.

೯೭. ಆ ಧ್ರುವನು ಕಾಷ್ಠಾದ್ವಯದ ಮಧ್ಯದಲ್ಲಿ ಸಕಲ ಮಂಡಲಗಳನ್ನೂ ಹಗಲು ರಾತ್ರಿಯೂ ಸುತ್ತುವನು. ಸೂರ್ಯನಿಗೆ ಗತಿಯು ಮಂದ ಮತ್ತು ಶೀಘ್ರವೆಂದು ಎರಡು ರೀತಿಯಲ್ಲಿರುವುದು.

೯೮. ಉತ್ತರಾಯಣದ ಪ್ರಾರಂಭದಲ್ಲಿ ಹಗಲು ಮಂದವಾಗಿಯೂ, ರಾತ್ರಿಯ ಸಮಯದಲ್ಲಿ ಶೀಘ್ರವಾಗಿಯೂ ಸೂರ್ಯನ ಗತಿಯು ಇರುವುದು.

೯೯. ಹಾಗೆಯೇ ದಕ್ಷಿಣಾಯನ ಪ್ರಾರಂಭದಿಂದ ಸೂರ್ಯನ ಗತಿಯು ಹಗಲಿನಲ್ಲಿ ಶೀಘ್ರವೂ ರಾತ್ರಿಕಾಲದಲ್ಲಿ ಮಂದವೂ ಆಗುವುದು.

೧೦೦. ಸೂರ್ಯದೇವನು ಈ ರೀತಿಯ ತನ್ನ ಗತಿ ವಿಶೇಷಗಳಿಂದ ರಾತ್ರಿ ಮತ್ತು ದಿನಗಳನ್ನು ವಿಂಗಡಿಸಿ ಸಮ, ವಿಷಮರೂಪಗಳಿಂದ ತನ್ನ ಮಾರ್ಗದಲ್ಲಿ ಸಂಚರಿಸುತ್ತಿರುವನು.

ಲೋಕಾಲೋಕಸ್ಥಿತಾ ಹ್ಯೇತೇ ಲೋಕಪಾಲಾಶ್ಚತುರ್ದಿಶಮ್ ।
ಅಗಸ್ತ್ಯಶ್ಚರತೇ ತೇಷಾಮುಪರಿಷ್ಟಾಜ್ಜವೇನ ತು ॥ ೧೦೧ ॥

ಭುಂಜನ್ನಸಾವಹೋರಾತ್ರಮೇವಂ ಗತಿವಿಶೇಷಣಮ್ ।
ದಕ್ಷಿಣೇ ನಾಗವೀಥ್ಯಾಸ್ತು ಲೋಕಾಲೋಕಸ್ಯ ಚೋತ್ತರೇ ॥ ೧೦೨ ॥

ಲೋಕಸಂತಾನಕೋ ಹ್ಯೇಷ ವೈಶ್ವಾನರಪಥಾದ್ಬಹಿಃ ।
ಪೃಷ್ಠೇ ಯಾವತ್ಪ್ರಭಾ ಸೌರೀ ಪುರಸ್ತಾತ್ಸಂಪ್ರಕಾಶತ ॥ ೧೦೩ ॥

ಪಾರ್ಶ್ವತಃ ಪೃಷ್ಠತಶ್ಚೈವ ಲೋಕಾಲೋಕಸ್ಯ ವರ್ತತೇ ।
ಯೋಜನಾನಾಂ ಸಹಸ್ರಾಣಿ ದಶಕಂ ತೂಚ್ಛ್ರಿತೋ ಗಿರಿಃ ॥ ೧೦೪ ॥

ಪ್ರಕಾಶಶ್ಚಾಪ್ರಕಾಶಶ್ಚ ಸರ್ವತಃ ಪರಿಮಂಡಲಃ ।
ನಕ್ಷತ್ರಚಂದ್ರಸೂರ್ಯಾಶ್ಚ ಗ್ರಹೈಸ್ತಾರಾಗಣೈಃ ಸಹ ॥ ೧೦೫ ॥

---

೧೦೧. ಲೋಕಾಲೋಕ ಪರ್ವತದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಹಿಂದೆ ಹೇಳಿರುವ ನಾಲ್ಕು ಮಂದಿ ಲೋಕಪಾಲಕರೂ ಇರುವರು. ಆ ಲೋಕಪಾಲಕರ ಮೇಲ್ಭಾಗದಲ್ಲಿ ನಕ್ಷತ್ರ ರೂಪದಿಂದಿರುವ ಅಗಸ್ತ್ಯಮುನಿಯು ವೇಗದಿಂದ ಸುತ್ತುತ್ತಿರುವನು.

೧೦೨. ಈ ರೀತಿಯಾಗಿ ತನ್ನ ಗತಿ ವಿಶೇಷದಿಂದ ಪರಿಣಾಮ ಹೊಂದಿದ ಹಗಲು ಮತ್ತು ರಾತ್ರಿಗಳ ಸ್ವರೂಪವನ್ನು ಭುಂಜಿಸುತ್ತಾ ನಾಗವೀಥಿಯ ದಕ್ಷಿಣ ಭಾಗದಲ್ಲಿಯೂ ಲೋಕಾಲೋಕ ಪರ್ವತದ ಉತ್ತರ ಭಾಗದಲ್ಲಿಯೂ ಸೂರ್ಯನು ಸಂಚರಿಸುವನು.

೧೦೩. ಈ ಲೋಕಾಲೋಕ ಪರ್ವತವು ವೈಶ್ವಾನರ ಪಥಕ್ಕೆ ಬಾಹ್ಯವಾಗಿ ಲೋಕದ ಸಂತತಿಯಿಂದ ಬದ್ಧವಾಗಿ ವ್ಯಾಪಕವಾಗಿದ್ದರೂ ತನ್ನ ಪೃಷ್ಠಭಾಗದ ಮುಂದುಗಡೆ ಸೂರ್ಯನ ಪ್ರಭೆಯು ವ್ಯಾಪಿಸುವಷ್ಟು ಭಾಗದಲ್ಲಿ ಪ್ರಕಾಶಿಸುವುದು.

೧೦೪. ಈ ಲೋಕಾಲೋಕ ಪರ್ವತದ ಪ್ರತಿಯೊಂದು ಪಾರ್ಶ್ವಗಳಲ್ಲಿಯೂ ಮತ್ತು ಪೃಷ್ಠ ಭಾಗಗಳಲ್ಲಿಯೂ ಸಾವಿರಾರು ಯೋಜನ ಪರಿಮಾಣವೂ ಇರುವುದು. ಇದು ಹತ್ತುಸಾವಿರ ಯೋಜನದಷ್ಟು ಉನ್ನತವಾದ ಪರ್ವತವು.

೧೦೫-೧೦೬. ಮತ್ತು ಸರ್ವಭಾಗಗಳಲ್ಲಿಯೂ ಮಂಡಲಾಕಾರವಾಗಿಯೂ

**ಅಭ್ಯಂತರಂ ಪ್ರಕಾಶಂತೇ ಲೋಕಾಲೋಕಸ್ಯ ವೈ ಗಿರೇಃ ।**
**ಏತಾವಾನೇವ ಲೋಕಸ್ತು ನಿರಾಲೋಕಸ್ತತಃ ಪರಮ್ ॥ ೧೦೬ ॥**

**ಲೋಕೇನಾಲೋಕವಾನೇಷ ನಿರಾಲೋಕಸ್ತ್ವಲೋಕತಃ ।**
**ಲೋಕಾಲೋಕಂ ತು ಸಂಧತ್ತೇ ಯಸ್ಮಾತ್ ಸೂರ್ಯಪರಿಗ್ರಹಃ॥೧೦೭॥**

**ತಸ್ಮಾತ್ಸಂಧ್ಯೇತಿ ತಾಮಾಹುರುಷಾವ್ಯುಷ್ಟ್ಯೋರ್ಯದಂತರಮ್ ।**
**ಉಷಾ ರಾತ್ರಿಃ ಸ್ಮೃತಾ ವಿಪ್ರೈರ್ವ್ಯುಷ್ಟಿಶ್ಚಾಪಿ ತ್ವಹಃ ಸ್ಮೃತಮ್ ॥ ೧೦೮ ॥**

**ಸೂರ್ಯಾಗ್ನಿಗ್ರಸಮಾನಾನಾಂ ಸಂಧ್ಯಾಕಾಲೇ ಹಿ ರಕ್ಷಸಾಮ್ ।**
**ಪ್ರಜಾಪತಿನಿಯೋಗೇನ ಶಾಪಸ್ತ್ವೇಷಾಂ ದುರಾತ್ಮನಾಮ್ ॥ ೧೦೯ ॥**

---

ಪ್ರಕಾಶ ಮತ್ತು ಅಪ್ರಕಾಶವೆಂಬ ಎರಡು ಸ್ವರೂಪಗಳನ್ನು ಹೊಂದಿದೆ. ನಕ್ಷತ್ರ, ಚಂದ್ರ, ಸೂರ್ಯ, ತಾರಾಗಣ, ಮತ್ತು ಗ್ರಹಗಳು ಈ ಲೋಕಾಲೋಕ ಪರ್ವತದ ಅಭ್ಯಂತರದಲ್ಲಿ ಪ್ರಕಾಶಿಸುತ್ತಿರುವುವು . ಆ ಪರ್ವತದ ಲೋಕವೆಂಬ ಭಾಗವು ಇಷ್ಟೇ ಆಗಿದೆ. ಇದರ ಮುಂದಿನ ಭಾಗವು ನಿರಾಲೋಕವು.

೧೦೭. ಈ ಪರ್ವತವು ಲೋಕ ಅಥವಾ ಪ್ರಕಾಶದಿಂದ ಪ್ರಕಾಶಿಸುವ ಭಾಗದಿಂದ ಲೋಕಶಬ್ದದಿಂದಲೂ ಪರಭಾಗದಲ್ಲಿ ಆಲೋಕಶೂನ್ಯವಾದ ನಿರಾಲೋಕ ಭಾವ ದಿಂದ ಅಲೋಕ ಶಬ್ದದಿಂದಲೂ ವ್ಯವಹರಿಸಲ್ಪಡುವುದರಿಂದ ಲೋಕ+ಅಲೋಕ= ಲೋಕಾಲೋಕವೆಂಬ ಸಂಜ್ಞೆಯನ್ನು ಹೊಂದಿದೆ. ಸೂರ್ಯನ ಸಂಚಾರ ಸಂಬಂಧವು ಲೋಕ ಮತ್ತು ಅಲೋಕಭಾಗಗಳನ್ನು ಸಂಧಿಸುವುದು.

೧೦೮. ಆದುದರಿಂದ ಉಷಾ ಮತ್ತು ವ್ಯುಷ್ಟಿಕಾಲಗಳ ಆ ಅಂತರಭಾಗವನ್ನು ಸಂಧಿ ಎಂದು ಪ್ರಾಜ್ಞರು ವ್ಯವಹರಿಸುವರು. ವಿಪ್ರರು ರಾತ್ರಿಯನ್ನು ಉಷಾ ಎಂದೂ ಹಗಲನ್ನು ವ್ಯುಷ್ಟಿ ಎಂದೂ ಪ್ರತಿಪಾದಿಸುವರು.

೧೦೯. ಸೂರ್ಯ, ಅಗ್ನಿ ಇವರನ್ನು ಗ್ರಾಸಮಾಡುತ್ತಿರುವ ದುರಾತ್ಮರಾದ ರಾಕ್ಷಸರಿಗೆ ಸಂಧ್ಯಾಕಾಲದಲ್ಲಿ ಪ್ರಜಾಪತಿಯ ಶಾಪಬಲದಿಂದ ದುರುದ್ಯಮವು ಉಂಟಾಗುವುದು.

**ಅಕ್ಷಯತ್ವಂ ತು ದೇಹಸ್ಯ ಪ್ರಾಪಿತಾಮರಣಂ ತಥಾ।**
**ತಿಸ್ರಃ ಕೋಟ್ಯಸ್ತು ವಿಖ್ಯಾತಾ ಮಂದೇಹಾ ನಾಮ ರಾಕ್ಷಸಾಃ॥ ೧೧೦ ॥**

**ಪ್ರಾರ್ಥಯಂತಿ ಸಹಸ್ರಾಂಶುಮುದಯಂತಂ ದಿನೇ ದಿನೇ।**
**ತಾಪಯಂತಂ ದುರಾತ್ಮಾನಃ ಸೂರ್ಯಮಿಚ್ಛಂತಿ ಖಾದಿತುಮ್॥೧೧೧॥**

**ಅಥ ಸೂರ್ಯಸ್ಯ ತೇಷಾಂ ಚ ಯುದ್ಧಮಾಸೀತ್ ಸುದಾರುಣಮ್।**
**ತತೋ ಬ್ರಹ್ಮಾ ಚ ದೇವಾಶ್ಚ ಬ್ರಾಹ್ಮಣಾಶ್ಚೈವ ಸತ್ತಮಾಃ ॥ ೧೧೨ ॥**

**ಸಂಧ್ಯಾಂ ತು ಸಮುಪಾಸೀನಾಃ ಪ್ರಕ್ಷಿಪಂತಿ ಜಲಂ ಸದಾ।**
**ಓಂಕಾರಬ್ರಹ್ಮಸಂಯುಕ್ತಂ ಗಾಯತ್ರ್ಯಾ ಚಾಭಿಮಂತ್ರಿತಮ್ ॥೧೧೩॥**

**ಸ್ಫೂರ್ಜಜ್ಜ್ಯೋತಿಶ್ಚ ಚಂಡಾಂಶುಸ್ತಥಾ ದೀಪ್ಯತಿ ಭಾಸ್ಕರಃ।**
**ತತಃ ಪುನರ್ಮಹಾತೇಜಾ ಮಹಾಬಲಪರಾಕ್ರಮಃ ॥ ೧೧೪ ॥**

---

೧೧೦. ಅಮರಣವನ್ನೂ ದೇಹಕ್ಕೆ ಕ್ಷಯವಿಲ್ಲದಿರುವಿಕೆಯನ್ನೂ ಬ್ರಹ್ಮನ ವರದಾನದಿಂದ ಹೊಂದಿ ಮಂದೇಹ ಎಂದು ಪ್ರಸಿದ್ಧರಾದ ಆ ರಾಕ್ಷಸರು ಮೂರುಕೋಟಿ ಸಂಖ್ಯೆಯಿಂದಿರುವರು.

೧೧೧. ಅವರು ಸಹಸ್ರ ಕಿರಣಗಳಿಂದ ಶೋಭಿಸುವ, ಜಗತ್ತನ್ನು ತಪಿಸುತ್ತಿರುವ ಮತ್ತು ಉದಯಿಸುತ್ತಿರುವ ಸೂರ್ಯ ಮಂಡಲವನ್ನೂ ದುಷ್ಟಭಾವನೆಯಿಂದ ತಿನ್ನಲು ಅಪೇಕ್ಷಿಸುವರು.

೧೧೨. ಅನಂತರದಲ್ಲಿ ಸೂರ್ಯನಿಗೂ ಆ ಮಂದೇಹರಾಕ್ಷಸರಿಗೂ ಭಯಂಕರವಾದ ಯುದ್ಧವು ನಡೆಯಿತು. ಆಗ ಬ್ರಹ್ಮನೂ ಇತರ ದೇವತೆಗಳೂ ಮತ್ತು ಸಾಧುಶ್ರೇಷ್ಠರಾದ ಬ್ರಾಹ್ಮಣರೂ ಯುದ್ಧ ಶಾಂತ್ಯುಪಾಯವನ್ನು ಚಿಂತಿಸಿದರು.

೧೧೩. ಆಗ ಆ ಸಂಧ್ಯಾಸಮಯಾಭಿಮಾನಿಯಾದ ದೇವತೆಯನ್ನು ಉಪಾಸನೆ ಮಾಡಿ ತದಂಗವಾಗಿ ಓಂಕಾರವೆಂಬ ಬ್ರಹ್ಮವಸ್ತುವಿನಿಂದ ಕೂಡಿರುವ ಮತ್ತು ಗಾಯತ್ರಿ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ನೀರನ್ನು ಅರ್ಘ್ಯರೂಪವಾಗಿ ಮೇಲಕ್ಕೆಸೆಯುವರು.

೧೧೪. ಆಗ ಸೂರ್ಯನು ಆ ರಾಕ್ಷಸಬಾಧೆಯಿಂದ ಮುಕ್ತನಾಗಿ ಹೆಚ್ಚಾಗಿ ಪ್ರಕಾಶಿಸುವ ಜ್ಯೋತಿಯಿಂದಲೂ, ತೀವ್ರವಾದ ಕಿರಣಗಳಿಂದಲೂ, ಹೆಚ್ಚಾದ ತೇಜಸ್ಸಿನಿಂದಲೂ ಮತ್ತು ಮಹಾಶಕ್ತಿಪರಾಕ್ರಮಗಳಿಂದ ಪ್ರಕಾಶಿಸುವನು.

ಯೋಜನಾನಾಂ ಸಹ್ಮಸ್ರಾಣಿ ಊರ್ಧ್ವಮುತ್ತಿಷ್ಠತೇ ಶತಮ್ ।
ಪ್ರಯಾತಿ ಭಗವಾನಾಶು ಬ್ರಾಹ್ಮಣೈರಭಿರಕ್ಷಿತಃ ।
ವಾಲಖಿಲ್ಯೈಶ್ಚ ಮುನಿಭಿರ್ಧೃತಾರ್ಚಿಃ ಸ ಮರೀಚಿಭಿಃ ॥ ೧೧೫ ॥

ಕಾಷ್ಠಾ ನಿಮೇಷಾ ದಶ ಪಂಚ ಚೈವ
ತ್ರಿಂಶಚ್ಚ ಕಾಷ್ಠಾ ಗಣಯೇತ್ಕಲಾಂ ತು ।
ತ್ರಿಂಶತ್ಕಲಾಶ್ಚಾಪಿ ಭವೇನ್ಮುಹೂರ್ತ
ಸ್ತೈಸ್ತ್ರಿಂಶತಾ ರಾತ್ರ್ಯಹನೀ ಸಮೇ ತೇ ॥ ೧೧೬ ॥
ಹ್ರಾಸವೃದ್ಧೀ ತ್ವಹರ್ಭಾಗೈರ್ದಿವಸಾನಾಂ ಯಥಾಕ್ರಮಾತ್ ॥ ೧೧೭ ॥

ಸಂಧ್ಯಾ ಮುಹೂರ್ತಮಾತ್ರಾ ತು ಹ್ರಾಸವೃದ್ಧಿಸ್ತು ಸಾ ಸ್ಮೃತಾ ।
ಲೇಖಾಪ್ರಭೃತ್ಯಥಾದಿತ್ಯೇ ತ್ರಿಮುಹೂರ್ತಗತೇ ತು ವೈ ॥ ೧೧೮ ॥

ಪ್ರಾತಸ್ತತಃ ಸ್ಮೃತಃ ಕಾಲೋ ಭಾಗಶ್ಚಾಹ್ನಃ ಸ ಪಂಚಮಃ ।
ತಸ್ಮಾತ್ ಪ್ರಾತಸ್ತನಾತ್ ಕಾಲಾತ್ ತ್ರಿಮುಹೂರ್ತಸ್ತು ಸಂಗವಃ॥ ೧೧೯ ॥

---

೧೧೫- ಅನಂತರದಲ್ಲಿ ಒಂದು ಲಕ್ಷಯೋಜನ ಪರಿಮಾಣದಷ್ಟು ಗಗನಮಂಡಲದಲ್ಲಿ ಮೇಲಕ್ಕೇರುವನು. ಮತ್ತು ವಾಲಖಿಲ್ಯ,ಮರೀಚಿ, ಮುಂತಾದ ಅನೇಕ ಬ್ರಹ್ಮರ್ಷಿಗಳಿಂದ ರಕ್ಷಿಸಲ್ಪಟ್ಟವನಾಗಿ ಭಗವಂತನಾದ ಸೂರ್ಯನು ಪ್ರಯಾಣಮಾಡುವನು.

೧೧೬. ಈ ಸೂರ್ಯನ ಗತಿಯನ್ನನುಸರಿಸಿ ಅನೇಕ ಕಾಷ್ಠಾ, ಕಲಾ ಮುಂತಾದ ಕಾಲವಿಭಾಗಗಳು ಏರ್ಪಟ್ಟಿರುವುವು. ಅವು ಯಾವುವೆಂದರೆ:—ಹದಿನೈದು ನಿಮೇಷಗಳು ಒಂದು ಕಾಷ್ಠಾಸ್ವರೂಪವು. ಮೂವತ್ತು ಕಾಷ್ಠೆಗಳನ್ನು ಒಂದು ಕಲೆಯನ್ನಾಗಿ ಎಣಿಸಬೇಕು. ಅಂತಹ ಮೂವತ್ತು ಕಲೆಗಳು ಒಂದು ಮುಹೂರ್ತವಾಗುವುದು. ಆ ಮೂವತ್ತು ಮೂಹೂರ್ತಗಳಿಂದ ರಾತ್ರಿ ಮತ್ತು ಹಗಲೆಂಬ ದಿನವಾಗುವುದು.

೧೧೭. ದಿವಸಗಳಿಗೆ ಕ್ರಮವಾಗಿ ಅಹರ್ಭಾಗಗಳಿಂದ ಹ್ರಾಸವೂ ವೃದ್ಧಿಯೂ ಉಂಟಾಗುವುವು.

೧೧೮- ಸಂಧ್ಯಾಕಾಲವು ಒಂದು ಮುಹೂರ್ತಮಾತ್ರ ಕಾಲವು. ಇದು ದಿನದ ಹ್ರಾಸವೃದ್ಧಿಗಳಿಗೆ ನಿಮಿತ್ತವಾಗಿರುವುದು. ಆದಿತ್ಯನು ಲೇಖಾಭಾಗ ಮೊದಲುದೊಂಡು ಸಂಚರಿಸುವ ಮೂಹೂರ್ತತ್ರಯ ಕಾಲವು ಪ್ರಾತಃಕಾಲವೆನಿಸುವುದು.

೧೧೯. ಈ ಪ್ರಾತಃಕಾಲವೆಂಬುದು ಸಂಪೂರ್ಣ ದಿನದಲ್ಲಿ ಐದನೆಯ ಒಂದು

**ಮಧ್ಯಾಹ್ನಸ್ತ್ರಿಮುಹೂರ್ತಸ್ತು ತಸ್ಮಾತ್ಕಾಲಶ್ಚ ಸಂಗವಾತ್ ।**
**ತಸ್ಮಾನ್ಮಧ್ಯಂದಿನಾತ್ಕಾಲಾದಪರಾಹ್ಣ ಇತಿ ಸ್ಮೃತಃ ॥ ೧೨೦ ॥**

**ತ್ರಯ ಏವ ಮುಹೂರ್ತಾಸ್ತು ಕಾಲಭಾಗಃ ಸ್ಮೃತೋ ಬುಧೈಃ ।**
**ಅಪರಾಹ್ಣೇ ವ್ಯತೀತೇ ತು ಕಾಲಃ ಸಾಯಾಹ್ನ ಉಚ್ಯತೇ ॥ ೧೨೧ ॥**

**ದಶ ಪಂಚ ಮುಹೂರ್ತಾಹ್ನೋ ಮುಹೂರ್ತಾಸ್ತ್ರಯ ಏವ ಚ ।**
**ದಶ ಪಂಚ ಮುಹೂರ್ತಂ ವೈ ಹ್ಯಹರ್ವೈಷುವತಂ ಸ್ಮೃತಮ್ ॥ ೧೨೨ ॥**

**ವರ್ಧಂತೇ ಚ ಹ್ರಸಂತೇ ಚ ಹ್ಯಯನೇ ದಕ್ಷಿಣೋತ್ತರೇ ।**
**ಅಹಸ್ತು ಗ್ರಸತೇ ರಾತ್ರಿಂ ರಾತ್ರಿಶ್ಚ ಗ್ರಸತೇ ತ್ವಹಃ ॥ ೧೨೩ ॥**

---

ಭಾಗವು. ಈ ಪ್ರಾತಃಕಾಲವು ಕಳೆದ ತರುವಾಯ ಮೂರು ಮೂಹೂರ್ತಗಳ ಕಾಲವು ಸಂಗವಕಾಲವು.

೧೨೦. ಆ ಸಂಗವಕಾಲದ ಅನಂತರ ಬರುವ ತ್ರಿಮುಹೂರ್ತಕಾಲವು ಮಧ್ಯಾಹ್ನವೆಂದು ಎನಿಸಿರುವುದು. ಆ ಮಧ್ಯಾಹ್ನಕ್ಕಿಂತ ಪರವಾದ ಮುಹೂರ್ತತ್ರಯಭಾಗವು ಅಪರಾಹ್ಣಕಾಲವೆಂದು ಕರೆಯಲ್ಪಡುವುದು.

೧೨೧. ಹೀಗೆ ಪ್ರತಿಯೊಂದು ಕಾಲ ಭಾಗವನ್ನು ಮುಹೂರ್ತತ್ರಯಕಾಲದಿಂದ ಪ್ರಾಜ್ಞರು ವಿಂಗಡಿಸಿರುವರು. ಅಪರಾಹ್ಣಕಾಲವು ಕಳೆದ ಮೇಲೆ ಬರುವ ತ್ರಿಮುಹೂರ್ತ ಕಾಲವು ಸಾಯಾಹ್ನವೆಂದು ಹೇಳಲ್ಪಡುವುದು.

೧೨೨. ಅಹಸ್ಸಿನ ಒಟ್ಟು ಪರಿಮಾಣವು ಹದಿನೈದು ಮುಹೂರ್ತ ಪರಿಮಿತವಾದುದು. ಅದರ ಅವಾಂತರ ವಿಭಾಗವು ಮೂರು ಮುಹೂರ್ತಗಳಿಂದ ರಚಿತವಾಗಿದೆ. ವಿಷುವತ್ಕಾಲದ ಅಹಃಪರಿಮಾಣವು ಹ್ರಾಸವೃದ್ಧಿಗಳಿಲ್ಲದೆ ಹದಿನೈದು ಮುಹೂರ್ತ ರೂಪವಾಗಿ ಸಮವಾಗಿರುವುದು.

೧೨೩. ದಕ್ಷಿಣಾಯನ ಮತ್ತು ಉತ್ತರಾಯಣಗಳಲ್ಲಿ ಅಹೋರಾತ್ರಗಳ ಮುಹೂರ್ತಗಳು ಹ್ರಾಸ ಮತ್ತು ವೃದ್ಧಿಯನ್ನು ಹೊಂದುತ್ತಲಿರುವುವು. ಅಹಸ್ಸು ರಾತ್ರಿಯನ್ನೂ ರಾತ್ರಿಯು ಅಹಸ್ಸನ್ನೂ ಗ್ರಾಸಮಾಡುತ್ತವೆ.

ಶರದ್ವಸಂತಯೋರ್ಮಧ್ಯಂ ವಿಷುವತ್ಪರಿಭಾವ್ಯತೇ ।
ಅಹೋರಾತ್ರೇ ಕಲಾಶ್ಚೈವ ಸಮಂ ಸೋಮಃ ಸಮಶ್ನುತೇ ॥ ೧೨೪ ॥

ತಥಾ ಪಂಚದಶಾಹಾನಿ ಪಕ್ಷ ಇತ್ಯಭಿಧೀಯತೇ ।
ದ್ವೌ ಚ ಪಕ್ಷೌ ಭವೇನ್ಮಾಸೋ ದ್ವೌ ಮಾಸಾವರ್ಕಜಾವೃತುಃ ॥ ೧೨೫ ॥

ಋತುತ್ರಿತಯಮಯನೇ ದ್ವೇ ಸ್ಮೃತಂ ವರ್ಷಂ ತು ಸೌರಕಮ್ ।
ನಿಮೇಷಾ ವಿದ್ಯುತಶ್ಚೈವ ಕಾಷ್ಠಾಸ್ತಾ ದಶ ಪಂಚ ಚ ॥ ೧೨೬ ॥

ಕಲಾಸ್ತಾಸ್ತ್ರಿಂಶತಃ ಕಾಷ್ಠಾ ಮಾತ್ರಾಶೀತಿದ್ವಯಾತ್ಮಿಕಾ ।
ಸಪ್ತೈಕಾ ದ್ವ್ಯಧಿಕಾ ತ್ರಿಂಶನ್ಮಾತ್ರಾ ಷಟ್ತ್ರಿಂಶದುತ್ತರಾ ॥ ೧೨೭ ॥

---

೧೨೪. ಶರದೃತು ಮತ್ತು ವಸಂತಋತುಗಳ ಮಧ್ಯಸಮಯವು ವಿಷುವತ್ ಎಂದು ಕರೆಯಲ್ಪಟ್ಟಿದೆ. ಚಂದ್ರನು ಈ ಅಹೋರಾತ್ರಗಳಲ್ಲಿ ತನ್ನ ಕಲೆಗಳನ್ನು ಒಂದೊಂದು ಕಲೆಯನ್ನಾಗಿ ಹೊಂದುವನು.

೧೨೫. ಅಂತಹ ಹದಿನೈದು ದಿನಗಳ ಸಮೂಹವು ಪಕ್ಷವೆಂದು ಹೇಳಲ್ಪಡುತ್ತದೆ. ಅಂತಹ ಎರಡು ಪಕ್ಷಗಳು ಸೇರಿ ಒಂದು ಮಾಸವಾಗುವುದು. ಸೂರ್ಯನಗತಿ ವಿಶೇಷ ದಿಂದ ಆಗುವ ಈ ಎರಡು ಮಾಸಗಳು ಒಂದೊಂದು ಋತುಸ್ವರೂಪವಾಗುವುದು.

೧೨೬. ಮೂರು ಋತುಗಳು ಸೇರಲಾಗಿ ಒಂದು ಅಯನಕಾಲವಾಗುವುದು. ಅಂತಹ ಅಯನಗಳು ಎರಡು ಸೇರಿ ಒಂದು ವರ್ಷವಾಗುವುದು. ಇದು ಸೌರಮಾನ ವನ್ನು ಅನುಸರಿಸಿದ ವರ್ಷವು, ಕಾಲದ ವಿಭಾಗಗಳಲ್ಲಿ ನಿಮೇಷ, ವಿದ್ಯುತ್, ಮತ್ತು ಕಾಷ್ಠಾ ಎಂಬುವುಗಳು ಸೂಕ್ಷ್ಮಾವಸ್ಥೆಗಳು.

೧೨೭. ಆ ನಿಮೇಷಗಳು ಹದಿನೈದು ಸೇರಿದರೆ ಒಂದು ಕಾಷ್ಠಾ ಕಾಲವಾಗು ವುದು. ಆ ಕಾಷ್ಠಾಗಳು ಮೂವತ್ತು ಸೇರಿದರೆ ಒಂದು ಕಲಾಕಾಲವಾಗುವುದು, ಈ ಸೂಕ್ಷ್ಮಕಾಲಗಳಲ್ಲಿ ಮಾತ್ರಾ ಎಂಬುದು ಕಡೆಯಲ್ಲಿ ಎಣಿಸಲು ಯೋಗ್ಯವಾದ ಕಾಲವು. ಮೇಲೆ ಹೇಳಿರುವ ಕಾಷ್ಠಾ ಪರಿಮಾಣದಲ್ಲಿ ಒಂದನೂರ ಅರವತ್ತು ಮಾತ್ರಾ ಕಾಲ ಗಳು ಸೇರಿರುವುವು.

ದ್ವಿಷಷ್ಟಿನಾ ತ್ರಯೋವಿಂಶನ್ಮಾತ್ರಾಯಾಶ್ಚ ಕಲಾ ಭವೇತ್ ।
ಚತ್ವಾರಿಂಶತ್ಸಹಸ್ರಾಣಿ ಶತಾನ್ಯಷ್ಟೌ ಚ ವಿದ್ಯುತಃ ॥ ೧೨೮ ॥

ಸಪ್ತತಿಶ್ಚೈವ ತತ್ರಾಪಿ ನವತಿಂ ವಿದ್ಧಿ ನಿಶ್ಚಯೇ ।
ಚತ್ವಾರ್ಯೇವ ಶತಾನ್ಯಾಹುರ್ವಿದ್ಯುತೇ ದ್ವೇ ಚ ಸಂಯುತೇ ॥೧೨೯॥

ವರಾಂಶೋ ಹ್ಯೇಷ ವಿಜ್ಞೇಯೋ ನಾಡಿಕಾ ಚಾತ್ರಕಾರಣಮ್ ।
ಸಂವತ್ಸರಾದಯಃ ಪಂಚ ಚತುರ್ಮಾನವಿಕಲ್ಪಿತಾಃ ॥ ೧೩೦ ॥

ನಿಶ್ಚಯಃ ಸರ್ವಕಾಲಸ್ಯ ಯುಗಮಿತ್ಯಭಿಧೀಯತೇ ।
ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ॥ ೧೩೧ ॥

ಇಡಾವತ್ಸರಸ್ತೃತೀಯಸ್ತು ಚತುರ್ಥಶ್ಚಾನುವತ್ಸರಃ ।
ಪಂಚಮೋ ವತ್ಸರಸ್ತೇಷಾಂ ಕಾಲಸ್ತು ಯುಗಸಂಜ್ಞಿತಃ ॥ ೧೩೨ ॥

---

೧೨೮. ಇಂತಹ ಮಾತ್ರೆಗಳು ಎಳು, ಒಂದು, ಎರಡು, ಮೂವತ್ತು, ಮೂವತ್ತಾರು, ಅರವತ್ತೆರಡು, ಇಪ್ಪತ್ತಮೂರು ಈ ಸಂಖ್ಯೆಗಳನ್ನು ಸೇರಿಸಿದರೆ ಲಭಿಸುವ ಇನ್ನೂರ ಹತ್ತೊಂಭತ್ತು ಸೇರಿ ಒಂದು ಲವಕಾಲವಾಗುವುದು. ನಲವತ್ತು ಸಾವಿರದ ಎಂಟುನೂರು ಮಾತ್ರೆಗಳು ವಿದ್ಯುತ್ ಎಂದು ಕರೆಯಲ್ಪಡುವುವು;

೧೨೯. ಮತ್ತು ನಿಶ್ಚಯವೆಂಬ ಕಾಲಾಂಶದಲ್ಲಿ ಎಪ್ಪತ್ತು, ತೊಂಭತ್ತು ಮತ್ತು ನಾಲ್ಕುನೂರು ಸೇರಿ ಐದುನೂರ ನಲವತ್ತು ಮಾತ್ರೆಗಳಿವೆಯೆಂದು ತಿಳಿಯಬೇಕು.

೧೩೦. ಈ ಎರಡು ವಿದ್ಯುತ್ತುಗಳು ಸೇರಿ ಒಂದು ವರಾಂಶವೆಂದು ತಿಳಿಯಬೇಕು. ಈ ವರಾಂಶದಲ್ಲಿ ನಾಡಿಕಾ ಎಂಬುವುದು ಕಾರಣವು. ಸಂವತ್ಸರ ಮುಂತಾದ ಐದು ಕಾಲ ವಿಭಾಗಾವಸ್ಥೆಗಳು ನಾಲ್ಕು ಮಾನಗಳನ್ನು ಅನುಸರಿಸಿ ಕಲ್ಪಿಸಲ್ಪಟ್ಟಿವೆ.

೧೩೧. ವ್ಯವಹಾರದಲ್ಲಿರುವ ಸರ್ವಕಾಲಗಳ ಅವಧಿಯನ್ನು ಯುಗವೆಂದು ಕರೆಯುತ್ತಾರೆ. ಹಿಂದೆ ಹೇಳಿದ ಸಂವತ್ಸರ ಮುಂತಾದ ಕಾಲಾಂಶಗಳಲ್ಲಿ ಸಂವತ್ಸರವೆಂಬುದು ಮೊದಲನೆಯದಾಗಿಯೂ ಪರಿವತ್ಸರವು ದ್ವಿತೀಯವಾಗಿಯೂ ಇರುವುವು.

೧೩೨. ಇಡಾವತ್ಸರವು ತೃತೀಯವಾಗಿರುವುದು. ಅನುವತ್ಸರವೆಂಬುದು ನಾಲ್ಕನೆಯದು. ವತ್ಸರವು ಅವುಗಳಿಗೆ ಪಂಚಮವಾಗಿದೆ. ಇಂತಹ ಕಾಲವನ್ನು ಯುಗವೆಂದೂ ಕರೆಯುವುದುಂಟು.

ತ್ರಿಂಶಚ್ಛತಂ ಭವೇತ್ಪೂರ್ಣಂ ಪರ್ವಣಾಂ ತು ರವೇರ್ಯುಗೇ ।
ಶತಾನ್ಯಷ್ಟಾದಶ ತ್ರಿಂಶದುದಯಾದ್ಭಾಸ್ಕರಸ್ಯ ಚ ॥ ೧೩೩ ॥

ಋತವಸ್ತ್ರಿಂಶತಃ ಸೌರಾದಯನಾನಿ ದಶೈವ ತು ।
ಪಂಚ ಚ ತ್ರಿಶತಂ ಚಾಪಿ ಷಷ್ಟಿವರ್ಷಂ ಚ ಭಾಸ್ಕರಮ್ ॥ ೧೩೪ ॥

ತ್ರಿಂಶದೇವ ತ್ವಹೋರಾತ್ರಾಸ್ತೈಸ್ತು ಮಾಸಸ್ತು ಭಾಸ್ಕರಃ ।
ಏಕಷಷ್ಟಿಸ್ತ್ವಹೋರಾತ್ರಮೃತುರೇಕೋ ವಿಭಾವ್ಯತೇ ॥ ೧೩೫ ॥

ಅಹ್ನಾಂ ತು ತ್ರ್ಯಧಿಕಾಶೀತಿಃ ಶತಂ ಚಾಪ್ಯಧಿಕಂ ಭವೇತ್ ।
ಮಾನಂ ತಚ್ಚಿತ್ರಭಾನೋಸ್ತು ವಿಜ್ಞೇಯಮಯನಸ್ಯ ಹ ॥ ೧೩೬ ॥

ಸೌರಂ ಸೌಮ್ಯಂ ತು ವಿಜ್ಞೇಯಂ ನಾಕ್ಷತ್ರಂ ಸಾವನಂ ತಥಾ ।
ಮಾನಾನ್ಯೇತಾನಿ ಚತ್ವಾರಿ ಯೈಃ ಪುರಾಣೇ ಹಿ ನಿಶ್ಚಯಃ ॥ ೧೩೭ ॥

---

೧೩೩. ಒಂದು ಯುಗದಲ್ಲಿ ಸೂರ್ಯನ ಉದಯವಶದಿಂದ ಪರ್ವಕಾಲಗಳು ಮೂವತ್ತು, ಒಂದುನೂರು, ಒಂದುಸಾವಿರದ ಒಂಭೈನೂರ ಅರವತ್ತು ಸಂಖ್ಯೆಯಿಂದ ಪೂರ್ಣಗಳಾಗಿರುವುವು.

೧೩೪. ಮತ್ತು ಮೂವತ್ತು ಋತುಗಳು, ಹತ್ತು ಅಯನಗಳು, ಮೂರನೂರ ಅರವತ್ತೈದು ದಿನಗಳು ಸೌರಮಾನದಲ್ಲಿ ಒಂದು ಪರ್ವವಾಗುವುವು.

೧೩೫. ಮೂವತ್ತು ಅಹೋರಾತ್ರಗಳು ಸೇರಿ ಒಂದು ಸೌರಮಾನದ ಮಾಸವಾಗುವುದು, ಈ ಅರವತ್ತೊಂದು ಅಹೋರಾತ್ರಿಗಳು ಒಂದು ಋತುವೆಂದು ಶಾಸ್ತ್ರಜ್ಞರಿಂದ ಭಾವಿಸಲ್ಪಟ್ಟಿದೆ.

೧೩೬. ಸೂರ್ಯಮಾನದಲ್ಲಿ ಒಂದು ಅಯನದಲ್ಲಿ ಒಂದನೂರ ಎಂಭತ್ತಮೂರು ಅಹಸ್ಸು (ಹಗಲು) ಗಳು ಸೇರಿವೆ. ಇದು ಅಯನ ಪರಿಮಾಣವು.

೧೩೭. ಸೌರ, ಸೌಮ್ಯ, ನಾಕ್ಷತ್ರ, ಸಾವನವೆಂಬುದಾಗಿ ನಾಲ್ಕು ಕಾಲದ ಪರಿಮಾಣವನ್ನು ಬೋಧಿಸುವ ಪ್ರಮಾಣ ವಿಭಾಗಗಳು. ಇವುಗಳಿಂದ ಪುರಾಣದಲ್ಲಿ ಕಾಲಾಂಶಗಳನ್ನು ನಿರ್ಣಯಮಾಡಿದೆ.

**ಯಃ ಶ್ವೇತಸ್ಯೋತ್ತರಶ್ಚೈವ ಶೃಂಗವಾನ್ನಾಮ ಪರ್ವತಃ ।**
**ತ್ರೀಣಿ ತಸ್ಯ ತು ಶೃಂಗಾಣಿ ಸ್ಪೃಶಂತೀವ ನಭಸ್ತಲಮ್ ॥ ೧೩೮ ॥**

**ತೈಶ್ಚಾಪಿ ಶೃಂಗೈಃ ಸ ನಗಃ ಶೃಂಗವಾನಿತಿ ಕಥ್ಯತೇ ।**
**ಏಕಶ್ಚ ಮಾರ್ಗವಿಷ್ಕಂಭವಿಸ್ತಾರಶ್ಚಾಸ್ಯ ಕೀರ್ತಿತಃ ॥ ೧೩೯ ॥**

**ತಸ್ಯ ವೈ ಪೂರ್ವತಃ ಶೃಂಗಂ ಮಧ್ಯಮಂ ತದ್ಧಿರಣ್ಮಯಮ್ ।**
**ದಕ್ಷಿಣಂ ರಾಜತಂ ಚೈವ ಶೃಂಗಂ ತು ಸ್ಫಟಿಕಪ್ರಭಮ್ ॥ ೧೪೦ ॥**

**ಸರ್ವರತ್ನಮಯಂ ಚೈವ ಶೃಂಗಮುತ್ತರಮುತ್ತಮಮ್ ।**
**ಏವಂ ಕೂಟೈಸ್ತ್ರಿಭಿಃ ಶೈಲಃ ಶೃಂಗವಾನಿತಿ ವಿಶ್ರುತಃ ॥ ೧೪೧ ॥**

**ಶರದ್ವಸಂತಯೋರ್ಮಧ್ಯೇ ಮಧ್ಯಮಾಂ ಗತಿಮಾಸ್ಥಿತಃ ॥ ೧೪೨ ॥**

---

೧೩೮. ಶ್ವೇತಪರ್ವತದ ಉತ್ತರದಲ್ಲಿ ಇರುವ ಶೃಂಗವಾನ್ ಎಂಬ ಹೆಸರಿನಿಂದ ಪ್ರಸಿದ್ಧವಾದ ಪರ್ವತವು ತನ್ನ ಮೂರು ಉನ್ನತವಾದ ಶಿಖರಗಳಿಂದ ಆಕಾಶವನ್ನು ಮುಟ್ಟುತ್ತಿರುವಂತೆ ತೋರುತ್ತಿದೆ.

೧೩೯. ಆ ಪರ್ವತವು ಆ ಉನ್ನತವಾದ ಶೃಂಗ (ಶಿಖರ) ಗಳು ಇರುವುದರಿಂದ ಶೃಂಗವಾನ್ ಎಂಬ ಪ್ರಖ್ಯಾತಿಯನ್ನು ಹೊಂದಿರುವುದು. ಈ ಪರ್ವತದ ಮಾರ್ಗದ ವಿಷ್ಕಂಭ ವಿಸ್ತಾರ ಪರಿಮಾಣಗಳು ಸಮಾನವಾಗಿರುವುವು.

೧೪೦. ಆ ಪರ್ವತದಲ್ಲಿರುವ ದಕ್ಷಿಣ-ಪೂರ್ವ-ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿರುವ ಮೂರು ಶಿಖರಗಳಲ್ಲಿ ಪೂರ್ವಭಾಗದಲ್ಲಿರುವ ಮಧ್ಯದ ಶಿಖರವು ಸುವರ್ಣಮಯುವಾಗಿದೆ. ದಕ್ಷಿಣಭಾಗದ ಶಿಖರವು ರಜತಮಯವಾದ್ದರಿಂದ ಸ್ಫಟಿಕದಂತೆ ಶುಭ್ರವಾದ ಕಾಂತಿಯುಳ್ಳದ್ದಾಗಿದೆ.

೧೪೧. ಉತ್ತರಭಾಗದಲ್ಲಿರುವ ಮತ್ತೊಂದು ಶಿಖರವು ಸರ್ವರತ್ನಗಳಿಂದ ಶೋಭಿತವಾಗಿ ಬಹಳ ಉತ್ತಮವಾಗಿರುವುದು, ಈ ಮೂರು ಉತ್ತಮ ಶಿಖರಗಳಿಂದ ಪರ್ವತಕ್ಕೆ ಶೃಂಗವಾನ್ ಎಂಬ ಹೆಸರು ಪ್ರಸಿದ್ಧಿಹೊಂದಿದೆ.

೧೪೨. ಇವುಗಳಲ್ಲಿ ಮಧ್ಯಭಾಗದಲ್ಲಿರುವ ಪೂರ್ವ ಶೃಂಗವನ್ನು ಸೂರ್ಯನು ಶರತ್-ವಸಂತ ಋತುಗಳ ಮಧ್ಯಕಾಲದಲ್ಲಿ ಮಧ್ಯಮಗತಿಯಿಂದ ಸಂಚರಿಸುತ್ತ ಹೊಂದುವನು.

**ಅತಸ್ತುಲ್ಯಮಹೋರಾತ್ರಂ ಕರೋತಿ ತಿಮಿರಾಪಹಃ ।**
**ಹರಿತಾಶ್ಚ ಹಯಾ ದಿವ್ಯಾಸ್ತಸ್ಯ ಯುಕ್ತಾ ಮಹಾರಥೇ ।**
**ಅನುಲಿಪ್ತಾ ಇವಾಭಾಂತಿ ಪದ್ಮರಕ್ತೈರ್ಗಭಸ್ತಿಭಿಃ ॥ ೧೪೩ ॥**

**ಮೇಷಾಂತೇ ಚ ತುಲಾಂತೇ ಚ ಭಾಸ್ಕರೋದಯತಃ ಸ್ಮೃತಾಃ ।**
**ಮುಹೂರ್ತಾ ದಶ ಪಂಚೈವ ಅಹೋ ರಾತ್ರಿಶ್ಚ ತಾವತೀ ॥ ೧೪೪ ॥**

**ಕೃತ್ತಿಕಾನಾಂ ಯದಾ ಸೂರ್ಯಃ ಪ್ರಥಮಾಂಶಗತೋ ಭವೇತ್ ।**
**ವಿಶಾಖಾನಾಂ ತದಾ ಜ್ಞೇಯಶ್ಚತುರ್ಥಾಂಶೇ ನಿಶಾಕರಃ ॥ ೧೪೫ ॥**

**ವಿಶಾಖಾನಾಂ ಯದಾ ಸೂರ್ಯಶ್ಚರತೇಽಂಶಂ ತೃತೀಯಕಮ್ ।**
**ತದಾ ಚಂದ್ರಂ ವಿಜಾನೀಯಾತ್ ಕೃತ್ತಿಕಾಶಿರಸಿ ಸ್ಥಿತಮ್ ॥ ೧೪೬ ॥**

**ವಿಷುವಂ ತಂ ವಿಜಾನೀಯಾದೇವಮಾಹುರ್ಮಹರ್ಷಯಃ ॥ ೧೪೭ ॥**

---

೧೪೩. ಆದುದರಿಂದ ಆ ಸಮಯದಲ್ಲಿ ಸೂರ್ಯನು ಅಹಸ್ಸು ರಾತ್ರಿಗಳ ಪರಿಮಾಣವನ್ನು ಒಂದೇ ವಿಧವನ್ನಾಗಿ ಮಾಡುವನು. ಅವನ ಮಹಾ ರಥದಲ್ಲಿ ನಿಯುಕ್ತವಾದ ಹರಿತ (ಹಸುರು) ಬಣ್ಣದ ದಿವ್ಯವಾದ ಕುದುರೆಗಳು ಸೂರ್ಯಬಿಂಬದ ಪದ್ಮಗಳಂತೆ ಕೆಂಪಾದ ಕಿರಣಗಳಿಂದ ವ್ಯಾಪ್ತವಾಗಿರುವಂತೆ ಪ್ರಕಾಶಿಸುತ್ತವೆ.

೧೪೪. ಮೇಷಮಾಸ ಮತ್ತು ತುಲಾಮಾಸಗಳ ಸಮಾಪ್ತಿ ಸಮಯದಲ್ಲಿ ಸೂರ್ಯನ ಉದಯದಿಂದ ಹಗಲು ಮತ್ತು ರಾತ್ರಿಗಳ ಪರಿಮಾಣವು ಹದಿನೈದು ಮೂರ್ತಾತ್ಮಕವಾಗಿ ತುಲ್ಯವಾಗಿರುವುದೆಂದು ಪುರಾಣಜ್ಞರಿಂದ ಸ್ಮರಿಸಲ್ಪಟ್ಟಿರುತ್ತದೆ.

೧೪೫. ಯಾವ ಕಾಲದಲ್ಲಿ ಸೂರ್ಯನು ಕೃತ್ತಿಕಾನಕ್ಷತ್ರದ ಪ್ರಥಮಾಂಶದಲ್ಲಿ ಪ್ರವೇಶಿಸುವನೋ ಆಗ ಚಂದ್ರನು ವಿಶಾಖಾನಕ್ಷತ್ರದ ಚತುರ್ಥಾಂಶವನ್ನು ಹೊಂದುವನೆಂದು ತಿಳಿಯಬೇಕು.

೧೪೬. ಸೂರ್ಯನು ವಿಶಾಖಾ ನಕ್ಷತ್ರದ ತೃತೀಯಾಂಶದಲ್ಲಿ ಸಂಚರಿಸುವಾಗ ಚಂದ್ರನು ಕೃತಿಕಾನಕ್ಷತ್ರದ ಶಿರದಲ್ಲಿ ಇರುವನೆಂದು ತಿಳಿಯಬೇಕು.

೧೪೭. ಈ ರೀತಿಯಾಗಿ ವಿಷುವದ ಸ್ವರೂಪವನ್ನು ಮಹಾಮುನಿಗಳು ಪ್ರತಿಪಾದಿಸಿರುವರು.

ಸೂರ್ಯೇಣ ವಿಷುವಂ ವಿದ್ಯಾತ್ಕಾಲಂ ಸೋಮೇನ ಲಕ್ಷಯೇತ್ ।
ಸಮಾ ರಾತ್ರಿರಹಶ್ಚೈವ ಯದಾ ತದ್ವಿಷುವಂ ಭವೇತ್ ॥ ೧೪೮ ॥

ತದಾ ದಾನಾನಿ ದೇಯಾನಿ ಪಿತೃಭ್ಯೋ ವಿಷುವೇಷು ಚ ।
ಬ್ರಾಹ್ಮಣೇಭ್ಯೋ ವಿಶೇಷೇಣ ಮುಖಮೇತತ್ತು ದೈವತಮ್ ॥ ೧೪೯ ॥

ಊನಮಾಸಾಧಿಮಾಸೌ ಚ ಕಲಾಕಾಷ್ಠಾ ಮುಹೂರ್ತಕಾಃ ।
ಪೌರ್ಣಮಾಸೀ ತಥಾ ಜ್ಞೇಯಾ ಅಮಾವಾಸ್ಯಾ ತಥೈವ ಚ ।
ಸಿನೀವಾಲೀ ಕುಹೂಶ್ಚೈವ ರಾಕಾ ಚಾನುಮತಿಸ್ತಥಾ ॥ ೧೫೦ ॥

ತಪಸ್ತಪಸ್ಯೌ ಮಧುಮಾಧವೌ ಚ ಶುಕ್ರಃ
ಶುಚಿಶ್ಚಾಯನಮುತ್ತರಂಸ್ಯಾತ್ ।
ನಭೋನಭಸ್ಯಾವಿಷಊರ್ಜಸಂಜ್ಞೌ
ಸಹಃಸಹಸ್ಯಾವಿತಿ ದಕ್ಷಿಣಂ ಸ್ಯಾತ್ ॥ ೧೫೧ ॥

---

೧೪೮. ಸೂರ್ಯನ ಗತಿ ವಿಶೇಷದಿಂದ ವಿಷುವಸ್ವರೂಪವನ್ನೂ ಚಂದ್ರನ ಗತಿ ವಿಶೇಷದಿಂದ ಕಾಲವನ್ನೂ ಪರೀಕ್ಷಿಸಬೇಕು. ಯಾವ ಸಮಯಲ್ಲಿ ಅಹಸ್ಸು, ಮತ್ತು ರಾತ್ರಿಯು ಪರಿಮಾಣದಿಂದ ತುಲ್ಯವಾಗಿರುವುವೊ ಅದನ್ನು ವಿಷುವವೆಂದು ಭಾವಿಸಬೇಕು.

೧೪೯. ಆ ವಿಷುವ ಪುಣ್ಯಕಾಲದಲ್ಲಿ ಬ್ರಾಹ್ಮಣರಿಗೆ ವಿಶೇಷವಾಗಿ ಪಿತೃದೇವತಾ ಪ್ರೀತಿಯನ್ನುದ್ದೇಶಿಸಿ ದಾನಗಳನ್ನು ಆಚರಿಸಬೇಕು. ಬ್ರಾಹ್ಮಣರು ದೇವತೆಯು ಸ್ವೀಕರಿಸುವ ಭಾಗಕ್ಕೆ ಆ ದೇವತೆಯ ಮುಖಸ್ವರೂಪರಾದ್ದರಿಂದ ಪ್ರತಿಗ್ರಹಕ್ಕೆ ವಿಶೇಷವಾಗಿ ಪ್ರಶಸ್ತರಾಗಿರುವರು.

೧೫೦. ಊನಮಾಸ, ಅಧಿಕಮಾಸ, ಕಲಾ, ಕಾಷ್ಠಾ, ಮುಹೂರ್ತ, ಪೂರ್ಣಿಮಾ, ಅಮಾವಾಸ್ಯಾ, ಚಂದ್ರ ದರ್ಶನವುಳ್ಳ ಅಮಾವಾಸ್ಯಾ, ಚಂದ್ರದರ್ಶನ ರಹಿತವಾದ ಅಮಾವಾಸ್ಯಾ ಎಂಬ ಅಮಾವಾಸ್ಯೆಯ ವಿಭಾಗ, ಹಾಗೆಯೇ ಚಂದ್ರ ಕಲಾಹೀನವಾದ ಪೂರ್ಣಿಮಾ, ಕಲಾಪೂರ್ಣವಾದ ಪೂರ್ಣಿಮೆಯೆಂಬ ಪೂರ್ಣಿಮಾ ತಿಥಿಗಳ ವಿಭಾಗ—ಈ ಪುಣ್ಯಕಾಲಗಳ ಮುಹೂರ್ತಾದಿ ಸೂಕ್ಷ್ಮಾಂಶಗಳು ದಾನಾದಿ ಪುಣ್ಯ ಕರ್ಮಗಳಿಗೆ ವಿಶೇಷವಾಗಿ ಪ್ರಶಸ್ತವಾದುವುಗಳು.

೧೫೧. ಮಾಘ, ಫಾಲ್ಗುನ, ಚೈತ್ರ, ವೈಶಾಖ, ಜೇಷ್ಠ ಮತ್ತು ಆಷಾಢಮಾಸಗಳೆಂಬ ಷಣ್ಮಾಸಗಳು ಉತ್ತರಾಯಣಕಾಲವು. ಹಾಗೆಯೇ ಶ್ರಾವಣ, ಭಾದ್ರಪದ,

**ಆರ್ತವಾಶ್ಚ ತತೋ ಜ್ಞೇಯಾಃ ಪಂಚಾಬ್ದಾ ಬ್ರಹ್ಮಣಃ ಸುತಾಃ ॥೧೫೨॥**

**ತಸ್ಮಾಚ್ಚ ಋತವೋ ಜ್ಞೇಯಾ ಋತುಭ್ಯೋ ಹ್ಯಾರ್ತವಾಃ ಸ್ಮೃತಾಃ ।**
**ತಸ್ಮಾದೃತುಮುಖೀ ಜ್ಞೇಯಾ ಅಮಾವಾಸ್ಯಾಸ್ಯ ಪರ್ವಣಃ ॥ ೧೫೩ ॥**

**ತಸ್ಮಾತ್ತು ವಿಷುವಂ ಜ್ಞೇಯಂ ಪಿತೃದೇವಹಿತಂ ಸದಾ ।**
**ಪರ್ವ ಜ್ಞಾತ್ವಾ ನ ಮುಹ್ಯೇತ ಪಿತ್ರ್ಯೇ ದೈವೇ ಚ ಮಾನವಃ॥ ೧೫೪ ॥**

**ತಸ್ಮಾತ್ ಸ್ಮೃತಂ ಪ್ರಜಾನಾಂ ವೈ ವಿಷುವತ್ ಸರ್ವಗಂ ಸದಾ ।**
**ಆಲೋಕಾತ್ತು ಸ್ಮೃತೋ ಲೋಕೋ ಲೋಕಾಲೋಕಃ ಸ ಉಚ್ಯತೇ**
**॥ ೧೫೫ ॥**

---

ಆಶ್ವೀಜ, ಕಾರ್ತೀಕ, ಮಾರ್ಗಶಿರ, ಮತ್ತು ಪುಷ್ಯಗಳೆಂಬ ಷಣ್ಮಾಸಗಳು ದಕ್ಷಿಣಾಯನ ಕಾಲವು. ಎಂದು ಮಾಸಕ್ರಮದಿಂದ ಅಯನ ವಿಭಾಗವನ್ನು ತಿಳಿಯಬೇಕು.

೧೫೨. ಬ್ರಹ್ಮನ ಪುತ್ರರಾಗಿ ಋತು ಸಂಬಂಧಸಹಿತವಾಗಿ ಹುಟ್ಟಿರುವ ಐದು ಸಂವತ್ಸರಗಳನ್ನು ಆರ್ತವವೆಂದು ತಿಳಿಯಬೇಕು.

೧೫೩. ಸೃಷ್ಟಿಕರ್ತನಾದ ಬ್ರಹ್ಮನಿಂದ ಮೊದಲು ಋತುಗಳು ಜನಿಸಿ ತರುವಾಯ ಋತುಗಳಿಂದ ಆರ್ತವಗಳು ಜನಿಸಿವೆಯೆಂದು ತಿಳಿಯಬೇಕು. ಋತುಗಳಿಂದ ಜನಿಸಿದ್ದರಿಂದ ಆರ್ತವೆಂಬ ಹೆಸರು ಬಂದಿರುವುದು. ಆದುದರಿಂದ ಅನೇಕ ಪರ್ವಗಳಲ್ಲಿ ಅಮಾವಾಸ್ಯೆಯು ಋತುವಿನ ಆದಿಭಾಗದ ತಿಥಿಯಾದ್ದರಿಂದ ಋತುಮುಖಿಯೆಂದು ತಿಳಿಯಬೇಕು.

೧೫೪. ಆದ್ದರಿಂದ ವಿಷುವಕಾಲವನ್ನು ಯಾವಾಗಲೂ ಪಿತೃ ಮತ್ತು ದೇವತೆಗಳ ಪ್ರೀತಿಯನ್ನು ಕೊಡುವ ಪುಣ್ಯಕಾಲವೆಂದು ತಿಳಿದು ಅಂತಹಪರ್ವಕಾಲದಲ್ಲಿ ಮಾನವನು ಪಿತೃ ಮತ್ತು ದೇವತಾಕರ್ಮಗಳ ವಿಷಯದಲ್ಲಿ ಭ್ರಾಂತನಾಗದೆ ಅನುಷ್ಠಾನ ಮಾಡಬೇಕು.

೧೫೫. ಈ ಕಾರಣದಿಂದ ವಿಷುವಕಾಲವನ್ನು ಪ್ರಜೆಗಳಿಗೆ ಎಲ್ಲವನ್ನೂ ವ್ಯಾಪಿಸಿರುವ ಮಹಾಪವಿತ್ರವೆಂದು ಪ್ರಾಜ್ಞರು ಹೇಳುವರು. ಆ ಹಿಂದೆ ಹೇಳಿರುವ ಲೋಕಾಲೋಕಪರ್ವತವು ಆಲೋಕಸಂಬಂಧದಿಂದ ಆ ಹೆಸರನ್ನು ಹೊಂದಿದೆ.

ಲೋಕಪಾಲಾಃ ಸ್ಥಿತಾಸ್ತತ್ರ ಲೋಕಾಲೋಕಸ್ಯ ಮಧ್ಯತಃ ।
ಚತ್ವಾರಸ್ತೇ ಮಹಾತ್ಮಾನ ಸ್ತಿಷ್ಠಂತ್ಯಾಭೂತಸಂಪ್ಲವಮ್ ॥ ೧೫೬ ॥

ಸುಧಾಮಾ ಚೈವ ವೈರಾಜಃ ಕರ್ದಮಃ ಶಂಖಪಾಸ್ತಥಾ ।
ಹಿರಣ್ಯರೋಮಾ ಪರ್ಜನ್ಯಃ ಕೇತುಮಾನ್ ರಾಜಸಶ್ಚ ಯಃ ॥ ೧೫೭ ॥

ನಿರ್ದ್ವಂದ್ವಾ ನಿರಭೀಮಾನಾ ನಿಃಸೀಮಾ ನಿಷ್ಪರಿಗ್ರಹಾಃ ।
ಲೋಕಪಾಲಾಃ ಸ್ಥಿತಾ ಹ್ಯೇತೇ ಲೋಕಾಲೋಕೇ ಚತುರ್ದಿಶಮ್
॥ ೧೫೮ ॥

ಉತ್ತರಂ ಯುಗದಸ್ತಸ್ಯ ಹ್ಯಜವೀಥ್ಯಾಶ್ಚ ದಕ್ಷಿಣಮ್
ಪಿತೃಯಾನಃ ಸ ವೈ ಪಂಥಾ ವೈಶ್ವಾನರಪಥಾದ್ಬಹಿಃ ॥ ೧೫೯ ॥

ತತ್ರಾಸತೇ ಪ್ರಜಾವಂತೋ ಮುನಯೋ ಯೇಽಗ್ನಿಹೋತ್ರಿಣಃ ।
ಲೋಕಸ್ಯ ಸಂತಾನಕರಾಃ ಪಿತೃಯಾನಪಥೇ ಸ್ಥಿತಾಃ ॥ ೧೬೦ ॥

ಭೂತಾರಂಭಕೃತಂ ಕರ್ಮ ಆಶಿಷೋ ಋತ್ವಿಗುದ್ಯತಾಃ ।
ಪ್ರಾರಭಂತೇ ಲೋಕಕಾಮಾಸ್ತೇಷಾಂ ಪಂಥಾಃ ಸ ದಕ್ಷಿಣಃ ॥ ೧೬೧ ॥

---

೧೫೬. ಈ ಲೋಕಾಲೋಕ ಪರ್ವತದ ಮಧ್ಯದಲ್ಲಿ ಮಹಾತ್ಮರಾದ ನಾಲ್ಕು ಮಂದಿ ಲೋಕಪಾಲಕರು ಪ್ರಲಯಕಾಲಪರ್ಯಂತವಾಗಿಯೂ ವಾಸಮಾಡುವರು.

೧೫೭. ಆ ನಾಲ್ಕು ಲೋಕಪಾಲಕರು ಯಾರೆಂದರೆ:—ವೈರಾಜ ಅಥವಾ ಸುಧಾಮನು, ಶಂಖಪಾ ಅಥವಾ ಕರ್ದಮನು, ಹಿರಣ್ಯರೋಮಾ ಅಥವಾ ಪರ್ಜನ್ಯನು. ಮತ್ತು ಕೇತುಮಾನ್ ಮತ್ತು ರಾಜಸ ಎಂಬುವರು.

೧೫೮. ಈ ಲೋಕಾಲೋಕ ಪರ್ವತದ ನಾಲ್ಕು ದಿಕ್ಕುಗಳಲ್ಲಿ ದ್ವಂದ್ವಗಳನ್ನು ತ್ಯಜಿಸಿದವರೂ, ಅಭಿಮಾನನಿರ್ಮುಕ್ತರೂ ವಾಸಸೀಮಾರಹಿತರೂ, ಮತ್ತು ಪರಿಗ್ರಹ ಶೂನ್ಯರೂ ಆಗಿರುವರು.

೧೫೯. ಆ ಪರ್ವತದ ಉತ್ತರದಲ್ಲಿಯೂ ಅಜವೀಥಿಯ ದಕ್ಷಿಣದಲ್ಲಿಯೂ ವೈಶ್ವಾನರ ಪಥದ ಬಾಹ್ಯಭಾಗದಲ್ಲಿ ಪಿತೃಯಾಣವೆಂಬ ಮಾರ್ಗವಿರುವುದು.

೧೬೦. ಆ ಪಿತೃಯಾಣದಲ್ಲಿ ಪ್ರಜಾವಂತರೂ ಅಗ್ನಿಹೋತ್ರಾನುಷ್ಠಾನ ಪರರೂ ಆದ ಮುನಿಗಳು ಲೋಕ ಸಂತತಿಯನ್ನು ಅವಿಚ್ಛಿನ್ನವಾಗಿ ನಡೆಸುತ್ತಿರುವರು.

೧೬೧. ಪಿತೃಲೋಕ ಕಾಮನೆಯಿಂದ ಪ್ರಜೆಗಳು ಪಶು-ಪುರೋಡಾಶ ಮುಂತಾದ

ಚಲಿತಂ ತೇ ಪುನರ್ಧರ್ಮಂ ಸ್ಥಾಪಯಂತಿ ಯುಗೇ ಯುಗೇ ।
ಸಂತಪ್ತಾಸ್ತಪಸಾ ಚೈವ ಮರ್ಯಾದಾಭಿಃ ಶ್ರುತೇನ ಚ ॥ ೧೬೨ ॥

ಜಾಯಮಾನಾಸ್ತು ಪೂರ್ವೇ ವೈ ಪಶ್ಚಿಮಾನಾಂ ಗೃಹೇಷ್ವಿಹ ।
ಪಶ್ಚಿಮಾಶ್ಚೈವ ಪೂರ್ವೇಷಾಂ ಜಾಯಂತೇ ನಿಧನೇಷ್ವಪಿ ॥ ೧೬೩ ॥

ಏವಮಾವರ್ತಮಾನಾಸ್ತೇ ತಿಷ್ಠಂತ್ಯಾಭೂತಸಂಪ್ಲವಾತ್ ।
ಅಷ್ಟಾಶೀತಿಸಹಸ್ರಾಣಿ ಋಷೀಣಾಂ ಗೃಹಮೇಧಿನಾಮ್ ॥ ೧೬೪ ॥

ಸವಿತುರ್ದಕ್ಷಿಣಂ ಮಾರ್ಗಂ ಶ್ರಿತಾ ಹ್ಯಾಚಂದ್ರತಾರಕಮ್ ।
ಕ್ರಿಯಾವತಾಂ ಪ್ರಸಂಖ್ಯೈಷಾ ಯೇ ಶ್ಮಶಾನಾನಿ ಭೇಜಿರೇ ॥ ೧೬೫ ॥

---

ಭೂತ ಸಂಬಂಧಿಯಾದ ಹವಿಸ್ಸಿನಿಂದ ಮಾಡಬೇಕಾಗಿರುವ, ಮತ್ತು ಋತ್ವಿಜರಿಂದ ನೆರವೇರಿಸಲ್ಪಟ್ಟ ವಿವಿಧ ಕಾಮ್ಯಕರ್ಮಗಳಿಂದ ಕೂಡಿದ ವಿಧಿವಿಹಿತಕರ್ಮವನ್ನು ಆಚರಿಸಿದವರಿಗೆ ಈ ಪಿತೃಯಾನ ಅಥವಾ ದಕ್ಷಿಣ ಮಾರ್ಗವು ಪ್ರಾಪ್ಯವಾಗಿರುವುದು.

೧೬೨. ಅವರು ಕಾಲಕ್ರಮದಿಂದ ಹ್ರಾಸವಾಗುತ್ತಿದ್ದ ಧರ್ಮವನ್ನು ಪ್ರತಿಯೊಂದು ಯುಗದಲ್ಲಿಯೂ ಸ್ಥಿರಪಡಿಸುವರು. ಮತ್ತು ತಾವು ಮಹತ್ತಾದ ತಪಸ್ಸಿನ ಕ್ಲೇಶವನ್ನು ಅನುಭವಿಸುತ್ತ ಲೋಕಮರ್ಯಾದಾ, ಮತ್ತು ವೇದಾಧ್ಯಯನಗಳಿಂದ ಕೂಡಿರುವರು.

೧೬೩. ಪಿತೃಯಾನವನ್ನು ಹೊಂದಿದ ಆಸುಕೃತಿಗಳಲ್ಲಿ ಪೂರ್ವಿಕರು ಮುಂದಿನವರ ಗೃಹಗಳಲ್ಲಿಯೂ ಮುಂದಿನವರು ಪೂರ್ವಿಕರ ವಂಶಗಳಲ್ಲಿಯೂ ಮರಣಾನಂತರದಲ್ಲಿ ಹುಟ್ಟುತ್ತ ಚಕ್ರದಂತೆ ಪುನಃ ಪುನಃ ಜನ್ಮಮರಣಗಳನ್ನು ಅನನುಭವಿಸುತ್ತಲಿರುವರು.

೧೬೪. ಎಂಭತ್ತೆಂಟು ಸಹಸ್ರ ಸಂಖ್ಯೆಯ ಗೃಹಸ್ಥ ಮುನಿಗಳು ಈ ಅನುಷ್ಠಾನ ತತ್ಪರತೆಯಿಂದ ಪುನಃ ಪುನರಾವೃತ್ತಿಯುಳ್ಳವರಾಗಿ ಸೂರ್ಯನ ದಕ್ಷಿಣ ಮಾರ್ಗವಾದ ಈ ಪಿತೃಯಾಣವನ್ನು ಆಶ್ರಯಿಸಿ ಪ್ರಲಯಕಾಲ ಪರ್ಯಂತವೂ ಇರುವರು.

೧೬೫. ಹೀಗೆ ಚಂದ್ರ-ತಾರಕೆಗಳು ಇರುವಷ್ಟು ದೀರ್ಘಕಾಲವೂ ನಿಷೇಕಾದಿ ಶ್ಮಶಾನಾಂತ ಕರ್ಮಗಳಿಂದ ಸಂಸ್ಕೃತರಾಗಿರುವ ಕರ್ಮಯೋಗಿಗಳ ಸಂಖ್ಯೆಯು ಈ ಪುಣ್ಯವಾದ ಪಿತೃಲೋಕ ಸುಖವನ್ನು ಅನುಭವಿಸುತ್ತಿರುವುದು.

**ಲೋಕಸಂವ್ಯವಹಾರಾಶ್ಚ ಭೂತಾರಂಭಕೃತೇನ ಚ ।**
**ಇಚ್ಛಾದ್ವೇಷಪ್ರವೃತ್ತ್ಯಾ ಚ ಮೈಥುನೋಪಗಮೇನ ವೈ ॥ ೧೬೬ ॥**

**ತಥಾ ಕಾಮಕೃತೇನೇಹ ಸೇವನಾದ್ವಿಷಯಸ್ಯ ಚ ।**
**ಏತೈಸ್ತೈಃ ಕಾರಣೈಃ ಸಿದ್ಧಾ ಯೇ ಶ್ಮಶಾನಾನಿ ಭೇಜಿರೇ ॥ ೧೬೭ ॥**

**ಪ್ರಜೈಷಿಣಸ್ತೇ ಮುನಯೋ ದ್ವಾಪರೇಷ್ವಿಹ ಜಜ್ಞಿರೇ ।**
**ನಾಗವೀಥ್ಯುತ್ತರೋ ಯಶ್ಚ ಸಪ್ತರ್ಷಿಗಣದಕ್ಷಿಣಃ ॥ ೧೬೮ ॥**

**ಉತ್ತರಃ ಸವಿತುಃ ಪಂಥಾ ದೇವಯಾನಶ್ಚ ಸ ಸ್ಮೃತಃ ।**
**ಯತ್ರ ತೇ ವಾಸಿನಃ ಸಿದ್ಧಾ ವಿಮಲಾ ಬ್ರಹ್ಮಚಾರಿಣಃ ॥ ೧೬೯ ॥**

**ಸಂತತಿಂ ತೇ ಜುಗುಪ್ಸಂತೇ ತಸ್ಮಾನ್ಮೃತ್ಯುಸ್ತು ತೈರ್ಜಿತಃ ।**
**ಅಷ್ಟಾಶೀತಿಸಹಸ್ರಾಣಿ ಋಷೀಣಾಮೂರ್ಧ್ವರೇತಸಾಮ್ ॥ ೧೭೦ ॥**

---

೧೬೬-೧೬೭. ಕರ್ಮಯೋಗಿಗಳ ಕರ್ತವ್ಯಗಳು :—ಲೋಕವ್ಯವಹಾರಗಳು, ಭೌತಿಕವಸ್ತು ವಿನಿಯೋಗದಿಂದಲೂ ಇಚ್ಛಾದ್ವೇಷಗಳಿಂದಲೂ ಆಗುವ ಪ್ರವೃತ್ತಿ ಕರ್ಮಗಳು, ಮತ್ತು ಕಾಮವಿಕಾರದಿಂದ ಮೈಥುನಾಚರಣೆ, ಮತ್ತು ವಿಷಯಸುಖಾನುಭವ ಮುಂತಾದ ಕರ್ಮಗಳಿಂದ ಪೂರ್ಣವಾಗಿರುವುವು. ಸಿದ್ಧರು ಈ ಅನುಷ್ಠಾನ ಬಲವೆಂಬ ಕಾರಣದಿಂದ ಜೀವಿತಾವಸಾನದಲ್ಲಿ ಮರಣವನ್ನು ಹೊಂದಿ ಶ್ಮಶಾನ ಕರ್ಮದಿಂದ ಸಂಸ್ಕೃತರಾಗುವರು.

೧೬೮. ಅಂತಹ ಮುನಿಗಳು ಪ್ರಜಾಕಾಮನೆಯುಳ್ಳವರಾಗಿ ದ್ವಾಪರಯುಗದಲ್ಲಿ ಪುನರ್ಜನ್ಮವೆತ್ತುವರು. ಪಿತೃಯಾಣ ಮಾರ್ಗದಂತೆ ನಾಗವೀಥಿಗೆ ಉತ್ತರದಲ್ಲಿಯೂ ಸಪ್ತರ್ಷಿಗಣಕ್ಕೆ ದಕ್ಷಿಣದಲ್ಲಿಯೂ ಒಂದು ಮಾರ್ಗವಿರುವುದು.

೧೬೯. ಆ ಸೂರ್ಯನ ಉತ್ತರ ಮಾರ್ಗವನ್ನು ದೇವಯಾನವೆಂದು ಪ್ರಾಜ್ಞರು ಕರೆಯುವರು- ಅಲ್ಲಿ ನಿರ್ಮಲ ಬ್ರಹ್ಮಚರ್ಯವನ್ನು ಅನುಷ್ಠಾನಮಾಡಿರುವ ಸಿದ್ಧ ಪುರುಷರು ವಾಸಮಾಡುವರು.

೧೭೦. ಅವರು ವಿರಕ್ತಿಯಿಂದ ಸಂತತಿಯನ್ನು ಸ್ಮರಿಸಿ ಬಹಳ ಜುಗುಪ್ಸೆಪಡುವರು. ಊರ್ಧ್ವರೇತಸ್ಸುಗಳಾದ ಆ ಸಿದ್ಧರು ಎಂಭತ್ತೆಂಟು ಸಹಸ್ರ ಸಂಖ್ಯೆಯಿಂದಿರುವರು. ಅವರು ಮೃತ್ಯುವನ್ನು ಅತಿಕ್ರಮಿಸಿರುವರು.

ಉದಕ್‌ಪಂಥಾನಮುತ್ಯರ್ಥಂ ಶ್ರಿತಾ ಹ್ಯಾಶ್ರಿತ ಸಂಪ್ಲವಾತ್ ।
ತೇ ಸಂಪ್ರಯೋಗಾಲ್ಲೋಕಸ್ಯ ಮೈಥುನಸ್ಯ ಚ ವರ್ಜನಾತ್ ॥ ೧೭೧ ॥

ಇಚ್ಛಾದ್ವೇಷನಿವೃತ್ತ್ಯಾ ಚ ಭೂತಾರಂಭವಿವರ್ಜನಾತ್ ।
ಪುನಶ್ಚಾಕಾಮಸಂಯೋಗಾಚ್ಛಬ್ದಾದೇರ್ದೋಷದರ್ಶನಾತ್ ॥ ೧೭೨ ॥

ಇತ್ಯೇತೈಃ ಕಾರಣೈಃ ಸಿದ್ಧಾಸ್ತೇಽಮೃತತ್ವಂ ಹಿ ಭೇಜಿರೇ ।
ಆಭೂತಸಂಪ್ಲವಸ್ಥಾನಾಮಮೃತತ್ವಂ ವಿಭಾವ್ಯತೇ ॥ ೧೭೩ ॥

ತ್ರೈಲೋಕ್ಯಸ್ಥಿತಿಕಾಲಾಯ ಪುನರ್ದಾರಾಭಿಗಾಮಿನಾಮ್ ।
ಭ್ರೂಣಹತ್ಯಾಶ್ವಮೇಧಾಭ್ಯಾಂ ಪುಣ್ಯಪಾಪಕೃತೋಽಪರೇ ॥ ೧೭೪ ॥

---

೧೭೧. ಅವರು ಉತ್ತರವೆಂಬ ದೇವಯಾನಮಾರ್ಗವನ್ನು ಹೊಂದಿ, ಆಶ್ರಿತವಾದ ದೇಹಾದಿ ಉಪಕರಣಗಳಲ್ಲಿ ಅಭಿಮಾನಶೂನ್ಯರಾಗಿರುವುದರಿಂದಲೂ ಲೋಕವ್ಯವಹಾರವನ್ನು ಅಭಿಮಾನಶೂನ್ಯತೆಯೆಂಬ ಕೌಶಲದಿಂದ ಮಾಡುವುದರಿಂದಲೂ, ಮತ್ತು ಮೈಥುನವೆಂಬ ಗ್ರಾಮ್ಯಾಚರಣೆಯನ್ನು ಬಿಟ್ಟಿರುವುದರಿಂದಲೂ ಕೂಡ ಉತ್ತಮವಾದ ಸಿದ್ಧಿಯನ್ನು ಹೊಂದಿರುವರು.

೧೭೨. ಮತ್ತು ಇಚ್ಛಾ ದ್ವೇಷಗಳಿಂದ ರಹಿತರಾಗಿಯೂ ಅದಕ್ಕೆ ಅಧೀನವಾದ ಯಜ್ಞಾದಿಕರ್ಮಗಳನ್ನು ತ್ಯಜಿಸಿರುವವರಾಗಿಯೂ ನಿಷ್ಕಾಮರಾಗಿಯೂ ಶಬ್ದಾದಿ ವಿಷಯಗಳಲ್ಲಿ ದೋಷದರ್ಶನ ಉಳ್ಳವರಾಗಿಯೂ ಇರುವರು.

೧೭೩. ಈ ಕಾರಣಗಳಿಂದ ಆಸಿದ್ಧರು ನಿವೃತ್ತಿ ಧರ್ಮಪ್ರಧಾನರಾಗಿದ್ದುಕೊಂಡು ಅಮೃತತ್ವವನ್ನು ಹೊಂದಿರುವರು. ಪ್ರಲಯ ಪರ್ಯಂತವಾದ ಶಾಶ್ವತಸ್ಥಾನವನ್ನು ಅಮೃತತ್ವವೆಂದು ಕರೆಯುವರು.

೧೭೪. ಇನ್ನು ಕೆಲವರು ಕಾಲತ್ರಯದಲ್ಲಿ ಸ್ಥಿತಿಯನ್ನು ಹೊಂದುವುದಕ್ಕಾಗಿ ಪುನಃ ಭಾರ್ಯಾಸಂಗಮಾದಿಗಳನ್ನು ಆಚರಿಸುತ್ತ ಭ್ರೂಣಹತ್ಯಾ-ಅಶ್ವಮೇಧ ಮುಂತಾದ ಮಹಾಪಾತಕ ಅಥವಾ ಉತ್ತಮ ಪುಣ್ಯ ಕರ್ಮಗಳನ್ನು ಮಾಡುತ್ತ ಪ್ರವಾಹರೂಪದಿಂದಿರುವರು. ಇದು ಒಂದು ಪ್ರಜೆಗಳ ಗುಂಪು.

ಆಭೂತಸಂಪ್ಲವಾಂತೇ ತು ಕ್ಷೀಯಂತೇ ಹ್ಯೂರ್ಧ್ವರೇತಸಃ ।
ಊರ್ಧ್ವೋತ್ತರಮೃಷಿಭ್ಯಸ್ತು ಧ್ರುವೋ ಯತ್ರ ಸ ವೈ ಸ್ಮೃತಃ ॥೧೭೫॥

ಏತದ್ವಿಷ್ಣುಪದಂ ದಿವ್ಯಂ ತೃತೀಯಂ ವ್ಯೋಮ್ನಿ ಭಾಸ್ವರಮ್ ।
ಯತ್ರ ಗತ್ವಾ ನ ಶೋಚಂತಿ ತದ್ವಿಷ್ಣೋಃ ಪರಮಂ ಪದಮ್

ಧರ್ಮಧ್ರುವಾದ್ಯಾಸ್ತಿಷ್ಠಂತಿ ಯತ್ರ ತೇ ಲೋಕಸಾಧಕಾಃ ॥ ೧೭೬ ॥
ಇತಿ ಶ್ರೀ ಬ್ರಹ್ಮಾಂಡಪುರಾಣೇ ಏಕವಿಂಶತಿತಮೋಽಧ್ಯಾಯಃ.

---

೧೭೫. ಊರ್ಧ್ವರೇತಸ್ಸಗಳಾದ ಋಷಿಗಳು ಪ್ರಲಯಕಾಲಾನಂತರದಲ್ಲಿ ಕ್ಷಯಿಸಿ ಋಷಿಮಂಡಲದ ಮೇಲುಭಾಗದಲ್ಲಿ ಧ್ರುವಮಂಡಲವಿರುವ ಸ್ಥಾನವನ್ನು ಹೊಂದುವರು.

೧೭೬. ಆಕಾಶದಲ್ಲಿ ಪ್ರಕಾಶಶೀಲವೂ ದಿವ್ಯವೂ ಆದ ಆ ಸ್ಥಾನವು ವಿಷ್ಣುಪದ ರೂಪವಾದುದು. ಆ ವಿಷ್ಣುವಿನ ಪರಮಪದವನ್ನು ಹೊಂದಿ ಶೋಕದಿಂದ ಮುಕ್ತರಾಗುವರು. ಅಲ್ಲಿ ಮುಕ್ತಿ ಸುಖವನ್ನು ಅನುಭವಿಸುತ್ತ ಲೋಕಸಾಧಕರಾದ ಧರ್ಮ, ಧ್ರುವ ಮುಂತಾದವರು ವಾಸಮಾಡುವರು.

ಬ್ರಹ್ಮಾಂಡಪುರಾಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವು.

---

## ದ್ವಾವಿಂಶತಿತಮೋಽಧ್ಯಾಯಃ

**ಸೂತ ಉವಾಚ**

**ಸ್ವಾಯಂಭುವನಿಸರ್ಗೇ ತು ವ್ಯಾಖ್ಯಾತಾನ್ಯಂತರಾಣಿ ಚ ।**
**ಭವಿಷ್ಯಾಣಿ ಚ ಸರ್ವಾಣಿ ತೇಷಾಂ ವಕ್ಷ್ಯಾಮ್ಯನುಕ್ರಮಮ್ ॥ ೧ ॥**

**ಏತಚ್ಛ್ರುತ್ವಾ ತು ಮುನಯಃ ಪಪ್ರಚ್ಛು ರೋಮಹರ್ಷಣಮ್ ।**
**ಸೂರ್ಯಾಚಂದ್ರಮಸೋಶ್ಚಾರಂ ಗ್ರಹಾಣಾಂ ಚೈವ ಸರ್ವಶಃ ॥ ೨ ॥**

**ಋಷಯ ಊಚುಃ**

**ಭ್ರಮಂತಿ ಕಥಮೇತಾನಿ ಜ್ಯೋತೀಂಷಿ ದಿವಮಂಡಲಮ್ ।**
**ಅವ್ಯೂಹೇನ ಚ ಸರ್ವಾಣಿ ತಥೈವಾಸಂಕರೇಣ ವಾ ॥ ೩ ॥**

**ಕಶ್ಚಿದ್ಭ್ರಾಮಯತೇ ತಾನಿ ಭ್ರಮಂತೇ ಯದಿ ವಾ ಸ್ವಯಮ್ ।**
**ಏತದ್ವೇದಿತುಮಿಚ್ಛಾಮಸ್ತನ್ನೋ ನಿಗದ ಸತ್ತಮ ॥ ೪ ॥**

---

೧. ಸೂತಮುನಿಯು ಇಂತೆಂದನು :—ಸ್ವಾಯಂಭುವ ಮನ್ವಂತರದ ಸೃಷ್ಟಿ ಪ್ರಪಂಚದಲ್ಲಿ ಅನೇಕ ಭೂತಮನ್ವಂತರಗಳೂ ಮತ್ತು ಮುಂದೆ ಬರುವ ಮನ್ವಂತರ ಗಳೂ ವರ್ಣಿಸಲ್ಪಟ್ಟವು. ಅವುಗಳ ಕ್ರಮವನ್ನು ಹೇಳುವೆನು.

೨. ಈ ಸೂತಮುನಿಯ ವಚನವನ್ನು ಕೇಳಿದ ಸಕಲ ಮಹರ್ಷಿಗಳು ಸೂರ್ಯ, ಚಂದ್ರ, ಮತ್ತು ಸಮಸ್ತ ಗ್ರಹಗಳ ಚಾರ ವಿಷಯವನ್ನು ಕುರಿತು ಪ್ರಶ್ನಿಸುವವ ರಾದರು.

೩. ಋಷಿವರ್ಯರ ಪ್ರಶ್ನವಾವುದೆಂದರೆ :—ತೇಜೋಮಂಡಲದಲ್ಲಿ ಸೇರಿ ಸಾವಿರಾರು ಜ್ಯೋತಿಗಳು ವ್ಯೂಹರಚನೆಯಿಲ್ಲದೆ ಮತ್ತು ಪರಸ್ಪರ ಸಂಕರವಿಲ್ಲದೆ ಆಕಾಶಮಂಡಲವನ್ನು ವ್ಯಾಪಿಸಿ ಸುತ್ತುತ್ತಿರುವುದು ಹೇಗೆ ?

೪. ಸಾಧುಶ್ರೇಷ್ಠನೇ ! ಆ ಜ್ಯೋತಿಗಳನ್ನು ಯಾರಾದರೊಬ್ಬ ನಿಯಾಮಕನು ಕ್ರಮವಾಗಿ ಸುತ್ತಿಸುತ್ತಿರುವನೇ, ಅಥವಾ ಸ್ವತಂತ್ರವಾಗಿ ತಾವೇ ಸುತ್ತುತ್ತಲಿರುವುವೆ ? ಈ ವಿಷಯವನ್ನು ತಿಳಿಯಬೇಕೆಂದಿರುವೆವಾದಕಾರಣ ಇದನ್ನು ಉಪದೇಶಿಸು.

**ಸೂತ ಉವಾಚ :**

**ಭೂತಸಂಮೋಹನಂ ಹ್ಯೇತದ್ವದತೋ ಮೇ ನಿಬೋಧತ ।**
**ಪ್ರತ್ಯಕ್ಷಮಪಿ ದೃಶ್ಯಂ ಚ ಸಂಮೋಹಯತಿ ಯತ್ಪ್ರಜಾಃ ॥ ೫ ॥**

**ಯೋಽಯಂ ಚತುರ್ದಿಶಂ ಪುಚ್ಛೇ ಶೈಶುಮಾರೇ ವ್ಯವಸ್ಥಿತಃ ।**
**ಉತ್ತಾನಪಾದಪುತ್ರೋಽಸೌ ಮೇಢೀಭೂತೋ ಧ್ರುವೋ ದಿವಿ ॥ ೬ ॥**

**ಸ ವೈ ಭ್ರಾಮಯತೇ ನಿತ್ಯಂ ಚಂದ್ರಾದಿತ್ಯೌ ಗ್ರಹೈಃ ಸಹ ।**
**ಭ್ರಮಂತಮನುಗಚ್ಛಂತಿ ನಕ್ಷತ್ರಾಣಿ ಚ ಚಕ್ರವತ್ ॥ ೭ ॥**

**ಧ್ರುವಸ್ಯ ಮನಸಾ ಚಾಸೌ ಸರ್ಪತೇ ಜ್ಯೋತಿಷಾಂ ಗಣಃ ।**
**ಸೂರ್ಯಾಚಂದ್ರಮಸೌ ತಾರಾ ನಕ್ಷತ್ರಾಣಿ ಗ್ರಹೈಃ ಸಹ ॥ ೮ ॥**

**ವಾತಾನೀಕಮಯೈರ್ಬಂಧೈರ್ಧ್ರುವೇ ಬದ್ಧಾನಿ ತಾನಿ-ವೈ ।**
**ತೇಷಾಂ ಯೋಗಶ್ಚ ಭೇದಶ್ಚ ಕಾಲಶ್ಚಾರಸ್ತಥೈವ ಚ ॥ ೯ ॥**

---

೫. ಈ ಪ್ರಶ್ನವಾಕ್ಯವನ್ನು ಕೇಳಿ ಮುಂದೆ ಸೂತಮುನಿಯು ಈ ವಿಧವಾಗಿ ಉತ್ತರವಿತ್ತನು :—ಈ ವಿಷಯವನ್ನು ಪ್ರತಿಪಾದಿಸುವ, ಭೂತಗಳನ್ನು ಮೋಹಪಡಿಸುವಂತೆ ಇರುವ ನನ್ನ ಮಾತನ್ನು ಕೇಳಿರಿ. ಈ ವಿಷಯವು ಪ್ರತ್ಯಕ್ಷವಾಗಿ ಸಕಲ ಪ್ರಾಣಿ ದೃಶ್ಯವಾಗಿದ್ದರೂ ಪ್ರಜೆಗಳನ್ನು ಮೋಹಪಡಿಸುವುದು.

೬. ದಿಙ್ಮಂಡಲದ ನಾಲ್ಕು ದಿಕ್ಕುಗಳಲ್ಲಿ ಶಿಶುಮಾರಪುಚ್ಛದಲ್ಲಿ ಉತ್ತಾನಪಾದನ ಪುತ್ರನಾದ ಧ್ರುವನು ಆಕಾಶದಲ್ಲಿರುವ ಸಕಲ ತೇಜಶ್ಚಕ್ರಕ್ಕೆ ಮೇಢೀಸ್ತಂಭದಂತೆ ಇರುವನು.

೭. ಆ ಧ್ರುವನೆಂಬ ಮೇಢೀಸ್ತಂಭವು ಗ್ರಹಗಣಗಳ ಜೊತೆಯಲ್ಲಿ ಸೂರ್ಯಚಂದ್ರರನ್ನು ಸುತ್ತಿಸುತ್ತಲಿರುವುದು. ಸಕಲ ನಕ್ಷತ್ರಗಳು ಭ್ರಮಿಸುತ್ತಲಿರುವ ಆ ಮೇಢೀಸ್ತಂಭವನ್ನು ಅನುಸರಿಸಿ ಚಕ್ರದಂತೆ ಭ್ರಮಿಸುವುವು.

೮. ಆ ಧ್ರುವನ ಮನಸ್ಸಿಗೆ ಅಧೀನಗಳಾಗಿ ಸೂರ್ಯ-ಚಂದ್ರ-ತಾರಾ-ನಕ್ಷತ್ರ ಮತ್ತು ಸಮಸ್ತ ಗ್ರಹಗಣ-ಮುಂತಾದ ಜ್ಯೋತಿಗಳ ಗಣವು ನಡೆಯುತ್ತಲಿರುವುದು.

೯. ಆ ಮೇಢೀಸ್ತಂಭದಲ್ಲಿ ಎಲ್ಲ ಜ್ಯೋತಿಗಳು ವಾಯು ವಿಕಾರಗಳಾದ ಬಂಧನ

ಅಸ್ತೋದಯೌ ತಥೋತ್ಪಾತಾ ಅಯನೇ ದಕ್ಷಿಣೋತ್ತರೇ ।
ವಿಷುವದ್ಗ್ರಹವರ್ಣಾಶ್ಚ ಧ್ರುವಾತ್ಸರ್ವಂ ಪ್ರವರ್ತತೇ ॥ ೧೦ ॥

ವರ್ಷಾ ಘರ್ಮೋ ಹಿಮಂ ರಾತ್ರಿಃ ಸಂಧ್ಯಾ ಚೈವ ದಿನಂ ತಥಾ ।
ಶುಭಾಶುಭಂ ಪ್ರಜಾನಾಂ ಚ ಧ್ರುವಾತ್ಸರ್ವಂ ಪ್ರವರ್ತತೇ ॥ ೧೧ ॥

ಧ್ರುವೇಣಾಧಿಷ್ಠಿತಶ್ಚೈವ ಸೂರ್ಯೋಽಪೋ ಗೃಹ್ಯ ವರ್ಷತಿ ।
ತದೇಷ ದೀಪ್ತಕಿರಣಃ ಸ ಕಾಲಾಗ್ನಿರ್ದಿವಾಕರಃ ॥ ೧೨ ॥

ಪರಿವರ್ತಕ್ರಮಾದ್ವಿಪ್ರಾ ಭಾಭಿರಾಲೋಕಯನ್ ದಿಶಃ ।
ಸೂರ್ಯಃ ಕಿರಣಜಾಲೇನ ವಾಯುಯುಕ್ತೇನ ಸರ್ವಶಃ ॥ ೧೩ ॥

---

ಪಾಶಗಳಿಂದ ಕಟ್ಟಲ್ಪಟ್ಟಿರುತ್ತವೆ. ಆ ನಕ್ಷತ್ರಾದಿ ತೇಜಸ್ಸುಗಳ ಯೋಗ, ವಿಯೋಗ, ಕಾಲಪರಿಮಾಣ, ಮತ್ತು ಚಾರಗಳು ಸಮಸ್ತವೂ ಧ್ರುವನ ಅಧೀನವಾಗಿ ನಡೆಯುತ್ತಲಿವೆ.

೧೦. ಮತ್ತು ಅಸ್ತ, ಉದಯ, ಉತ್ಪಾತ, ದಕ್ಷಿಣ—ಉತ್ತರ ಅಯನಗಳು, ವಿಷುವ, ಗ್ರಹಗಣದಲ್ಲಿ ಉಂಟಾಗುವ ವರ್ಣಗಳು, ಇವುಗಳೆಲ್ಲವೂ ಧ್ರುವನಿಂದಲೇ ಪರಿಣಮಿಸುತ್ತಿರುವುವು.

೧೧. ವೃಷ್ಟಿ, ಸಂತಾಪ, ಮಂಜು, ರಾತ್ರಿ, ಸಂಧ್ಯಾಸಮಯ, ಹಗಲು, ಗ್ರಹ ಗಣಾಧೀನವಾಗಿ ಪ್ರಜೆಗಳಿಗೆ ಆಗುವ ಶುಭಾಶುಭಗಳು—ಇವೆಲ್ಲವುಗಳ ಪ್ರವೃತ್ತಿಗೆ ಧ್ರುವನೇ ಕಾರಣವು.

೧೨. ಧ್ರುವನಿಂದ ನಿಯಮ್ಯನಾದ ಆದಿತ್ಯನು ಭೂಮಿಯಿಂದ ಜಲವನ್ನು ಸ್ವೀಕರಿಸಿ ವೃಷ್ಟಿಯನ್ನು ಸುರಿಸುವನು. ಆದುದರಿಂದ ಜ್ವಲಿಸುತ್ತಿದ್ದ ಕಿರಣಪುಂಜ ದಿಂದ ಸೂರ್ಯನು ಕಾಲಾಗ್ನಿ ಸ್ವರೂಪನಾಗಿರುವನು.

೧೩. ವಿಪ್ರರೆ! ಒಂದು ಸ್ಥಾನದಿಂದ ಬೇರೊಂದು ಸ್ಥಾನಕ್ಕೆ ಕ್ರಮದಿಂದ ಪರಿವರ್ತಿಸುವ ಸೂರ್ಯನು ತನ್ನ ಪ್ರಭೆಗಳಿಂದ ಜಗತ್ತನ್ನು ಪ್ರಕಾಶಪಡಿಸುತ್ತ ವಾಯು ಯುಕ್ತವಾದ ಕಿರಣ ಸಮೂಹದಿಂದ ಎಲ್ಲ ಕಡೆಯಿಂದಲೂ ಜಲವನ್ನು ಸಂಗ್ರಹಿಸುವನು.

ಜಗತೋ ಜಲಮಾದತ್ತೇ ಕೃತ್ಸ್ನಸ್ಯ ದ್ವಿಜಸತ್ತಮಾಃ ।
ಆದಿತ್ಯಪೀತಂ ಸಕಲಂ ಸೋಮಃ ಸಂಕ್ರಮತೇ ಜಲಮ್ ॥ ೧೪ ॥

ನಾಡೀಭಿರ್ವಾಯುಯುಕ್ತಾಭಿರ್ಲೋಕಧಾರಾ ಪ್ರವರ್ತತೇ ।
ಯತ್ ಸೋಮಾತ್ ಸ್ರವತೇ ಹ್ಯಂಬು ತದನ್ನೇಷ್ವೇವ ತಿಷ್ಠತಿ ॥ ೧೫ ॥

ಮೇಘಾ ವಾಯುವಿಘಾತೇನ ವಿಸೃಜಂತಿ ಜಲಂ ಭುವಿ ।
ಏವಮುತ್ಕ್ಷಿಪ್ಯತೇ ಚೈವ ಪತತೇ ಚಾಸಕೃಜ್ಜಲಮ್ ॥ ೧೬ ॥

ನ ನಾಶ ಉದಕಸ್ಯಾಸ್ತಿ ತದೇವ ಪರಿವರ್ತತೇ
ಸಂಧಾರಣಾರ್ಥಂ ಲೋಕಾನಾಂ ಮಾಯೈಷಾ ವಿಶ್ವನಿರ್ಮಿತಾ ॥ ೧೭ ॥

ಅನಯಾ ಮಾಯಯಾ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಮ್ ।
ವಿಶ್ವೇಶೋ ಲೋಕಕೃದ್ದೇವಃ ಸಹಸ್ರಾಕ್ಷಃ ಪ್ರಜಾಪತಿಃ ॥ ೧೮ ॥

---

೧೪. ದ್ವಿಜಶ್ರೇಷ್ಠರೆ! ಮೇಲೆ ಹೇಳಿದಂತೆ ಸಮಸ್ತ ಜಗತ್ತಿನ ಜಲವನ್ನು ಸೂರ್ಯನು ಸ್ವೀಕರಿಸುವನು. ಆದಿತ್ಯನಿಂದ ಪಾನಮಾಡಲ್ಪಟ್ಟಿರುವ ಸಕಲ ಜಲವನ್ನು ಚಂದ್ರನು ತನ್ನಲ್ಲಿ ಸಂಕ್ರಮಿಸುವನು.

೧೫. ವಾಯುಯುಕ್ತವಾದ ಕಿರಣನಾಡಿಗಳಿಂದ ಲೋಕಕ್ಕೆಲ್ಲ ಜಲಧಾರೆಯು ಹರಿದುಬರುತ್ತದೆ. ಚಂದ್ರಮಂಡಲದಿಂದ ಸುರಿದ ನೀರು ಅನ್ನದಲ್ಲಿಯೇ ಸೇರಿಹೋಗುವುದು.

೧೬. ವಾಯು ವಿಘಾತಕ್ಕೆ ಒಳಪಟ್ಟಿರುವ ಮೇಘಗಳು ಭೂಮಿಯಲ್ಲಿ ಜಲವನ್ನು ಧಾರಾಕಾರವಾಗಿ ಸುರಿಸುತ್ತವೆ. ಹೀಗೆ ಜಲವು ಸೂರ್ಯಕಿರಣಗಳಿಂದ ಮೇಲಕ್ಕೆ ಆಕರ್ಷಿಸಲ್ಪಡುವುದಾಗಿ ಮತ್ತೆ ಭೂಮಿಯಲ್ಲಿ ಬೀಳುವುದು.

೧೭. ಹೀಗೆ ನೀರಿಗೆ ರೂಪಾಂತರ ಪರಿಣಾಮಬರುವುದೇ ವಿನಹ ತತ್ತ್ವಕ್ಕೆ ನಾಶವಿರುವುದಿಲ್ಲ. ಇದು ಲೋಕಗಳ ಧಾರಣೆಗೋಸ್ಕರ ಪ್ರಜಾಪತಿಯಿಂದ ನಿರ್ಮಿತವಾದ ವಿಶ್ವಮಾಯೆಯು.

೧೮. ಈ ಒಂದು ಮಾಯೆಯು ಸ್ಥಾವರ-ಜಂಗಮಗಳಿಂದ ಕೂಡಿದ ಸಕಲ ತ್ರೈಲೋಕ್ಯವನ್ನು ವ್ಯಾಪಿಸಿರುವುದು. ಈ ಮಾಯೆಗೆ ನಿಯಾಮಕನಾಗಿ ವಿಶ್ವಕ್ಕೆ

ಧಾತಾ ಕೃತ್ಸ್ನಸ್ಯ ಲೋಕಸ್ಯ ಪ್ರಭವಿಷ್ಣುರ್ದಿವಾಕರಃ ।
ಸಾರ್ವಲೌಕಿಕಮಂಭೋ ಯತ್ತತ್ಸೋಮಾನ್ನಭಸಶ್ಚ್ಯುತಮ್ ॥ ೧೯ ॥

ಸೋಮಾಧಾರಂ ಜಗತ್ಸರ್ವಮೇತತ್ತಥ್ಯಂ ಪ್ರಕೀರ್ತಿತಮ್ ।
ಸೂರ್ಯಾದುಷ್ಣಂ ನಿಸ್ರವತೇ ಸೋಮಾಚ್ಛೀತಂ ಪ್ರವರ್ತತೇ ॥ ೨೦ ॥

ಶೀತೋಷ್ಣವೀರ್ಯೌ ದ್ವಾವೇತೌ ಯುಕ್ತ್ಯಾ ಧಾರಯತೇ ಜಗತ್ ।
ಸೋಮಾಧಾರಾ ನದೀ ಗಂಗಾ ಪವಿತ್ರಾ ವಿಮಲೋದಕಾ ॥ ೨೧ ॥

ಭದ್ರಸೋಮಪುರೋಗಾಶ್ಚ ಮಹಾನದ್ಯೋ ದ್ವಿಜೋತ್ತಮಾಃ ।
ಸರ್ವಭೂತಶರೀರೇಷು ಹ್ಯಾಪೋ ಹ್ಯನುಸೃತಾಶ್ಚ ಯಾಃ ॥ ೨೨ ॥

---

ಈಶ್ವರನೂ, ಸೃಷ್ಟಿಕರ್ತನೂ ಸರ್ವಾತ್ಮಕನಾದ್ದರಿಂದ ಸಾವಿರಾರು ನೇತ್ರಗಳಿಂದ ಕೂಡಿದವನೂ ಆದ ಪರಮಾತ್ಮನು ಪ್ರಪಂಚ ಸ್ಥಿತಿಯನ್ನು ನಿರ್ವಹಿಸುತ್ತಲಿರುವನು.

೧೯. ಮತ್ತು ಆ ಪರಮಾತ್ಮನು ಆದಿತ್ಯರೂಪದಿಂದ ಲೋಕವನ್ನು ಸೃಜಿಸುತ್ತ ಮತ್ತು ಪರಿಪಾಲಿಸುತ್ತಲಿರುವನು. ಸರ್ವ ಲೋಕಗಳಲ್ಲಿರುವ ಜಲವೆಲ್ಲವೂ ಸೋಮನ ಮೂಲಕವಾಗಿ ಆಕಾಶದಿಂದ ಭೂಮಿಗೆ ಬಿದ್ದಿರುವುದಾಗಿದೆ.

೨೦. ಜಗತ್ತೆಲ್ಲವೂ ಸೋಮಮಂಡಲದ ಆಧಾರದಿಂದ ಜೀವಿಸಿರುವುದೆಂಬ ಸತ್ಯಾಂಶವು ನಿಮಗೆ ಹೇಳಲ್ಪಟ್ಟಿದೆ. ಸೂರ್ಯಮಂಡಲದಿಂದ ಸಾಕ್ಷಾತ್ತಾಗಿ ಉಷ್ಣವೂ ಸೋಮಮಂಡಲದಿಂದ ಶೀತವೂ ಪ್ರಸರಿಸಿ ಬರುವುದು.

೨೧. ಶೀತ ಮತ್ತು ಉಷ್ಣವೆಂಬ ವಿಲಕ್ಷಣ ವೀರ್ಯದಿಂದ ಕೂಡಿ ಸೂರ್ಯಚಂದ್ರರು ಯುಕ್ತಿಯಿಂದ ಜಗತ್ತನ್ನು ಧರಿಸಿರುವರು. ಭೂಮಿಯಲ್ಲಿರುವ ಜಲವೆಲ್ಲವೂ ಸೋಮಮೂಲಕವಾಗಿ ಬಂದಿದ್ದರಿಂದ ನಿರ್ಮಲವಾದ ಜಲದಿಂದ ಕೂಡಿದ ಪುಣ್ಯವಾದ ಗಂಗಾನದಿಯು ಸೋಮಾಧಾರದಿಂದ ಕೂಡಿರುವುದು.

೨೨. ದ್ವಿಜೋತ್ತಮರೆ! ಭದ್ರಸೋಮ ಮುಂತಾದ ಇತರ ಮಹಾ ನದಿಗಳೂ ಸರ್ವ ಪ್ರಾಣಿಗಳ ಶರೀರದಲ್ಲಿ ಪುತ್ರವಾದ ಜಲಾಂಶಗಳೂ ಎಲ್ಲವೂ ಸೋಮಾಧಾರದಿಂದ ಪ್ರಾಪ್ತವಾದುವುಗಳಾಗಿವೆ.

**ತೇಷು ಸಂದಹ್ಯಮಾನೇಷು ಜಂಗಮಸ್ಥಾವರೇಷು ಚ ।**
**ಧೂಮಭೂತಾಸ್ತು ತಾ ಹ್ಯಾಪೋ ನಿಷ್ಕ್ರಾಮಂತೀಹ ಸರ್ವಶಃ ॥ ೨೩ ॥**

**ತೇನ ಚಾಭ್ರಾಣಿ ಜಾಯಂತೇ ಸ್ಥಾನಮಭ್ರಮಯಂ ಸ್ಮೃತಮ್ ।**
**ತೇಜೋಽರ್ಕಃ ಸರ್ವಭೂತೇಭ್ಯ ಆದತ್ತೇ ರಶ್ಮಿಭಿರ್ಜಲಮ್ ॥ ೨೪ ॥**

**ಸಮುದ್ರಾದ್ವಾಯುಸಂಯೋಗಾದ್ವಹಂತ್ಯಾಪೋ ಗಭಸ್ತಯಃ ।**
**ಸಂಜೀವನಂ ಚ ಸಸ್ಯಾನಾಮಂಭಸ್ತದಮೃತೋಪಮಮ್ ॥ ೨೫ ॥**

**ತತಸ್ತ್ವೃತುವಶಾತ್ಕಾಲೇ ಪರಿವರ್ತ್ಯ ದಿವಾಕರಃ ।**
**ಯಚ್ಛತ್ಯಾಪೋ ಹಿ ಮೇಘೇಭ್ಯಃ ಶುಕ್ಲಾಶುಕ್ಲೈರ್ಗಭಸ್ತಿಭಿಃ ॥ ೨೬ ॥**

**ಅಭ್ರಸ್ಥಾಃ ಪ್ರಪತಂತ್ಯಾಪೋ ವಾಯುನಾ ಸಮುದೀರಿತಾಃ ।**
**ಸರ್ವಭೂತಹಿತಾರ್ಥಾಯ ವಾಯುಮಿಶ್ರಾಃ ಸಮಂತತಃ ॥ ೨೭ ॥**

---

೨೩. ಸ್ಥಾವರ-ಜಂಗಮ ಪ್ರಾಣಿ ಶರೀರಗಳಲ್ಲಿರುವ ಜಲಗಳು ತೇಜಸ್ಸಿನಿಂದ ತಪ್ತವಾಗಿ ಆವಿಯ ರೂಪವಾಗಿ ಸರ್ವ ದ್ವಾರಗಳಿಂದ ಹೊರಕ್ಕೆ ಹೊರಡುತ್ತವೆ.

೨೪. ಆವಿ (ಹೊಗೆ) ಯ ರೂಪದಿಂದ ಹೊರಕ್ಕೆ ಹೋಗಿರುವ ಜಲಾಂಶಗಳು ಮೇಘ ರೂಪವನ್ನು ಹೊಂದಿ ಮೇಘಮಂಡಲವನ್ನು ಸೇರಿ ಇರುವುದು, ಆ ಸ್ಥಾನವನ್ನು ಅಭ್ರಮಯವೆಂದು ಹೇಳುವರು, ತೇಜೋಮಯನಾದ ಸೂರ್ಯನು ತನ್ನ ಕಿರಣಗಳಿಂದ ಸರ್ವ ಭೂತಗಳಿಂದಲೂ ಜಲವನ್ನು ಸ್ವೀಕರಿಸುವನು.

೨೫. ಮತ್ತು ಸೂರ್ಯನ ಕಿರಣಗಳು ವಾಯು ಸಂಯುಕ್ತಗಳಾಗಿ ಸಮುದ್ರದಿಂದ ನೀರನ್ನು ಸಂಗ್ರಹಿಸುತ್ತವೆ. ಆ ನೀರು ಸಸ್ಯಗಳನ್ನೆಲ್ಲ ಬದುಕಿಸುವಂತೆ, ಅಮೃತ ಸಮಾನವಾಗುವುದು.

೨೬. ಸೂರ್ಯನು ಜಲವನ್ನು ಸಂಗ್ರಹಿಸಿದ ತರುವಾಯ ಆಯಾಯ ಋತುಗಳ ವಶದಿಂದ ಕಾಲಾನುಗುಣವಾಗಿ ಪರಿವರ್ತನ ಹೊಂದಿಸಿ ತನ್ನ ಶುಕ್ಲ ಮತ್ತು ಅಶುಕ್ಲಗಳಾದ ಕಿರಣ ವಿಶೇಷಗಳಿಂದ ಆಜಲವನ್ನು ಮೇಘಗಳಿಗೆ ಕೊಡುವನು.

೨೭. ಮೇಘಗಳಲ್ಲಿರುವ ಜಲಗಳು ವಾಯುವಿನಿಂದ ಪ್ರೇರಿಸಲ್ಪಟ್ಟವುಗಳಾಗಿ ಸರ್ವ ಪ್ರಾಣಿಗಳ ಹಿತಕ್ಕೋಸ್ಕರ ವಾಯು ಮಿಶ್ರಿತಗಳಾಗಿ ಭೂಮಿಗೆ ಬೀಳುತ್ತವೆ.

**ತತೋ ವರ್ಷತಿ ಷಣ್ಮಾಸಾನ್ ಸರ್ವಭೂತವಿವೃದ್ಧಯೇ ।**
**ವಾಯುವ್ಯಂ ಸ್ತನಿತಂ ಚೈವ ವೈದ್ಯುತಂ ಚಾಗ್ನಿಸಂಭವಮ್ ॥ ೨೮ ॥**

**ಮೇಹನಾಚ್ಚ ಮಿಹೇರ್ಧಾತೋರ್ಮೇಘತ್ವಂ ವ್ಯಂಜಯಂತಿ ಹಿ ।**
**ನ ಭ್ರಶ್ಯಂತಿ ಯತಶ್ಚಾಪಸ್ತದಭ್ರಂ ಕವಯೋ ವಿದುಃ ॥ ೨೯ ॥**

**ಮೇಘಾನಾಂ ಪುನರುತ್ಪತ್ತಿಸ್ತ್ರಿವಿಧಾ ಯೋನಿರುಚ್ಯತೇ ।**
**ಆಗ್ನೇಯಾ ಬ್ರಹ್ಮಜಾಶ್ಚೈವ ಪಕ್ಷಜಾಶ್ಚ ಪೃಥಗ್ವಿಧಾಃ ॥ ೩೦ ॥**

**ತ್ರಿಧಾ ಮೇಘಾಃ ಸಮಾಖ್ಯಾತಾಸ್ತೇಷಾಂ ವಕ್ಷ್ಯಾಮಿ ಸಂಭವಮ್ ।**
**ಆಗ್ನೇಯಾಸ್ತೂಷ್ಣಜಾಃ ಪ್ರೋಕ್ತಾಸ್ತೇಷಾಂ ಧೂಮಪ್ರವರ್ತನಮ್॥೩೧॥**

---

೨೮. ಅನಂತರದಲ್ಲಿ ಮೇಘವು ಸರ್ವ ಪ್ರಾಣಿಗಳ ಅಭಿವೃದ್ಧಿಯನ್ನುದ್ದೇಶಿಸಿ ಆರು ಮಾಸಗಳ ಪರ್ಯಂತವಾಗಿ ಮಳೆಯನ್ನು ಸುರಿಸುವುದು, ಆ ಮೇಘಗಳಲ್ಲಿರುವ ಗರ್ಜನ ಶಬ್ದವು ವಾಯುವಿನ ಅಂಶದಿಂದ ಸಂಭೂತವೂ ಮಿಂಚು ಅಗ್ನಿ ಅಂಶದಿಂದ ಸಂಭೂತವೂ ಆಗಿವೆ.

೨೯. ಮೇಘಕ್ಕೆ "ಮೇಘ" ಮತ್ತು "ಅಭ್ರ" ಎಂಬ ಎರಡು ಸಂಜ್ಞೆಗಳು ಇವೆ. ಸೇಚನ=ನೀರೆರೆಯುವುದು ಎಂಬ ಅರ್ಥವನ್ನು ಬೋಧಿಸುವ "ಮಿಹ" ಧಾತುವಿನಿಂದ ರೂಪಹೊಂದಿರುವ ಮೇಘ ಶಬ್ದವು ಅಲ್ಲಿರುವ ಜಲ ಸೇಚನ ಧರ್ಮವನ್ನು ಸೂಚಿಸುತ್ತದೆ. ಹಾಗೆಯೇ ಅಲ್ಲಿರುವ ಜಲವು ವೃಷ್ಟಿಕಾಲದ ವಿನಹ ಕೆಳಕ್ಕೆ ಬೀಳದೆ ಧರಿಸಲ್ಪಟ್ಟಿರುವುದರಿಂದ "ಭ್ರಂಶ್" ಧಾತುವು "ನ" ಎಂಬ ನಿಪಾತ ಶಬ್ದದೊಡನೆ ಸೇರಿ ಆಗುವ "ಅಭ್ರ" ಎಂಬ ನಾಮವು ಸಂಜ್ಞೆಯಾಗಿ ಬಂದಿರುವುದು.

೩೦. ಈ ಮೇಘಗಳು ಮೂರು ವಿಧವಾದ ಕಾರಣಗಳಿಂದ ಉತ್ಪತ್ತಿಯನ್ನು ಹೊಂದಿರುತ್ತವೆ. ಕೆಲವು ಅಗ್ನಿಯಿಂದಲೂ ಮತ್ತೆ ಕೆಲವು ಬ್ರಹ್ಮನಿಂದಲೂ ಇನ್ನು ಕೆಲವು ಪಕ್ಷಗಳಿಂದಲೂ ಹುಟ್ಟಿರುವುದರಿಂದ ಆಗ್ನೇಯ. ಬ್ರಹ್ಮಜ, ಮತ್ತು ಪಕ್ಷಜ ವೆಂಬು ಮೂರು ವಿಧಗಳಾಗಿವೆ.

೩೧. ಈ ರೀತಿಯಾಗಿ ಮೇಘಗಳು ಮೂರು ಬಗೆಯಾಗಿವೆಯೆಂದು ಹೇಳಲ್ಪಟ್ಟಿವೆ. ಈಗ ಅವುಗಳ ಉತ್ಪತ್ತಿಯನ್ನು ವರ್ಣಿಸುವೆನು ; ಆಗ್ನೇಯವೆಂಬ ಮೇಘಗಳು ಉಷ್ಣಗುಣದಿಂದ ಹುಟ್ಟಿರುವುವು. ಎಂದರೆ ಅಗ್ನಿಜನ್ಯವಾದ ಧೂಮವು ಮೇಘ ರೂಪವಾದ ಪರಿಣಾಮವನ್ನು ಹೊಂದಿರುವುದು.

ಶೀತದುರ್ದಿನವಾತಾ ಯೇ ಸ್ವಗುಣಾಸ್ತೇ ವ್ಯವಸ್ಥಿತಾಃ ।
ಮಹಿಷಾಶ್ಚ ವರಾಹಾಶ್ಚ ಮತ್ತಮಾತಂಗರೂಪಿಣಃ ॥ ೩೨ ॥

ಭೂತ್ವಾ ಧರಣಿಮಭ್ಯೇತ್ಯ ರಮಂತೇ ವಿಚರಂತಿ ಚ ।
ಜೀಮೂತಾ ನಾಮ ತೇ ಮೇಘಾ ಹ್ಯೇತೇಭ್ಯೋ ಜೀವಸಂಭವಃ ॥ ೩೩ ॥

ವಿದ್ಯುದ್ಗಣವಿಹೀನಾಶ್ಚ ಜಲಧಾರಾವಿಲಂಬಿನಃ ।
ಮೂಕಮೇಘಾ ಮಹಾಕಾಯಾ ಆವಹಸ್ಯ ವಶಾನುಗಾಃ ॥ ೩೪ ॥

ಕ್ರೋಶಮಾತ್ರಾಚ್ಚ ವರ್ಷಂತಿ ಕ್ರೋಶಾರ್ಧಾದಪಿ ವಾ ಪುನಃ ।
ಪರ್ವತಾಗ್ರನಿತಂಬೇಷು ವರ್ಷಂತಿ ಚ ರಸಂತಿ ಚ ॥ ೩೫ ॥

ಬಲಾಕಾಗರ್ಭದಾಶ್ಚೈವ ಬಲಾಕಾಗರ್ಭಧಾರಿಣಃ ।
ಬ್ರಹ್ಮಜಾ ನಾಮ ತೇ ಮೇಘಾ ಬ್ರಹ್ಮನಿಶ್ವಾಸಸಂಭವಾಃ ॥ ೩೬ ॥

---

೩೨. ಶೀತ, ಮೋಡವು ಕವಿತುಕೊಂಡಿರುವ ದುರ್ದಿನ, ಮತ್ತು ಗಾಳಿ ಇವುಗಳೆಲ್ಲ ಮೇಘದ ಸ್ವಾಭಾವಿಕವಾದ ಗುಣಗಳಾಗಿವೆ. ಇವು ಮಹಿಷ, ವರಾಹ, ಮತ್ತು ಮದಿಸಿದ ಆನೆ ಮಂತಾದ ರೂಪಗಳನ್ನು ಧರಿಸುವುವು.

೩೩. ಆಯಾಾಯ ರೂಪದಿಂದ ಭೂಮಿಗೆ ಬಂದು ರಮಿಸುತ್ತಲೂ ಸಂಚರಿಸುತ್ತಲೂ ಇರುವುವು. ಇವುಗಳನ್ನು ಜೀಮೂತವೆಂಬ ಹೆಸರಿನಿಂದ ಕರೆಯುವರು. ಇವುಗಳಿಂದ ಅನೇಕ ಜೀವಗಳ ಉತ್ಪತ್ತಿಯಾಗುವುದರಿಂದ ಜೀಮೂತವೆಂಬ ಹೆಸರು ಅನ್ವರ್ಥವಾದುದು.

೩೪. ಮಿಂಚಿನಗಣದಿಂದ ಗುಣಹೀನವಾಗಿ ಕೇವಲ ಜಲಧಾರೆಗಳನ್ನು ಸುರಿಸುತ್ತಿರುವ ಮತ್ತು ಮಹತ್ತಾದ ಆಕಾರದಿಂದ ಕೂಡಿರುವ ಈ ಮೇಘಗಳು ನಿಶ್ಶಬ್ದವಾದ್ದರಿಂದ ಮೂಕವಾದ ಮೇಘಗಳಾಗಿ ಆವಹವೆಂಬ ವಾಯುವಿಗೆ ಅಧೀನಗಳಾಗುವುವು.

೩೫. ಒಂದು ಹರದಾರಿ ಅಥವಾ ಅದಕ್ಕೂ ಅರ್ಧ ಪರಿಮಾಣದ ದೂರದಿಂದ ಬೆಟ್ಟಗಳ ಅಗ್ರ ಮತ್ತು ತಪ್ಪಲುಗಳಲ್ಲಿ ವೃಷ್ಟಿಯನ್ನು ಸುರಿಸುತ್ತ ಗರ್ಜಿಸುತ್ತಿವೆ.

೩೬. ಮತ್ತು ಬಲಾಕಾ ಎಂಬ ಪಕ್ಷಿಗಳಿಗೆ ಗರ್ಭವನ್ನು ಉಂಟುಮಾಡುವುಗಳಾದ್ದರಿಂದ ಬಲಾಕಾಗರ್ಭವನ್ನು ಪೋಷಿಸುವುಗಳಾಗಿ ಈ ಮೇಘಗಳು ಬ್ರಹ್ಮನ ನಿಶ್ವಾಸವಾಯುವಿನಿಂದ ಹುಟ್ಟುತ್ತಿರುವುದರಿಂದ ಬ್ರಹ್ಮಜ ಮೇಘವೆಂದು ಕರೆಯಲ್ಪಡುವುವು.

**ತೇ ಹಿ ವಿದ್ಯುದ್ಗುಣೋಪೇತಾಃ ಸ್ತನಯಿತ್ನುಪ್ರಿಯಸ್ವನಾಃ ।**
**ತೇಷಾಂ ಶಶ್ವತ್ ಪ್ರಣಾದೇನ ಭೂಮಿಃ ಸ್ವಾಂಗರುಹೋದ್ಭವಾ ॥ ೪೭ ॥**

**ರಾಜ್ಞೀ ರಾಜ್ಯಾಭಿಷಿಕ್ತೇವ ಪುನರ್ಯೌವನಮಶ್ನುತೇ ।**
**ತೇಷ್ವಿಯಂ ಪ್ರಾವೃಡಾಸಕ್ತಾ ಭೂತಾನಾಂ ಜೀವಿತೋದ್ಭವಾ ॥ ೩೮ ॥**

**ದ್ವಿತೀಯಂ ಪ್ರವಹಂ ವಾಯುಂ ಮೇಘಾಸ್ತೇ ತು ಸಮಾಶ್ರಿತಾಃ ।**
**ಏತೇ ಯೋಜನಮಾತ್ರಾಚ್ಚ ಸಾರ್ಧ್ಯರ್ಧಾ ನಿಷ್ಕೃತಾದಪಿ ॥ ೩೯ ॥**

**ವೃಷ್ಟಿಗರ್ಭಸ್ತ್ರಿಧಾ ತೇಷಾಂ ಧಾರಾಸಾರಃ ಪ್ರಕೀರ್ತಿತಃ ।**
**ಪುಷ್ಕರಾವರ್ತಕಾ ನಾಮ ತೇ ಮೇಘಾಃ ಪಕ್ಷಸಂಭವಾಃ ॥ ೪೦ ॥**

**ಶಕ್ರೇಣ ಪಕ್ಷಚ್ಛಿನ್ನಾ ಯೇ ಪರ್ವತಾನಾಂ ಮಹೌಜಸಾಮ್ ।**
**ಕಾಮಗಾನಾಂ ಪ್ರವೃದ್ಧಾನಾಂ ಭೂತಾನಾಂ ಶಿವಮಿಚ್ಛತಾ ॥ ೪೧ ॥**

---

೭. ಇವು ವಿದ್ಯುತ್ಪಾಶ (ಮಿಂಚು) ಗಳಿಂದ ಕೂಡಿಕೊಂಡವುಗಳಾಗಿಯೂ ಗರ್ಜಿತ ಧ್ವನಿಯಲ್ಲಿ ಪ್ರೀತಿಯುಳ್ಳವುಗಳೂ ಆಗಿವೆ. ಇವುಗಳ ಗರ್ಜಿತದಿಂದ ಭೂಮಿಯು ರೋಮಾಂಚಿತವಾಗುವುದು.

೩೮. ಈ ಮೇಘ ಗರ್ಜನದಿಂದ ಭೂಮಿಯು ರಾಜ್ಯದಲ್ಲಿ ಪಟ್ಟಾಭಿಷಿಕ್ತಳಾದ ರಾಣಿಯಂತೆ ಪುನಃ ಯೌವನವನ್ನು ಹೊಂದಿದಂತಾಗುವುದು, ಭೂತಗಳನ್ನು ಅವಲಂಬಿಸಿ ಅವುಗಳಿಗೆ ಜೀವಿತ ದಾನವನ್ನು ಮಾಡುತ್ತಲಿರುವ ಈ ಮೇಘಗಳಿಗೆ ವರ್ಷಾ ಕಾಲದಲ್ಲಿ ತುಂಬಾ ಆಸಕ್ತಿಯು.

೩೯. ಈ ಮೇಘಗಳು ದ್ವಿತೀಯವಾದ ಪ್ರವಹವಾಯುವನ್ನು ಆಶ್ರಯಿಸಿರುತ್ತವೆ. ಇವುಗಳು ಯೋಜನ ಅಥವಾ ಯೋಜನಾರ್ಧ ದೂರದಿಂದ ವೃಷ್ಟಿಯನ್ನು ಕೊಟ್ಟು ಕೃತಕೃತ್ಯಗಳಾಗುವುವು.

೪೦. ಇವುಗಳ ಗರ್ಭದಲ್ಲಿರುವ ಜಲದ ವೃಷ್ಟಿಯು ಧಾರಾಕಾರದಲ್ಲಿ ಬೀಳುವುದು, ಎಂದು ಹೇಳಲ್ಪಟ್ಟಿರುತ್ತದೆ. ಪುಷ್ಕರಾವರ್ತಕವೆಂಬ ಮೇಘಗಳು ಪಕ್ಷಜ ಮೇಘಗಳೆಂದು ಪ್ರಸಿದ್ಧವಾಗಿವೆ.

೪೧. ಹಿಂದೆ ಮಹಾ ವಿಕ್ರಮದಿಂದ ಕೂಡಿರುವುವೂ, ಅತ್ಯಂತ ಬೃಹದಾಕಾರಗಳೂ, ಮತ್ತು ರೆಕ್ಕೆಗಳಿಂದ ಕೂಡಿರುವುದರಿಂದ ಕಾಮಚಾರ (ಸ್ವೇಚ್ಛಾಸಂಚಾರ)

ಪ್ರುಷ್ಕರಾ ನಾಮ ತೇ ಮೇಘಾ ಬೃಂಹಂತಸ್ತೋಯಮತ್ಸರಾಃ ।
ಪುಷ್ಕರಾವರ್ತಕಾಸ್ತೇನ ಕಾರಣೇನೇಹ ಶಬ್ದಿತಾಃ ॥ ೪೨ ॥

ನಾನಾರೂಪಧರಾಶ್ಚೈವ ಮಹಾಘೋರಸ್ವನಾಶ್ಚ ತೇ ।
ಕಲ್ಪಾಂತವೃಷ್ಟೇಃ ಸ್ರಷ್ಟಾರಃ ಸಂವರ್ತಾಗ್ನೇರ್ನಿಯಾಮಕಾಃ ॥ ೪೩ ॥

ವರ್ಷಂತ್ಯೇತೇ ಯುಗಾಂತೇಷು ತೃತೀಯಾಸ್ತೇ ಪ್ರಕೀರ್ತಿತಾಃ ।
ಅನೇಕರೂಪಸಂಸ್ಥಾನಾಃ ಪೂರಯಂತೋ ಮಹೀತಲಮ್ ॥ ೪೪ ॥

ವಾಯುಂ ಪುರಾ ವಹಂತಃ ಸ್ಯುರಾಶ್ರಿತಾಃ ಕಲ್ಪಸಾಧಕಾಃ ।
ಯಾನ್ಯಂಡಸ್ಯ ತು ಭಿನ್ನಸ್ಯ ಪ್ರಾಕೃತಸ್ಯಾಭವಂಸ್ತದಾ ॥ ೪೫ ॥

---

ವುಳ್ಳವುಗಳೂ ಆದ ಆ ಮೇಘಗಳ ರೆಕ್ಕೆಗಳನ್ನು ಪ್ರಾಣಿಗಳ ಕಲ್ಯಾಣವನ್ನು ಉದ್ದೇಶಿಸಿ ಇಂದ್ರನು ತನ್ನ ವಜ್ರಾಯುಧದಿಂದ ಕತ್ತರಿಸಿದನು.

೪೨. ಆ ಮೇಘಗಳು ಪುಷ್ಕರವೆಂಬ ಪ್ರಸಿದ್ಧಿಯುಳ್ಳವುಗಳಾಗಿ ಬೃಹದಾಕಾರದಿಂದ ಜಲಮಯವಾಗಿ ಆಕಾಶದಲ್ಲಿ ಪರಿವರ್ತಿಸುತ್ತಿರುವ ಕಾರಣದಿಂದ ಪುಷ್ಕರಾವರ್ತಕವೆಂದು ಕರೆಯಲ್ಪಡುತ್ತವೆ.

೪೩. ಅವು ನಾನಾ ರೂಪವನ್ನು ಧರಿಸಿಕೊಂಡು ಅತ್ಯುಗ್ರವಾದ ಮಹಾಗರ್ಜನೆಯನ್ನು ಮಾಡುತ್ತಾ ಪ್ರಲಯ ಕಾಲದಲ್ಲಿ ಅತಿಯಾದ ಮಳೆಯನ್ನು ಸುರಿಸಿ ಪ್ರಲಯಾಗ್ನಿಯನ್ನು ನಿಯಮನ ಮಾಡುವುವು.

೪೪. ಮೂರನೆಯ ಪಕ್ಷಜ ಜಾತಿಯ ಈ ಮೇಘಗಳು ಅನೇಕ ರೂಪಗಳನ್ನು ಧರಿಸಿ ಪ್ರಲಯಕಾಲದಲ್ಲಿ ವೃಷ್ಟಿಯನ್ನು ಸುರಿಸಿ ಭೂಮಂಡಲವನ್ನು ಜಲಪೂರ್ಣವನ್ನಾಗಿ ಮಾಡುವುವು.

೪೫. ವಾಯುವನ್ನು ಆಶ್ರಯಿಸಿದವುಗಳಾಗಿ ಈ ಮೇಘಗಳು ಪ್ರಲಯವನ್ನು ನಿರ್ವಹಿಸುವುವು. ಭಿನ್ನವಾದ ಪ್ರಾಕೃತ ಬ್ರಹ್ಮಾಂಡದ ಕಪಾಲರೂಪದಿಂದ, ಇವು ಪೂರ್ವದಲ್ಲಿದ್ದವು.

ಯಸ್ಮಿನ್ ಬ್ರಹ್ಮಾ ಸಮುತ್ಪನ್ನಶ್ಚತುರ್ವಕ್ತ್ರಃ ಸ್ವಯಂ ಪ್ರಭುಃ ।
ತಾನ್ಯೇವಾಂಡಕಪಾಲಾನಿ ಸರ್ವೇ ಮೇಘಾಃ ಪ್ರಕೀರ್ತಿತಾಃ ॥ ೪೬ ॥

ತೇಷಾಮಾಪ್ಯಾಯನಂ ಧೂಮಃ ಸರ್ವೇಷಾಮವಿಶೇಷತಃ ।
ತೇಷಾಂ ಶ್ರೇಷ್ಠಸ್ತು ಪರ್ಜನ್ಯಶ್ಚತ್ವಾರಶ್ಚೈವ ದಿಗ್ಗಜಾಃ ॥ ೪೭ ॥

ಗಜಾನಾಂ ಪರ್ವತಾನಾಂ ಚ ಮೇಘಾನಾಂ ಭೋಗಿಭಿಃ ಸಹ ।
ಕುಲಮೇಕಂ ಪೃಥಗ್ಭೂತಂ ಯೋನಿರೇಕಾ ಜಲಂ ಸ್ಮೃತಮ್ ॥ ೪೮ ॥

ಪರ್ಜನ್ಯೋ ದಿಗ್ಗಜಾಶ್ಚೈವ ಹೇಮಂತೇ ಶೀತಸಂಭವಾಃ ।
ತುಷಾರವೃಷ್ಟಿಂ ವರ್ಷಂತಿ ಶಿಷ್ಟಾಃ ಸಸ್ಯಪ್ರವೃದ್ಧಯೇ ॥ ೪೯ ॥

ಷಷ್ಠಃ ಪರಿವಹೋ ನಾಮ ತೇಷಾಂ ವಾಯುರಪಾಶ್ರಯಃ ।
ಯೋಽಸೌ ಬಿಭರ್ತಿ ಭಗವಾನ್ ಗಂಗಾಮಾಕಾಶಗೋಚರಾಮ್ ॥ ೫೦ ॥

---

೪೬. ತಾನೇ ಸರ್ವ ನಿಯಾಮಕನೂ ನಾಲ್ಕು ಮುಖಗಳಿಂದ ಕೂಡಿದವನೂ ಆದ ಬ್ರಹ್ಮನು ಯಾವ ಅಂಡದಲ್ಲಿ ಹುಟ್ಟಿರುವನೋ ಆ ಅಂಡದ ಕಪಾಲಗಳು ಮೇಘ ರೂಪವೆಂದು ಪ್ರಾಜ್ಞರಿಂದ ಹೇಳಲ್ಪಡುತ್ತವೆ.

೪೭. ಆ ಸಮಸ್ತ ಮೇಘಗಳನ್ನೂ ಆಪ್ಯಾಯನಮಾಡಿ ಅಭಿವೃದ್ಧಿ ಮಾಡುವುದರಲ್ಲಿ ಧೂಮವು ಅವಿಶೇಷವಾದುದು, ಅವುಗಳಲ್ಲಿ ನಾಲ್ಕು ದಿಗ್ಗಜಗಳೊಡನೆ ಪರ್ಜನ್ಯವು ಉತ್ತಮವಾಗಿದೆ.

೪೮. ಗಜ, ಪರ್ವತ, ಮೇಘ ಮತ್ತು ಸರ್ಪಗಳೆಂಬ ನಾಲ್ಕು ಕಾರಣಗಳಿಂದ ಜಲವೆಂಬ ಕಾರ್ಯವು ಹುಟ್ಟಿ ಅದೊಂದು ಬೇರೆ ತತ್ತ್ವವಾಗಿರುವುದು ; ಆ ಕಾರಣಗಳೆಲ್ಲವೂ ಒಂದೇ ಜಾತಿಗೆ ಸೇರಿದವುಗಳು.

೪೯. ಪರ್ಜನ್ಯ ಮತ್ತು ದಿಗ್ಗಜಗಳು ಶೀತೋತ್ಪತ್ತಿಗೆ ಕಾರಣಗಳಾಗಿರುವುದರಿಂದ ಹೇಮಂತಋತುವಿನಲ್ಲಿ ಹಿಮವೃಷ್ಟಿಯನ್ನು ಸುರಿಸುತ್ತವೆ, ಮಿಕ್ಕಾದವು ಸಸ್ಯಗಳನ್ನು ಅಭಿವೃದ್ಧಿ ಮಾಡುವುವು.

೫೦. ಇವುಗಳಿಗೆ ಪರಿವಹವೆಂಬ ಆರನೆಯ ವಾಯುವು ಆಶ್ರಯವು. ಭಗವಂತನಾದ ಈ ಪರಿವಹವೆಂಬ ವಾಯುವು ಆಕಾಶದಲ್ಲಿ ಹರಿಯುವ ಗಂಗಾ ನದಿಯನ್ನು ಧರಿಸಿರುವುದು.

ದಿವ್ಯಾಮೃತಜಲಾಂ ಪುಣ್ಯಾಂ ತ್ರಿಧಾ ಸ್ವಾತಿಪಥೇ ಸ್ಥಿತಾಮ್ ।
ತಸ್ಯಾ ನಿಷ್ಯಂದತೋಯಾನಿ ದಿಗ್ಗಜಾಃ ಪೃಥುಭಿಃ ಕರೈಃ ॥ ೫೧ ॥

ಶೀಕರಂ ಸಂಪ್ರಮುಂಚಂತಿ ನೀಹಾರ ಇತಿ ಸ ಸ್ಮೃತಃ ।
ದಕ್ಷಿಣೇನ ಗಿರಿರ್ಯೋऽಸೌ ಹೇಮಕೂಟ ಇತಿ ಸ್ಮೃತಃ ॥ ೫೨ ॥

ಉದಗ್ಘಿಮವತಃ ಶೈಲ ಉತ್ತರಸ್ಯಾಯುದಕ್ಷಿಣೇ ।
ಪುಂಡ್ರಂ ನಾಮ ಸಮಾಖ್ಯಾತಂ ನಗರಂ ತತ್ರ ವಿಸ್ತೃತಮ್ ॥ ೫೩ ॥

ತಸ್ಮಿನ್ ನಿಪತಿತಂ ಸರ್ವಂ ತತ್ತುಷಾರಸಮುದ್ಭವಮ್ ।
ತತಸ್ತದಾऽವಹೋ ವಾಯುರ್ಹೇಮವಂತಂ ಸಮುದ್ವಹನ್ ॥ ೫೪ ॥

ಆನಯತ್ಯಾತ್ಮಯೋಗೇನ ಸಿಂಚಮಾನೋ ಮಹಾಗಿರಿಮ್ ।
ಹಿಮವಂತಮತಿಕ್ರಮ್ಯ ವೃಷ್ಟಿಶೇಷಂ ತತಃ ಪರಮ್ ॥ ೫೫ ॥

---

೫೧-೫೨. ಪರಿವಹವೆಂಬ ವಾಯುವು ಧರಿಸಿರುವ ಆಕಾಶ ಗಂಗೆಯು ದಿವ್ಯವಾದ ಅಮೃತದಂತೆ ಇರುವ ಜಲದಿಂದ ಪೂರ್ಣವಾಗಿಯೂ ಪವಿತ್ರವಾಗಿಯೂ ವಾಯು ದೇವತೆಯನ್ನುಳ್ಳ ಸ್ವಾತೀ ನಕ್ಷತ್ರ ಮಾರ್ಗದಲ್ಲಿ ಮೂರು ಭಾಗವಾಗಿ ಪ್ರವಹಿಸುವವಳೂ ಆಗಿರುವಳು. ದಿಗ್ಗಜಗಳು ಆ ಗಂಗಾ ನದಿಯಿಂದ ಹರಿಯುವ ಜಲಬಿಂದುಗಳನ್ನು ತಮ್ಮ ವಿಸ್ತಾರವಾದ ಸೊಂಡಿಲುಗಳಿಂದ ತೆಗೆದುಕೊಂಡು ತುಂತುರುಗಳಂತೆ ಎರಚುತ್ತವೆ. ಆ ಹನಿಗಳು ಹಿಮವೆಂದು ಪ್ರಾಮಾಣಿಕರು ಹೇಳಿರುವರು. ದಕ್ಷಿಣ ಭಾಗದಲ್ಲಿ ಇರುವುದು ಹೇಮಕೂಟ ಪರ್ವತವೆಂದು ಹೇಳಲ್ಪಟ್ಟಿರುವುದು.

೫೩. ಹಿಮವತ್ಪರ್ವತದ ಉತ್ತರ ಭಾಗದಲ್ಲಿ ಉತ್ತರದ ಶ್ರೇಣಿಯಲ್ಲಿ ದಕ್ಷಿಣ ಭಾಗಕ್ಕೆ ಒತ್ತಿಕೊಂಡಿರುವ ಪ್ರದೇಶದಲ್ಲಿ ವಿಸ್ತಾರವಾದ ಪುಂಡ್ರವೆಂಬ ನಗರವು ಪ್ರಖ್ಯಾತವಾಗಿರುವುದು.

೫೪. ಆ ಪುಂಡ್ರನಗರದಲ್ಲಿ ಸುರಿದಿರುವ ಹಿಮದಿಂದ ಹುಟ್ಟಿದ ಹಿಮೋದಕಮಯವಾದ ವೃಷ್ಟಿಯನ್ನು ಆವಹವೆಂಬ ವಾಯುವು ಧರಿಸುತ್ತ ಬೀಸುವುದು.

೫೫. ಆ ವಾಯುವು ತನ್ನ ಅಲೌಕಿಕ ಸಾಮರ್ಥ್ಯದಿಂದ ಹಿಮವಾನ್ ಎಂಬ ಮಹಾ ಪರ್ವತಕ್ಕೆ ಆ ಹಿಮದ ವೃಷ್ಟಿಯನ್ನು ಹೊತ್ತು ತಂದು ಆ ಪರ್ವತದ ಮೇಲೆ ವೃಷ್ಟಿಯನ್ನು ಸುರಿಸಿ ಮಿಕ್ಕಿರುವ ಹಿಮ ವೃಷ್ಟಿಯನ್ನು ಆ ಪರ್ವತವನ್ನು ಅತಿಕ್ರಮಿಸಿ ಮುಂದಕ್ಕೆ ಒಯ್ಯುವನು.

**ಇಹಾಭ್ಯೇತಿ ತತಃ ಪಶ್ಚಾದಪರಾಂತವಿವೃದ್ಧಯೇ ।**
**ವರ್ಷದ್ವಯಂ ಸಮಾಖ್ಯಾತಂ ಸಸ್ಯದ್ವಯವಿವೃದ್ಧಯೇ ॥ ೫೬ ॥**

**ಮೇಘಾಶ್ಚಾಪ್ಯಾಯನಂ ಚೈವ ಸರ್ವಮೇತತ್ ಪ್ರಕೀರ್ತಿತಮ್ ।**
**ಸೂರ್ಯ ಏವ ತು ವೃಷ್ಟೀನಾಂ ಸ್ರಷ್ಟಾ ಸಮುಪದಿಶ್ಯತೇ ॥ ೫೭ ॥**

**ಸೂರ್ಯಮೂಲಾ ಚ ವೈ ವೃಷ್ಟಿರ್ಜಲಂ ಸೂರ್ಯಾತ್ಪ್ರವರ್ತತೇ ।**
**ಧ್ರುವೇಣಾಧಿಷ್ಠಿತಃ ಸೂರ್ಯಸ್ತಸ್ಯಾಂ ವೃಷ್ಟೌ ಪ್ರವರ್ತತೇ ॥ ೫೮ ॥**

**ಧ್ರುವೇಣಾಧಿಷ್ಠಿತೋ ವಾಯುರ್ವೃಷ್ಟಿಂ ಸಂಹರತೇ ಪುನಃ ।**
**ಗ್ರಹೋ ನಿಃಸೃತ್ಯ ಸೂರ್ಯಾತ್ತು ಕೃತ್ಸ್ನೇ ನಕ್ಷತ್ರಮಂಡಲೇ ॥ ೫೯ ॥**

---

೫೬. ಹಿಮವತ್ಪರ್ವತವನ್ನು ಅತಿಕ್ರಮಿಸಿ ದಕ್ಷಿಣ ದಿಕ್ಕಿನ ಪ್ರದೇಶಗಳ ಅಭಿವೃದ್ಧಿಗೋಸ್ಕರ ಈ ಭಾಗದಲ್ಲಿ ಮಳೆಯು ಬೀಳುವುದು. ವರ್ಷಾಕಾಲ, ಮತ್ತು ಹಿಮ ಕಾಲಾನಂತರಗಳಲ್ಲಿ ಬೆಳೆಯುವ ಎರಡು ವಿಧದ ಸಸ್ಯಗಳ ಅಭಿವೃದ್ಧಿಗೆ ಮಳೆ, ಮತ್ತು ಮಂಜಿನ ರೂಪದಲ್ಲಿ ಎರಡು ವಿಧವಾಗಿ ವೃಷ್ಟಿ ಸುರಿಯುವುದು.

೫೭. ಈ ರೀತಿಯಾಗಿ ಮೇಘಗಳ ಸ್ವರೂಪ, ಅವುಗಳಿಂದ ಸಸ್ಯಾದಿಗಳಿಗೆ ಆಗುವ ವೃದ್ಧಿ ಪೋಷಣಾದಿಗಳು ಹೇಳಲ್ಪಟ್ಟಿವೆ. ಮಳೆಯನ್ನು ಸೃಷ್ಟಿಸುವವನು ಸೂರ್ಯನೆಂದು ಶಾಸ್ತ್ರಗಳಿಂದ ಉಪದೇಶಿಸಲ್ಪಟ್ಟಿದೆ.

೫೮. ವೃಷ್ಟಿಯೆಂಬುದು ಸಾಮಾನ್ಯವಾಗಿ ಸೂರ್ಯನಿಂದ ಉಂಟಾಗುವುದು. ಜಲವು ವೃಷ್ಟಿಯಿಂದಲೇ ಹುಟ್ಟಬೇಕಾದುದರಿಂದ ಸಾಮಾನ್ಯವಾಗಿ ಜಲವೆಲ್ಲವೂ ಸೂರ್ಯನಿಂದ ಪ್ರವರ್ತಿಸುತ್ತದೆ. ಸೂರ್ಯನ ಗತಿಗೆ ಧ್ರುವಮಂಡಲವು ಕಾರಣವಾದ್ದರಿಂದ ಧ್ರುವನಿಂದ ನಿಯಮಿಸಲ್ಪಟ್ಟ ಸೂರ್ಯನು ವೃಷ್ಟಿ ಪ್ರದಾನದಲ್ಲಿ ಪ್ರವರ್ತಿಸುವನು.

೫೯. ಧ್ರುವನಿಂದ ನಿಯಮಿತವಾದ ವಾಯುವು ವೃಷ್ಟಿಯ ಪ್ರಯೋಜನವು ಸಮಾಪ್ತಿಯಾದಾಗ ವೃಷ್ಟಿಯನ್ನು ಪ್ರತಿಬಂಧಿಸುವ ಗ್ರಹ (ಅನಾವೃಷ್ಟಿ) ರೂಪವಾಗಿ ಸೂರ್ಯನಿಂದ ಉದಯಿಸಿ ಸಕಲ ನಕ್ಷತ್ರಮಂಡಲದಲ್ಲಿ ಸಂಚರಿಸಿ ವೃಷ್ಟಿಯನ್ನು ಉಪಸಂಹಾರಮಾಡಿ ಮತ್ತೆ ಸೂರ್ಯನನ್ನು ಪ್ರವೇಶಿಸುವುದು.

ಚರಿತ್ವಾಽಂತೇ ವಿಶತ್ಯರ್ಕಂ ಧ್ರುವೇಣ ಸಮಧಿಷ್ಠಿತಮ್ ।
ತತಃ ಸೂರ್ಯರಥಸ್ಯಾಥ ಸನ್ನಿವೇಶಂ ನಿಬೋಧತ ॥ ೬೦ ॥

ಸಂಸ್ಥಿತಂ ಚೈಕಚಕ್ರೇಣ ಪಂಚಾರೇಣ ತ್ರಿನಾಭಿನಾ ।
ಹಿರಣ್ಮಯೇನ ಭಗವಾಂಸ್ತಥೈವ ಹರಿದವರ್ಣಾ ॥ ೬೧ ॥

ಅಷ್ಟಾಪಸದನಿಬದ್ಧೇನ ಷಟ್ಪ್ರಕಾರೈಕನೇಮಿನಾ ।
ಚಕ್ರೇಣ ಭಾಸ್ವತಾ ಸೂರ್ಯಃ ಸ್ಯಂದನೇನ ಪ್ರಸರ್ಪತಿ ॥ ೬೨ ॥

ದಶಯೋಜನಸಾಹಸ್ರೋ ವಿಸ್ತಾರಾಯಾಮತಃ ಸ್ಮೃತಃ ।
ದ್ವಿಗುಣೋಽಸ್ಯ ರಥೋಪಸ್ಥಾದೀಷಾದಂಡಃ ಪ್ರಮಾಣತಃ ॥ ೬೩ ॥

ಸ ತಸ್ಯ ಬ್ರಹ್ಮಣಾ ಸೃಷ್ಟೋ ರಥೋ ಹ್ಯರ್ಥವಶೇನ ತು ।
ಅಸಂಗಃ ಕಾಂಚನೋ ದಿವ್ಯೋ ಯುಕ್ತಃ ಪವನಗೈರ್ಹಯೈಃ ॥ ೬೪ ॥

---

೬೦. ಅವಗ್ರಹ ರೂಪವಾದ ವಾಯುವಿನ ಸಂಚಾರವು ಧ್ರುವನಿಂದ ಪ್ರತಿಷ್ಠಿತವಾದ ಸೂರ್ಯನಿಗೆ ಅಧೀನವಾಗಿರುವುದು. ಇನ್ನು ಮುಂದೆ ಸೂರ್ಯನ ರಥದ ಸನ್ನಿವೇಶದ ವೈಚಿತ್ರ್ಯವನ್ನು ಕೇಳಿರಿ.

೬೧. ಏಕಚಕ್ರ, ಪಂಚ ಅರಗಳು, ಮೂರು ನಾಭಿ, ಸುವರ್ಣಮಯ ಆಕಾರ, ಮತ್ತು ಹರಿದ್ವರ್ಣದ ಅಶ್ವಗಳು—ಎಂಬ ವಿಲಕ್ಷಣವಾದ ಸನ್ನಿವೇಶದಿಂದ ಸೂರ್ಯನ ರಥವಿರುವುದು.

೬೨. ಮತ್ತು ಚಿನ್ನದಿಂದ ಕೆತ್ತಲ್ಪಟ್ಟಿರುವ, ಆರು ಪ್ರಕಾರಗಳ ಅವಯವಗಳಿಂದ ಒಂದೇ ಪಟ್ಟಿಯಿಂದ ಸುತ್ತಲ್ಪಟ್ಟಿರುವ ಏಕ ಚಕ್ರದಿಂದ ಪ್ರಕಾಶಿಸುವ ರಥದಲ್ಲಿ ಕುಳಿತು ಸೂರ್ಯ ಭಗವಂತನು ಸಂಚರಿಸುತ್ತಲಿರುವನು

೬೩. ಈ ರಥವು ಹತ್ತು ಸಹಸ್ರ ಯೋಜನ ಪರಿಮಾಣದಷ್ಟು ವಿಸ್ತಾರವಾಗಿಯೂ ದೀರ್ಘವಾಗಿಯೂ ಇರುವುದು. ಈ ರಥದಲ್ಲಿರುವ ರಥಿಕಾಸನವೆಂಬ ಉಪಸ್ಥಕ್ಕಿಂತಲೂ ಮುಂದಿರುವ ದೀರ್ಘವಾದ ಈಷಾದಂಡವು ದ್ವಿಗುಣಪರಿಮಾಣವುಳ್ಳದ್ದಾಗಿದೆ.

೬೪. ಗತಿಸ್ತಂಭನಾದಿ ಸಂಗರಹಿತವೂ, ಸುವರ್ಣಮಯವೂ, ದಿವ್ಯವೂ, ಮತ್ತು

ಛಂದೋಭಿರ್ವಾಜಿರೂಪೈಸ್ತು ಯತಶ್ಚಕ್ರಂ ತತಃ ಸ್ಥಿತೈಃ ।
ವಾರುಣಸ್ಯಂದನಸ್ಯೇಹ ಲಕ್ಷಣೈಃ ಸದೃಶಸ್ತು ಸಃ ॥ ೬೫ ॥

ತೇನಾಸೌ ಸರ್ಪತೇ ವ್ಯೋಮ್ನಿ ಭಾಸ್ವತಾ ತು ದಿವಾಕರಃ ।
ಅಥೈತಾನಿ ತು ಸೂರ್ಯಸ್ಯ ಪ್ರತ್ಯಂಗಾನಿ ರಥಸ್ಯ ಹ ॥ ೬೬ ॥

ಸಂವತ್ಸರಸ್ಯಾವಯವೈಃ ಕಲ್ಪಿತಸ್ಯ ಯಥಾಕ್ರಮಮ್ ।
ಅಹಸ್ತು ನಾಭಿಃ ಸೌರಸ್ಯ ಏಕಚಕ್ರಸ್ಯ ವೈ ಸ್ಮೃತಃ ॥ ೬೭ ॥

ಅರಾಃ ಪಂಚಾರ್ತವಾಸ್ತಸ್ಯ ನೇಮಿಃ ಷಡೃತವಃ ಸ್ಮೃತಃ ।
ರಥನೀಡಃ ಸ್ಮೃತೋ ಹ್ಯೇಷ ಚಾಯನೇ ಕೂಬರಾವುಭೌ ॥ ೬೮ ॥

---

ವಾಯುವೇಗದಿಂದ ಧಾವಿಸುವ ಅಶ್ವಗಳಿಂದ ಕೂಡಿದುದೂ ಆಗಿದ್ದ ಆ ರಥವು ಜಗತ್ಸೃಷ್ಟಿಕರ್ತನಾದ ಬ್ರಹ್ಮನಿಂದ ಜಗಚ್ಚಕ್ರನಿಯಮನ-ಪರಿಣಾಮುಗಳೆಂಬ ಪ್ರಯೋಜನಗಳಿಗಾಗಿ ನಿರ್ಮಿಸಲ್ಪಟ್ಟಿದೆ.

೬೫. ಛಂದಸ್ಸುಗಳು ಅಶ್ವರೂಪದಿಂದ ರಥದ ಚಕ್ರವನ್ನು ಎಳೆದು ಮುಂದಕ್ಕೆ ನಡೆಸುವುದಕ್ಕೋಸ್ಕರ ಚಕ್ರಭಾಗದಲ್ಲಿ ಬಂಧಿಸಲ್ಪಟ್ಟವೆ. ಆ ರಥವು ವರುಣ ದೇವನ ರಥದ ಸಮಗ್ರ ಲಕ್ಷಣಗಳಿಂದ ಕೂಡಿ ಅದಕ್ಕೆ ಸಮಾನವಾಗಿರುವುದು.

೬೬. ಆ ದಿವ್ಯವಾದ ರಥದಿಂದ ಸೂರ್ಯ ಭಗವಂತನು ಆಕಾಶದಲ್ಲಿ ನಡೆಯುತ್ತಿರುವನು. ಈಗ ಈ ಸೂರ್ಯ ರಥದ ಅಂಗೋಪಾಂಗಗಳನ್ನು ಕೇಳಿರಿ.

೬೭. ಕಾಲಾತ್ಮಕವಾದ ಸಂವತ್ಸರದ ಅವಯವಗಳಿಂದ ಈ ರಥವು ಕ್ರಮವಾಗಿ ಕಲ್ಪಿಸಲ್ಪಟ್ಟಿರುವುದರಿಂದ ಕಾಲಾವಸ್ಥೆಗಳು ಈ ರಥದ ಪ್ರತ್ಯಂಗಗಳು. ಏಕಚಕ್ರದಿಂದ ಕೂಡಿದ ಸೂರ್ಯನ ರಥಕ್ಕೆ ಅಹಸ್ಸು ನಾಭಿಯು ಎಂದು ಶಾಸ್ತ್ರಗಳಲ್ಲಿ ಸ್ಮರಿಸಲ್ಪಟ್ಟಿದೆ.

೬೮. ಹಿಂದೆ ಹೇಳಿದ ಪಂಚ ಆರ್ತವಗಳು ಅರಗಳು, ಆರು ಋತುಗಳು ಸೇರಿ ಒಂದು ಪಟ್ಟಿಯು, ದಕ್ಷಿಣಾಯನ ಉತ್ತರಾಯಣಗಳು ನೊಗವನ್ನು ಧರಿಸುವ ಕೆಳಭಾಗವು, ಇಂತಹ ರಥವು ಗೂಡಿನ ಆಕಾರವಾಗಿರುವುದು.

ಮುಹೂರ್ತಾ ಬಂಧುರಾಸ್ತಸ್ಯ ಶಮ್ಯಾಶ್ಚಾಸ್ಯ ಕಲಾಃ ಸ್ಮೃತಾಃ ।
ತಸ್ಯ ಕಾಷ್ಠಾ ಸ್ಮೃತಾ ಘೋಣಾ ಅಕ್ಷದಂಡಃ ಕ್ಷಣಸ್ತು ವೈ ॥ ೭೯ ॥

ನಿಮೇಷಶ್ಚಾನುಕರ್ಷೋಽಸ್ಯ ಈಷಾ ಚಾಸ್ಯ ಲವಾಃ ಸ್ಮೃತಾಃ ।
ರಾತ್ರಿರ್ವರೂಥೋ ಧರ್ಮೋಽಸ್ಯ ಧ್ವಜ ಊರ್ಧ್ವಂ ಸಮುಚ್ಛ್ರಿತಃ ॥ ೮೦ ॥

ಯುಗಾಕ್ಷಕೋಟೀ ತೇ ತಸ್ಯ ಅರ್ಥಕಾಮಾವುಭೌ ಸ್ಮೃತೌ ।
ಸಪ್ತಾಶ್ವರೂಪಾಶ್ಛಂದಾಂಸಿ ವಹಂತೇ ವಾಮತೋ ಧುರಮ್ ॥ ೮೧ ॥

ಗಾಯತ್ರೀ ಚೈವ ತ್ರಿಷ್ಟುಪ್ಚ ಹ್ಯನುಷ್ಟುಪ್ ಜಗತೀ ತಥಾ ।
ಪಂಕ್ತಿಶ್ಚ ಬೃಹತೀ ಚೈವ ಹ್ಯುಷ್ಣಿಕ್ ಚೈವ ತು ಸಪ್ತಮಃ ॥ ೮೨ ॥

ಚಕ್ರಮಕ್ಷೇ ನಿಬದ್ಧಂ ತು ಧ್ರುವೇ ಚಾಕ್ಷಃ ಸಮರ್ಪಿತಃ ।
ಸಹಚಕ್ರೋ ಭ್ರಮತ್ಯಕ್ಷಃ ಸಹಾಕ್ಷೋ ಭ್ರಮತೇ ಧ್ರುವಃ ॥ ೮೩ ॥

---

೭೯. ಮುಹೂರ್ತಗಳು ಅವಯವಗಳ ಬಂಧನ ಸಾಮಗ್ರಿಗಳು, ಕಲಾ ಎಂಬುದು ಶಮ್ಯಾ ಎಂಬ ಕೀಲಗಳು, ಕಾಷ್ಠಾ ಎಂಬ ಕಾಲಾಂಶವು ಅಕ್ಷಾಧಾರವಾದ ಘೋಣ ಎಂಬ ದೀರ್ಘದಂಡವು, ಕ್ಷಣವು ಅಚ್ಚಿನ (ಅಕ್ಷ) ಮರವು.

೮೦. ನಿಮೇಷಗಳು ಸೆಳೆದು ದೀರ್ಘಹ್ರಸ್ವಾಕಾರಮಾಡುವ ಪಾಶಸಾಮಗ್ರಿಯು, ಲವಕಾಲಗಳು ಈಷಾದಂಡವು, ರಾತ್ರಿ ಕಾಲವು ವರೂಥಭಾಗವು, ಧರ್ಮವು ಈ ರಥದ ಉನ್ನತವಾದ ಧ್ವಜಪತಾಕೆಯು.

೮೧. ಅರ್ಥ ಮತ್ತು ಕಾಮಗಳೆರಡು ನೊಗದ ಎರಡು ಕೋಟಿಗಳೆಂದು ಸ್ಮರಿಸಲ್ಪಟ್ಟಿವೆ, ಏಳು ಛಂದಸ್ಸುಗಳು ಅಶ್ವರೂಪವಾಗಿ ಈ ರಥದ ಎಡಭಾಗದಲ್ಲಿ ನೊಗವನ್ನು ಹೊತ್ತುಕೊಂಡಿವೆ.

೮೨. ಅಶ್ವರೂಪವನ್ನು ಧರಿಸಿದ ಸಪ್ತಛಂದಸ್ಸುಗಳು :-ಗಾಯತ್ರೀ, ತ್ರಿಷ್ಟುಪ್, ಅನುಷ್ಟುಪ್, ಜಗತೀ, ಪಂಕ್ತಿ, ಬೃಹತೀ, ಮತ್ತು ಉಷ್ಣಿಕ್ ಎಂಬುವುಗಳಾಗಿವೆ.

೮೩. ಅಚ್ಚಿನಲ್ಲಿ ಚಕ್ರವು ದೃಢವಾಗಿ, ಇರಿಸಲ್ಪಟ್ಟಿದೆ. ಆ ಅಕ್ಷವು ಧ್ರುವನಿಂಡ ಬದ್ಧವಾಗಿರುವುದು. ಆದುದರಿಂದ ಚಕ್ರದ ಸಮೇತವಾಗಿ ಅಕ್ಷದಂಡವೂ ಅಕ್ಷದಂಡ ಸಹಿತವಾಗಿ ಧ್ರುವಮಂಡಲವೂ ಭ್ರಮಿಸುತ್ತಿರುವುದು.

ಅಕ್ಷೇಣ ಸಹ ಚಕ್ರೇಶೋ ಭ್ರಮತೇಽಸೌ ಧ್ರುವೇರಿತಃ ।
ಏವಮರ್ಥವಶಾತ್ತಸ್ಯ ಸನ್ನಿವೇಶೋ ರಥಸ್ಯ ತು ॥ ೭೪ ॥

ತಥಾ ಸಂಯೋಗಭಾವೇನ ಸಂಸಿದ್ಧೋ ಭಾಸುರೋ ರಥಃ ।
ತೇನಾಸೌ ತರಣಿರ್ದೇವೋ ಭಾಸ್ವತಾ ಸರ್ಪತೇ ದಿವಿ ॥ ೭೫ ॥

ಯುಗಾಕ್ಷಕೋಟಿಸನ್ನದ್ಧೌ ದ್ವೌ ರಶ್ಮೀ ಸ್ಯಂದನಸ್ಯ ತು
ಧ್ರುವೇ ತೌ ಭ್ರಾಮ್ಯತೋ ರಶ್ಮೀ ಚ ಚಕ್ರಯುಗಯೋಸ್ತು ವೈ ॥ ೭೬ ॥

ಭ್ರಮತೋ ಮಂಡಲಾನ್ಯಸ್ಯ ಖೇಚರಸ್ಯ ರಥಸ್ಯ ತು
ಯುಗಾಕ್ಷಕೋಟೀ ತೇ ತಸ್ಯ ದಕ್ಷಿಣೇ ಸ್ಯಂದನಸ್ಯ ಹಿ ॥ ೭೭ ॥

ಧ್ರುವೇಣ ಪ್ರಗೃಹೀತೇ ವೈ ವಿಚಕ್ರಮತುರಕ್ಷವತ್ ।
ಭ್ರಮಂತಮನುಗಚ್ಛೇತಾಂ ಧ್ರುವಂ ರಶ್ಮೀ ತು ತಾವುಭೌ ॥ ೭೮ ॥

---

೭೪. ಅಕ್ಷದಂಡದ ಜೊತೆಯಲ್ಲಿ ಧ್ರುವನಿಂದ ಪ್ರೇರೇಪಿಸಲ್ಪಟ್ಟ ಚಕ್ರದಿಂದ ಕೂಡಿದ ರಥಾಧಿಪತಿಯು ಭ್ರಮಿಸುತ್ತಿರುವನು. ಈ ರೀತಿಯಾಗಿ ಸೂರ್ಯನ ರಥದ ಸನ್ನಿವೇಶವು ಆಯಾಯ ಕಾರ್ಯಗಳಿಗೆ ತಕ್ಕ ಅವಯವ ಸನ್ನಿವೇಶವನ್ನು ಹೊಂದಿಕೊಂಡಿರುವುದು.

೭೫. ಆ ರಥವು ರಥಿಕನಾದ ಸೂರ್ಯನೊಡನೆ ಸರ್ವ ಕಾಲದಲ್ಲಿಯೂ ಸಂಬಂಧವುಳ್ಳದ್ದಾಗಿಯೂ ಪ್ರಕಾಶಮಯವಾಗಿಯೂ ಸಿದ್ಧವಾಗಿರುವುದು. ಆ ದೀಪ್ಯಮಾನವಾದ ರಥದಿಂದ ಸೂರ್ಯನು ಆಕಾಶದಲ್ಲಿ ಸಂಚರಿಸುವನು.

೭೬. ರಥದ ಯುಗ ಮತ್ತು ಅಕ್ಷದ ಅಗ್ರಭಾಗಗಳಲ್ಲಿ ಎರಡು ಹಗ್ಗಗಳು ಕಟ್ಟಲ್ಪಟ್ಟಿರುವುವು. ಅವು ಧ್ರುವಮಂಡಲದಿಂದ ಬಂದಿರುವುವುಗಳಾಗಿ ಮಂಡಲಾಕಾರವಾಗಿ ಸುತ್ತುತ್ತಲಿರುವ ಮತ್ತು ಗಗನದಲ್ಲಿ ಸಂಚರಿಸುವ ಈ ರಥದ ಚಕ್ರ ಮತ್ತು ಯುಗಗಳಲ್ಲಿ ಸುತ್ತುವುವು.

೭೭. ಆ ರಥದ ದಕ್ಷಿಣ ಭಾಗದ ಯುಗ-ಅಕ್ಷಗಳ ಅಗ್ರಗಳು ಧ್ರುವನಿಂದ ಬದ್ಧವಾಗಿ ಗ್ರಹಿಸಲ್ಪಟ್ಟವುಗಳಾಗಿ ಅಕ್ಷದಂಡದಂತೆ ಮುಂದಕ್ಕೆ ಸಾಗಿಸುವುವು.

೭೮-೭೯. ಆ ಎರಡು ರಶ್ಮಿಗಳು ಧ್ರುವನು ಸುತ್ತುವುದನ್ನು ಅನುಸರಿಸಿ ಸುತ್ತು

ಯುಗಾಕ್ಷಕೋಟಿಸ್ತತ್ತಸ್ಯ ರಶ್ಮಿಭಿಃ ಸ್ಯಂದನಸ್ಯ ತು ।
ಕೀಲಾಸಕ್ತಾ ಯಥಾ ರಜ್ಜುರ್ಭ್ರಮತೇ ಸರ್ವತೋ ದಿಶಮ್ ॥ ೭೯ ॥

ಹ್ರಸತಸ್ತಸ್ಯ ರಶ್ಮೀ ತು ಮಂಡಲೇಷೂತ್ತರಾಯಣೇ ।
ವರ್ಧೇತೇ ದಕ್ಷಿಣೇ ಚೈವ ಭ್ರಮತೋ ಮಂಡಲಾನಿ ತು ॥ ೮೦ ॥

ಯುಗಾಕ್ಷಕೋಟಿಸಂಬಂದ್ಧೌ ರಶ್ಮೀ ದ್ವೌ ಸ್ಯಂದನಸ್ಯ ತು ।
ಧ್ರುವೇಣ ಪ್ರಗೃಹೀತೌ ವೈ ತೌ ರಶ್ಮೀ ನಯತೋ ರವಿಮ್ ॥ ೮೧ ॥

ಆಕೃಷ್ಯೇತೇ ಯದಾ ತೌ ವೈ ಧ್ರುವೇಣ ಸಮಧಿಷ್ಠಿತೌ ।
ತದಾ ಸೋಽಭ್ಯಂತರೇ ಸೂರ್ಯೋ ಭ್ರಮತೇ ಮಂಡಲಾನಿ ತು ॥ ೮೨ ॥

ಅಶೀತಿರ್ಮಂಡಲಶತಂ ಕಾಷ್ಠಯೋರಂತರಂ ಸ್ಮೃತಮ್ ।
ಧ್ರುವೇಣ ಮುಚ್ಯಮಾನಾಭ್ಯಾಂ ರಶ್ಮಿಭ್ಯಾಂ ಪುನರೇವ ತು ॥ ೮೩ ॥

---

ವುವು. ಆ ರಥದ ಯುಗ ಅಕ್ಷಗಳ ಕೋಟಿ ಭಾಗವು ರಶ್ಮಿಗಳಿಂದ ಕಟ್ಟಲ್ಪಟ್ಟದ್ದಾಗಿ ಕೀಲಗಳಲ್ಲಿ ಆಸಕ್ತವಾದ ರಜ್ಜುವು ಭ್ರಮಿಸುತ್ತಿರುವಂತೆ ಸರ್ವ ದಿಕ್ಕುಗಳಲ್ಲಿಯೂ ಭ್ರಮಿಸುತ್ತವೆ.

೮೦. ಉತ್ತರಾಯಣದಲ್ಲಿ ಮಂಡಲ ಆಕಾರದ ಗಮನದಲ್ಲಿ ಆ ರಶ್ಮಿಗಳು ಹ್ರಸ್ವವಾಗುತ್ತವೆ. ದಕ್ಷಿಣಾಯನದಲ್ಲಿ ಮಂಡಲಾಕಾರ ಗಮನದಲ್ಲಿ ವೃದ್ಧಿಯಾಗು ತ್ತವೆ.

೮೧. ಯುಗ ಮತ್ತು ಅಕ್ಷದಂಡದ ಅಗ್ರಗಳಲ್ಲಿ ಕಟ್ಟಲ್ಪಟ್ಟಿರುವ ರಥದ ಎರಡು ರಶ್ಮಿಗಳು ಧ್ರುವನಿಂದ ಧರಿಸಲ್ಪಟ್ಟವುಗಳಾಗಿ ಸೂರ್ಯನನ್ನು ರಥದಿಂದ ಮುಂದಕ್ಕೆ ಒಯ್ಯುತ್ತವೆ.

೮೨. ಆ ರಶ್ಮಿಗಳನ್ನು ಧ್ರುವನು ವಶೀಕರಿಸಿ ಯಾವಾಗ ಸೆಳೆದು ಹಿಡಿಯು ವನೋ ಆಗ ಸ್ವಲ್ಪ ಒಳಭಾಗದಲ್ಲಿ ಸೂರ್ಯನು ಮಂಡಲಗಳನ್ನು ಸುತ್ತುತ್ತಾನೆ.

೮೩. ಸೂರ್ಯನು ಭ್ರಮಿಸುವ ವೃತ್ತರೇಖೆಗಳ ಅಂತರವು ಎರಡು ಸಾವಿರ ಮಂಡಲಗಳನ್ನು ಒಳಗೊಂಡಿರುವುದು, ಎಂದು ಶಾಸ್ತ್ರಜ್ಞರಿಂದ ಹೇಳಲ್ಪಟ್ಟಿದೆ. ಧ್ರುವನು ಸ್ವಲ್ಪ ಸಡಿಲವಾಗಿ ರಶ್ಮಿಗಳನ್ನು ಬಿಟ್ಟಾಗ ಸೂರ್ಯನು ಮತ್ತೆ ಸ್ವಲ್ಪ ಹೊರ ಭಾಗದಲ್ಲಿ ಮಂಡಲಗಳನ್ನು ಸುತ್ತುವನು.

**ತಥೈವ ಬಾಹ್ಯತಃ ಸೂರ್ಯೋ ಭ್ರಮತೇ ಮಂಡಲಾನಿ ತು ।**
**ಉದ್ವೇಷ್ಟಯನ್ ಸ ವೇಗೇನ ಮಂಡಲಾನಿ ತು ಗಚ್ಛತಿ ॥ ೮೪ ॥**

**ಇತೀ ಶ್ರೀ ಬ್ರಹ್ಮಾಂಡಪುರಾಣೇ ದ್ವಾವಿಂಶತಿತಮೋಽಧ್ಯಾಯಃ**

---

೮೪. ಎಲ್ಲ ಮಂಡಲಗಳನ್ನು ವೆಷ್ಟನ ಮಾಡುತ್ತ ಸೂರ್ಯನು ಬಹಳ ವೇಗದಿಂದ ಭ್ರಮಿಸುತ್ತಿರುವನು.

ಬ್ರಹ್ಮಾಂಡಪುರಾಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.